ಈ ಪುಸ್ತಕವನ್ನು ಇದರ ಏಕಪ್ರೇರಕರೂ

ನನ್ನ ಮೆಚ್ಚಿನ ಮಿತ್ರರೂ ಆದ

ರಾಜಸೇವಾಪ್ರಸಕ್ತ

ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ರವರಿಗೆ

ಪ್ರೇಮದಿಂದ ಅರ್ಪಿಸಿದ್ದೇನೆ.

# ಪ್ರಕಾಶಕರ ಮಾತು

ಶ್ರೀ ನವರತ್ನ ರಾಮರಾಯರು ಮೂರು ವರ್ಷದ ಹಿಂದೆ ಜೀವನ ಪತ್ರಿಕೆಯಲ್ಲಿ ಪ್ರಕಟಿಸಲು ಆರಂಭಿಸಿದ ಅವರ ನೆನಪಿನ ಲೇಖನಮಾಲೆ ಈ ವರ್ಷ ಮುಗಿಯಿತು. ಈ ನೆನಪುಗಳ ಮೊದಲ ಕಂತು ಪ್ರಕಟವಾದ ಒಡನೆಯೇ ಪತ್ರಿಕೆಗೆ ಹತ್ತೂಕಡೆಯಿಂದ ಮೆಚ್ಚಿಕೆಯ ಮಾತು ಬಂದವು. ಸಂಪಾದಕರು ಎಲ್ಲಿ ಹೋದರೂ ಯಾರನ್ನು ಕಂಡರೂ ನೆನಪುಗಳನ್ನು ಓದಿದವರೆಲ್ಲ ಅವನ್ನು ಹೊಗಳಿ ಅವುಗಳ ಲೇಖಕರನ್ನು ಬಾಯಿತುಂಬ ಪ್ರಶಂಸಿಸುವವರೆ. ಸಂಪಾದಕರ ಪ್ರಾರ್ಥನೆಯನ್ನು ಮನ್ನಿಸಿ ಈ ಲೇಖನ ಮಾಲೆಯನ್ನು ಬರೆದು ಶ್ರೀಯುತರು ಪತ್ರಿಕೆಗೆ ತುಂಬ ಉಪಕಾರ ಮಾಡಿದರು. ಅದರ ಪ್ರತಿಷ್ಠೆಯನ್ನು ಹೆಚ್ಚಿಸಿದರು. ಈ ಬಗೆಗೆ ನಾವು ಶ್ರೀ ರಾಮರಾಯರಿಗೆ ಹೃತ್ಪೂರ್ವಕವಾಗಿ ವಂದನೆ ಸಲ್ಲಿಸುತ್ತೇವೆ.

ಪತ್ರಿಕೆಯಲ್ಲಿ ಪ್ರಕಟವಾಗುತ್ತ ಬಂದಂತೆ ನಾವು ಈ ಲೇಖನಗಳನ್ನು ಪುಸ್ತಕರೂಪದಲ್ಲಿಯೂ ಸಿದ್ಧಪಡಿಸಿಕೊಂಡು ಬಂದಿದೇವೆ. ಅವುಗಳನ್ನು ಪುಸ್ತಕ ರೂಪದಲ್ಲೂ ಪ್ರಕಟಿಸಿದ್ದೇವೆ

ಈ ಗ್ರಂಥವನ್ನು ನಮ್ಮ ನಾಡಜನ ಆದರದಿಂದ ಸ್ವಾಗತಿಸುವರೆಂದು ನಾವು ನಂಬಿದ್ದೇವ.

ಪುಸ್ತಕವನ್ನು ಜೀವನ ಗ್ರಂಥಮಾಲೆಯಲ್ಲಿ ಪ್ರಕಟಿಸಲು ಅನುಮತಿ ಕೊಟ್ಟಬಗ್ಗೆ ಶ್ರೀ ನವರತ್ನ ರಾಮರಾಯರಿಗೆ ನಮ್ಮ ಕೃತಜ್ಞತೆಗಳು.

ಜಯಸಂವತ್ಸರ<br>ಆಶ್ವೀಜ ಶುದ್ಧ ದಶಮಿ<br>ಗುರುವಾರ<br>7—10—1954

**ಪ್ರಕಾಶಕರು**

# ಕೆಲವು ನೆನಪುಗಳು

ರಾಜಸೇವಾಪ್ರಸಕ್ತ
ನವರತ್ನ ರಾಮರಾಯರು

ಜೀವನ ಕಾರ್ಯಾಲಯ
ಬೆಂಗಳೂರು

ಈ ಪುಸ್ತಕವನ್ನು ಇದರ ಏಕಪ್ರೇರಕರೂ
ನನ್ನ ಮೆಚ್ಚಿನ ಮಿತ್ರರೂ ಆದ
ರಾಜಸೇವಾಪ್ರಸಕ್ತ
ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ರವರಿಗೆ
ಪ್ರೇಮದಿಂದ ಅರ್ಪಿಸಿದ್ದೇನೆ.

# ಪ್ರಕಾಶಕರ ಮಾತು

ಶ್ರೀ ನವರತ್ನ ರಾಮರಾಯರು ಮೂರು ವರ್ಷದ ಹಿಂದೆ ಜೀವನ ಪತ್ರಿಕೆಯಲ್ಲಿ ಪ್ರಕಟಿಸಲು ಆರಂಭಿಸಿದ ಅವರ ನೆನಪಿನ ಲೇಖನಮಾಲೆ ಈ ವರ್ಷ ಮುಗಿಯಿತು. ಈ ನೆನಪುಗಳ ಮೊದಲ ಕಂತು ಪ್ರಕಟವಾದ ಒಡನೆಯೇ ಪತ್ರಿಕೆಗೆ ಹತ್ತೂ ಕಡೆಯಿಂದ ಮೆಚ್ಚಿಕೆಯ ಮಾತು ಬಂದವು. ಸಂಪಾದಕರು ಎಲ್ಲಿ ಹೋದರೂ ಯಾರನ್ನು ಕಂಡರೂ ನೆನಪುಗಳನ್ನು ಓದದವರಿಲ್ಲ ಅವನ್ನು ಹೊಗಳಿ ಅವುಗಳ ಲೇಖಕರನ್ನು ಬಾಯಿತುಂಬ ಪ್ರಶಂಸಿಸುವವರೆ. ಸಂಪಾದಕರ ಪ್ರಾರ್ಥನೆಯನ್ನು ಮನ್ನಿಸಿ ಈ ಲೇಖನ ಮಾಲೆಯನ್ನು ಬರೆದು ಶ್ರೀಯುತರು ಪತ್ರಿಕೆಗೆ ತುಂಬ ಉಪಕಾರ ಮಾಡಿದರು. ಅದರ ಪ್ರತಿಷ್ಠೆಯನ್ನು ಹೆಚ್ಚಿಸಿದರು. ಈ ಬಗೆಗೆ ನಾವು ಶ್ರೀ ರಾಮರಾಯರಿಗೆ ಹೃತ್ಪೂರ್ವಕವಾಗಿ ವಂದನೆ ಸಲ್ಲಿಸುತ್ತೇವೆ.

ಪತ್ರಿಕೆಯಲ್ಲಿ ಪ್ರಕಟವಾಗುತ್ತ ಬಂದಂತೆ ನಾವು ಈ ಲೇಖನಗಳನ್ನು ಪುಸ್ತಕರೂಪದಲ್ಲಿಯೂ ಸಿದ್ಧಪಡಿಸಿಕೊಂಡು ಬಂದಿದೇವೆ. ಅವುಗಳನ್ನು ಪುಸ್ತಕ ರೂಪದಲ್ಲೂ ಪ್ರಕಟಿಸಿದ್ದೇವೆ.

ಈ ಗ್ರಂಥವನ್ನು ನಮ್ಮ ನಾಡಜನ ಆದರದಿಂದ ಸ್ವಾಗತಿಸುವರೆಂದು ನಾವು ನಂಬಿದ್ದೇವೆ.

ಪುಸ್ತಕವನ್ನು ಜೀವನ ಗ್ರಂಥಮಾಲೆಯಲ್ಲಿ ಪ್ರಕಟಿಸಲು ಅನುಮತಿ ಕೊಟ್ಟ ಬಗ್ಗೆ ಶ್ರೀ ನವರತ್ನ ರಾಮರಾಯರಿಗೆ ನಮ್ಮ ಕೃತಜ್ಞತೆಗಳು.

ಜಯಸಂವತ್ಸರ
ಆಶ್ವೀಜ ಶುದ್ಧ ದಶಮಿ
ಗುರುವಾರ
7—10—1954

ಪ್ರಕಾಶಕರು

# ಕೆಲವು ನೆನಪುಗಳು

## ೧

ಈ ಕಥೆಯ ಪ್ರಾರಂಭ ಸುಮಾರು ಐವತ್ತಾರು ವರ್ಷಗಳ ಹಿಂದೆ. ಆ ಕಾಲದ ನೆನಪಿರುವವರು ಬಹಳ ವಿರಳ. ಕಾಲವೆಂದರೆ ಬದಲಾವಣೆ, ಅದರ ವೇಗವಾದರೋ ಒಂದೇ ಸಮನಾಗಿರುವುದಿಲ್ಲ. ಈ ಐವತ್ತು ವರ್ಷಗಳಲ್ಲಿ ಕಾಲವು ಬಹು ರಭಸದಿಂದ ಪ್ರವಹಿಸಿ ಪ್ರಪಂಚದ ಬಾಳನ್ನೇ ಕ್ರಾಂತಿಗೊಳಿಸಿದೆ. ಅಂದಿನ ಸ್ಥಿತಿಯು ಜ್ಞಾಪಕವಿರುವ ವೃದ್ಧರಿಗೆ ಇಂದಿನ ಭೂಮ್ಯಂತರಿಕ್ಷಗಳು—ಏಕೆ, ವಿಶ್ವವೇ—ಬೇರೆಯಾಗಿ ಕಾಣುತ್ತದೆ. ನಾವು ಹುಡುಗರಾಗಿದ್ದಾಗ ಕುಲ ಪರ್ವತಗಳಂತೆ ಸ್ಥಿರವೆಂದು ನಂಬಿದ್ದ ರಾಜ್ಯಗಳು ಕನಸಿನಂತೆ ಕರಗಿ ಹೋಗಿವೆ. ನಾನು ಕಲಿತ ಭೌತಿಕ ವಿಜ್ಞಾನವು ಹಳೆಯ ಕಥೆಯಾಗಿದೆ. ನಮ್ಮ ಚಿಕ್ಕಂದಿನ ಪ್ರಾಪಂಚಿಕ, ರಾಜಕೀಯ, ಸಾಮಾಜಿಕ ನಂಬಿಕೆಗಳು ಮಾಯವಾಗಿ ಹೋಗಿವೆ ಪರಂಗಿಯವರ ಪ್ರಜೆಗಳು, ಪ್ರೇಷ್ಯವರ್ಗಕ್ಕೆ ಸೇರಿದವರು, ಎಂದು ಭಾವಿಸಿಕೊಂಡು ನೆಮ್ಮದಿಪಡುತ್ತಿದ್ದ ನಾವು ಈಗ ಸ್ವತಂತ್ರರು, ಯಾತರಲ್ಲೂ ಯಾರಿಗೂ ಕಮ್ಮಿಯಾದವರಲ್ಲ. ಅನೇಕ ವಿಷಯಗಳಲ್ಲಿ—ಮುಖ್ಯವಾಗಿ ಸಂಸ್ಕೃತಿಯಲ್ಲಿ—ನಮ್ಮಲ್ಲಿ ಪ್ರಪಂಚವು ಕಲಿಯಬೇಕಾದ ಅನೇಕ ಅಂಶಗಳಿವೆ—ಹೀಗೆ ಸ್ಥಿರವಾದ ನಂಬಿಕೆಯುಳ್ಳವರಾಗಿದ್ದೇವೆ.

ಆದರೆ ಉಪನ್ಯಾಸ ಮಾಡುವುದು ನನ್ನ ಉದ್ದೇಶವಲ್ಲ. ಐವತ್ತು ವರ್ಷಗಳ ಹಿಂದಿನ ನನ್ನ ಜೀವನದ ಒಂದು ಅಂಶವನ್ನೂ, ನನ್ನ ಯಾತ್ರೆಯ ಕೆಲವು ಸಹಚರರನ್ನೂ, ದೃಶ್ಯಗಳನ್ನೂ ಲಘುವಾಗಿ ಚಿತ್ರಿಸಬೇಕೆಂಬುದು ನನ್ನ ಆಶೆ. ಈ ತರಹದ ಕಾವ್ಯಗಳು ಇತರ ಭಾಷೆಗಳಲ್ಲಿವೆ. ನನಗೆ ತಿಳಿದಮಟ್ಟಿಗೆ ಕನ್ನಡದಲ್ಲಿಲ್ಲ. ನನಗೆ ಕನ್ನಡದಲ್ಲಿ ಪಾಂಡಿತ್ಯವಿಲ್ಲದಿದ್ದರೂ. ಅದು ನನ್ನ ಮಾತೃಭಾಷೆ. ಅದನ್ನು ಮುಕ್ಕಾಲು ಶತಮಾನ ನನ್ನ ಮನೆಯಲ್ಲಿ, ನನ್ನ ಲೋಕ ವ್ಯವಹಾರದಲ್ಲಿ, ಶಂಕೆಯಿಲ್ಲದೆ ಉಪಯೋಗಿಸಿ ಗೌರವದಿಂದ ಗೃಹಸ್ಥನಾಗಿ ಬಾಳಿದ್ದೇನೆ. ನಾನು ಆಡುವ ಮಾತನ್ನೇ

ಬರೆದರೆ ಸಾಕು; ನಾನು ಹೇಳುವ ಕಥೆಯಲ್ಲಿ ಸ್ವಾರಸ್ಯವಿದ್ದರೆ, ಜನಗಳು ಪದಗಳ ರಿಕ್ತತೆಯನ್ನು ಕ್ಷಮಿಸುವರು, ಎಂಬ ನಂಬಿಕೆಯಿಂದ ಈ ನೆನಪುಗಳನ್ನು ಬರೆಯುತ್ತೇನೆ.

ನಾನು ಕಾಲೇಜಿನಲ್ಲಿ ಓದಲು ಪ್ರಾರಂಭಮಾಡಿದಾಗ, ನನ್ನ ಜೀವನ ಸರ್ವಸ್ವದ ಮೇಲೂ ಪ್ರಭಾವವನ್ನು ಬೀರಿರುವ ಎರಡು ಸ್ನೇಹಗಳ ಭಾಗ್ಯ ನನಗೆ ಲಭಿಸಿತು. ಒಂದು ನನ್ನ ಪೂಜ್ಯ ಗುರುಗಳಾದ ಟೇಟ್ ಸಾಹೇಬರದು. ಇನ್ನೊಂದು ನಮ್ಮ ಭಾರತ ಚರಿತ್ರೆಯ ಅಮೃತ ನಾಯಕರಲ್ಲೊಬ್ಬರಾದ ಶ್ರೀಮಾನ್ ರಾಜಾಜಿಯವರದು. ನನ್ನ ಜೀವನದಲ್ಲಿ ನನ್ನ ಮನಸ್ಸಿನ, ಬುದ್ಧಿಯ, ಚೈತನ್ಯದ, ಬೆಳವಣಿಗೆಗೆ ಈ ಪ್ರೀತಿಯು ಉತ್ತೇಜನವನ್ನು ಕೊಟ್ಟಿರುತ್ತದೆ. ಇವರಿಬ್ಬರು ನನ್ನ ಜೀವನದಲ್ಲಿ ಪ್ರವೇಶ ಮಾಡದೇ ಇದ್ದರೆ ನನ್ನ ದಾರಿಯೇ ಬೇರೆಯಾಗುತ್ತಿತ್ತೋ ಏನೋ, ಎಂದು ನನಗೆ ತೋರುತ್ತದೆ.

ನಾನು ಕಾಲೇಜಿನಲ್ಲಿದ್ದಾಗ, ಇತರ ಕಾಲೇಜು ವಿದ್ಯಾರ್ಥಿಗಳಂತೆ ನಾನೂ ಮುಂದೆ ವಾಸಮಾಡಲಿಕ್ಕೆ ಗಾಳಿ ಗೋಪುರಗಳನ್ನು ಕಟ್ಟುತ್ತಿದ್ದೆ. ಆ ಪ್ರಾಸಾದಗಳಲ್ಲಿ ನಾನು, ರಾಜಾಜಿಯವರು, ವಾಸಮಾಡುವುದು; ನಮ್ಮ ಗುರುಗಳು — ಅಂದರೆ ಟೇಟ್ ಸಾಹೇಬರು — ಆಗಿಂದಾಗ್ಗೆ ನಮ್ಮನ್ನು ನೋಡಿ, ಮೆಚ್ಚಿ, ಆಶೀರ್ವದಿಸಿ, ನಮ್ಮ ಆತಿಥ್ಯವನ್ನು ಸ್ವೀಕರಿಸುವುದು; ಇವೇ ಮುಖ್ಯ ವಿಚಾರಗಳು ಜರುಗುತ್ತಿದ್ದವು. ರಾಜಾಜಿಯವರು ಲಾ ಕಾಲೇಜಿಗೆ ಸೇರಿದರು; ನಾನೂ ಸೇರಿದೆ. ಅವರು ಉತ್ತೀರ್ಣರಾಗಿ ಶಾಲ್ಯದಲ್ಲಿ ಲಾ ಪ್ರಾಕ್ಟೀಸು ಮಾಡಲಿಕ್ಕೆ ಪ್ರಾರಂಭ ಮಾಡಿದರು. ನಾನೂ ಅದೇ ಮಾರ್ಗವನ್ನನುಸರಿಸಿ, ಅಲ್ಲಿಗೇ ಪ್ರಾಕ್ಟೀಸು ಮಾಡಲು ಹೋದೆ. ಅದುವರೆಗೆ ನಾವು ಹಾಕಿದ್ದ ನಕ್ಷೆಯಂತೆ ನಡೆದೆ. ಅಲ್ಲಿ ನನ್ನ ದಾರಿ ಬೇರೆ ಕವಲಿಗೆ ತಿರುಗಿಬಿಟ್ಟಿತು. ಶಾಲ್ಯದ ಹವ ನನ್ನ, ನನ್ನ ಕುಟುಂಬದ ಆರೋಗ್ಯಕ್ಕೆ ಸರಿಬೀಳಲಿಲ್ಲ. ಅದೇ ಕಾಲದಲ್ಲಿ ಮೈಸೂರಿನಲ್ಲಿ ನೌಕರಿಯಲ್ಲಿದ್ದ ನಮ್ಮ ತೀರ್ಥರೂಪರು ಕೆಲಸದಿಂದ ರಿಟೈರಾದರು. ನಾನು ನಮ್ಮ ಸ್ಥಳಕ್ಕೆ ವಾಪಸು ಬಂದು, ಅಲ್ಲಿ ಒಂದೊಂದಾಗಿ ಒದಗಿ ಬಂದ ಜವಾಬ್ದಾರಿಗಳನ್ನು ವಹಿಸಿಕೊಳ್ಳಬೇಕೆಂದು

ಪದೇ ಪದೇ ತಗಾದೆಗಳು ಬರತೊಡಗಿದವು. ಈ ವಾತಾವರಣದಲ್ಲಿ ನನಗೆ ಮೈಸೂರು ಸರ್ಕಾರದಿಂದ ಒಂದು ಪ್ರೊಬೇಷನರ್ ಕೆಲಸದ ಆಫರ್ ಬಂತು. ನಾನು ಈ ಕೆಲಸಕ್ಕೆ ದರ್ಖಾಸ್ತು ಮಾಡಿರಲಿಲ್ಲ. ನನ್ನ ಸಂಗಡ ಸಿವಿಲ್ ಸರ್ವಿಸಿಗೆ ಹೋಗಿದ್ದ ನನ್ನಂತೆಯೇ ಸಿವಿಲ್ ಸರ್ವೀಸು ಮತ್ತು ಬಿ.ಎಲ್. ಪಾಸುಮಾಡಿದ್ದ ಇತರರಿಗೆ ಕೆಲಸಕೊಡುವ ಸಂದರ್ಭದಲ್ಲಿ ನನಗೂ ಕೆಲಸಕ್ಕೆ ಆಹ್ವಾನ ಕೊಡಬೇಕಾಯಿತೆಂದು ಅನಂತರ ತಿಳಿದು ಬಂತು. ನನಗೆ ಬೇಕಾದವರೆಲ್ಲರೂ, ಕೆಲಸವನ್ನು ಒಪ್ಪಿಕೊಳ್ಳಬೇಕೆಂದು ಕೆಲವರು ಸಲಹೆ, ಕೆಲವರು ಶಿಫಾರ್ಸು, ಕೆಲವರು ವಿಜ್ಞಾಪನೆ, ಮತ್ತೆ ಕೆಲವರು ಆಜ್ಞೆ ಇತ್ತರು. ಅರೆಮನಸ್ಸಿನಿಂದ ಬೆಂಗಳೂರಿಗೆ ಬಂದೆ. ಪ್ರೊಬೇಷನರ್ ಕೆಲಸಕ್ಕೆ ಕರೆಯಲ್ಪಟ್ಟಿದ್ದ ಇತರರೂ—ಎಲ್ಲರೂ ಸ್ವಲ್ಪ ಹೆಚ್ಚು ಕಡಿಮೆ ನನ್ನ ಕ್ಲಾಸುಮೇಟ್ಸು, ಸ್ನೇಹಿತರುಗಳೇ—ಬೆಂಗಳೂರಿಗೆ ಮೊದಲೇ ಬಂದಿದ್ದರು. ನಾವುಗಳೆಲ್ಲರೂ ಕಲೆತು ಮಾತನಾಡಿದಾಗ, ಸಂದೇಹಗಳು, ಶಂಕೆಗಳು, ಭಿನ್ನಾಭಿಪ್ರಾಯಗಳು ಎಲ್ಲವೂ ಮಾಯ ವಾಗಿ ಒಂದೇ ತೀರ್ಮಾನಕ್ಕೆ ಬಂದೆವು. ಏನೆಂದರೆ · ನಮ್ಮಂಥ ಮೇಧಾವಿ ಗಳು ಜನ್ಮಭೂಮಿಯ ಸೇವೆ, ಉದ್ಧಾರಕ್ಕಾಗಿಯೇ ಅವತರಿಸಿರುವುದರಿಂದ ಕೆಲಸವನ್ನು ಒಪ್ಪಿಕೊಂಡು ದೇಶದ ಸೇವೆಯನ್ನು ಮಾಡಲೇಬೇಕೆಂದು. ಸ್ವಂತ ಜೀವನೋಪಾಯ ಎಂಬ ಕಚ್ಚಾ ಯೋಚನೆ ನಮ್ಮಲ್ಲಿ ಯಾರಿಗೂ ಇದ್ದಂತೆಯೇ ಇಲ್ಲ. ನಮ್ಮ ಉಚ್ಚಶ್ರೇಯವು ಎಲ್ಲರಿಗೂ ತಿಳಿದಿದೆ; ಎಲ್ಲರೂ ನಮ್ಮನ್ನು ನೋಡಿ ಸಂತೋಷಪಡುತ್ತಿದ್ದಾರೆ, ಅವರ ಮೆಚ್ಚಿಗೆ ಸಾಧುವೆಂದು ಅವರಿಗೆ ಮುಂದೆ ರುಜುವಾತು ಕೊಡಬೇಕೆಂದು ನಮ್ಮ ಮನಸ್ಸಿನಲ್ಲಿ. ಅಂತೂ ಎಲ್ಲರೂ ಕೆಲಸಗಳನ್ನು ಒಪ್ಪಿಕೊಳ್ಳಬೇಕೆಂದು ನಿರ್ಧರಿಸಿದೆವು.

ಮಾರನೆಯ ದಿನ—ನನಗೆ ತಾರೀಕು ಜ್ಞಾಪಕವಿಲ್ಲ—ದಿವಾನ್ ಶ್ರೀಮಾನ್ ಕೃಷ್ಣಮೂರ್ತಿಗಳ ದರ್ಶನಕ್ಕಾಗಿ ಅವರ ಬಂಗಲೆಗೆ ಹೋದೆ. ಅವರು ಬಹಳ ದೊಡ್ಡವರು. ಪ್ರಸಿದ್ಧ ದಿವಾನ್ ಪೂರ್ಣಯ್ಯನವರ ವಂಶದಲ್ಲಿ ಹುಟ್ಟಿ, ವಿದ್ಯಾವ್ಯಾಸಂಗದಲ್ಲಿ ತೇಜಸ್ವಿಯಾಗಿ ಉತ್ತೀರ್ಣ ರಾಗಿ, ದೊಡ್ಡ ದೊಡ್ಡ ಹುದ್ದೆಗಳಲ್ಲಿ ಅನುಭವವನ್ನೂ, ಕೀರ್ತಿಯನ್ನೂ

ಗಳಿಸಿ, ಕೊನೆಗೆ ತಮಗೆ ನ್ಯಾಯವಾಗಿ ಸಲ್ಲಬೇಕಾಗಿದ್ದ ದಿವಾನ್ ಪದವಿಗೆ ಬಂದಿದ್ದರು. ಬಹು ಗಂಭೀರವಾದ ಸ್ವಭಾವದವರು, ಮೇಧಾವಿಗಳು, ತಮ್ಮ ಮನಸ್ಸಿಗೆ ಧರ್ಮವೆಂದು ತೋರಿದ ಮಾರ್ಗವನ್ನು ಬಿಡುವರಲ್ಲ. ನಾನು ನನ್ನ ಜೀವಮಾನದಲ್ಲಿ ನೋಡಿದ ಪೂಜಾರ್ಹರಾದ ಮನುಷ್ಯರ ಪೈಕಿ ಕೃಷ್ಣಮೂರ್ತಿಗಳು ಒಬ್ಬರೆಂದು ಈಗ ನಾನು ಸಂಶಯವಿಲ್ಲದೆ ಹೇಳಬಲ್ಲೆ.

ಸರಿ, ಅವರ ದರ್ಶನಮಾಡಿ, ಅವರಿಗೆ ನನ್ನ ಧನ್ಯವಾದಗಳನ್ನು ಅರ್ಪಿಸಿ, ಮುಂದೆ ನನ್ನನ್ನು ಪೋಸ್ಟ್ (post) ಮಾಡುವ ಸ್ಥಾನಕ್ಕೆ ಹೋಗಿ ಸೇರುವುದು ನನ್ನ ಕೆಲಸ. ಅವರ ಮನೆಯ ಹೆಸರು ಪೂರ್ಣ ಪ್ರಸಾದ. ಈಗಲೂ ಅದಕ್ಕೆ ಅದೇ ಹೆಸರು. ಆದರೆ ಆಗ್ಗೆ ಈಗ್ಗೆ ದೀಪ ಹಚ್ಚಿದ ಲಾಂದ್ರಕ್ಕೂ, ಒಡೆದು ಹೋಗಿರುವ 'ಲಾಟೀನ್'ಗೂ ಇರುವ ವ್ಯತ್ಯಾಸವಿದೆ. ಆಗ ಆ ಭವನದಲ್ಲಿ ಲಕ್ಷ್ಮಿಯ ಪ್ರಭಾವ ತುಂಬಿತ್ತು. ಆವರಣದತುಂಬ ಅರ್ಥಿಜನಗಳು, ಅಧಿಕಾರಿಗಳು, ವಾಹನಗಳು ತುಂಬಿರುತ್ತಿದ್ದುವು. ನಾನು ಅಲ್ಲಿ ಹೋಗಿ ವಿಸಿಟರ್ಸ್ ರೂಮಿನಲ್ಲಿ (Visitors' Room) ಕುಳಿತೆ. ಅಲ್ಲಿ ಮುಖದಲ್ಲಿ ದರ್ಪವನ್ನು ಬೀರುತ್ತಿರುವ ಉನ್ನತ ಅಧಿಕಾರಿಗಳೂ, ಹೆಸರುವಾಸಿಯಾದ ವರ್ತಕರೇ ಮೊದಲಾದ ಖಾಸಗಿ ಜನಗಳೂ ನೆರೆದಿದ್ದರು. ಸ್ವತಃ ನಮ್ರ ಸ್ವಭಾವದವನಲ್ಲದಿದ್ದರೂ ಆ ವಾತಾವರಣಕ್ಕೆ ಹೊಸಬನಾದ್ದರಿಂದ ನನ್ನ ಒಳಸಂತುಷ್ಟಿ ಸ್ವಲ್ಪ ಕಡಿಮೆಯಾಯಿತು. ನನ್ನನ್ನು ನೋಡುತ್ತಲೇ ಕೆಲವರು ತಮ್ಮತಮ್ಮಲ್ಲಿಯೇ 'ಇವರು ಹೊಸ ಪ್ರೊಬೇಷನ್ನರ ಪೈಕಿ ಎಂದು ಕಾಣುತ್ತೆ' ಎಂದು ಮಾತನಾಡಿಕೊಳ್ಳುತ್ತಿರುವಂತೆ ನನಗೆ ತೋರಿತು. ಅಷ್ಟರಲ್ಲಿ ಒಳಗಿನಿಂದ ನನ್ನ ಪರಿಚಿತಸ್ಥರಾದ ಶ್ರೀ ಎಂ. ಶಾಮರಾಯರು ಕೋಣೆಯೊಳಕ್ಕೆ ಬಂದು ನನಗೆ ಹಸ್ತಲಾಘವಕೊಟ್ಟು, ಕುಶಲ ಪ್ರಶ್ನೆಮಾಡಿ, 'ಬನ್ನಿ, ಯಜಮಾನರು ನಿಮ್ಮನ್ನು ವಿಚಾರಿಸಿದರು,' ಎಂದು ನನ್ನನ್ನು ಒಳಹಜಾರ ಮಾರ್ಗವಾಗಿ ಒಂದು ಕೊಠಡಿಯೊಳಕ್ಕೆ ಕರೆದುಕೊಂಡು ಹೋಗಿ ತಾವು ಒಳಕ್ಕೆ ಪ್ರವೇಶಮಾಡಿದರು. ನಾನು ಬಾಗಿಲಲ್ಲೇ, ಚಿನ್ನದ ಜರಿಯಿಂದಲಂಕೃತವಾದ ದೇದೀಪ್ಯಮಾನವಾದ ಕೆಂಪು ಬನಾತಿನ

ನೀಲಿ ಅಂಗಿ, ವಿಶಾಲವಾದ ವಕ್ಷಸ್ಥಲದ ಮೇಲೆ ಸೂರ್ಯಮಂಡಲ ದಂತೆ ಪ್ರಕಾಶಿಸುತ್ತಿರುವ ಬೆಳ್ಳಿಯ ಬಿಲ್ಲೆ, ಅಂಗೈಯಗಲದ ಜರತಾರಿ ಯುಳ್ಳ ಪೇಟ, ಇವುಗಳನ್ನು ಧರಿಸಿರುವ ಒಬ್ಬ ಮಹಾದ್ವಾರಪಾಲಕನ ಸಾನ್ನಿಧ್ಯದಲ್ಲಿ ಕಾದಿದ್ದೆ. (ಮೇಲಿನದು ನನ್ನ ಸಾಧಾರಣಮಾತಿನ ರೀತಿ ಯಲ್ಲ; ಪ್ರಜ್ವಲಿಸುವ ವಸ್ತುಗಳ ವರ್ಣನೆಗೆ ಉಜ್ವಲ ಭಾಷೆಯೇ ಉಚಿತ ವೆಂಬ ಭಾವನೆಯ ಮೇಲೆ ಪ್ರಯಾಸಪಟ್ಟು ಒಪ್ಪಿಸಿದ ಕಾಣಿಕೆ.) ಈ ಧೀರಪುರುಷನು ಅಪಾರ ಕೃಪೆಯಿಂದ ನನಗೆ ಕೈಮುಗಿದು ಅಲ್ಲಿದ್ದ ಒಂದು ಕಾಲುಮಣೆಯಮೇಲೆ ಕೂಡುವಂತೆ ಸನ್ನೆಮಾಡಿದನು. ನನಗೆ ಸಂಕೋಚವಾಗಿ ಹಾಗೆಯೇ ನಿಂತಿದ್ದೆ. ಅಷ್ಟರಲ್ಲಿಯೇ ಶಾಮರಾಯರು ಬಾಗಿಲಿನ ಈಚೆಗೆ ತಲೆಹಾಕಿ ನನ್ನನ್ನು ಒಳಕ್ಕೆ ಕರೆದರು.

ದೊಡ್ಡ ಕೊಠಡಿ. ಅದರ ಮಧ್ಯದಲ್ಲಿ ಫೈಲುಗಳ ಭಾರದಿಂದ ನರಳುತ್ತಿರುವ ವಿಸ್ತಾರವಾದ ಒಂದು ಮೇಜು; ಅದರ ಒಂದು ಪಾರ್ಶ್ವ ದಲ್ಲಿ ಒಂದೇ ಕುರ್ಚಿ. ಎದುರು ಪಾರ್ಶ್ವದಲ್ಲಿ ಹಲವು ಕುರ್ಚಿಗಳು. ಗೋಡೆಯ ಸಾಲಿಗೆ ಪುಸ್ತಕಗಳಿಂದ ತುಂಬಿದ ಅಲ್ಮೇರಾಗಳು. ಒಂದೇ ಇದ್ದ ಕುರ್ಚಿಯಮೇಲೆ ಶ್ರೀಮಂತ ದಿವಾನರು ಕುಳಿತು ಏನನ್ನೋ ಬರೆ ಯುತ್ತಿದ್ದರು. ನಾನು ಪ್ರವೇಶಿಸುತ್ತಲೇ ತಲೆಯೆತ್ತಿ ಮುಗುಳು ನಗೆ ಯಿಂದ ನನ್ನ ನಮಸ್ಕಾರಕ್ಕೆ ಪ್ರತಿಯಾಗಿ ಕೈಯೆತ್ತಿ, "ನೀವು ಬಂದದ್ದು ಬಹಳ ಸಂತೋಷ ನವರತ್ನದ ರಾಯರೆ. ಬಂದೇ ಬಿಟ್ಟಿರಲ್ಲ, ಕೊನೆಗೂ!" ಎಂದರು.

ಕೊನೆಯ ವಾಕ್ಯದ ಅರ್ಥವಾಗಬೇಕಾದರೆ ಒಂದು ಕಥೆಯನ್ನು ಹೇಳಬೇಕು. ಅದನ್ನು ಆಮೇಲೆ ಹೇಳುತ್ತೇನೆ.

ಆ ಘನವುಳ್ಳ ಹಿರಿಯರ ಎದುರಿಗೆ ಸಹಜವಾಗಿ ಬಂದ ಎಂದೂ ಇಲ್ಲದ ನಮ್ರಭಾವದಿಂದ ನಾನು, "ತಾವು ಕೃಪೆಯಿಟ್ಟು ಕರೆಸಿಕೊಳ್ಳೋಣ ವಾಯಿತು. ತಮ್ಮ ಆಜ್ಞೆಯನ್ನು ಮೀರುವುದು ಸಾಧ್ಯವೇ?" ಎಂದೆ.

ನನ್ನ ಮಾತು ಮುಗಿಯುವುದರೊಳಗಾಗಿ ದಿವಾನರು ತಾವು ಮಾಡು ತ್ತಿದ್ದ ಕೆಲಸದಲ್ಲಿ ಮಗ್ನರಾಗಿಬಿಟ್ಟಿದ್ದರು. ನಾನು ಕೈಮುಗಿದದ್ದನ್ನು ಕೂಡ ನೋಡಿರಲಾರರು.

ಶಾಮರಾಯರ ಸಂಗಡ ಈಚೆಗೆ ಬಂದೆ. ಅಲ್ಲಿಗೆ ನನ್ನ ಅಂತಸ್ತೇ ಏರಿದ್ದದ್ದನ್ನು ಕಂಡೆ. ದ್ವಾರಪಾಲಕ ಪ್ರಸನ್ನನಾಗಿ ಕೈಮುಗಿದ. Visitors' Room ನಲ್ಲಿನ ಕೆಲವರು ನನ್ನ ಪರಿಚಯುವನ್ನು ಬಯುಸಿದರು. ಪಳಗಿದ ಅಧಿಕಾರಿ ಹಿರಿಯರು ನನ್ನನ್ನು ಚಿರಂಜೀವಿ ಪದವಿಗೆ ಸ್ವೀಕರಿಸಿದರು. ಗಾಳಿಯಮೇಲೆ ತೇಲುತ್ತಿರುವಂತೆ ನೆಲದ ಸ್ಪರ್ಶವೇ ಇಲ್ಲದೆ ಈಚೆಗೆ ಬಂದೆ. ಶಾಮರಾಯರು ನನ್ನ ಭುಜದಮೇಲೆ ಕೈಯಿಟ್ಟು ನನ್ನ ಕಿವಿಯಲ್ಲಿ, "ಕೌನ್ಸಿಲರ್ ಮಾಧವರಾಯರನ್ನು ನೋಡಿ. ಅವರ ವಿಚಾರದಲ್ಲಿ ಉದಾಸೀನರಾಗಿದ್ದಂತೆ ಕಾಣಬಾರದು," ಎಂದು ಉಸುರಿದರು.

ನಾನು, "ಹಾಗೇ ಮಾಡುತ್ತೇನೆ," ಎಂದು ಹೇಳಿದೆ.

ಅವರು, "ಅವರನ್ನು ನೋಡಿದಮೇಲೆ ಪುನಃ ಇಲ್ಲಿ ಬಂದು ನೋಡುವುದು ಲೌಕಿಕ. ನೀವು ಬುದ್ಧಿವಂತರು ಯಾಕೆ ಎಂಬುದನ್ನು ಊಹಿಸಿಕೊಳ್ಳಿ," ಎಂದರು.

ನಾನು ಊಹಿಸಿಕೊಂಡೆ ಕೃಷ್ಣಮೂರ್ತಿಗಳಿಗೆ ವಿ. ಪಿ. ಮಾಧವರಾಯರಿಗೆ ಬಹಳ ವೈರವಿತ್ತೆಂಬುದು ರಹಸ್ಯದ ಮಾತಾಗಿರಲಿಲ್ಲ. ನಾನು ಕೃಷ್ಣಮೂರ್ತಿಗಳ ಕಡೆಯುವನು; ಆ ಧೈರ್ಯದ ಮೇಲೆ ತಮ್ಮನ್ನು ಲಕ್ಷ್ಯಕ್ಕೆ ತಾರದೆ, ದರ್ಶನಕ್ಕೆ ಬಾರದೆ ಹೊರಟುಹೋದೆನೆಂದು ಮಾಧವರಾಯರ ಮನಸ್ಸಿಗೆ ತೋರಿದರೆ ಅವರು ಅದನ್ನು ಮರೆಯುವರೂ ಅಲ್ಲ, ಕ್ಷಮಿಸುವರೂ ಅಲ್ಲವೆಂದು ನನಗೆ ಮಂದಟ್ಟಿದ್ದಿತು. ಸರಿ, ಮಾಧವರಾಯರ ದರ್ಶನಕ್ಕೆ ಹೋದೆ. ಶ್ರೀಯುತರು ಅವರ ಭವನದ ವಿಶಾಲವಾದ ತೋಟದಲ್ಲಿ ತಲಾಯಿಸುತ್ತಿದ್ದರು. ಅವರ ಹಿಂದೆ ಉಚಿತವಾದ ದೂರದಲ್ಲಿ ಆಶ್ರಿತರ ಮತ್ತು ತಾಬೇದಾರುಗಳ ಒಂದು ಸಣ್ಣ ಗುಂಪು ಅವರನ್ನೇ ಅನುಸರಿಸಿ ನಡೆಯುತ್ತಿತ್ತು. ಅವರು ಹಿಂತಿರುಗಿದಾಗ ಅವರ ಕಟಾಕ್ಷವು ಯಾರ ಮೇಲಾದರೂ ಬಿದ್ದರೆ ಆ ಭಾಗ್ಯಶಾಲಿಯ ಮುಖ ಸೂರ್ಯಕಿರಣವನ್ನನುಭವಿಸಿದ ತಾವರೆಯಂತೆ ಅರಳುತ್ತಿತ್ತು. ಅವರು ಮಾತನ್ನಂತೂ ಆಡಿಸಿದರೆ, ಆ ಪುಣ್ಯವಂತನ ಶರೀರವೇ ಹರ್ಷದಿಂದ ಉಬ್ಬಿಬಿಡುತ್ತಿತ್ತು. ನಾನು ನೋಡಿರತಕ್ಕ ಮನುಷ್ಯರಲ್ಲಿ ಆಕಾರದಲ್ಲೂ ಮುಖದ

ಗಾಂಭೀರ್ಯ ತೇಜಸ್ಸುಗಳಲ್ಲೂ ಮಾಧವರಾಯರನ್ನು ಮೀರಿದವರು ಯಾರೂ ಇಲ್ಲ. ಹಿಂದೆ ನಮ್ಮನ್ನಾಳಿದ ಮಹಾಸ್ವಾಮಿಗಳ Private Secretary ಆಗಿದ್ದ ಮಿ॥ ಮೆಕನಾಕಿಯವರು ಇವರ ಮುಖಭಾವದ ವಿಷಯವಾಗಿ "No one can be really so distinguished as Mr. Madhava Rao looks" ಎಂದದ್ದು ಅಪಹಾಸ್ಯವಾದರೂ ದಿಟವೇ ಸರಿ. ವ್ಯೂಢೋರಸ್ಕಃ ವೃಷಸ್ಕಂಧಃ ಶಾಲಪ್ರಾಂಶುರ್ಮಹಾಭುಜಃ ಎಂಬ ವರ್ಣನೆಯು ಇವರಿಗೆ ಸಲ್ಲುತ್ತಿತ್ತು.

ಬೇಕಾದವರಿಗೆ ಇವರಂತಹ ಉದಾರರಿಲ್ಲ, ಬೇಡದವರಿಗೆ ಇವರ ಹಾಗೆ ಸಮಯ ಕಾದು ಕೆಡುಕುಮಾಡುವರಿಲ್ಲ, ಎಂದು ಪ್ರತೀತಿ. ಇವರ ಅನುಗ್ರಹದ ಆಶೆ ನನಗಿಲ್ಲದಿದ್ದರೂ, ಇವರ ವೈರಕ್ಕೆ ಕಾರಣ ಕೊಡ ಬಾರದೆಂಬ ಕಾತರ ಬಹಳವಾಗಿತ್ತು.

ನಾನು ಇವರ ಅನುಯಾಯಿಗಳ ಗುಂಪಿಗೆ ಸೇರಿದೆ. ಇವರ Private Secretary—ಅಥವಾ ಅವರಿಗೆ ಆಗ Personal Clerk ಎಂಬ ಹೆಸರೋ ಜ್ಞಾಪಕವಿಲ್ಲ—ನನ್ನ ಪರಿಚಯಸ್ಥರು. ಅವರು ದೊಡ್ಡವರಿಗೆ ಮರಾಠಿ ಯಲ್ಲಿ 'ನವರತ್ನ ರಾಮರಾಯರು ದರ್ಶನಕ್ಕೆ ಬಂದಿದ್ದಾರೆ' ಎಂದು ತಿಳಿಸಿದರು. ದೊಡ್ಡವರು ನನ್ನ ಕಡೆಗೆ ತಿರುಗಿ ಮುಗುಳು ನಗೆಯಿಂದ ಅದೇ ಭಾಷೆಯಲ್ಲಿ 'ಏನು ಆ ದೊಡ್ಡ ಹುದ್ದೇ offer ಬಂತಲ್ಲ! ಅದ ಕ್ಕಾಗಿ ಬಂದಿದ್ದೀರೊ?' ಎಂದರು. ನಮ್ಮ ತಂದೆಯವರನ್ನು ನನ್ನ ಬಳಗದ ಅನೇಕರನ್ನು ಅವರು ಬಲ್ಲವರು. ಅವರ ಕುಶಲವನ್ನು ವಿಚಾರಿ ಸುತ್ತ, ಇನ್ನೂ ಏನೇನೋ ಪುಡಿಮಾತನಾಡುತ್ತ ಅವರ ಮಹಲಿನ ಕಡೆಗೆ ತಿರುಗಿ, ಅವರ veranda ದಲ್ಲಿ ಕೂಡಿಸಿಕೊಂಡರು.

"ನಿಮ್ಮ ವಿಚಾರವನ್ನು ನಿಮ್ಮ ಉಪಾಧ್ಯಾಯರಿಂದಲೂ, ಇತರ ರಿಂದಲೂ ಕೇಳುತ್ತಾ ಇದ್ದೇನೆ. ನೀವು ಅಭಿವೃದ್ಧಿಗೆ ಬರತಕ್ಕವರು. ಬುದ್ಧಿಯಿಲ್ಲದವರಂತೆ ಸಣ್ಣ ಚಾಕರಿಗೆ ಆಶೆಪಟ್ಟು ತಗಲಿಕೊಂಡು ಮುಂದೆ ಪೇಚಾಡಬಾರದು. ನೀವು ವಕೀಲರಾಗಿ practise ಮಾಡಿದರೆ ಸಂಪಾದನೆ ಬೇಕಾದಹಾಗೆ ಮಾಡಬಹುದು. ಮುಖ್ಯವಾಗಿ ಸ್ವತಂತ್ರ ರಾಗಿರಬಹುದು. ನಿಮ್ಮ ತಂದೆಯವರ ಸಂಗಡ ಆಲೋಚನೆ

ಮಾಡಿ; ದುಡುಕಬೇಡಿ. ಏನು ಮಹಾ ಪ್ರೊಬೇಷನ್ನರ್ ಕೆಲಸ?" ಎಂದರು.

ಹೀಗೆ ಇವರು ಹಿತಚಿಂತೆಯಿಂದ ಮಾತನಾಡುತ್ತಿದಾಗ ನಾನು ಬಹಳ ಕಳವಳಗೊಂಡೆ. ಇವರ ಬುದ್ಧಿವಾದವನ್ನೂ, ಸಲಹೆಯನ್ನೂ ಕೇಳುವುದಕ್ಕೆ ಬಂದಿದ್ದೇನೆಂದು ಇವರು ತಿಳಿದಿದ್ದಾರೆ. ನಾನು ತಪ್ಪೋ, ಸರಿಯೋ, ಕೆಲಸವನ್ನು ಆಗಲೇ ಒಪ್ಪಿಕೊಂಡುಬಿಟ್ಟಿದ್ದೇನಲ್ಲವೇ?

ಅವರು ಮಾತನ್ನು ಪೂರೈಸಿ ಪ್ರತ್ಯುತ್ತರವನ್ನು ನಿರೀಕ್ಷಿಸುವಂತೆ ಕಂಡಾಗ ನಾನು ಹೇಳಿದೆ:

"ನಾನು ದುಡುಕಿರಬಹುದು. ನನಗೆ ಶಾಲ್ಯದಲ್ಲಿ ಇನ್ನು ಹೆಚ್ಚು ದಿನಗಳಿರಲು ಸಾಧ್ಯವಾಗಲಿಲ್ಲ. ನಮ್ಮ ತಂದೆಯವರ ನಿರ್ಬಂಧವೂ ಬಲವಾಯಿತು. ಅದಕ್ಕೋಸ್ಕರ ಕೆಲಸವನ್ನು ಒಪ್ಪಿಬಿಟ್ಟೆ. ಆ ಮಾತನ್ನು ಪುನಃ ವಿಮರ್ಶೆಗೆ ತೆಗೆಯುವ ಹಾಗಿಲ್ಲ. Prospects ಕೂಡ ಅಷ್ಟೇನೂ ಕಳಪೆಯಾಗಿರುವಂತೆ ಕಾಣಲಿಲ್ಲ. ಈ ಸಲ ತೆಗೆದುಕೊಂಡ B.A., B.L. ಪ್ಯಾಸು ಮಾಡಿ, Civil Service ನಲ್ಲಿ ಪದವಿ ದೊರೆಯದಿದ್ದರೂ ಚನ್ನಾಗಿ ಮಾಡಿರತಕ್ಕ ಪ್ರೊಬೇಷನ್ನರುಗಳಿಗೆ ಶೀಘ್ರದಲ್ಲೇ Assistant Commissioner ಅಥವಾ ಇತರ Gazetted rank ಕೊಡುವುದಾಗಿ ಮಾತು ಕೊಟ್ಟಿದ್ದಾರಲ್ಲವೇ?"

"ಓಹೋ, ಹಾಗೋ? ಒಪ್ಪಿಬಿಟ್ಟಿದ್ದಿರೋ? ಹಾಗಾದರೆ, ಇಲ್ಲಿಗೆ ನನ್ನನ್ನು ನೋಡೋಕೆ ಯಾಕೆ ಬಂದಿರಿ?"

ಈ ಮಾತು ಇಂಗ್ಲೀಷ್‌ನಲ್ಲಿ, ಮರಾಠಿಯಲ್ಲಲ್ಲ.

ನಾನು ಎದ್ದು ಕೈಮುಗಿದು, "ತಮ್ಮ ದರ್ಶನವನ್ನು ತೆಗೆದುಕೊಂಡು ತಮ್ಮಲ್ಲಿ ನನಗಿರುವ ಗೌರವವನ್ನು ಸಲ್ಲಿಸುವುದಕ್ಕೆ," ಎಂದೆ.

"ಎರಡೂ ಆಯಿತಲ್ಲ. Good morning ನಾನು ಹೇಳಿದ್ದನ್ನು ಜ್ಞಾಪಕದಲ್ಲಿಡಿ."

ಅಲ್ಲಿಂದ ಖಿನ್ನನಾಗಿ ಈಚೆಗೆ ಬಂದೆ. ದಿವಾನರ ಮನೆಯ ಹತ್ತಿರ ನನಗೆ ಶ್ರೀ ಡಿ. ಎಂ. ನರಸಿಂಗರಾಯರು ಸಿಕ್ಕಿದರು ಅವರು ಹಾಸ್ಯಭಾವದಿಂದ, "ಏನು ಪಟ್ಟನ ಭವನದಿಂದ ಬರುತ್ತಿರುವ ಹಾಗಿದೆ. ಪಟ್ಟನ

ಸ್ವಾಮಿಗಳ ದರ್ಶನವಾಯಿತೋ?'' ಎಂದು ಕೇಳಿದರು. ಆಯಿತೆಂದು ನಡೆದ ಸಂಗತಿಯನ್ನು ಹೇಳಿದೆ. ಅವರು, "ಇದನ್ನು ಯಜಮಾನರಲ್ಲಿ ತಿಳಿಸಿಬಿಡಿ. ಚಾಡಿ ಮಾತೆಂದಲ್ಲ. ನೀವು ಅಲ್ಲಿಗೆ ಹೋದದ್ದು ಅವರಿಗೆ ಗೊತ್ತಿದೆ. ನಿಮಗೆ, ಅವರ ಪ್ರತಿ ಕಕ್ಷಿಯವರಿಗೆ, ಒಳ ರಹಸ್ಯವಿರುವಂತೆ ಭಾವನೆ ಬರಬಾರದು,'' ಎಂದರು.

ನನಗೆ, "ಇದೇನೋ ರಾಜಕೀಯವೆನ್ನುವುದು? ಇಲ್ಲಿಯ ಮಾತು ಅಲ್ಲಿ, ಅಲ್ಲಿಯ ಮಾತು ಇಲ್ಲಿ. ಇದೇನು ಅಸಹ್ಯ!'' ಎಂದು ಜುಗುಪ್ಸೆಯಾಯಿತು. ಆದರೂ ನರಸಿಂಗರಾಯರು ಹೇಳಿದ ಮಾತು ಲೌಕಿಕವಾದ್ದು. ಆ ರೀತಿ ಮಾಡಿದೆ.

ನಾನು ದಿವಾನರನ್ನು ಕಾಣುತ್ತಲೇ ಅವರು, "ರಾಯರನ್ನು ನೋಡಲಿಕ್ಕೆ ಹೋಗಿದ್ದಿರಲ್ಲ; ಏನು ಉಪದೇಶ ಮಾಡಿದರು?'' ಎಂದು ಕೇಳಿದರು.

ಪ್ರೊಬೇಷನ್ನರ್ ಕೆಲಸವನ್ನು ನಾನು ಒಪ್ಪಿಕೊಳ್ಳಬಾರದಾಗಿತ್ತು, ಮುಂದೆ prospects ಅಷ್ಟೇನೂ ಚೆನ್ನಾಗಿಲ್ಲವೆಂದು ಹೇಳಿದರೆಂದು ತೀಲಿಸಿ ವರದಿ ಮಾಡಿದೆ.

ದಿವಾನರು ವಿಕಟವಾಗಿ ನಕ್ಕರು.

"ಹಾಗಿದ್ದರೆ ಆ ಗೃಹಸ್ಥ (ಅವರು ಉಪಯೋಗಿಸಿದ ತುಸು ಗ್ರಾಮ್ಯ ಪದವನ್ನು ಗೃಹಸ್ಥನೆಂದು ಪರಿವರ್ತಿಸಿದ್ದೇನೆ) ಅವನ ಮಗನಿಗೆ ಯಾಕೆ ಪ್ರೊಬೇಷನ್ನರ್ ಕೆಲಸ ಕೊಡಿಸಿದನಂತೆ?''

ದೊಡ್ಡವರು ಕೂಡ ಕೋಪ ಬಂದರೆ ಮಾತನ್ನು ಉಚಾಯಿಸುತ್ತಾರೆ ನೋಡಿ.

ನಾನು, "ಅವರು ಹೇಳಿದ್ದು, ನಿಪುಣ ಕಸಬುಗಳಲ್ಲಿ ಪದವೀದಾರ್ರಾಗಿರುವವರು ತಮ್ಮ ಯೋಗ್ಯತೆಯಲ್ಲಿ ನಂಬಿಕೆಯಿದ್ದರೆ ಆ ಕಸಬಿನಲ್ಲೇ ಪ್ರಯತ್ನಮಾಡಬೇಕು, ಎಂದು....'' ಎಂದು ಹೇಳುವಷ್ಟರಲ್ಲೇ ದಿವಾನರು ಘಟ್ಟಿಯಾಗಿ ನಕ್ಕು,

"ಹಾಗಾದರೆ ಬೇಕೂಫನೆಂದು ಅವರ ಮಗನಿಗೆ ಸರ್ಕಾರಿ ಕೆಲಸಕ್ಕೆ ಸೇರಿಸಿದರು. ತಾವೂ ಆ ಕಾರಣದಿಂದಲೇ ಸೇರಿದರು?'' ಎಂದು ಸಂತೋಷಚಿತ್ತಕ್ಕೆ ವಾಪಸು ಬಂದರು.

ನಾನು ಕೈಮುಗಿದು ಈಚೆಗೆ ಬಂದೆ. ನನಗೆ ಉನ್ನತ ಅಂತಸ್ತುಗಳ ಮಾತ್ಸರ್ಯ ವಿಡಂಬನಗಳು ಸ್ವಲ್ಪ ನಗೆಗೀಡಾಗಿ ಕಂಡವು. ದಿವಾನರು ಆಡಿದ ಮಾತುಗಳನ್ನು ನೆನೆದು ನಗುಮೊಗವಾಗಿಯೇ ನಾನು ಈಚೆಗೆ ಬಂದೆ. ನನ್ನ ಭುಜದ ಮೇಲೆ ಸ್ನೇಹಸೂಚಕ ಕೈಬಿತ್ತು.

"ಓಹೋ, ಏನು ರಾಮರಾವ್, ಪ್ರತ್ಯಕ್ಷ ದರ್ಶನಲಭಿಸಿದ ಸೌಖ್ಯ ಕಾಣುತ್ತಾ ಇದೆ ನಿನ್ನ ಮುಖದಲ್ಲಿ! ದಾಸರು ಹಾಡುವಂತೆ 'ಕೃಷ್ಣಾ ಮೂರ್ತಿ ಕಣ್ಣ ಮುಂದೆ ನಿಂತಿದ್ದಂತಿದೆ'. ಆದರೂ, ನಾನು ದಾಸ; ಕಣ್ಣು ಬಿಟ್ಟು ನೋಡು"

ಇದು ಹಾಡ್ಯದ ದಾಸಪ್ಪ. ಅವರು ಸಿವಿಲ್ ಸರ್ವೀಸಿನಲ್ಲಿ ಜಯಶಾಲಿಗಳಾಗಿ Assistant Commissioner ಕೆಲಸವನ್ನು ಗೆದ್ದು ಒಂದು ವರ್ಷವಿಲ್ಲ. ನಾನೂ ಅವರೂ ಬಹಳ ಸ್ನೇಹಿತರು. ಆತ ಒಳ್ಳೇ ಮೇಧಾವಿಗಳು, ಸ್ನೇಹಪರರು. ಅವರಲ್ಲಿ ಸಾಹಿತ್ಯ ಜ್ಞಾನ ತುಂಬಿತ್ತು. ರಸಿಕರು. ಅವರ ಹಾಸ್ಯ ಕುಚೇಷ್ಟೆ ಬಹಳ ಅಪೂರ್ವವಾದದ್ದಿತ್ತು. ನನಗೆ ಯಾವಾಗಲೂ ಒಂದು ದೃಷ್ಟಾಂತರ ಮನಸ್ಸಿಗೆ ಬರುತ್ತೆ.

ಮದ್ರಾಸಿನಲ್ಲಿ ನಾವುಗಳು ಒಂದೇ ಹೋಟೆಲಿನಲ್ಲಿ ಊಟಮಾಡುತ್ತಿದ್ದೆವು. ಆ ಭೋಜನ ಖಾನೆಯ ಯಜಮಾನ ಶಂಕರ್ ಅಯ್ಯರ್ ಎಂದು. ಅವನು ಪಾಪ ನಳನಲ್ಲ ಭೀಮಸೇನನಲ್ಲ. ಅಗ್ಗವಾದ ಸಾಮಗ್ರಿಗಳನ್ನು ಮಿತವಾಗಿ ಉಪಯೋಗಿಸಿ ಬೇರೆ ಆಸ್ಪದವಿಲ್ಲದ ನಮ್ಮಂಥವರಿಗೆ ಊಟಮಾಡಿಸಿ ಜೀವನಮಾಡುತ್ತಿದ್ದ. ಒಂದು ದಿವಸ ಮಾಮೂಲಿಗಿಂತ ಅಧ್ವಾನವಾದ ಅಡಿಗೆಮಾಡಿ ಬಡಿಸಿದ. ಊಟವಾಯಿತು, ಸಾಧ್ಯವಾದ ಮಟ್ಟಿಗೆ. ಆಮೇಲೆ ದಾಸಪ್ಪನವರು ಬಾಗಿಲ ಹತ್ತಿರ ನಿಂತು ಶಂಕರ ಅಯ್ಯರನ್ನು ಕರೆದರು. ಆತ ಬಂದ. ಅವನನ್ನು ದಾಸಪ್ಪ ಬಿಮ್ಮನೆ ತಬ್ಬಿಕೊಂಡು ಬಿಕ್ಕಿಬಿಕ್ಕಿ ಅಳ ಹತ್ತಿದರು. ಶಂಕರ ಅಯ್ಯರ್ ಗಾಬರಿಯಾದ; ಅಲ್ಲಿದ್ದವರೆಲ್ಲ 'ಇದೇನು, ಇದೇನು?' ಎಂದು ವಿಸ್ಮಯದಿಂದ ಕೇಳಿದರು. ದಾಸಪ್ಪನವರು ಬಿಕ್ಕುಗಳಿಂದ ಖಂಡಿತವಾದ, ಕಂಬನಿಯಿಂದ ತೊಯಿದ, ಧ್ವನಿಯಿಂದ ಶೋಕ ಕಾರಣವನ್ನು ತಿಳಿಸಿದರು.

"ಬಹುಜನ ಕೆಟ್ಟ ಅಡಿಗೆಯುವರನ್ನು ನೋಡಿದ್ದೇನೆ. ಆದರೆ ಇವನ ಸಮನನ್ನು ನೋಡಿಲ್ಲ. ಇವನೇ ಇವನು. ಇವತ್ತಿನ ಇವನ ಅಡಿಗೆಯನ್ನು ಇವನೇ ಊಟ ಮಾಡಿ ಸತ್ತರೆ ಏನು ಗತಿ? ಇಂಥ ಇನ್ನೊಬ್ಬನು ಬರುತ್ತಾನೆಯೇ? ಅಳು ಬರುವುದಿಲ್ಲವೇ ಮತ್ತೆ?"

ಮಾರನೆಯ ದಿನ ನನ್ನ ಗುರುಗಳಾದ ಟೇಟ್ ಸಾಹೇಬರನ್ನು ನೋಡಲಿಕ್ಕೆ ಹೋದೆ. ಅವರು ನನ್ನನ್ನು ನೋಡುತ್ತಲೇ ಪ್ರೇಮದಿಂದ ಎದ್ದು ಬಂದು, ನನ್ನ ಕೈಯನ್ನು ಹಿಡಿದು ಅವರ ಪತ್ನಿಯವರ ಸಮೀಪಕ್ಕೆ ಕೊಂಡುಹೋಗಿ, "ನೋಡಿ, ಚನ್ನಾಗಿ ನೋಡಿ; ಈ ಹುಡುಗನ ಚಿಕ್ಕ ಮೂರ್ತಿಗೆ, ನಮ್ರತೆಗೆ, ಮೋಸ ಬೀಳಬೇಡಿ. ಭಯಂಕರ ಗಟ್ಟಿಗ. ನಮ್ಮನ್ನು ಆಳುವರ ಗುಂಪಿಗೆ ಸೇರಿದ್ದಾನೆ," ಎಂದರು.

Look at him. Look well. Don't be misled by his size and humility He is a terribly clever lad, and he has joined the big ones who rule us!

Mrs. Tait ಮಾತೆಯರು ಪ್ರೇಮಾರ್ದ್ರ ದೃಷ್ಟಿಯಿಂದ ನನ್ನನ್ನು ನೋಡಿ ಸ್ವಾಗತಿಸಿ ಕೂಡಿಸಿಕೊಂಡರು.

ಅದೂ ಇದೂ ಮಾತಾದಮೇಲೆ ಟೇಟ್ ಸಾಹೇಬರು, "ಹಾಗಾದರೆ ಡ್ಯೂಟಿ ಪ್ರಾರಂಭ ಮಾಡಿಬಿಟ್ಟೆ?" ಎಂದು ನಗುತ್ತಾ ಹೇಳಿದರು

"ಇನ್ನೂ ರಿಪೋರ್ಟ್ ಮಾಡಿಕೊಂಡಿಲ್ಲ."

"ಓ, ಅದು ಸಣ್ಣ ವಿಷಯ. ಮುಖ್ಯವಾದ ಡ್ಯೂಟಿ ಏನು ಅಂತ ತಿಳಿದಿದ್ದಿ? ದಿವಾನರ ಮನೆಗೆ ಹೋಗೋದು; ಬಗ್ಗಿ ಕೈ ಮುಗಿಯೋದು; ಸ್ವಾಮಿ ಪ್ರೊಮೋಷನ್ ಎನ್ನುವುದು."

ಆಮೇಲೆ, "ಬ್ರಾಹ್ಮಣನಾದ ನಿನಗೇನೂ ಸರ್ವೀಸಿನಲ್ಲಿ ಕಷ್ಟವಿರಲಾರದು. ಬ್ರಾಹ್ಮಣರಲ್ಲದವರನ್ನು ಗೋಳುಹೊಯ್ದುಕೊಳ್ಳುತ್ತಾರಂತೆ. ಚನ್ನಿಗಪ್ಪ ಹೇಳಿದ. ದೇವರು ನಿನಗೆ ಒಳ್ಳೆಯದು ಮಾಡಲಿ. ದೇವರು ನಿನಗೆ ಕೊಟ್ಟಿರುವ ಬುದ್ಧಿ, ಶೀಲ ಇವುಗಳಿಗೆ ದ್ರೋಹವಿಲ್ಲದೆ ಧರ್ಮದಿಂದ ಧೈರ್ಯದಿಂದ ಕೆಲಸ ಮಾಡು," ಎಂದು ಹೇಳಿದರು.

೨

"ಬಂದೇ ಬಿಟ್ಟಿರಲ್ಲ, ಕೊನೆಗೂ" ಎಂದು ಶ್ರೀಮಂತ ಕೃಷ್ಣಮೂರ್ತಿಗಳು ನಾನು ಅವರನ್ನು ನೋಡಲಿಕ್ಕೆ ಹೋದಾಗ ಹೇಳಿದರು, ಅದು ಬೇರೇ ಕಥೆ, ಆಮೇಲೆ ಹೇಳುತ್ತೇನೆಂದು ಮಾತು ಕೊಟ್ಟಿದ್ದೇನೆ. ಇದೋ, ಆ ಕಥೆ.

ನನಗೆ ಆಗತಾನೆ F L ಪಾಸಾಗಿತ್ತು. ಮದರಾಸಿನಲ್ಲಿ ಲಾ ಕಾಲೇಜಿನಲ್ಲಿ B.L ಗೆ ಓದುತ್ತಿದ್ದೆ. ಆಗಿನ ಕಾಲದಲ್ಲಿ—ಅಂದರೆ ೧೯೦೦–೧೯೦೧ರಲ್ಲಿ—ಪರಸ್ಥಳದವನು ಮದರಾಸಿನಲ್ಲಿ ವಿದ್ಯಾರ್ಥಿಯಾಗಿರಬೇಕೆಂದರೆ ತಿಂಗಳಿಗೆ ೩೦ ರೂಪಾಯಿಯಾದರೂ ಕನಿಷ್ಠ ಪಕ್ಷ ಬೇಕಾಗುತ್ತಿತ್ತು. ಅದಲ್ಲದೆ ಕಾಲೇಜು ಫೀಗಳು ಬೇರೆ. ಆಗಿನ ಕಾಲದಲ್ಲಿ ಅದೇ ಭಾರಿ ಮೊಬಲಗೆಂದು ಎಣಿಸುತ್ತಿದ್ದೆವು. ನನಗೆ ಪ್ರತಿ ತಿಂಗಳಲ್ಲಿಯೂ ಇಷ್ಟು ಹಣ ಒದಗುವುದು ಕಷ್ಟವಾಗುತ್ತಿತ್ತು. ನಮ್ಮದು ಬಹಳ ದೊಡ್ಡ ಕುಟುಂಬ; ಸಂಪಾದಿಸುವರು ನಮ್ಮ ತಂದೆಯವರು ಒಬ್ಬರೆ. ಅವರು ಎಷ್ಟು ಕಷ್ಟಪಟ್ಟು ಹಣ ಕಳುಹಿಸುತ್ತಿದ್ದರೆಂಬುದು ನಾನೇ ನನ್ನ ಮಕ್ಕಳಿಗೆ ಹಣ ಕಳುಹಿಸುವುದಕ್ಕೆ ಪ್ರಾರಂಭಮಾಡಿದಾಗ ನನಗೆ ಮಂದಟ್ಟಾಯಿತು. ಸರಿ, ನಾನು ಮದರಾಸಿನಲ್ಲಿ ತಾಪತ್ರಯ ಪಟ್ಟುಕೊಂಡು, ಗೋಣಗುಟ್ಟಿಕೊಂಡು B L Course ಹ್ಯಾಗಾದರೂ ಪೂರೈಸಬೇಕೆಂಬ ಹಟದ ಮೇಲೆ ಕಾಲ ತಳ್ಳುತ್ತಿದ್ದೆ. ನನ್ನ ಹಾಗೇ ನಾಲ್ಕಾರು ಮಂದಿ ವಿದ್ಯಾರ್ಥಿಗಳು ನನ್ನ ಕೊಠಡಿಯಲ್ಲಿ ಕೆಲವರು, ಆಸಪಾಸ ಕೊಠಡಿಗಳಲ್ಲಿ ಕೆಲವರು. ನಾವುಗಳು ಭೋಜನ ಕಾಲದಲ್ಲಿ, ವಿರಾಮವಿದ್ದ ಕಾಲದಲ್ಲಿ ಸುಖವಾದ ನಿಶ್ಚಿಂತೆಯಾದ ಬೇಜವಾಬ್ದಾರಿಯಾದ ಹರಟೆಯಲ್ಲಿ ಕಾಲ ಕಳೆಯುತ್ತಿದ್ದೆವು. ಆ ಕಾಲದ ಸೊಬಗೋ, ಆನಂದವೋ! ಅದು ಜೀವನದ ವಸಂತಋತು. ಹೋಟಲಿನ ಕದಾನ್ನ, ಹೋಟಲಿನವನ ಹಣದ ತಗಾದೆ; ಉಡುಪುಗಳ ಅಭಾವ, ದುಡ್ಡಿನ ವಿರಳ ದರ್ಶನ, ನಾಲ್ಕಾರು ಜನಗಳಿಂದ ಒಂದೇ ಸೆಟ್ಟು Text Books ಇದ್ದದ್ದರಿಂದ ಅವುಗಳ ಹಂಚಿಕೆಯ ಸಮಸ್ಯೆಗಳು, ಇವುಗಳು ನಮ್ಮ ಜೀವನದ ಹಬ್ಬದ ಉಪ್ಪಿನಕಾಯಿ. ಅಗ್ಗವಾದ ಸಿಗರೆಟ್ಟುಗಳನ್ನು ತಂದು ಕೈಯಿಂದ ಕೈಗೆ ಚಲಾ

ಯಿಸಿ 'ದಮ್ಮು' ಹೊಡೆಯುತ್ತಿದ್ದೆವು. Term ಪ್ರಾರಂಭದಲ್ಲಿ ಒಬ್ಬ ಆಂಧ್ರ ವಿದ್ಯಾರ್ಥಿಯು ಒಂದು ಮಣ 'ಲಂಕಾ' ಹೊಗೆಸೊಪ್ಪನ್ನು ತಂದ. ಅದನ್ನು ಮದರಾಸಿನಲ್ಲಿ ಸುತ್ತುಗಳಾಗಿ ಕಟ್ಟಿಸಿ ನಾವು ಹಂಚಿಕೊಂಡು ಬಂದ ಸ್ನೇಹಿತರಿಗೆಲ್ಲ ಧೂಮ ಸಮಾರಾಧನೆ ಮಾಡಿಸುತ್ತಿದ್ದೆವು. ನಮ್ಮ ಮಾತುಗಳ, ನಮ್ಮ ಬುದ್ಧಿಯ, ವ್ಯಾಪ್ತಿಗೆ ಪರಿಮಿತಿಯೇ ಇಲ್ಲ. ಭೂಮ್ಯಂತರಿಕ್ಷಗಳು, ಅವುಗಳಲ್ಲಿರತಕ್ಕ ಸಕಲ ಭೂತಗಳು, ಬ್ರಹ್ಮನ ಸೃಷ್ಟಿಯೇ, ನಮ್ಮ ಜಿಜ್ಞಾಸೆಯ ಎಲ್ಲೆಯೊಳಗಿರುತ್ತಿದ್ದವು. ಕಾಲೇಜಿಗೆ ಹೋಗುವುದಕ್ಕೆ ಶುಭ್ರವಾದ ಪಂಚೆ ಇಲ್ಲದ ಧೀರನು, ತನ್ನ ಸ್ನೇಹಿತನ ಹತ್ತಿರ ಅದರ ಎರವಲು ಕೇಳುವಾಗ, Chamberlain ಹುಚ್ಚುಮುಂಡೆ Boer warಗೆ ಉತ್ತೇಜನಕೊಟ್ಟು ತನ್ನ ದೇಶದ ಗೌರವವನ್ನು ಹಾಳು ಮಾಡಿಕೊಂಡ, ಎಂದು ಹೇಳುವನು.

ಹೀಗಿರುವಲ್ಲಿ ಒಂದು ದಿನ ನಮ್ಮ ತೀರ್ಥರೂಪರಿಂದ 'ದಿವಾನರನ್ನು ನೋಡಲಿಕ್ಕೆ ಕೂಡಲೆ ಮೈಸೂರಿಗೆ ಬಾ' ಎಂಬ ಆಜ್ಞೆಯೊಡನೆ ರೈಲು ಖರ್ಚಿಗೆ ತಕ್ಕಷ್ಟು ಹಣವೂ ತಂತಿಯ ಮೇಲೆ ಬಂತು.

ಆಗ ಮೈಸೂರು ಸಂಸ್ಥಾನದಲ್ಲಿ ಕೆಲವರಿಗೆ ಮನೆತನದ ಗೌರವದ ಮೇಲೋ ಶಿಫಾರ್ಸಿನ ಮೇಲೋ ಅಥವ ಕೋಮುವಾರು ಪ್ರಾತಿನಿಧ್ಯದ ಸಲುವಾಗೋ Probationary Assistant Commissioner ಕೆಲಸಗಳನ್ನು ಕೊಟ್ಟಿದ್ದರು. ನನ್ನ ಮನಸ್ಸಿನಲ್ಲಿಯಂತೂ ಅವರು ಯಾರೂ ಯೋಗ್ಯತೆಯಲ್ಲಿ ನನ್ನ ಸಮಾನರಲ್ಲವೆಂದು ನಿರ್ಧಾರವಾಗಿತ್ತು. "ಏನಯ್ಯಾ, ನೀನೂ ಒಂದು Assistant Commissioner ಕೆಲಸಕ್ಕೆ ಪ್ರಯತ್ನ ಮಾಡಬಾರದೇ," ಎಂದು ನನ್ನ ಸ್ನೇಹಿತನೊಬ್ಬನು ಹೇಳಿದಾಗ ನಾನು, "ಆ ಹಿತ್ತಿಲ ಬಾಗಿಲಲ್ಲಿ ನುಗ್ಗುವುದಕ್ಕೆ ನನ್ನ ತಲೆ ಬಹಳ ಗಾತ್ರ ಕಾಣೈಯ" ಎಂದು Grapes are sour ಸೂತ್ರದ ಅನುವಾದ ಮಾಡಿದ್ದೆ. ಹೀಗಿರುವಲ್ಲಿ ಏಕಾಏಕಿ ತಾರು ಬಂದದ್ದು ನೋಡಿದರೆ ನನಗೂ ಒಂದು Assistant Commissioner ಕೆಲಸ ದೊರೆಯುವ ಸಂಭವವಿರಬಹುದೇ, ಎನ್ನಿಸಿತು; ಸ್ವಲ್ಪ excite ಆಯಿತು.

ಮೈಸೂರಿಗೆ ಬಂದೆ. ನಮ್ಮ ತೀರ್ಥರೂಪರು, "ದಿವಾನ್ ಕೃಷ್ಣಮೂರ್ತಿಗಳು ಇಲ್ಲಿಗೆ ಬಂದಿದ್ದಾರೆ; ನಿನ್ನ ಮೇಲೆ ಅವರಿಗೆ ಒಳ್ಳೇ

ಅಭಿಪ್ರಾಯವಿದೆ. ನಿನ್ನನ್ನು ನೋಡಬೇಕು, ಕರೆಸು ಎಂದು ಹೇಳಿದರು. ಅದಕ್ಕಾಗಿ ನಿನಗೆ ತಂತಿ ಕೊಟ್ಟದ್ದು. ಇವತ್ತು ಮಧ್ಯಾಹ್ನ ಹೋಗೋಣ,'' ಎಂದರು.

ಹೋದೆವು. ಶ್ರೀಮಂತರು ತಮ್ಮ ಸ್ವಂತ ಮನೆಯಲ್ಲೇ ಮೊಕ್ಕಾಂ ಮಾಡುವ ಪದ್ಧತಿಯಿತ್ತು. ಆಗಿನ ಕಾಲದಲ್ಲಿ ದಿವಾನರು ಮೊಕ್ಕಾಂ ಮಾಡುವುದೆಂದರೆ ಲಕ್ಷ್ಮಿಯ ವನವಾಸ. ದೇವದಾನವ ಪರಿವಾರವೆಲ್ಲಾ ಮೊಕ್ಕಾಂನಲ್ಲೇ. ದಿವಾನರು ಕೃಪೆಯಿಟ್ಟು ಯಾವದಾದರೂ ತಾಲ್ಲೂಕಿನಲ್ಲಿ ಒಂದೆರಡು ದಿನ ತಂಗಿದರೆ, ಆ ತಾಲ್ಲೂಕು ಸುದಾರಿಸಿಕೊಳ್ಳುವುದಕ್ಕೆ ಒಂದು ತಿಂಗಳು ಬೇಕಾಗುತ್ತಿತ್ತು. ದಿವಾನರು ಜನಗಳಿಗೆ ಹಿಂಸೆ ಮಾಡುತ್ತಿದ್ದರು ಎಂದಲ್ಲ. ಅವರು, ಪಾಪ, ಜನಗಳ ಯೋಗಕ್ಷೇಮವನ್ನು ವಿಚಾರಿಸಿ ಅವರ ಕುಂದು ಕೊರತೆಗಳನ್ನು ಸ್ವತಃ ತಿಳಿದುಕೊಂಡು ಅವರ ಪ್ರೇಮಕ್ಕೆ ಪಾತ್ರರಾಗಬೇಕೆಂಬ ಉದ್ದೇಶದಿಂದಲೇ ಸಂಚಾರ ಕೈಗೊಳ್ಳುತ್ತಿದ್ದದ್ದು. ಮಲಗಿರುವ ಮಗುವನ್ನ ಕಡಿಯುತ್ತಿದ್ದ ಸೊಳ್ಳೆಯನ್ನು ಓಡಿಸಬೇಕೆಂತಲೇ ಕರಡಿ ಕೂಸಿನ ಮುಖವನ್ನು ತಟ್ಟಿದ್ದು.

ಏನೋ ಹೇಳುವುದಕ್ಕೆ ಹೋಗಿ ಏನನ್ನೋ ಹೇಳಿದೆ. ಅವತ್ತು ನಮ್ಮ ತೀರ್ಥರೂಪರೂ ನಾನೂ ಶ್ರೀಮಂತರ ಪ್ರಾಸಾದಕ್ಕೆ ಹೋಗಿ ಕಾದೆವು. ಅಲ್ಲಿ ದೊಡ್ಡ ಜನ ಸಂದಣಿ. ಕೆಲಸವಿದ್ದವರು ಹತ್ತು ಜನರಿದ್ದರೆ, ಕೆಲಸವಿಲ್ಲದೆ, ಜನಗಳಲ್ಲಿ ದಿವಾನರ ಪರಿವಾರಕ್ಕೆ ಸೇರಿದವರು, ದಿವಾನರ ಅಭಿಮಾನಕ್ಕೆ ಪಾತ್ರರಾದವರು, ಎಂಬ ಗೌರವವನ್ನು ಪಡೆಯುವುದಕ್ಕಾಗಿ ಬಂದವರು ಐವತ್ತು ಜನ. ನಮ್ಮ ಹೆಸರನ್ನು ಕಳುಹಿಸಿಕೊಟ್ಟು Visitors' Room ನಲ್ಲಿ ಬಹಳ ಹೊತ್ತು ಕಾದೆವು. ಸಾಯಂಕಾಲದ ವೇಳೆಗೆ ಹೇಳಿಕಳುಹಿಸಿದರು.

Drawing Room ನಲ್ಲಿ ಶ್ರೀಮಂತರೂ ಅವರ ತಮ್ಮಂದಿರು ಶ್ರೀಯುತ ಪೂರ್ಣಯ್ಯನವರೂ ಇದ್ದರು. ಶ್ರೀಮಂತರಿಗೆ ನಮ್ಮ ತಂದೆಯವರಲ್ಲಿ ಬಹಳ ಗೌರವವಿತ್ತೆಂದು ತಿಳಿದೆ. ಅವರು ಎದ್ದು ನಮ್ಮ ತಂದೆಯವರಿಗೆ ಕೈಮುಗಿದು ಸಮೀಪದಲ್ಲೇ ಕುಳ್ಳಿರಿಸಿಕೊಂಡರು. ನಾನು ನಿಂತೇ ಇದ್ದೆ. ಚಿಕ್ಕವಯಸ್ಸಿನ ಅವಿವೇಕದಿಂದಲೋ ನೈಸರ್ಗಿಕ ಗರ್ವ

ದಿಂದಲೋ ನನಗೆ—ಮೊದಲೇ ಎರಡು ತಾಸು ಕಾದು ಬೇಸತ್ತಿದ್ದ ನನಗೆ —ಒಳಗೇ ಅಸಮಾಧಾನ, ಕೋಪ, ತುಂಬಿದ್ದವು. ಶ್ರೀಮಂತರು ನಮ್ಮ ತಂದೆಯವರನ್ನು ಕುಶಲ ಪ್ರಶ್ನೆಯ ನಂತರ, 'ನಿಮ್ಮ ಮಗನ್ನ ಕರೆಸಿದಿರೋ? ಬಂದಿದ್ದಾರೆಯೋ?' ಎಂದು ಕೇಳಿದರು.

ನಾನು ದೆವ್ವದ ಹಾಗೆ ಎದುರಿಗೇ ನಿಂತಿದ್ದವನು ಕೈ ಮುಗಿದು ನಮಸ್ಕಾರ ಮಾಡಿದೆ.

"ಕೂಡು, ಕೂಡು."

ಕುಳಿತೆ. ಶ್ರೀಮಂತರು:

"ನಿಮ್ಮ ಯಜಮಾನರು ನಮಗೆ ಬಹಳ ಬೇಕಾದವರು. ನಿನ್ನ ವಿಚಾರ ಆಗಿಂದಾಗ್ಯೆ ತಿಳಿಸುತ್ತಿದ್ದರು. ನೀನು ಇಂಗ್ಲೀಷನ್ನು ಬಹಳ ಚೆನ್ನಾಗಿ ಬರೆಯುತ್ತೀಯೆಂದು ಕೇಳಿದ್ದೇವೆ. ನಿಮ್ಮ ಯಜಮಾನರಿಗೆ ಏನಾದರೂ ಉಪಕಾರ ಮಾಡಬೇಕೆಂದು ಬಹಳ ದಿನಗಳಿಂದ ನಮ್ಮ ಮನಸ್ಸಿನಲ್ಲಿದೆ. ನಿನ್ನನ್ನು ನಮ್ಮ ಆಫೀಸಿಗೆ ಸೇರಿಸಿಕೊಂಡು ಮುಂದೆ ತರಬೇಕೆಂದು ಯೋಚಿಸಿದ್ದೇವೆ."

ಇದು Assistant Commissioner ರಾಗದ ಆಲಾಪನೆಯಂತೆ ಕೇಳಿಸಲಿಲ್ಲ.

ನನ್ನ ಉತ್ತರ ನಿರೀಕ್ಷಿಸುವಂತೆ ನನ್ನ ಕಡೆ ನೋಡಲಾಗಿ ನಾನು ಕೇಳಿದೆ.

"ದಯವಿಟ್ಟು ಸ್ವಲ್ಪ ತಪಸೀಲು ಅಪ್ಪಣೆಯಾಗಬೇಕು. ಸೇರುವುದು ಯಾವ ಪದವಿಯಲ್ಲಿ? ಮುಂದೆ Prospects ಏನು?

ಅವರ ಮುಖಭಾವದ ಪ್ರಸನ್ನತೆ ಸ್ವಲ್ಪ ಕಡಿಮೆಯಾಯಿತು. ಪೂರ್ಣಯ್ಯನವರು ಹುಸಿ ನಗೆಯಿಂದ ತಮ್ಮಷ್ಟಕ್ಕೆ ತಾವೇ (ಆದರೆ ನನಗೆ ಕೇಳುವಂತೆ) "Must not look a gift horse in the mouth" ಎಂದರು.

ಶ್ರೀಮಂತರು:

"B.A. ಮಾಡಿದವರಿಗೆ Secretariat ನಲ್ಲಿ ೨೦ ರೂ.ನ ಸಂಬಳದ ಮೇಲೆ start ಮಾಡುತ್ತೇವೆ. ಆ ಸಂಬಳಕ್ಕೆ ಆಶೆಪಟ್ಟು ಬರುವ ಗುಂಪಿಗೆ

ಕೆಲಸ ಒದಗಿಸಲಿಕ್ಕೆ ಸಾಧ್ಯವಿಲ್ಲ. ನಿಮ್ಮ ತಂದೆಯವರ ಕಡೆ ನೋಡಿ ನಿನಗೆ ೫೦ ರೂಪಾಯಿನ ಮೇಲೆ ನಮ್ಮ Home Office ಗೆ ತೆಗೆದುಕೊಳ್ಳ ಬೇಕೆಂದು ಯೋಚಿಸಿದ್ದೆವು.''

ನನ್ನ Assistant Commissioner ಕನಸು ಮಾಯವಾಯಿತು. ನನಗೆ ಕೂಡಲೆ ಏನು ಹೇಳಲಿಕ್ಕೂ ತೋರಲಿಲ್ಲ. ನಮ್ಮ ತಂದೆಯವರು, "ಮಾತನಾಡು, ನಿನ್ನ ಉತ್ತರಕ್ಕೆ ಕಾಯುತ್ತಿದ್ದಾರೆ,'' ಎಂದರು. ನಾನು, "ತಾವು ಹೇಳುವುದು ನ್ಯಾಯವಾಗಿದೆ. ನನ್ನಂತೆಯೇ B A. ಪ್ಯಾಸು ಮಾಡಿದವರು ೨೦ ರೂಪಾಯಿಗೆ ಬಂದು ಕೈಯೊಡ್ಡುತ್ತಿರುವಾಗ, ತಾವು ನನಗೆ ೫೦ ರೂಪಾಯಿ offer ಮಾಡಿದ್ದು ತಮಗೆ ನನ್ನಲ್ಲಿರುವ ಅನುಗ್ರಹವನ್ನು ತೋರಿಸುತ್ತೆ. ನನಗೆ ಈಗಿರುವ ಯೋಗ್ಯತೆಗೆ ಅದು ಮೀರಿದ ಮರ್ಯಾದೆ. ನಾನು Law ಗೆ ಓದುತ್ತಿದ್ದೇನೆ. F.L. ಪ್ಯಾಸಾಗಿದೆ. ಇನ್ನೂ ಯೋಗ್ಯತೆಯನ್ನು ಸಂಪಾದಿಸಿಕೊಂಡು ತಮ್ಮಲ್ಲೇ ಬರುತ್ತೇನೆ ಅನುಗ್ರಹ ಏಕರೀತಿ ಇರಲಿ,'' ಎಂದೆ.

"ಸರಿ.''

ಪೂರ್ಣಯ್ಯನವರು, "ಕೊಟ್ಟಾಗ ಬೇಡ ಎಂದರೆ, ಬೇಕೆಂದಾಗ ಸಿಕ್ಕಲಾರದು,'' ಎಂದರು.

ಇದು ನನ್ನ ಸಹನೆಗೆ ಮೀರಿತು. ನಾನು, "ಬೇಕೂ ಎಂದು ಬಂದಾಗ ಹೇಳುವ ಮಾತನ್ನು ಈಗಲೇ ಅಪ್ಪಣೆಕೊಡಿಸಿದಿರಲ್ಲ!'' ಎಂದೆ.

ಈಚೆಗೆ ಬಂದೆವು. ನಮ್ಮ ತೀರ್ಥರೂಪರಿಗೆ ತರುಣದಲ್ಲಿ ನನ್ನ ಮೇಲೆ ಬಹಳ ಕೋಪ. ಅನಂತರ ನಮ್ಮ ಬಲತಾಯಿಗೆ ಈ ಸಂಗತಿಯನ್ನು ಹೇಳುತ್ತಿದ್ದಾಗ ನಾನು ಈಚೆಗೆ ಇದ್ದವನು ಕೇಳಿದೆ.

"ಅವನಿಗೆ ಲೋಕದ ಅನುಭವವಿಲ್ಲ. ಆದರೆ ಅವನ ಛಾತಿ ನೋಡು! ದೇವರು ಅವನ ಹಣೇಲಿ ದೊಡ್ಡ ಪದವೀನೇ ಬರೆದಿರ ಬೇಕು.''

ನಮ್ಮ ತಂದೆಯವರು ಛಾತಿವಂತರು. ಅವರಿಗೆ ಛಾತಿಯೆಂದರೆ ಮೆಚ್ಚಿಗೆ. ನನ್ನ ಮೇಲೆ ಅಷ್ಟು ಕೋಪವಿರಲಾರದೆಂದು ನನಗೆ ಧೈರ್ಯವಾಯಿತು.

೩

ಮೈಸೂರಿಗೆ ನನ್ನನ್ನು ಪೋಸ್ಟ್ (post) ಮಾಡಿ ಅಲ್ಲಿನ ಡೆಪ್ಯುಟಿ ಕಮಿಷನ್ನರಲ್ಲಿ ರಿಪೋರ್ಟು ಮಾಡಿಕೊಳ್ಳುವಂತೆ ಆಜ್ಞೆಯಾಯಿತು. ಮೈಸೂರಿನಲ್ಲಿ ನಮ್ಮ ತೀರ್ಥರೂಪರು ನೌಕರಿಯಿಂದ ವಿಶ್ರಾಂತಿ ಪಡೆದು ವಾಸವಾಗಿದ್ದರು.

ಆರ್ಡರು ಬಂದಮೇಲೆ ಬೆಂಗಳೂರಿನಲ್ಲಿ ಎರಡು ದಿನಗಳಿದ್ದು ನನ್ನ ಹೊಸಪದವಿಗೆ ಉಚಿತವಾದ ಪೋಷಾಕನ್ನು ತಯಾರಿಸಿಕೊಂಡೆ. ನನ್ನ ವಕೀಲಿ ಆಶ್ರಮದಲ್ಲಿ ಕರೀನಿಲುವಂಗಿ, ಪೇಟ, ಪಂಚೆ ಇವು ನೇಪಥ್ಯ ವಿಧಾನ. ಮೈಸೂರು ಆಫೀಸರುಗಳು ಉಡುಪಿಗೆ ಬಹಳ ತೂಕ ಕೊಡ ತಕ್ಕವರೆಂದು ಮದರಾಸು ಪ್ರಾಂತ್ಯದಲ್ಲಿ ಪ್ರಸಿದ್ಧಿ. ನಮ್ಮನ್ನು ಕಣಿವೆ ಕೆಳಗಿನವರು ಅಲಂಕಾರ ವಿದ್ಯಾರ್ಥಿಗಳೆನ್ನುತ್ತಿದ್ದರು. ನಾವು ಅವರಿಗೆ ಕೊಳೆಯನ್ನು ಮೇಧಸ್ಸೆಂದು ತಿಳಿದ ಕತ್ತೆಗಳೆನ್ನುತ್ತಿದ್ದೆವು.

ಮೈಸೂರನ್ನು ತಲಪಿದಕೂಡಲೆ ಡೆಪ್ಯುಟಿ ಕಮಿಷನರ್ ಆಫೀಸಿಗೆ ರಿಪೋರ್ಟು ಮಾಡಿಕೊಳ್ಳುವುದಕ್ಕೆ ಹೋದೆ. ಅಲ್ಲಿ ಮೊದಲು ಡಿಸ್ಟ್ರಿಕ್ಟ್ ಶಿರಸ್ತೆದಾರರನ್ನು ಕಂಡೆ. ಅವರ ಹೆಸರು ಸಿಂಗೈಯ್ಯಂಗಾರೋ ಏನೋ, ಈಗ ಮರೆತು ಹೋಗಿದೆ. ಅವರು ವೃದ್ಧರು. ನನ್ನನ್ನು ಆದರದಿಂದ ಕಂಡು, "ಡೆಪ್ಯುಟಿ ಕಮಿಷನರ್ ಸಾಹೇಬರು ಕ್ಯಾಜುಯಲ್ ರಜದ ಮೇಲಿದ್ದಾರೆ. ಸೀನಿಯರ್ ಅಸಿಸ್ಟೆಂಟ್ ಕಮಿಷನರ್ ಸದರ್ ಕಾಂತರಾಜೇ ಅರಸಿನವರು ಛಾರ್ಜಿನಲ್ಲಿದ್ದಾರೆ; ಅವರನ್ನು ಕಾಣಿ," ಎಂದರು.

ಹಾಗೇ ಮಾಡಿದೆ. ಸರದಾರರು ಕೋರ್ಟಿನಲ್ಲಿ ಯಾವದೊ ಕೇಸನ್ನು ವಿಚಾರಣೆ ಮಾಡುತ್ತಿದ್ದರು. ನಾನು ಕೋರ್ಟಿನಲ್ಲಿ ಪ್ರವೇಶಮಾಡಿ, ಲಾಯರುಗಳ ನಡುವೆ ಕುಳಿತೆ. ಮೈಸೂರು ಲಾಯರುಗಳ ಕಾರ್ಯಕ್ರಮವನ್ನು, ನಾನೂ ಲಾಯರಾಗಿದ್ದವನಾದ್ದರಿಂದ, ಕುತೂಹಲದಿಂದ ದೃಷ್ಟಿಸಿದೆ. ಅಲ್ಲಿದ್ದವರು ಒಬ್ಬರ ಹೊರತು ಯಾರೂ ಅಷ್ಟು ಹೆಸರುವಾಸಿ ಲಾಯರುಗಳಲ್ಲವೆಂದು ಆಮೇಲೆ ಗೊತ್ತಾಯಿತು. ಅವರು ಶಾಲ್ಯದ ಲಾಯರುಗಳಷ್ಟು ನಿಪುಣರಲ್ಲವೆಂಬುದು ನನ್ನ ಮೊದಲನೆಯ ಭಾಸ.

ಒಬ್ಬರು ಹೆಸರುವಾಸಿ ಲಾಯರೆಂದು ಹೇಳಿದೆನಷ್ಟೆ. ಹೆಸರುವಾಸಿಯೆಂದರೆ ಶಕ್ತರೆಂದು ಅರ್ಥವಲ್ಲ; ಪ್ರಸಿದ್ಧರು, ಹತ್ತು ಜನಗಳ ಮಾತಿಗೆ ವಿಷಯರಾದವರು, ಎಂದು. ಅವರ Magistrate ರ ಸಂಗಡ ವಾದಿಸುತ್ತಿದ್ದರು.

"Has your honour recorded the witness's answer?"

"He says he doesn't know, so there is nothing to record"

"I want what he doesn't know to be on record."

ಮ್ಯಾಜಿಸ್ಟ್ರೇಟರು ಸ್ವಲ್ಪ ನಕ್ಕು, ಆದರೂ ಗೌರವವನ್ನು ಮರೆಯದೆ,

"In that case don't you think we shall have a rather voluminous record? Shall we not be content with what the witness does know, that is if it is relevant to the case?"

"I cannot understand your honour Why does your honour refuse to record that the witness doesn't know what I ask him?"

"Mr. Ramanna if you do not understand me, it is my misfortune. If I record only what the witness knows, I see some limit to my work, but if I rashly undertake to record everything he does not know I shall be struggling with infinity"

ನಾನು ನಗುವನ್ನು ತಡೆಯಲಾರದೆ ಹೋದೆ. Magistrate ರು ನನ್ನ ಕಡೆಗೆ ತಿರುಗಿ,

"ಏನಾದರೂ ಕೆಲಸಕ್ಕಾಗಿ ಬಂದಿದ್ದೀರ? ಈ ಕೇಸು ಇನ್ನೂ ಬಹಳ ಹೊತ್ತು ಹಿಡಿಯುವ ಹಾಗೆ ಇದೆ. ಅಲ್ಲವೇ Mr ರಾಮಣ್ಣ? (ಉತ್ತರ: ಹೌದು ಮಹಾಸ್ವಾಮಿ.) ತಾವು ಬಂದ ಉದ್ದೇಶವನ್ನು ಹೇಳಿ," ಎಂದರು.

ನಾನು ಎದ್ದು ಕೈಮುಗಿದು ನನ್ನಲ್ಲಿದ್ದ Visiting card ನ್ನು ಕೊಟ್ಟೆ ಅದು ಹೀಗಿದ್ದಿತು:

Mr. Navaratna Rama Rao, B.A., B.L.
(Vakil Salem ಇದನ್ನು ಹೊಡೆದು)
Revenue Probationer, Mysore

ಸಾಹೇಬರು ನನ್ನ ಕಡೆ ಆದರದಿಂದ ನೋಡಿ,

"Hearty welcome. ನಾನು ಬಹಳ ಕೆಲಸದಲ್ಲಿದ್ದೇನೆ. ರಾಮಣ್ಣನವರು ನನ್ನನ್ನು ಇವತ್ತು ಬಿಡುವಹಾಗಿಲ್ಲ; ("ಅಲ್ಲವೇ ರಾಮಣ್ಣನವರೇ?" "ಹೌದು," your honour) ಅದಕ್ಕೋಸ್ಕರ join ಆದದ್ದಕ್ಕೆ ರಿಪೋರ್ಟ್ ಶಿರಸ್ತೇದಾರ್‌ರಲ್ಲಿ ಕೊಟ್ಟು, and if I may make a suggestion, ಡೆಪ್ಯುಟಿ ಕಮಿಷನರ್ ಸಾಹೇಬರ ಬಂಗಲೆಗೆ ಹೋಗಿ ಕಾಣಿಸಿಕೊಳ್ಳಿ. And so, good afternoon. ಬನ್ನಿ ರಾಮಣ್ಣನವರೆ. ನಿಮ್ಮ ಶಿಷ್ಯನಿಗೆ ಇನ್ನೂ ಏನೇನು ತಿಳಿದಿಲ್ಲ ಕೇಳಿ," ಎಂದರು.

ಅಲ್ಲಿಂದ ಹೊರಟು ಡೆಪ್ಯುಟಿ ಕಮಿಷನರ್ ಶ್ರೀಯುತ ಬಿ. ಕೆ. ವೆಂಕಟವರದ ಅಯ್ಯಂಗಾರ್‌ರವರು ವಾಸವಾಗಿದ್ದ ಬಂಗಲೆಗೆ ಬಂದೆ. ಅದೇ ಈಗ Old Guests' Quarters ಎಂಬ ಹೆಸರುಳ್ಳ ಕಟ್ಟಡ. ಸಾಹೇಬರ ಆಫೀಸು ಕೊಠಡಿ ಮಹಡಿಯ ಮೇಲೆ. ನನ್ನ Visiting card ಒಬ್ಬ ದಲಾಯಿತನ ಕೈಲಿ ಒಳಗೆ ಕಳುಹಿಸಿದೆ. ಕೂಡಲೆ ಒಳಗಿನಿಂದ, "ದಯಮಾಡಬೇಕು, ದೇವರು" ಎಂಬ ಆಹ್ವಾನವೂ, ಸ್ವಲ್ಪ ಮೈಲಾದ ಬಿಳಿಯ ಬನಿಯನ್ನನ್ನು ತೊಟ್ಟು ಭುಜದ ಮೇಲೆ ಒಂದು ಟವಲನ್ನು ಹಾಕಿಕೊಂಡಿದ್ದ ಒಂದು ವ್ಯಕ್ತಿಯೂ ಈಚೆಗೆ ಬಂದವು. ಬಂದವರು ನನ್ನ ಕೈಯನ್ನು ಹಿಡಿದು ಕೊಠಡಿಯೊಳಕ್ಕೆ ಕರೆದೊಯ್ದರು. ಆ ಕೊಠಡಿಯಲ್ಲಿ ಒಂದು camp chair, table ಮೇಲೆ ಕಾಗದದ ಕಟ್ಟುಗಳು, ಬರೆಯುವ ಸಾಮಗ್ರಿಗಳು. Table ನ ಇನ್ನೊಂದು ಪಕ್ಕದಲ್ಲಿ ಒಂದು ಸೊಗಸಾದ sofa, ಕೊಠಡಿಯ ಮಧ್ಯ ನೆಲದಮೇಲೆ ಒಂದು ಜಮಖಾನೆ, ಆ ಜಮಖಾನೆಯ ಮೇಲೆ ಕಾಗದದ ಕಟ್ಟುಗಳನ್ನು ಇಟ್ಟುಕೊಂಡು ಒಂದು ವಾಟದ ನಾಗಾಲು ಮಣೆಯಮೇಲೆ ಒಬ್ಬ clerk

ಏನೇನೋ ಬರೆಯುತ್ತಿದ್ದರು. ನನ್ನನ್ನು ಒಳಗೆ ಕರೆದುಕೊಂಡು ಹೋದ ದೊಡ್ಡ ಮನುಷ್ಯರು,

"ದಯಮಾಡಿ ದೇವರು, ಆ ಸೋಫಾದ ಮೇಲೆ ಮುಹೂರ್ತ ಮಾಡಿ, ಊಹೂ, ತಾವು ಕೂಡೋವರೆಗೂ ನಾನು ಕೂಡುವುದಿಲ್ಲ," ಎಂದು ಬಹಳ ನಿರ್ಬಂಧ ಉಪಚಾರ ಮಾಡಿದರು. ಇವರೇ ಡೆಪ್ಯುಟಿ ಕಮಿಷನರ್ ಸಾಹೇಬರು. ಡೆಪ್ಯುಟಿ ಕಮಿಷನರ್ ಎಂದರೆ ಕಲೆಕ್ಟರು. ನಾನು ನೋಡಿದ್ದ ಕಲೆಕ್ಟರುಗಳಿಗೆ ಇವರಿಗೆ ದರ್ಪದಲ್ಲಿ ಬಹಳ ಅಂತರ ವಿತ್ತು. ಆದರೂ ಇವರೇ ನನ್ನ ಮೇಲ್ಪಟ್ಟ ಸಾಹೇಬರು. ಈ ಅತಿ ವಿನಯಕ್ಕೆ ವಿಸ್ಮಿತನಾದೆ. ಒಂದು ಗಾದೆಯೂ ಜ್ಞಾಪಕಕ್ಕೆ ಬಂತು.

ಬಹಳ ನಮ್ರತೆಯಿಂದ ಸೋಫಾದ ಅಂಚಿನ ಮೇಲೆ, ಮುಳ್ಳಿನ ಮೇಲೆ ಕುಳಿತ ಹಾಗೆ, ಹಗುರವಾಗಿ ಕುಳಿತೆ. ಸಾಹೇಬರು,

"ಕ್ಷಮಿಸಿ, few minutes ಮಾತ್ರಕ್ಕೆ; ಬರೆಯುತ್ತಿರುವುದನ್ನು ಮುಗಿಸಿಬಿಡುತ್ತೇನೆ," ಎಂದರು.

ನಾನು ಕುಳಿತವನು ಯೋಚನೆ ಮಾಡಿದೆ. ಸಾಹೇಬರಿಗೆ ನಾನು ಬಹಳ ದುರಭಿಮಾನಿ, ಡಂಭಿ ಎಂಬ ಅಭಿಪ್ರಾಯವಿದೆ, ನನ್ನನ್ನು ಪರೀಕ್ಷೆ ಮಾಡುತ್ತಿದ್ದಾರೆ, ಈ ಭಾವ ಬರುವುದಕ್ಕೆ ಯಾರು ಏನನ್ನಾದರೂ ನನ್ನ ಮೇಲೆ ಹೇಳಿದ್ದಾರು, ಅಥವಾ ನನ್ನ ಮುಖ ನಡತೆ ಇವುಗಳಿಂದ ಏನಾದರೂ ಈ ಶಂಕೆ ಹುಟ್ಟಿರಬಹುದು, ಎಂದು ಶಂಕಿಸಿದೆ. ಸಾಹೇಬರ ಮೇಜಿನ ಮೇಲೆ ನನ್ನ Visiting card ಕಾಣುತ್ತಿತ್ತು. ತಟಕ್ಕನೆ ಅವರು ಈಚೆಗೆ ಬಂದು ನನ್ನನ್ನು ಮಿತಿಮೀರಿದ ಮರ್ಯಾದೆಯೊಡನೆ ಮಾತನಾಡಿಸಿದಾಗ ಆ ಕಾರ್ಡು ಅವರ ಕೈಲೇ ಇದ್ದದ್ದು ನೆನಪಿಗೆ ಬಂತು. ಓಹೋ, ಅರ್ಥವಾಯಿತು. ಆ ದುರ್ದೈವಿ ಕಾರ್ಡಿನ ಮೇಲೆ,

Mr Navaratna Rama Rao, B A ,B L.

ವಗೈರೆ ಇತ್ತು. ಇದರ ಮೇಲೆ ನನ್ನ ಹೊಸ ಸೂಟು ಬೇರೆ. ಇವೇ ಇರಬೇಕು. ಸಾಹೇಬರು ಬರೆಯುತ್ತಿದ್ದಾಗ ಅವರ ಮುಖವನ್ನು ಕುತೂಹಲದಿಂದ ಓದಿದೆ. ಒಳ್ಳೆಯ ಮುಖ, ಸಂಸ್ಕೃತ ಭಾವ, ಒಳ್ಳೆಯ ವರ್ಚಸ್ಸು, ಅಧಿಕಾರದ ಅಭ್ಯಾಸದಿಂದ ಭಾವದಲ್ಲಿ ದರ್ಪಯುತವಾದ

ತೇಜಸ್ಸು. ನನಗಿಂತ ವಯಸ್ಸಿನಲ್ಲಿ ಕೂಡ ಬಹಳ ಹಿರಿಯರು. ಅವರಿಗೆ ನನ್ನಲ್ಲಿ ಏನಾದರೂ prejudice ಇದ್ದರೂ ಅದು ನೆಲೆಗೊಳ್ಳುವುದಕ್ಕೆ ಮುನ್ನವೆ ಅದನ್ನು ನಿರ್ಮೂಲ ಮಾಡಬೇಕೆಂದು ನಿಶ್ಚಯಿಸಿದೆ.

ಕೆಳಗೆ ಕುಳಿತು ಕೆಲಸಮಾಡುತ್ತಿದ್ದ clerk ನನ್ನ ಕಡೆ ಈಷತ್ತು ಕಳವಿನಿಂದ ನೋಡಿ ನಸುನಕ್ಕ. ಆ ನಗೆಯನ್ನು ನಾನು ಸ್ಪಷ್ಟವಾಗಿ ನೋಡುವಷ್ಟರಲ್ಲೇ ನುಂಗಿಕೊಂಡು ಅಳುಮೊಗದಿಂದ ತನ್ನ ಕೆಲಸಕ್ಕೆ ನಿಗ ಕೊಟ್ಟ.

ಹತ್ತಾರು ನಿಮಿಷಗಳನಂತರ ಸಾಹೇಬರು ತಾವು ಅದುವರೆಗೆ ಬರೆಯುತ್ತಿದ್ದ ಕಾಗದವನ್ನು ನನ್ನ ಕೈಗೆ ಕೊಟ್ಟು, "ಇದನ್ನು ಸರಿಯಾಗಿ correct ಮಾಡಿಕೊಡಿ ದೇವರು," ಎಂದರು.

ನನ್ನ ಊಹೆ ಸರಿಯೆಂದು ನನಗೆ ನಿರ್ಧರವಾಯಿತು. ನಾನು ಆ ಕಾಗದವನ್ನು—ಅದು ಗವರ್ನಮೆಂಟಿಗೆ ಹೋಗಬೇಕಾಗಿದ್ದ ಒಂದು ರಿಪೋರ್ಟಿನ ಡ್ರಾಫ್ಟ್—ಬಹಳ ಮುತುವರ್ಜಿಯಿಂದ ಓದಿ ನೋಡಿದೆ. ಅದನ್ನು ಅಲ್ಲಲ್ಲಿ correct ಮಾಡಿದ್ದರೆ ತಪ್ಪೇನೂ ಇರುತ್ತಿರಲಿಲ್ಲ. ಇಂಗ್ಲೀಷು ವಿದೇಶಭಾಷೆಯಾದರೂ ಅದನ್ನು ಉಪಯೋಗಿಸಿದ ಮೇಲೆ ಅದರ ವ್ಯಾಕರಣಕ್ಕೂ, ಪದಗಳ ಅರ್ಥಕ್ಕೂ, ಧ್ವನಿಗೂ ಮರ್ಯಾದೆ ಕೊಡುವುದು ಉಚಿತ. ಆದರೆ ನಾನು ನನ್ನ ಮೇಲ್ಪಟ್ಟವರ ವಾಕ್ಯರಚನೆ ತಿದ್ದುವಷ್ಟು ದಡ್ಡನಲ್ಲ. ಆ ಡ್ರಾಫ್ಟನ್ನು ಹಾಗೇ ಕೈಲಿ ಹಿಡಿದುಕೊಂಡು ಸುಮ್ಮನಿದ್ದೆ. ಇನ್ನೂ ಏನನ್ನೋ ಬರೆದು ಪೂರೈಸಿದ ಸಾಹೇಬರು, "correct ಮಾಡಿ ಆಯಿತೇ?" ಎಂದರು.

ನಾನು ಎದ್ದು ತಲೆಬಾಗಿ ಕೈಮುಗಿದು ಬಹಳ ವಿನಯದಿಂದ,

"ನಾನು ಅನುಭವವಿಲ್ಲದ ಹುಡುಗ. ಆದರೆ ದೊಡ್ಡ ಸ್ಥಳದಲ್ಲಿ ಬಹಳ ಕಲಿಯತಕ್ಕದ್ದಿದೆ ಎಂಬುದನ್ನು ಚೆನ್ನಾಗಿ ಬಲ್ಲೆ. ಆ ಅವಕಾಶಕ್ಕಾಗಿಯೇ ನನ್ನನ್ನು ಇಲ್ಲಿಗೆ ಕಳಿಸಿರುವುದೆಂಬುದನ್ನೂ ಬಲ್ಲೆ. ತಾವು ನನಗೆ ಡ್ರಾಫ್ಟ್ ಹಾಕೆಂದು ಅಪ್ಪಣೆಕೊಟ್ಟರೆ ಯಾವರೀತಿ ಹಾಕಬೇಕೆಂಬುದಕ್ಕೆ ಮಾದರಿಯೆಂಬ ಭಾವನೆಯಿಂದ ತಾವು ಕೊಟ್ಟ ಕಾಗದವನ್ನು ಓದಿಕೊಂಡೆನೇ ಹೊರತು, ಅದರಲ್ಲಿ ತಿದ್ದುವ ಅವಶ್ಯಕತೆ ಅಥವಾ ನನ್ನಲ್ಲಿ ಅದನ್ನು ತಿದ್ದುವ ಯೋಗ್ಯತೆ ಇದೆಯೆಂಬ ಯೋಚನೆಯಿಂದ ಅಲ್ಲ," ಎಂದೆ.

(ಭಲೆ, ವಿವೇಕ ಬೆಳೆಯುತ್ತಿತ್ತು ನನ್ನಲ್ಲಿ, ಅಲ್ಲವೇ?)

ಸಾಹೇಬರು ಆಶ್ಚರ್ಯಪಟ್ಟವರಂತೆ ನನ್ನ ಕಡೆ ನೋಡಿ,

"ಇದೇನು ದೇವರು, B.A. (ಬೀ.ಏ.), B L. (ಬೀ.ಎಲ್.), ಹೀಗೆ ಹೇಳುತ್ತೀರಿ? ನಮ್ಮ ಶ್ರೀನಿವಾಸ ಮೂರ್ತಿಗಳನ್ನು ನೋಡಿ, (ಕೆಳಗೆ ಜಮಖಾನದ ಮೇಲೆ ಕುಳಿತು ಕೆಲಸ ಮಾಡುತ್ತಿದ್ದವರನ್ನು ತೋರಿ) ಅವರು failed M A ನಾನು ಬರೆದದ್ದನ್ನು ಹೊಡೆದದ್ದೂ ಹೊಡೆದದ್ದೇ!"

ಪಾಪ, ಶ್ರೀನಿವಾಸ ಮೂರ್ತಿಗಳು ಬೇವಿನಕಾಯಿ ತಿಂದವರಂತೆ ಮುಖ ಮಾಡಿ ಸೊಟ್ಟನಾಗಿ ನಕ್ಕರು.

ಅನಂತರ ಸಾಹೇಬರು ನನ್ನನ್ನು "ತಮಗೆ Kanarese ಬರೆದು ಓದಿ ಅಭ್ಯಾಸವುಂಟೇ? ಈ ದೇಶದ Language" ಎಂದು ಕೇಳಿದರು.

ನಾನು "ಸ್ವಾಮಿ ನಾನು ಹುಟ್ಟಿದ್ದು ಕನ್ನಡ ಸೀಮೆ, ಬೆಳೆದದ್ದು ಇಲ್ಲಿ, ಮನೆಯಲ್ಲಿ ಮಾತನಾಡುವುದು ಕನ್ನಡ. ಅದನ್ನೇ B A.ಗೆ ಎರಡನೆಯ ಭಾಷೆಯಾಗಿ ತೆಗೆದುಕೊಂಡಿದ್ದೆ" ಎಂದೆ. Kanarese ಅಂದರೆ ಕನ್ನಡವೇಯೋ? ಅಂತ ಕೇಳೋಣವೆಂತ ಮನಸ್ಸಿಗೆ ಬಂತು. ಆಂದರೆ ಧೈರ್ಯ ಸಾಲಲಿಲ್ಲ.

ಸಾಹೇಬರು ಒಂದು ದೊಡ್ಡ ಶ್ಯಾನುಬೋಗಿ ಕೇಸಿನ record ನ್ನು ನನ್ನ ಕೈಲಿ ಕೊಟ್ಟು, ಅದನ್ನು ಸರಿಯಾಗಿ ಓದಿಕೊಂಡು ಬಂದು ತಮ್ಮಲ್ಲಿ ಇನ್ನೊಂದು ವಾರದಲ್ಲಿ ಸುನಾವಣೆ ಮಾಡಬೇಕೆಂದು ಹೇಳಿದರು.

ಇಲ್ಲಿಗೆ ನನ್ನ ನೌಕರಿಯ ಮೊದಲನೆಯ ದಿನದ ಅನುಭವ ವಾಯಿತು.

ನಾನು ಪ್ರೊಬೇಷನ್ನರಾಗಿ ಶ್ರೀ ವೆಂಕಟವರದ ಅಯ್ಯಂಗಾರರ ಹತ್ತಿರವೇ ಇದ್ದು ಕೆಲಸ ಕಲಿತೆ. ಅವರು ನನಗೆ ಕೆಲಸ ಕಲಿಸಿದರು. ಕಛೇರಿಯ ಮಾಮೂಲನ್ನೂ ಕಾಗದ ಪತ್ರಗಳ ಸರಣಿಯನ್ನೂ, ಅಧಿಕಾರದ ಮರ್ಯಾದೆ ಜಬರ್ದಸ್ತಿಗಳನ್ನೂ ಐಯ್ಯಂಗಾರ್ಯರು ನನಗೆ ಪಾಠ ಪ್ರವಚನಗಳ ಮೂಲಕ ಬೋಧಿಸಿದರೆಂದು ಅಲ್ಲ. ಕೆಲಸ ತಪಸೀಲುಗಳನ್ನು, ಬರವಣಿಗೆಯ ಧಾಟಿ ಮತ್ತು ಬಿಗುವು, ಮೇಲಿನಿಂದ ಕೆಳಗೆ, ಕೆಳಗಿನಿಂದ ಮೇಲೆ, ಸಮಸ್ಥಾಯಿ, ಪತ್ರ ವ್ಯವಹಾರಗಳ ಆರೋಹಣ, ಅವರೋಹಣ,

ಸಾಂಗತ್ಯಗಳ, ವರ್ಮಗಳನ್ನು ನಾನು ರೆಕಾರ್ಡುಗಳಿಂದಲೂ ಹಳಬರಾದ ಪಳಗಿದ ಗುಮಾಸ್ತರುಗಳಿಂದಲೂ ಕಲಿತೆ. ಖದೀಮರಾದ ಗುಮಾಸ್ತರ ಜಾಣ್ಮೆಯ ಕತೆಯೊಂದನ್ನು ಕೇಳಿ.

ಒಂದು ಕೇಸಿನ ತೀರ್ಮಾನದ ಆರ್ಡರ್‌ನ್ನು ಡೆಪ್ಯುಟಿ ಕಮಿಷನರ ಸೈನಿಲ್ಲದೆಯೇ ಗಲ್ಲತ್‌ಸಿಂದ ಅಮಲ್ದಾರರಿಗೆ ಕಳುಹಿಸಿದ್ದರು. ಅಮಲ್ದಾರರು ಅದನ್ನು ಸಾಹೇಬರ ಸೈನ್ ಹಾಕಿ ಕಳುಹಿಸಬೇಕೆಂದು ವಾಪಸ್ ಮಾಡಿದರು. ಗುಮಾಸ್ತರಿಗೆ ರೇಗಿತು. "ನೋಡಿದಿರಾ, ಇವರ ಪೊಗರು ನನಗೆ ಈ ಕಾಗದವನ್ನು ಗೋಪ್ಯವಾಗಿ ಕಳುಹಿಸುವುದರ ಬದಲು ಬಹಿರಂಗ ಪ್ರಸಂಗಕ್ಕೆ ತಂದಿದ್ದಾರೆ. ಆಗಲಿ, ಇವರಿಗೆ ತೋರಿಸುತ್ತೇನೆ, ನನ್ನ ಕೈ," ಎಂದರು ನಮ್ಮ ಆಫೀಸು ಭೀಷ್ಮರು. ನಾನು ಕೆಲಸ ಕಲಿಯುತ್ತಿದ್ದ ವಿದ್ಯಾರ್ಥಿಯಾದ್ದರಿಂದ ನನ್ನಲ್ಲಿ ಅಲ್ಲಿನವರಿಗೆಲ್ಲಾ ಮಮತೆ.

ನಾನು, "ಸೈನ್ ಮಾಡಿಸದೆ ಆರ್ಡರನ್ನು ಕಳುಹಿಸಿದ್ದು ಲೋಪತಾನೆ. ಅವರು ಅಂಥ ಆರ್ಡರನ್ನು ಅಮಲಿಗೆ ತರುವುದು ಹೇಗೆ? ಸೈನ್ ಮಾಡಿ ಕಳುಹಿಸಿದರೆ ಆಯಿತು," ಎಂದೆ.

ಭೀಷ್ಮರು—ಅವರು ರೆವಿನ್ಯೂ ಹೆಡ್ ಮುನ್ಷಿ—ನಕ್ಕರು. "ನೀವು ಬುದ್ಧಿವಂತರು, ವಿದ್ಯಾವಂತರು. ಆದರೆ ನೋಡಿ ಇದೊಂದು ಹುನ್ನರನ್ನ." ಎಂದರು.

ಮಾರನೆಯ ದಿವಸ ಲೋಪವಾಗಿದ್ದ ಸೈನನ್ನು ಸಾಹೇಬರ ಕೈಲಿ ಹಾಕಿಸಿದರು. ಐದು ಆರು ದಿವಸಗಳ ನಂತರ ಅಮಲ್ದಾರರಿಗೆ,

"ನಮ್ಮ ಸೈನಾಗಿರುವ ಕಾಗದ ಸೈನಾಗಿಲ್ಲವೆಂದು ನೋಡದೆ ಬರೆದಿರುವುದು ಬಹಳ ಆಶ್ಚರ್ಯವಾಗಿದೆ. ಅದನ್ನು ಬರೆದ ಗುಮಾಸ್ತೆಗೆ ೨ ರೂಪಾಯಿ ಜುಲ್ಮಾನೆ ಹಾಕಿದೆ. ನೀವೂ ಸಹ ಹುಜೂರಿಗೆ ಬರೆಯುವ ಕಾಗದಗಳ ವಿಚಾರದಲ್ಲಿ ಸರಿಯಾದ ನಿಗಕೊಡುವುದು ಉತ್ತಮ," ಎಂದು ಸಾಹೇಬರ ಸೈನಿನೊಡನೆ ಆರ್ಡರ್ ಹೋಯಿತು.

ಮುಖ್ಯವಾಗಿ ನಾನು ಮಾಡುತ್ತಿದ್ದ ಕೆಲಸ ಡೆಪ್ಯುಟಿ ಕಮಿಷನರ ಖಾಸಾ ಗುಮಾಸ್ತೆಯಂತೆ. ಅವರಲ್ಲಿ ಬಂದ ಕೇಸುಗಳನ್ನೆಲ್ಲಾ ಮೊದಲೇ

ಚೆನ್ನಾಗಿ ಪರಿಶೀಲಿಸಿ ಅವರಲ್ಲಿ ವರದಿ ಮಾಡುವುದು. ಅವರು ಲಾ ಅಥವಾ ವ್ಯವಹಾರದ ವಿಚಾರವಾಗಿ ನನ್ನ ಅಭಿಪ್ರಾಯವನ್ನು ಕೇಳಿದರೆ ಸರಿಯಾಗಿ ವ್ಯಾಸಂಗಮಾಡಿ ಸಕಾರಣವಾಗಿ ಅದನ್ನು ಕೊಡುವುದು. ಅವರು ನನಗೆ ಸ್ಪೆಷಲ್ಲಾಗಿ ಸ್ಟಡೀ ಮಾಡಲು ಕೊಟ್ಟ ಕೇಸುಗಳನ್ನು ಚೆನ್ನಾಗಿ ನೋಡಿ ಪ್ರೀಸೀ ಬರೆದು ಅವರಲ್ಲಿ ಒಪ್ಪಿಸಿ ಅವಶ್ಯಕವಿದ್ದಲ್ಲಿ ಅವರ ಸಂಗಡ ಚರ್ಚೆ ಮಾಡುವುದು. ಅವರಿಗೆ ನನ್ನಲ್ಲಿ ಬಹಳ ವಿಶ್ವಾಸ ಉಂಟಾಯಿತು. ನನಗೂ ಅವರಲ್ಲಿ ಬಹಳ ಪ್ರೇಮ ಮತ್ತು ಗೌರವ ಬೆಳೆಯಿತು.

ಆ ಕಾಲದಲ್ಲಿ ನನಗೆ ಒಂದು ಚೆನ್ನಾಗಿ ಮಂದಟ್ಟಾಯಿತು. ಜನಗಳ ಜೀವನದಲ್ಲಿ ಸರ್ಕಾರವೆಂದರೆ ಡೆಪ್ಯುಟಿ ಕಮಿಷನರು ಮತ್ತು ಅಮಲ್ದಾರರು. ಶ್ರೀಮನ್ ಮಹಾರಾಜರೆಂದರೆ ಕಣ್ಮರೆಯಾಗಿ ಭಕ್ತಿಗೆ ಗೋಚರವಾದ ದೇವರ ಅಂಶರು. ಈ ಮಹಾಪ್ರಭುವಿನ ಪ್ರತಿನಿಧಿಗಳಾಗಿ ಅವರ ಆಗ್ರಹ, ಅನುಗ್ರಹಗಳ ನಿರ್ವಾಹಕರು ಸ್ಥಳದಲ್ಲಿ ಅಮಲ್ದಾರರು, ಡಿಸ್ಟ್ರಿಕ್ಟಿನಲ್ಲಿ, ಯಾಕೆ ಸರ್ಕಾರದ ಉಚ್ಚಸ್ಥಾನಗಳಲ್ಲೆಲ್ಲಾ, ಡೆಪ್ಯುಟಿ ಕಮಿಷನರು.

ಅಮಲ್ದಾರರಿಗೆ 'ಸ್ಥಳದ ತಾಯಿ' ಎಂದು ಬಿರುದು. ಅವರ ಗೌರವವನ್ನು ಡೆಪ್ಯುಟಿ ಕಮಿಷನರು ಮತ್ತು ಸರ್ಕಾರದವರು ಬಹಳ ಜಾಗರೂಕತೆಯಿಂದ ಕಾಪಾಡುತ್ತಿದ್ದರು. ಇದಕ್ಕೆ ದೃಷ್ಟಾಂತರ:

ಒಮ್ಮೆ ಒಬ್ಬ ತಾಲ್ಲೂಕ್ ಗುಮಾಸ್ತರು—ಚಾಮರಾಜನಗರದವರು ಅಂತ ಜ್ಞಾಪಕ—ಡೆಪ್ಯುಟಿ ಕಮಿಷನರಲ್ಲಿ ತಮ್ಮ ಅಮಲ್ದಾರರ ಮೇಲೆ ದೂರು ಹೇಳುವುದಕ್ಕೆ ಬಂದರು.

"ಮಹಾಸ್ವಾಮಿ, ನಮ್ಮ ಸುಬೇದಾರರಿಗೆ ನನ್ನಮೇಲೆ ಯಾರ ಚಾಡಿ ಮಾತೋ ಕೇಳಿ ಕ್ರೋಧವಿದೆ. ನಿಷ್ಕಾರಣವಾಗಿ ನನ್ನನ್ನು ಬೈದರು. 'ಯಾಕೆ ಬೈತೀರಿ ಸ್ವಾಮಿ' ಎಂದು ಕೇಳಿದ್ದಕ್ಕೆ, ಎರಡು ರೂಪಾಯಿ ಜುಲ್ಮಾನೆ ಹಾಕಿದ್ದೇನೆ ಹೋಗು, ನೀನು ಪುನಃ ಅಧಿಕಪ್ರಸಂಗಮಾಡಿದರೆ ಕೆಲಸವನ್ನೇ ಕಳೆದುಕೊಳ್ಳುತ್ತೀ ಎಂದರು. ತಮ್ಮಲ್ಲಿ ಅಪೀಲು ಮಾಡಿದ್ದೇನೆ" ಎಂದರು.

ಡೆಪ್ಯುಟಿ ಕಮಿಷನರು ಅವನ ಅಪೀಲು ಅರ್ಜಿಯನ್ನು ತೆಗೆಸಿದರು.

"ಬೈಬೇಡಿ ಎಂದ ಮಾತ್ರಕ್ಕೆ ಅಷ್ಟು ಕೋಪ ಮಾಡುವುದು ಉಂಟೇನರೀ?" ಎಂದರು.

ಸಾಹೇಬರ ಸೌಮ್ಯಭಾವವನ್ನು ನೋಡಿ ಅವನಿಗೆ ಧೈರ್ಯವಾಯಿತೋ ಏನೋ,

"ಅವರು ಹಾಗೇ ಸ್ವಾಮಿ. ಕಂಡವರ ಮಾತನ್ನು ಕೇಳಿ ಸ್ವತಃ ವಿಚಾರಿಸದೆ ದುಡುಕುವುದು," ಎಂದ.

ಸಾಹೇಬರು ನಸುನಕ್ಕು, ಕಾಗದವನ್ನು ಕೈಗೆ ತೆಗೆದುಕೊಂಡು, "ಜುಲ್ಮಾನೆಯನ್ನು ಐದು ರೂ.ಗೆ ಏರಿಸಿದೆ" ಎಂದು ಬರೆದು, "ಅಧಿಕ ಪ್ರಸಂಗಿಯೆಂದು ಜುಲ್ಮಾನೆ ಹಾಕಿದರೇ? ನನಗೂ ಹಾಗೇ ಕಾಣುತ್ತಿದ್ದೀರಲ್ಲ. ಅಮಲ್ದಾರರೇ ಎರಡು ರೂಪಾಯಿ ಜುಲ್ಮಾನೆ ಹಾಕಿದರೆ ನಾವು ಎಷ್ಟು ಹಾಕಬೇಕು ನೋಡಿ. ಐದು ರೂಪಾಯಿ ಜುಲ್ಮಾನೆ ಹಾಕಿದೆ. ಪುನಃ ಪುಕಾರಿಗೆ ಅವಕಾಶ ಕೊಟ್ಟರೆ ಡಿಸ್‌ಮಿಸ್ ಆಗುತ್ತೆ. ಹೋಗಿ," ಎಂದರು.

೪

ಆಗಿನ ಕಾಲದ ಅಮಲ್ದಾರರಿಗೆ ಅವರ ಹಿಂದಲ ಕಾಲದ ಸುಬೇದಾರರುಗಳ ದರ್ಪ, ಮಾಮೂಲು ಗೌರವ, ಮರ್ಯಾದೆ ಇವುಗಳು ಇನ್ನೂ ಉಳಿದಿದ್ದವು. ಸುಬೇದಾರರೆಂದರೆ ಎಲ್ಲಾ ಬಾಬುಗಳಲ್ಲೂ ರಾಜರ ಪ್ರತಿನಿಧಿ. ರಾಜರ ಸ್ಥಾನದಲ್ಲಿ ರಾಜಮರ್ಯಾದೆಗಳು ದೇವಸ್ಥಾನ ಮಠ ಇಂಥ ಸಂಸ್ಥೆಗಳಲ್ಲಿ ಸುಬೇದಾರರಿಗೆ ನಡೆಯುತ್ತಿದ್ದವು. ನಮ್ಮ ಹಿರಿಯರಲ್ಲಿ ಆ ಅಧಿಕಾರ ಪೂರ್ವದಲ್ಲಿ ಮಾಡಿದವರಿದ್ದರು. ಆಗಿನ ಕಾಲದ ಸುಬೇದಾರರ ಕಾರುಬಾರುಗಳ ಕತೆಗಳನ್ನು ನಾವು ಹುಡುಗರಾದಾಗ ಕೇಳುತ್ತಿದ್ದೆವು. ಆಗಿನ ಸುಬೇದಾರರುಗಳು ಸ್ಕೂಲು ವಿದ್ಯೆ ನವನಾಗರಿಕತೆಗಳಲ್ಲಿ ಪ್ರಖ್ಯಾತರಲ್ಲದಿರಬಹುದು. ಕಾನೂನು ಕೋಡುಗಳ ಪರಿಚಯವಿಲ್ಲದವರಿರಬಹುದು. ಆದರೆ ದಕ್ಷತೆ, ಧೈರ್ಯ, ಕರ್ತವ್ಯ ದೀಕ್ಷೆ ಇವುಗಳಲ್ಲಿ ನಿಸ್ಸೀಮರಿದ್ದಿರಬೇಕೆಂಬ ಭಾವ ನನ್ನ ಮನಸ್ಸಿನಲ್ಲಿ ನೆಲೆಗೊಂಡಿದೆ.

ಆ ಕಾಲದ ಧೀರ ಸುಬೇದಾರರ ಪೈಕಿ ನಾನು ಚಿಕ್ಕವನಾಗಿದ್ದಾಗ ಒಬ್ಬಿಬ್ಬರನ್ನು ಮಾತ್ರ ನೋಡಿದ್ದೆ. ಆಗ ನಾನು ಬಹಳ ಚಿಕ್ಕವನು. ಅವರು ಬಹಳ ವೃದ್ಧರು. ಅವರು ನನ್ನ ಪೂಜ್ಯ ಹಿರಿಯರುಗಳಿಂದ ಪೂಜಿತರಾದ್ದರಿಂದ ಅವರ ನೆನಪು ನನ್ನ ಮನಸ್ಸಿನಲ್ಲಿ ಅವರ ಪ್ರಭಾ ಮಂಡಲದ ಆವರಣದಿಂದ ಅಸ್ಪಷ್ಟವಾಗಿದೆ. ಅವರಲ್ಲಿ ಒಬ್ಬರನ್ನು ನಾನು ಈಗಲೂ ಕನಸಿನಲ್ಲಿ ಆಗಾಗ ಕಾಣುತ್ತೇನೆ. ಅವರ ತೊಡೆಯ ಮೇಲೆ ಕುಳಿತು ಮಹಾಭಾರತ ಕಥೆಯನ್ನು ಕೇಳುವ ನನಗೆ ಭೀಷ್ಮ ದ್ರೋಣರು ಅವರಂತೆ ಇದ್ದಿರಬೇಕೆಂದು ಭಾವನೆ. ಅವರ ವೃದ್ಧ ಪತ್ನಿ ಯವರೂ ಜೀವಂತರಾಗಿದ್ದರು. ಗಂಡನ ಸೇವೆಯನ್ನು ತಮ್ಮ ಹೊರತು ಮತ್ತೆ ಯಾರಾದರೂ ಮಾಡಿದರೆ ಬಹಳ ಅಸಮಾಧಾನ ಪಟ್ಟುಕೊಳ್ಳು ವರು. ಮನೆಯಲ್ಲಿ ಮಕ್ಕಳು ಮೊಮ್ಮಕ್ಕಳು ಒಂದೇ ರಕ್ತದ ಹಂಚಿಗೆ ಯವರು ಐವತ್ತು ಜನವಿರುತ್ತಿದ್ದರು. ಆದರೂ ಯಜಮಾನರಿಗೆ ಆಹ್ನಿಕಕ್ಕೆ ನೀರು ಕೊಡುವುದು, ತುಪ್ಪ ಬಡಿಸುವುದು, ಶಾಲು ಹೊದ್ದಿಸುವುದು, ಇವುಗಳನ್ನು ಅವ್ವಾ ಅವರೇ ಮಾಡಬೇಕು. ಈ ತುಂಬಿದ ಕುಟುಂಬದಲ್ಲಿ ನಡೆದ ಒಂದು ವಿಚಿತ್ರ ಘಟನೆ ನನ್ನ ಎಳೆಯ ಮನಸ್ಸಿನಮೇಲೆ ಬಲವಾದ ಮುದ್ರೆಯನ್ನು ಊರಿತು. ಯಜಮಾನರ ಗಂಡುಮಕ್ಕಳು ದೇಶದ ನಾನಾ ಭಾಗದಲ್ಲಿ ಗೌರವದ ಉದ್ಯೋಗಗಳಲ್ಲಿ ಇದ್ದರು. ಅವರನ್ನೆಲ್ಲಾ ಒಂದು ಕ್ಲುಪ್ತವಾದ ದಿನ ಯಜಮಾನರು ತಾವು ವಾಸವಾಗಿದ್ದ ಹಳ್ಳಿಗೆ ಕರೆಯಿಸಿಕೊಂಡರು. ಹಾಗೇ ಕುಲ ಪುರೋಹಿತರನ್ನೂ ಆಪ್ತ ಸ್ನೇಹಿತ ರನ್ನೂ ಬರಮಾಡಿಕೊಂಡರು. ಎಲ್ಲರೂ ಬಂದಮೇಲೆ ಒಂದು ಸಭೆ ಸೇರಿತು. ಯಜಮಾನರು ನೆರೆದ ಜನಗಳ ಮುಂದೆ ಕೈಜೋಡಿಸಿ ನಿಂತು ಗದ್ಗದ ಸ್ವರದಿಂದ,

"ನನ್ನನ್ನು ಯೋಗ್ಯನಾದವನೆಂದು ತಿಳಿದಿದ್ದೀರಲ್ಲವೇ? ಸತ್ಯವಂತ ನೆಂದಲ್ಲವೇ, ಸದಾಚಾರ ಸಂಪನ್ನನೆಂದಲ್ಲವೇ? ಇದೋ ನೋಡಿ ನಾನು ಪಾಪಿ. ನನಗೆ ಈ ವೇಷ ಬೇಡ."

ಇಷ್ಟು ಹೇಳಿ ಗಂಟಲು ಬಿಗಿದು ಸುಮ್ಮನಾದರು. ಕಣ್ಣುಗಳಿಂದ ಧಾರೆಯಾಗಿ ಕಂಬನಿ ಸುರಿಯಲಾರಂಭಿಸಿತು. ಎಲ್ಲರೂ ವಿಸ್ಮಯ-

ದಿಂದ ಸ್ತಬ್ಧರಾಗಿ ವಿಗ್ರಹಗಳಂತೆ ನಿಂತರು. ಅವ್ವಾ ಅವರು ಯಜಮಾನರ ಪಾದಗಳನ್ನು ಹಿಡಿದು ಬಿಕ್ಕಿಬಿಕ್ಕಿ ಅಳುತ್ತಾ ಬಿಕ್ಕುಗಳ ನಡುವೆ,

"ನನ್ನ ಪ್ರಾಣ, ನನ್ನ ದೇವರೇ, ಅಳಬೇಡಿರಿ. ನಿಮ್ಮಂಥ ಧರ್ಮಿಷ್ಠರೂ ಒಳ್ಳೆಯವರೂ ಯಾರಿದ್ದಾರೆ? ಅನ್ಯಾಯವಾಗಿ ಯಾಕೆ ಅಂದುಕೊಳ್ಳುತ್ತೀರಿ? ನಾನು ಕಾಣೆನೇ?" ಎಂದರು.

ಅಲ್ಲಿದ್ದ ಕೆಲವರು "ರಾಜರ್ಷಿ" "ಶಾಪಾದಪಿ ಶರಾದಪಿ" ವಗೈರೆ ಹೊಗಳಿಕೆಗಳನ್ನು ಉಚ್ಚರಿಸುತ್ತಿದ್ದದ್ದಕ್ಕೆ ತೆಪ್ಪಗಿದ್ದ ಯಜಮಾನರು ಪತ್ನಿಯ ಮಾತಿಗೆ:

"ನೀವು ಕಾಣಿರಿ. ಅದೇ ನನ್ನ ಕರುಳನ್ನು ಕುಯ್ಯುತ್ತಿರುವುದು. ನಾನು ಬಹಳ ಸತ್ಯವಂತ ಗಂಡ, ಒಳ್ಳೆ ಗೃಹಸ್ಥ, ಎಂದು ತಿಳಿದುಕೊಂಡು ಈಗಲೂ ನನ್ನನ್ನು ಪೂಜೆ ಮಾಡುತ್ತೀರಿ ನಾನು ನಿಮಗೆ ದ್ರೋಹ ಮಾಡಿದ್ದೇನೆ. ನಿಮ್ಮ ಸತ್ಯದಿಂದ ನನ್ನ ಮನೆ ಉಳಿದಿರುವುದು, ದೇವರು ಕಣ್ಣು ತೆಗೆದು ನೋಡಿರುವುದು. ಇಲ್ಲಿರತಕ್ಕ ಮಹಾಜನರುಗಳೆಲ್ಲರೂ ಕೇಳಿ ನನ್ನ ಯೋಗ್ಯತೇನ."

ಹೀಗೆಂದು ಐವತ್ತು ವರ್ಷಗಳ ಹಿಂದೆ ತಾವು ತಮ್ಮ ಮನೆಯ ಹತ್ತಿರ ವಾಸವಾಗಿದ್ದ ಒಬ್ಬ ಮುಸಲ್ಮಾನರ ಹೆಣ್ಣಿನ ಸಂಗಡ ಅಕ್ರಮ ಸ್ನೇಹ ಬೆಳಸಿ, ತಮ್ಮ ಹೆಂಡತಿಗೆ ದ್ರೋಹ ಮಾಡಿದ್ದನ್ನು ತಿಳಿಸಿದರು.

"ಆ ಹೆಣ್ಣಿಗೆ ಪತಿಯಿರಲಿಲ್ಲ ಅದಕ್ಕೋಸ್ಕರ ಅವಸಿಗೆ ನಾನು ದ್ರೋಹ ಮಾಡಲಿಲ್ಲ. ಆ ಹೆಣ್ಣೇ ನನ್ನನ್ನು ಅರಸಿ ಬಂದು ಮರುಳು ಮಾಡಿದಳು. ಅವಳಿಗೆ ನಾನು ಬಹು ವಿಧವಾಗಿ ಪ್ರಯೋಜನವನ್ನು ಮಾಡಿದೇನಾದ್ದರಿಂದ ಅವಳಿಗೂ ದ್ರೋಹಮಾಡಲಿಲ್ಲ. ಅವಳೇ ನನ್ನನ್ನು ಬಿಟ್ಟು ಎಲ್ಲಿಯೋ ಹೊರಟುಹೋದಳು. ಆದರೆ ನನ್ನನ್ನು ನಂಬಿದ ಈ ಸತೀ ಮಣಿಗೆ, ನನ್ನ ಮಕ್ಕಳ ತಾಯಿಗೆ, ನನ್ನ ಮನೆಯ ಲಕ್ಷ್ಮಿಗೆ ದ್ರೋಹ ಮಾಡಿದ್ದೇನೆ. ಪಾಪದ ಕೆಲಸ ಮಾಡಿದರೂ ಶುದ್ಧ ವೇಷ ಧಾರಿಯಾಗಿ ನಿಮ್ಮೆಲ್ಲರಿಗೂ ದ್ರೋಹ ಮಾಡಿದ್ದೇನೆ. ನನ್ನ ಹೆಂಡತಿಯ ಕ್ಷಮಾಪಣೆ ಬೇಡುತ್ತೇನೆ."

ಅವ್ವಾ ಅವರು ಧಟಕ್ಕನೆ ನಿಂತು ದೂರ ಸರಿದು, "ಉಂಟೆ, ನೀವು ನನ್ನ ಕ್ಷಮಾಪಣೆ ಕೇಳುವುದು ಅಂದರೇನು? ದೇವರು ಮೆಚ್ಚಿಯಾನೆ?" ಎಂದರು.

ಪುರೋಹಿತರು, "ಇಂಥ ಅಪರಾಧಗಳನ್ನು ಯೌವನಾವಸ್ಥೆಯಲ್ಲಿ ಬಹು ಭಾಗ ಜನ ಮಾಡಿರುತ್ತಾರೆಂದು ಕಾಣುತ್ತೆ. (ಆ ಬ್ರಾಹ್ಮಣ ಚಿಕ್ಕಂದಿನಲ್ಲಿ ಒಂದೆರಡು ಸಲ ತಾನೂ ಎಡವಿ ಬಿದ್ದಿರಬೇಕೆಂದು ತೋರಿತು) ಅದಕ್ಕೆ ಪಶ್ಚಾತ್ತಾಪವೇ ಪ್ರಾಯಶ್ಚಿತ್ತ. ನಾಲ್ಕು ಜನ ಬ್ರಾಹ್ಮಣರಿಗೆ ಅನ್ನ ಹಾಕಿದರಾಯಿತು."

ಯಜಮಾನರು, "ನನ್ನ ಧರ್ಮ ಪತ್ನಿಯನ್ನು ಮೋಸ ಮಾಡಿದ್ನೋ? ಇದುವರೆಗೂ ಆಕೆಗೆ ತಿಳಿಸದೆ ನಾನು ಒಳ್ಳೆಯವನೆಂದು ನಟಿಸಿ . . . ."

ಅವ್ವಾ ಅವರು ಅಳುತ್ತಾ, ನಗುತ್ತಾ 'ದೊಡ್ಡವರೇ ಹೀಗೆ, ಮಗುವಿನ ಹಾಗೆ. ಏನೂ ಗೊತ್ತಾಗೋದಿಲ್ಲ. ನನಗೆ ಈ ವಿಷಯ ತಿಳಿದಿರಲಿಲ್ಲ ಅಂತ ನಂಬಿದ್ದೀರಲ್ಲ! ನನಗೆ ಆಗಲೇ ತಿಳಿಯಿತು. ಆ ಮುಂಡೇನ ನಾನೇ ಪರಕೆಯಿಂದ ಹೊಡೆದು ಇನ್ನೂ ಹೆಚ್ಚು ಶಿಕ್ಷೆಯಾದೀತೆಂದು ಹದರಿಸಿ, ಊರು ಬಿಟ್ಟು ಓಡಿಸಿದ್ದು' ಎಂದರು.

ಯಜಮಾನರು ಮುಖದ ಮೇಲೆ ಶಾಲನ್ನು ನೆಳೆದುಕೊಂಡು ಸುಮ್ಮನಾದರು. ಅನಂತರ ಮನೆಯವರು ಮಾತ್ರ ಇದ್ದಾಗ, ಅವ್ವಾ ಅವರ ನರೆತ ತಲೆಯಮೇಲೆ ಕೈಯಿಟ್ಟು,

"ಎಷ್ಟು ಒಳ್ಳೆಯವರು ನೀವು! ನಾನು ಅಪರಾಧಿಯೆಂದು ತಿಳಿದೂ ತಿಳಿದೂ ನನ್ನನ್ನು ಪ್ರೀತಿಸುತ್ತೀರಲ್ಲ!" ಎಂದರು.

ಆ ಸಾಧ್ವಿ, "ದೇವರಿಗೆ ಮೈಲಿಗೆಯುಂಟೇ? ನನ್ನ ಗಂಡ ನನಗೆ ಗಂಗೆ ಹಾಗೆ. ಅದಕ್ಕೆ ಮೈಲಿಗೆಯಿಲ್ಲ. ಅದರಿಂದ ನಾನು ಪವಿತ್ರಳು" ಎಂದರು.

ಇದನ್ನು ನೆನೆದಾಗೆಲ್ಲ ಚಿಕ್ಕಂದಿನಲ್ಲಿ ನನಗೆ ನಗೆ ಬರುತ್ತಿತ್ತು. ನನಗೆ ವಯಸ್ಸಾದ ಮೇಲೆ ಇದು ನಮ್ಮ ತಾಯಿಯವರ, ನಮ್ಮ ಮಹಿಳೆಯರ ಔದಾರ್ಯ, ಸದ್ಗುಣ, ಭೂದೇವಿ ಸದೃಶವಾದ ಕ್ಷಮೆಗಳ ದೃಷ್ಟಾಂತರ

ವಾಗಿ ತಿಳಿದು ಇಂಥವರು ಭಾರತ ಮಾತೆಯ ಯೋಗ್ಯ ಮಕ್ಕಳು, ಇವರುಗಳಿಂದಲೇ ನಮ್ಮ ಸಂಸ್ಕೃತಿ ಧರ್ಮ ಉಳಿದಿರುವುದು, ಎಂದು ನಂಬಿಕೆಯುಂಟಾಗಿದೆ.

ಯಜಮಾನರು ಹಣ್ಣು ಮುಪ್ಪಿನಲ್ಲಿ ಕಾಲವಾದನಂತರ ಕೆಲವು ದಿನಗಳಲ್ಲೇ ಅವ್ವಾ ಅವರು ತೀರಿಕೊಂಡರು. ಮುತ್ತೈದೆಯಾಗಿದ್ದಾಗಲೇ ಕಣ್ಣು ಮುಚ್ಚಿಕೊಂಡಿದ್ದರೆ ಚೆನ್ನಾಗಿತ್ತೆಂದು ಹೇಳಿದವರಿಗೆ ಅವರು ಹೇಳಿದ ಉತ್ತರ ಅವರ ಜೀವನದ ಧರ್ಮ ತತ್ವವನ್ನು ಬೆಳಗಿ ಸ್ಮರಣೀಯವಾಗಿದೆ.

"ಯಾವಾಗಲೂ ಯಜಮಾನರು ಮೊದಲು ಆಮೇಲೆ ನಾನು. ಅವರಿಗೆ ಮೊದಲು ಊಟ ಮಾಡಿದವಳಲ್ಲ. ಅವರಿಗೆ ಬಡಿಸಿ ಆಮೇಲೆ ಉಣ್ಣುತ್ತಿದ್ದೆ. ಅವರಿಗೆ ಮುಂಚೆ ಮಲಗಿದವಳಲ್ಲ. ನಾನು ಮುದುಕಿ ಬಳಲಿದೆ ಎಂದು ಮೊದಲೇ ಸಾಯಲೇನು ಪಾಪ ಅವರನ್ನು ಒಬ್ಬರನ್ನೇ ಬಿಟ್ಟು? ಅವರ ಸೇವೆ ಮಾಡುವರ್ಯಾರು? ಅವರ ಕಣ್ಣು ಮುಚ್ಚುವರ್ಯಾರು? ಅವರು ಮಲಗಿದರು. ಈಗ ನಾನು ಕಣ್ಣು ಮುಚ್ಚಿಕೊಳ್ಳಲಿಕ್ಕೆ ಸಿದ್ಧಳಾಗಿದ್ದೇನೆ."

ನಾನು ನೌಕರಿಗೆ ಸೇರಿದಾಗ ನನ್ನ ಹಿಂದಿನ ತಲೆಯ ಅಮಲ್ದಾರರುಗಳು ಅನೇಕರಿದ್ದರು. ಅವರ ಪೈಕಿ ಕೆಲವರನ್ನು ನಾನು ಬಲ್ಲೆ. ಹಿಂದಿನ ಅತಿರಥರು ಮಹಾರಥರ ಪುರಾಣವನ್ನು ಕೇಳಿದ್ದ ನನಗೆ ಯುಗದ ಮಹಿಮೆಯಿಂದ ಜನಗಳ ಶಕ್ತಿ ತೇಜೋಗುಣಗಳು ಕುಗ್ಗಿ ಹೋದವ್ವೋ ಎನ್ನಿಸಿತು. ನಾನು ಹಿಂದಿನ ಸುಬೇದಾರರುಗಳನ್ನೇ ಆದರ್ಶವಾಗಿಟ್ಟುಕೊಂಡು ಅವರಂತೆ ಕೆಲಸ ಮಾಡಬೇಕೆಂದು ನಿಶ್ಚಯಿಸಿಕೊಂಡೆ. ಅಲ್ಲದೆ ಬ್ರಿಟಿಷ್ ರಾಜ್ಯದಲ್ಲಿ ವಿದ್ಯದಲ್ಲೂ ಬುದ್ಧಿಯಲ್ಲಿಯೂ ನನಗಿಂತ ಹೆಚ್ಚಿಲ್ಲದ ಸಬ್ ಕಲೆಕ್ಟರುಗಳು, ಕಲೆಕ್ಟರುಗಳು ಎಷ್ಟು ದರ್ಪದಿಂದ ಧರ್ಮದಿಂದ ಧೈರ್ಯದಿಂದ ಕೆಲಸಮಾಡುತ್ತಾರೆ. ಪಕ್ಷಪಾತವಿಲ್ಲದೆ ಭಯವಿಲ್ಲದೆ ಸತ್ಯವಾಗಿ ತಮಗೆ ವಹಿಸಿರುವ ಕರ್ತವ್ಯಗಳನ್ನು ನಿರ್ವಹಿಸುವವರಿಗೆ ಗೌರವವೂ ಯಶಸ್ಸೂ ತಾನಾಗೇ ಬರುತ್ತವೆಂದು ನಾನು ನಂಬಿದ್ದೆ.

ನಾನು ಕೆಲಸಕ್ಕೆ ಸೇರಿದಾಗಿದ್ದ ಹಳೆಯ ಅಮಲ್ದಾರರುಗಳ ಮಾತು ಎತ್ತಿದೇನೆ. ಅವರುಗಳ ವಿಚಾರ ಟೀಕೆ ಮಾಡುವುದಕ್ಕಿಂತಲೂ

'Snapshot' ನಂತಿರುವ ಉಪಕತೆಗಳನ್ನು ಹೇಳುವುದು ಮೇಲೆಂದು ತೋರುತ್ತದೆ. ಅವರ ಹೆಸರುಗಳನ್ನು ಮಾತ್ರ ಬದಲಾಯಿಸಿದ್ದೇನೆ.

ಗೋವಿಂದರಾಯರು ಶಕ್ತರೆಂತಲೂ ನಿಸ್ಪೃಹರೆಂತಲೂ ಹೆಸರು ಪಡೆದ ಅಮಲ್ದಾರರು. ಸ್ವಲ್ಪ ಮುಂಗೋಪ. ಆಚಾರಶೀಲರು. ತಮ್ಮ ಅಮಾನಿತ್ವ, ಅಡಾಂಭಿತ್ವಗಳ ಪ್ರದರ್ಶನಕ್ಕಾಗಿಯೋ ಅಥವಾ ಅವರ ಸ್ವಭಾವ ದೆಸೆಯಿಂದಲೋ ಸ್ವಲ್ಪ ಮಲಿನವಾದ ಹಳೆಯ ಬಟ್ಟೆಗಳನ್ನೇ ಧರಿಸುವ ವಾಡಿಕೆಯುವರು. ಯಾರಾದರೂ ಅವರನ್ನು ಅಮಲ್ದಾರರ ಮನೆಯ ಪರಿಚಾರಕನೆಂದು ಭಾವಿಸಿ 'ಯಜಮಾನರು ಮನೆಯಲ್ಲಿ ದ್ದಾರೆಯೇ' ಎಂದು ಕೇಳಿದರೆ ಅವರಿಗೆ ಬಹಳ ಸಂತೋಷ. ಅವರಿಗೆ ಕಜ್ಜೀ ಅಮಲ್ದಾರರು ಎಂದು ಹೆಸರು. ಆ ಬಿರುದನ್ನು ಸಾರ್ಥಕಪಡಿಸಿ ಕೊಳ್ಳಲಿಕ್ಕೆ ಅವರು ಬೆಳಿಗ್ಗೆ ಎಳೆ ಬಿಸಿಲಿನಲ್ಲಿ ಮನೆಯ ಮುಂದಿನ ಕಲ್ಲಿನ ಬೆಂಚಿನಮೇಲೆ ಕುಳಿತು ಕಂಡೂಯ ಸುಖವನ್ನು ಅನುಭವಿಸುವರು. ಹಾಗೇ ಅವರ ಕೆಲಸಕಾರ್ಯಗಳನ್ನೂ ನಿರ್ವಹಿಸುವರು. ರೆವಿನ್ಯೂ ಲೆಕ್ಕ ಗಳಲ್ಲಿ ನಿಸ್ಸೀಮರು. ಸ್ವಮತಾಭಿಮಾನ ಒಂದೊಂದು ವೇಳೆ ವ್ಯಕ್ತವಾಗು ತ್ತಿತ್ತು. ಒಂದು ನಲ ಒಬ್ಬ ಮಾಧ್ವನಾದ ಶಾನುಭೋಗನು ಕಂದಾಯದ ಹಣವನ್ನು ವಸ್ತು ಮಾಡಿದ್ದಕ್ಕಾಗಿ ಒಬ್ಬ ಮಾಧ್ವ ಅಧಿಕಾರಿಯ ಹತ್ತಿರ ವಿಚಾರಣೆ ನಡೆಯುತ್ತಿತ್ತು. ಆಗ ಗೋವಿಂದರಾಯರು ಕಣ್ಣಿನಲ್ಲಿ ನೀರಿ ಟ್ಟರು.

'ಏನೋ! ಮುಂಡೇಗಂಡ, ಮಾಡಿದ ನೋಡಿ. ಮಕ್ಕಳು ಮರಿಗ. ಮುಖ್ಯ ಅಂಗಾರ ಅಕ್ಷತೆಗೆ ಮರ್ಯಾದೆ ಕೊಡಬೇಕು. ಅವನು ತಿಂದಿರುವ ಹಣ ಅವನಿಂದ ವಸೂಲ್‌ಮಾಡಿ ಅವನ್ನ ಬಿಟ್ಟು ಬಿಡಬಹುದಾದರೆ, ಹಣಾನ ಹ್ಯಾಗಾದರೂ ಕೊಡಿಸಬಹುದು,' ಎಂದರು.

ತಾವು ಸತ್ಯವಂತರು, ಬಡವರು. ಆದರೂ, ಅಂಗಾರ ಅಕ್ಷತೆ ಮೇಲಿನ ಭಕ್ತಿಗಾಗಿ ಹಣದ ಖರ್ಚು, ಕಳ್ಳನ ಬಿಡುಗಡೆ ಎರಡಕ್ಕೂ ಮನಸ್ಸು ಒಪ್ಪಿತ್ತು. ಇದು ನ್ಯಾಯವಲ್ಲದಿರಬಹುದು, ದಯಾ ಭಕ್ತಿ ತಪ್ಪೆಂದು ಬಾಯಾರ ಹೇಳುವುದಕ್ಕೆ ನನಗೆ ಧೈರ್ಯ ಸಾಲದು.

ಭೀಮಣ್ಣನವರು ಮತ್ತೊಬ್ಬ ಅಮಲ್ದಾರರು. ವಿದ್ಯಾವಂತರು, ಸಾಹಿತಿಗಳು. ಅಮಲಿನಲ್ಲಿ ಕಡಮೆಯಾದರೂ ಬರವಣಿಗೆಯಲ್ಲಿ ಅದ್ವಿತೀಯರು. ಮಾಡಬೇಕಾಗಿದ್ದ ಕೆಲಸದ ಲೋಪಕ್ಕೆ ಮನಮುಟ್ಟುವ ಸಮಾಧಾನವನ್ನು ವ್ಯಾಕರಣ ಬದ್ಧವಾಗಿ ಬರೆಯುವುದರಲ್ಲಿ ಇವರ ಸಮಾನರು ಯಾರೂ ಇಲ್ಲ. ಇವರು ಒಂದಾನೊಂದು ದಿವಸ ಸರಕಾರಿ ಕೆಲಸದ ನಲುವಾಗಿ ಒಬ್ಬ ಬೇರೆ ಇಲಾಖೆಯ ಹುದ್ದೇದಾರರನ್ನು ನೋಡಬೇಕಾಗಿತ್ತು. ಕೆಲವು ಸ್ನೇಹಿತರೊಡನೆ ವಿನೋದವಾಗಿ ಮಾತನಾಡುತ್ತಿದ್ದಾಗ ಅವರ ಗುಮಾಸ್ತೆ ಇದನ್ನು ಜ್ಞಾಪಿಸಿದ. ಅಮಲ್ದಾರರು 'ನರಿ, ಬರಲಿಕ್ಕೆ ಅನಿವಾರ್ಯದಿಂದ ಆಗಲಿಲ್ಲವೆಂದು ನಾಳೆ ಬರೆದರೆ ಆಯಿತು' ಎಂದು ನಲ್ಲಾಪದಲ್ಲೇ ಮಗ್ನರಾದರು. ಇವರಿಗೆ ಹೊಗಳಿಕೆ ಮತ್ತು ಜನಗಳು ತೋರಿಸುವ ಮರ್ಯಾದೆಗಳ ಮೇಲೆ ಬಹಳ ಪ್ರೀತಿ.

'ಒಳ್ಳೇ ಮನುಷ್ಯ, ಸಂಭಾವಿತ, ಯಾವಾಗ ನೋಡಿದರೂ ಬಗ್ಗಿ ಕೈ ಮುಗಿಯುತ್ತಾನೆ' ಎಂಬುದು ಆಗಾಗ ಅವರ ಬಾಯಲ್ಲಿ ಇರುತ್ತಿತ್ತು.

ಒಂದು ದಿನ ಇವರು ಕುದುರೆಯ ಮೇಲೆ ಕುಳಿತು ಗ್ರಾಮಗಸ್ತಿಗೆ ಹೊರಟರಂತೆ. ಇವರ ಅಶ್ವ ಉಚ್ಚೈಶ್ರವಸವಲ್ಲ; ಇವರು ಸವಾರಿಯಲ್ಲಿ ಕಲ್ಕಿಯಲ್ಲ; ದಾರಿಯಲ್ಲಿ ಹಸುರು ಸಿಕ್ಕಿದರೆ ಅದು ಮೇಯುತ್ತಿತ್ತು; ಜನ ಕೈ ಮುಗಿದರೆ ಇವರು ಪ್ರಸನ್ನಭಾವದಿಂದ ಪ್ರಣಾಮವನ್ನು ಸ್ವೀಕರಿಸಿ ಕುಶಲಪ್ರಶ್ನೆಯನ್ನು ಮಾಡುತ್ತಿದ್ದರು. ಅವತ್ತು ಒಬ್ಬ ಮುಸಲ್ಮಾನ್ ರವನು ನೊಪ್ಪಿನ ಕಡಲೆಕಾಯಿ ಕಂತೆಯನ್ನು ಕೈಲಿ ಹಿಡಿದು, ಕಾಳುಗಳನ್ನು ತಿನ್ನುತ್ತಾ ಎದುರಿಗೆ ಬಂದ. ಯಜಮಾನರು ಅವನ ಕಡೆಗೆ ಮೊದಲು ನಗೆ ಮೊಗದಿಂದ ಆಮೇಲೆ ಕೋಪದಿಂದ ದುರುಗುಟ್ಟಿ ನೋಡಿದರು. ಅವನು ಕಂತೆಯೊಳಗಿನ ಕೊನೆಗಾಯಿಗಳನ್ನು ಹುಡುಕುವ ಸಂಭ್ರಮದಲ್ಲಿ ಅವರಿಗೆ ಸಲಾಂ ಹಾಕಲಿಲ್ಲ. ಕಾಯಿ ಮುಗಿದ ಕಂತೆಯನ್ನು ಕೆಳಕ್ಕೆ ಹಾಕಿದ, ಕುದುರೆಯು ಅಭ್ಯಾಸ ಬಲದಿಂದ ಸರಕ್ಕನೆ ತಲೆಬಾಗಿ ಆ ಹಸುರನ್ನು ಕಚ್ಚಿತು. ಈ ಕ್ರಿಯಾಭ್ರಷ್ಟತನವನ್ನು ನೋಡಿ ಅಮಲ್ದಾರರಿಗೆ ಬಹಳ ಜಿಗುಪ್ಸೆಯಾಯಿತು. ಅವರು ಕರುಣರಸದಲ್ಲಿ ಮುಳುಗಿದ ಕೋಪ ಸ್ವರದಿಂದ 'ಅಯ್ಯೋ ಮುಂಡೇದೇ! ನಿನಗೆ ನಾನು

'ಬನ್ನಿ ಅಮಲ್ದಾರ್, ನಾಳೆ ಬೆಳಗ್ಗೆ ಏಳು ಗಂಟೆಗೆ ಸವಾರರಾಗಿ ಪಲಾನೆ Inspection ಗೆ ಹೋಗೋಣ.'

ಅಮಲ್ದಾರರು ಯತ್ನವಿಲ್ಲದೆ ಒಪ್ಪಿಕೊಂಡರು. 'ಬೀಸುವ ದೊಣ್ಣೆಗೆ ತಲೆ ತಪ್ಪಿಸಿಕೊಂಡದ್ದಾಯಿತು. ನಾಳಿನ ಮಾತು ನಾಳೆಗೆ. ಇಂದಿನ ತಾಪತ್ರಯ ಇಂದಿಗೆ ಸಾಕು.' ಮಾರನೆಯ ದಿನ ಅಮಲ್ದಾರರು ಇತರರಿಂದ ತಡೆಯಲಾಗದ ನೋವನ್ನು ಧೀರ ಸ್ವಭಾವದಿಂದ ನುಂಗಿಕೊಂಡಿರುವರಂತೆ ಸೊಟ್ಟ ಮೊಗವನ್ನು ಮಾಡಿಕೊಂಡು ಸಾಹೇಬರು ತಂಗಿದ್ದ ಮುಸಾಫರ್ ಬಂಗಲೆ ಬಳಿಗೆ ಹೋದರು. ಸಾಹೇಬರು ಸವಾರಿ ಪೋಷಾಕನ್ನು ಧರಿಸಿ ಈಚೆಗೆ ಬಂದು,

"ಹೊರಡೋಣವೋ? ಹತ್ತು ಮೈಲಿ ಮಾತ್ರ. ಒಂದು ತಾಸಿನಲ್ಲಿ ಹೋಗಬಹುದು. ಕುದುರೆ ಎಲ್ಲಿ?" ಅಂದರು.

ಅಮಲ್ದಾರರು,

"ತಮ್ಮ ಇನ್‌ಸ್ಪೆಕ್ಷನ್‌ಗೆ ತಕ್ಕ ಏರ್ಪಾಡನ್ನೆಲ್ಲಾ ಮಾಡಿದ್ದೇನೆ. ನನಗೆ ಮೈನಲ್ಲಿ ಹುಷಾರಿಲ್ಲ. ತಮ್ಮ ಅಪ್ಪಣೆಪಡೆದು ಇಲ್ಲೇ ನಿಲ್ಲುತ್ತೇನೆ" ಅಂದರು.

"ಓಹೋ, ಹಾಗೋ? ಬಹಳ Sorry! ಮೈನಲ್ಲಿ ಏನು?"

ಏನು ಹೇಳಬೇಕು? ಜ್ವರವೆಂದರೆ ಮೈ ಬೆಚ್ಚಗಿಲ್ಲ.

"ಬಹಳ ಹೊಟ್ಟೆ ನೋವು" ಎಂದರು.

ಸಾಹೇಬರು, ಹೊಟ್ಟೆನೋವನ್ನು ಉಪೇಕ್ಷೆ ಮಾಡಬಾರದು. ಬನ್ನಿ, ಎಂದು ಅಮಲ್ದಾರರ ಕೈಹಿಡಿದು ಹತ್ತಿರದಲ್ಲಿ ಇದ್ದ ಆಸ್ಪತ್ರೆಗೆ ಕರೆದುಕೊಂಡು — ಸೆಳೆದುಕೊಂಡೆಂದು ಹೇಳಿದರೂ ತಪ್ಪಲ್ಲ — ಹೋಗಿ,

"ಎಲ್ಲಿ ಡಾಕ್ಟರ್ ಒಂದು Ounce ಹರಳೆಣ್ಣೆ ಕೊಡಿ. ಇದೋ ಇದನ್ನು ಕುಡಿಯಿರಿ ಅಮಲ್ದಾರ್ರೆ,"

ಎಂದು ಭ್ರಾತೃಭಾವದಿಂದ ಅಮಲ್ದಾರರಿಗೆ ಅದನ್ನು ಕೊಟ್ಟರು. ಅಮಲ್ದಾರರು ಏನು ಹೇಳಿದರೂ ಕೇಳಲಿಲ್ಲ. 'ನಿಮ್ಮ ಜೀವ ಬಹಳ ಬೆಲೆಯುಳ್ಳದ್ದು' ಎಂದರು. ಬಲವಂತಮಾಡಿ ಪ್ರೀತಿಯುತ ಆಗ್ರಹದಿಂದ ಎಣ್ಣೆಯನ್ನೆಲ್ಲಾ ಕುಡಿಸಿದರು.

"ಇನ್ನೂ ಸ್ವಲ್ಪ ಬೇಕೇ? ಸಂಕೋಚ ಪಟ್ಟುಕೊಳ್ಳಬೇಡಿ. ಡಾಕ್ಟರ್, ಇನ್ನೊಂದು Ounce."

ಅಮಲ್ದಾರರು ಕುಡಿದಿರುವ dose ಬೇಕಾದಷ್ಟಾಯಿತು, ಇನ್ನು ಹೆಚ್ಚು ಬೇಕಾಗಿಲ್ಲವೆಂದೂ ತಮಗೆ ಸಂಪೂರ್ಣವಾಗಿ ತೃಪ್ತಿಯಾಯಿತೆಂದೂ ದೈನ್ಯ ಸ್ವರದಿಂದ ಬೇಡಿದರು.

ಸಾಹೇಬರು, "Enough is as good as a feast (ಹೊಟ್ಟೆ ತುಂಬುವುದೇ ಹಬ್ಬದ ಸಮಾನ). ಸರಿ, ಅಮಲ್ದಾರರೇ ಇನ್ನು ಮನೆಗೆ ಹೋಗಿ. ನಿಮ್ಮ ಔಷಧದ ಫಲವಾದ ಕೆಲಸನೇ ನಿಮಗೆ ಬೇಕಾದಷ್ಟು ಇರುತ್ತೆ. ಆದರೆ ಒಂದು ಮಾತು ಕೇಳಿ. ಕುದುರೆ ಸವಾರಿ ಬಾರದಿದ್ದರೆ ಅದೇ ಮಾತು ಹೇಳಿಬಿಡಬಹುದಲ್ಲ. ಹೊಟ್ಟೆನೋವೆಂದು ಯಾಕೆ ಹೇಳಬೇಕು? ಹರಳೆಣ್ಣೆ ಮೇಲೆ ನಿಮಗೆ ಬಹಳ ಇಷ್ಟವೆಂದು ಕಾಣುತ್ತೆ!"

ಎಂದು ನಕ್ಕು ಕುದುರೆಯಮೇಲೆ ಹೊರಟುಹೋದರು.

ನಾನು ಮೈಸೂರಿನಲ್ಲಿ ಪ್ರೊಬೇಷನರ್ ಆಗಿದ್ದಾಗಲೇ ನನಗೆ ಮೈಸೂರು ತಾಲ್ಲೂಕಿನಲ್ಲೂ, ಕೃಷ್ಣರಾಜಪೇಟೆ ತಾಲ್ಲೂಕಿನಲ್ಲೂ ಅಮಲ್ದಾರರಾಗಿ 'act' ಮಾಡುವ ಅವಕಾಶ ಸಿಕ್ಕಿತು. ಅದೇ ಕಾಲದಲ್ಲಿ ನನಗೆ ಮೂರನೆಯ ಕ್ಲಾಸು ಮ್ಯಾಜಿಸ್ಟ್ರೇಟ್ ಅಧಿಕಾರವೂ ಬಂತು.

ಮೈಸೂರು ತಾಲ್ಲೂಕ್ ಖಾಯಂ ಅಮಲ್ದಾರ್ ಸುಂದರರಾಜಯ್ಯಂಗಾರ್ ಎಂಬುವರು ಹದಿನೈದು ದಿನಗಳ ರಜಾವನ್ನು ಕೇಳಿದರು. ಆಗ ಡೆಪ್ಯುಟಿ ಕಮಿಷನರ್ ಆಗಿದ್ದವರು, (ಅಷ್ಟರಲ್ಲೇ ವೆಂಕಟವರದಯ್ಯಂಗಾರರು ಚೀಫ್ ಸೆಕ್ರೆಟರಿಯಾಗಿ ಬೆಂಗಳೂರಿಗೆ ಹೊರಟು ಹೋಗಿದ್ದರು) ತಮ್ಮ ಆಫೀಸಿನ ಖದೀಮ್ ಗುಮಾಸ್ತೆಯೊಬ್ಬನನ್ನು ಆ ಕೆಲಸದ ಬದಲಿಗೆ ಶಿಫಾರ್ಸು ಮಾಡಿದ್ದರು. ಅದು ನನಗೆ ತಿಳಿದಿತ್ತು. ಆ ತರದ ಹಂಗಾಮಿ ಸಂದರ್ಭಗಳು ಪ್ರೊಬೇಷನರ್‌ಗಳ ಹಕ್ಕುದಾರಿಯೆಂಬ ಭಾವನೆಯಿತ್ತಾದ್ದರಿಂದ ಡೆಪ್ಯುಟಿ ಕಮಿಷನರರ ಶಿಫಾರ್ಸಿನಿಂದ ನನಗೆ ಅಸಮಾಧಾನವಿತ್ತು. ಸರ್ಕಾರದವರು ಶಿಫಾರ್ಸಿಗೆ ಮನ್ನಣೆಕೊಡದೆ 'leave vacancy'ಗೆ ನನ್ನನ್ನೇ ನೇಮಿಸಿದರು. ಡೆಪ್ಯುಟಿ ಕಮಿಷನರ್

ಸಾಹೇಬರು ಈ ಸಂಗತಿಯನ್ನು ನನಗೆ ತಿಳಿಸುವಾಗ ಬಹಳ ಚಿಂತೆಪಡು ವರಂತೆ ಕೆನ್ನೆಯ ಮೇಲೆ ಬೆರಳನ್ನಿಟ್ಟು.

"ಏನರಿ, ನೀವು ಬಹಳ ಚಿಕ್ಕವರು, ಅನುಭವವಿಲ್ಲದವರು. ತಾಲ್ಲೂಕ್ ಛಾರ್ಜು ಅಂದರೆ ಬಹಳ ಜವಾಬ್ದಾರಿ ಕೆಲಸ, ಪ್ರಪಂಚ ಜ್ಞಾನ ಚೆನ್ನಾಗಿರಬೇಕು. ಆ ಕೆಲಸವನ್ನು ನಿಭಾಯಿಸುವ ಧೈರ್ಯ ವಿದೆಯೇ ನಿಮಗೆ?" ಎಂದು ಕೇಳಿದರು.

ನನಗೆ ಕೋಪ ಬಂತು, ಸುಮ್ಮನಿದ್ದೆ. ಪುನಃ ಕೇಳಿದರು.

"ಏನ್ರಿ? ಇನ್ನೂ ಕೆಲವು ಕಾಲ ಟ್ರೈನಿಂಗ್‌ನಲ್ಲೇ ಇರಲು ಇಷ್ಟ ಪಡುತ್ತೀರೆಂದು ಬರೆದು ಹಾಕಲೋ?"

ನನಗೆ ಆಗುತ್ತಿದ್ದ ಟ್ರೈನಿಂಗ್ ಸಾಹೇಬರ ಕ್ರಿಮಿನಲ್ ಅಪೀಲು ಜಡ್ಜ್‌ಮೆಂಟ್‌ಗಳನ್ನೂ ತೊಡಕಾದ ಕಾಗದ ಪತ್ರಗಳ ಮೇಲಿನ ತೀರ್ಮಾನ ಗಳನ್ನೂ ಸೂಚಿಸುತ್ತಿದ್ದದ್ದು. ನಿರ್ವಾಹವಿಲ್ಲದೆ ಹೇಳಿದೆ—

"ಸ್ವಾಮಿ ಎಂಥೆಂಥವರೋ ಡಿಸ್ಟ್ರಿಕ್ಟುಗಳನ್ನೇ ಆಳುತ್ತಾರೆ. ನಾನು ಹಂಗಾಮಿಯಾಗಿ ತಾಲ್ಲೂಕ್ ಛಾರ್ಜಿನಲ್ಲಿರಲಾರೆನೇ? ಕೆಲಸ ಬಾರದವರಿಗೆ ಬುದ್ಧಿಯಿಲ್ಲದವರಿಗೆ ಅಮಲ್ದಾರಿ ಕಷ್ಟವಿರಬಹುದು. ತಮ್ಮಂಥವರಲ್ಲಿ ತರಬೇತಾದ ನನಗೆ ಬಹು ಸುಲಭವಾಗಿ ಕಾಣುತ್ತಿದೆ."

ಅವರ ಮೇಲೆ ಈ ಮಾತಿನ ಪರಿಣಾಮವೇನಾದೀತೆಂಬ ಶಂಕೆ ಯೇನಾದರೂ ಇದ್ದರೆ ಅವರ ಮುಖದ ಪ್ರಸನ್ನತೆಯಿಂದ ಅದು ಮಾಯ ವಾಯ್ತು.

ಫಕ್ಕನೆ ನಕ್ಕು,

"ನೀವು ಹೇಳುವ ಮಾತು ಸರಿ. ನಾನೂ ಅಂಥ ಡೆಪ್ಯುಟಿ ಕಮಿ ಷನರನ್ನು ನೋಡಿದ್ದೇನೆ. ನಿಮ್ಮ ವಿಚಾರ ನನಗೆ 'doubts' ಯಾಕೆ? B.A, B L, Civil Service ಮಾಡಿದ್ದೀರಿ. ಇಲ್ಲಿಯೂ ಎಲ್ಲಾ branch ಗಳಲ್ಲೂ ಕೆಲಸ ಮಾಡಿದ್ದೀರಿ. ದೇವರು ಒಳ್ಳೆ brains ಧಾಷ್ಟಿಕ ತನ ಎರಡನ್ನೂ ಕೊಟ್ಟಿದ್ದಾನೆ. ಬೇಕಾದ ಕೆಲಸ ಮಾಡುತ್ತೀರಿ. ಏನಾದರೂ 'doubts' ಬಂದರೆ ನನ್ನಲ್ಲಾಗಲೀ, ಕೃಷ್ಣರಾಯರಲ್ಲಾಗಲೀ instruction ಪಡೆಯಿರಿ" ಎಂದು ಬೀಳ್ಕೊಟ್ಟರು. ಮಂದ ಬುದ್ಧಿ

ಯವರಿಗೆ ಮುಂದವಾದ ಆತ್ಮಪ್ರತಿಷ್ಠೆಯ ಕವಚವನ್ನು ಕೊಟ್ಟಿರುವುದು ಬ್ರಹ್ಮನ ಕರುಣವನ್ನು ತೋರಿಸುವುದಿಲ್ಲವೇ?

ಶ್ರೀ ಕೃಷ್ಣರಾಯರೆಂಬುವರು ಬಹಳ ಸರ್ವೀಸುದಾರರು. ಅಸಿಸ್ಟೆಂಟ್ ಕಮಿಷನರ್ ಖಜಾನೆ ಛಾರ್ಜಿನಲ್ಲಿದ್ದು ಡೆಪ್ಯುಟಿ ಕಮಿಷನ್ನರ ಪರ್ಸನಲ್ ಅಸಿಸ್ಟೆಂಟ್ ಮತ್ತು 'First Class Magistrate' ಆಗಿದ್ದರು. ಅವರಿಗೆ ರಿಟೈರ್ ಆಗುವ ಕಾಲ ಸಮೀಪಿಸಿತ್ತು. Extension ಗೆ ಅರ್ಹತೆಯನ್ನು ಹೂಡುವುದಕ್ಕಾಗಿ ಜರೆಯೊಂದಿಗೆ ಧೀರವಾದ ಯುದ್ಧ ಕಾಯುತ್ತಿದ್ದರು. ಹುಟ್ಟು ಹಲ್ಲಿನ ಬದಲಾಗಿ ಕಟ್ಟು ಹಲ್ಲು, ಪಲಿತ ಕೇಶಗಳಿಗೆ ಮಿಣಗುಟ್ಟುವ ಕರಿರಂಗು, ಇತ್ಯಾದಿ, ಇತ್ಯಾದಿ. ಬಹಳ ಒಳ್ಳೆಯ ಮನುಷ್ಯರು. ಕೆಳಗಿನ ದರ್ಜೆಗಳಿಂದ ಅಮಲ್ದಾರಿಗೆ ಏರಿ, ಆ ಪದವಿಯಲ್ಲಿ ಹತ್ತು, ಹದಿನೈದು ವರ್ಷಗಳು ಪಳಗಿ ಅಸಿಸ್ಟೆಂಟ್ ಕಮಿಷನರ್ ಹುದ್ದೆಗೆ ಬಂದವರು. ನಾನು ನೌಕರಿಗೆ ಸೇರಿದ ಕೆಲವು ದಿನಗಳಲ್ಲೇ ಕ್ರಿಮಿನಲ್ ವಿಚಾರಣೆಯನ್ನು ಕಲಿಯುವುದಕ್ಕಾಗಿ ಡೆಪ್ಯುಟಿ ಕಮಿಷನರ ಆಜ್ಞೆಯಂತೆ ಇವರ ಕೋರ್ಟಿಗೆ ಹೋಗಿದ್ದೆ. ನಾನು ಹೇಳಿರುವಂತೆ ಅಡ್ವೋಕೇಟ್ ರಾಮಣ್ಣನವರೇ ಯಾವುದೋ ಒಂದು ಮೊಖದ್ದಮೆಯಲ್ಲಿ ಯಾರನ್ನೋ ಚಡಾವಿನಿಂದ ಹೊಡೆದನೆಂಬ ಆಪಾದನೆಗೆ ಗುರಿಯಾದ ಒಬ್ಬ ಮುಸಲ್ಮಾನನ ಪರ ಹಾಜರಿದ್ದರು.

"Your honour, my client is a Mahomedan The Mahomedans were great rulers Mahomed of Ghazni invaded India twelve times" ಹೀಗೆಂದು ವಾದಿಸುತ್ತಿದ್ದರು.

"Never mind Mahomed of Ghazni Mr. Ramanna. ಆ ಪುರಾಣವೆಲ್ಲಾ ಯಾಕೆ? Come to the point"

"Come to the point? If I come to the point at once the case will lose its jarb and jabbardast"

"ಜರ್ಬು ಜಬರ್ದಸ್ತು ಹಾಗಿರಲಿ ರಾಮಣ್ಣೋರೆ. ನನ್ನ time ನ್ನು waste ಮಾಡಬೇಡಿ. ಇನ್ನೂ ಬಹಳ work ಇದೆ. Point ಗೆ ಬರುತ್ತೀರೋ ಇಲ್ಲವೇ ಇನ್ನೇನೂ ನೀವು ಹೇಳತಕ್ಕದ್ದು ಇಲ್ಲವೆಂದು case ನ್ನು close ಮಾಡಲೋ?" ಅಂದರು ಮ್ಯಾಜಿಸ್ಟ್ರೇಟರು.

"ಹಾಗಾದರೆ ಸರಿ your honour, case ನ್ನು close ಮಾಡಿ. ಈ ಕೋರ್ಟಿನಲ್ಲಿ ಯಾವಾಗಲೂ 'failure of justice' ಸೇ."

ಮ್ಯಾಜಿಸ್ಟ್ರೇಟರು ಕೂಡಲೇ ರಾಮಣ್ಣನವರನ್ನು contempt ಗೋಸ್ಕರ ತರಾಟಿಗೆ ತೆಗೆದುಕೊಳ್ಳುತ್ತಾರೆಂದು ತಿಳಿದಿದ್ದೆ. ಖಂಡಿತವಾಗಿ ಎದುರು ನೋಡುತ್ತಿದ್ದೆ. ಮ್ಯಾಜಿಸ್ಟ್ರೇಟರು ಅಡ್ವೋಕೇಟರ ಕಡೆ ಗುರು ಗುರನೆ ನೋಡಿ, "ಸಾಕು ರಾಮಣ್ಣನವರೆ ನಿಮ್ಮ ಮುಖವಾಣಿ ಅಪಾನ ವಾಣಿ ಎರಡೂ ಒಂದೇ ಅಂತ ಕಾಣುತ್ತೆ. ಅದರಲ್ಲಿ ಪರಿಮಳವನ್ನು ಯಾರು ನಿರೀಕ್ಷಿಸುತ್ತಾರೆ" ಎಂದರು

ನನಗೆ ಮೈಸೂರ್ ತಾಲ್ಲೂಕಿನ ಛಾರ್ಜನ್ನು ಕೊಟ್ಟ ಅಮಲ್ದಾರರು ಖದೀಮರು. ಬಹಳ ಶಕ್ತರೆಂದು ಹೆಸರು ಪಡೆದವರು

ಛಾರ್ಜನ್ನು ತೆಗೆದುಕೊಂಡ ಕೂಡಲೇ ನನ್ನ ವಶಕ್ಕೆ ಸಂಪೂರ್ಣ ವಾಗಿ ಬಂದದ್ದು ಕಹಳೆ (ಕೊಂಬಿನವನು) ಮಾತ್ರವೇ. 'Important' ಕಾಗದಗಳನ್ನು ತಾವು ರಜದಿಂದ ವಾಪಸ್ ಬರುವವರೆಗೂ ಅಮಾನತ್ತಿ ನಲ್ಲಿಡುವಂತೆ ಆಫೀಸಿಗೆ ಹೇಳಿದ್ದರಂತೆ. ಛಾರ್ಜ್ ತೆಗೆದುಕೊಂಡ ಕೂಡಲೇ—ಶಂಖಂ ದಧ್ಮೌ ಪ್ರತಾಪವಾನ್. ಸುಂದರರಾಜಯ್ಯಂಗಾರರು ಛಾರ್ಜು ಕೊಟ್ಟು ಈಚೆಗೆ ಬಂದಕೂಡಲೇ ಎರಡು ಕೊಂಬುಗಳೂ ಏಕಕಾಲದಲ್ಲಿ ಅರಚಿದವು. ನಾನು ಕಛೇರಿಯಿಂದ ಮನೆಗೆ ಹೊರಡು ವಾಗ ಕೊಂಬು. ನಾನು ಮನೆಗೆ ಕುದುರೆಯ ಮೇಲೆ 'Trot' ಮಾಡಿ ಕೊಂಡು ಹೋದೆ. ಸಾಧ್ಯವಾದಷ್ಟು ದೂರ ಕೊಂಬಿನವನು ಓಡುತ್ತಾ ಬಂದ. ಅವನನ್ನು ಹಿಂದೆಬಿಟ್ಟು ದೌಡಾಯಿಸಿಕೊಂಡು ಮನೆಗೆ ಸೇರಿದೆ. ನಾನು ಸೇರಿದ ಪಾವು ಗಂಟೆಯೊಳಗಾಗಿ ತನ್ನ ಹಾಜರಿಯನ್ನು ವಾದ್ಯದ ಮೂಲಕ ತೋರಿಸಿ, ಕಹಳೆ ನಾದದಿಂದ ಮನೆಯ ಮಕ್ಕಳಿಗೆ ಆನಂದ ಪಡಿಸಿ ಹೋದ. ದಿನವಹಿ ಪ್ರಭಾತದವೇಳೆಗೆ ಕೋಳಿಯಾದರೂ ಕೂಗದಿರ ಬಹುದು; ಈ ಕೊಂಬಿನ ಸೇವೆ ಸೂರ್ಯನಾರಾಯಣನಿಗೂ ಸುಬೇದಾರ ರಿಗೂ ತಪ್ಪದು. ನಾನು ಅಮಲ್ದಾರಿ ಕೆಲಸದಲ್ಲಿದ್ದ ಐದು ವರ್ಷ ಕಾಲವೂ ಈ ಕಹಳೆ ಬಿರುದಿನ ಸಂಪತ್ತನ್ನು ಅನುಭವಿಸಿದೆ. ನಮ್ಮ ಮನೆ ಹುಡುಗ ರಿಗೂ ನಮ್ಮ ಕೇರಿ ಹುಡುಗರಿಗೂ ಕಹಳೆಯವನೆಂದರೆ ಬಹಳ ಪ್ರೇಮ.

ಕಹಳೆಯ ಘೋಷವೆಂದರೆ ಹಬ್ಬ. ಅವನು ನನ್ನ ಮಕ್ಕಳೆದುರಿಗೆ ಕಹಳೆಯೂದಿ ಕೈಮುಗಿದರೆ ಅವರ ಪೆಪ್ಪರಮೆಂಟಗಾಗಿ ಮಾಸಲಿಟ್ಟದ್ದ ಪುಡಿಕಾಸುಗಳೆಲ್ಲಾ ಅವನ ಪಾಲಾಗುತ್ತಿದ್ದವು. ಗತಕಾಲದ ನೆನಪುಗಳಲ್ಲಿ ಈ ಕಹಳೆಯವನ ನೆನಪಿಗಿಂತಲೂ ಸ್ಪಷ್ಟವಾದವು ವಿರಳ. ಈಗ ಕಹಳೆಯವನು ಕೀರ್ತಿಶೇಷನಾದನು. ಕಹಳೆಯೂ ವಿರತವಾಯಿತು. ಒಂದೊಂದು ವೇಳೆ ಈಗಿನ ಸ್ವಪ್ನಗಳಲ್ಲಿ ಆ ವಾದ್ಯವನ್ನು ಕೇಳುತ್ತೇನೆ. ಅದರ ನಾದದವರವಕ್ಕೆ ಐವತ್ತು ವರ್ಷಗಳ ದಟ್ಟಮೇಘಗಳು ಒಕ್ಕಡೆಗೆ ಓರೆಯಾಗಿ ಪ್ರಾಯದ ಪ್ರಪಂಚದ ಎಳೆಬಿಸಿಲಿನ ಬೆಳಗು ಜೀವನದ ಮೇಲೆ ಪುನಃ ಒಂದು ಕ್ಷಣ ಹೊಳೆಯುತ್ತದೆ.

ಆಗಿನ ಕಾಲದ ಆಡಳಿತದಲ್ಲಿ ಕಹಳೆಯ ಪ್ರಯೋಜನ ಬಹಳವಾಗಿತ್ತು. ಅಮಲ್ದಾರರು ಯಾವದಾದರೂ ಗ್ರಾಮಕ್ಕೆ ಹೋದರೆ ಗ್ರಾಮಸ್ಥರಿಗೆಲ್ಲಾ, ಸರ್ಕಾರದ ಪ್ರತಿನಿಧಿಗಳು ಹಳ್ಳಿಗೆ ಬರುತ್ತಾರೆ, ಅವರನ್ನು ಎದುರುಗೊಂಡು ಕುಂದುಕೊರತೆಗಳನ್ನು ಅಹವಾಲಿಸಿಕೊಳ್ಳಬಹುದು, ಎಂದು ಕಹಳೆ ಕೂಗುತ್ತಿತ್ತು. ಕಛೇರಿಗೆ ಹೋದರೆ, ಇವತ್ತಿನ ಸರಕಾರಿ ಕೆಲಸ ಬಹಿರಂಗವಾಗಿ ಪ್ರಾರಂಭವಾಯಿತು, ಬೇಕಾದವರು ಅರ್ಜಿಗಳನ್ನೂ ಅಹವಾಲುಗಳನ್ನೂ ಗುಜರಾಯಿಸಿಕೊಳ್ಳಬಹುದು, ಎಂದು ಹೇಳುತ್ತಿತ್ತು. ಕೆಲಸ ಮುಗಿದಮೇಲೆ, ಇವತ್ತಿನ ಮಾಮೂಲು ಕಛೇರಿ ಕೆಲಸ ಖೈದು, ಎಂದು ಜಾಹೀರಾತು ಕೊಡುತ್ತಿತ್ತು.

ಕಹಳೆಯವನಿಗೆ ಕೆಲವು ಮಾಮೂಲ್ ಮರ್ಯಾದೆಗಳುಂಟು. ಯಾವುದಾದರೂ ಗ್ರಾಮದಲ್ಲಿ ಫಡಕಾನೆಯಿದ್ದರೆ ಅಲ್ಲಿಯ ದೂಕಾನ್‌ದಾರನು ಕಹಳೆಯವನಿಗೆ ಅವನ ಕಹಳೆಯ ಭರ್ತಿ ಹೆಂಡವನ್ನು ಮುಫತ್ತಾಗಿ ಕೊಡಬೇಕು. ಆ ಹೆಂಡಕ್ಕೆ ಒಂದು ಕಹಳೆ ಕೂಗು ಪ್ರತಿಫಲ. ಈ ಮಾಮೂಲ್ ಸಲುವಾಗಿ ಕಹಳೆಯವರು ಹಿತ್ತಾಳೆ ಕೊಂಬಿಗೆ ಒಳಗಡೆ ತವರದಿಂದ ಕಲಾಯಮಾಡಿಸಿಕೊಂಡಿರುತ್ತಿದ್ದರು. ಅಂಗಡಿಯೆದುರಿಗೆ ಬಂದು ಕೊಂಬಿನ ಘರ್ಜನೆ ಹೊಡೆದು ಕೈಮುಗಿದು ಕೊಂಬಿನ ಊದುವ ಕಡೆಗೆ ಅಂಗೈಯೊತ್ತಿ ಅದರ ಬಾಯಿಯನ್ನು ಅಂಗಡಿ ಬಿಕ್ರಿದಾರನಿಗೆ ಒಡ್ಡುವರು. ಕೊಂಬು ಭರ್ತಿ ಹೆಂಡ ಕೊಡಬೇಕು. ಕೊಂಬಿನವನಿಗೆ

ಅವನ ಕೋಮಿನವರಿದ್ದ ಗ್ರಾಮಗಳಲ್ಲಿ ಇನ್ನೂ ಕೆಲವು ವಿಶೇಷ ಹಕ್ಕು ಗಳುಂಟಂತೆ. ಅವುಗಳ ಸೂತ್ರ 'ಕೋಮು ಯಜಮಾನನ ಮನೆ ಮುದ್ದೆ, ಬಸವಿ ಮನೆ ನಿದ್ದೆ.'

ನಾನು ನೋಡಿದ ಪ್ರತಿ ತಾಲ್ಲೂಕಿನಲ್ಲೂ ಕೊಂಬಿನವನಿಗೆ ಹುಟ್ಟು ಹೆಸರು ಏನಾದರೂ ಇರಲಿ, ಕಸಬಿನ ಹೆಸರು ಒಂದೇ ಇರುತ್ತಿತ್ತು. ಎಡತೊರೆ (ಈಗ ಕೃಷ್ಣರಾಜ ನಗರ) ತಾಲ್ಲೂಕಿನಲ್ಲಿ ಇಬ್ಬರು ಕಹಳೆ ಯುವರು, ದೊಡ್ಡ ಯಾಲಕ್ಕಿ, ಚಿಕ್ಕ ಯಾಲಕ್ಕಿ. ಅವರ ಹಿಂದೆ ಅವರ ತಂದೆಯವರಿದ್ದರು. ಅವರೂ ದೊಡ್ಡ ಯಾಲಕ್ಕಿ ಚಿಕ್ಕ ಯಾಲಕ್ಕಿ. ಅವರುಗಳ ಹಿಂದಲವರೂ ಯಾಲಕ್ಕಿಗಳೇ. ಹಾಗೇ ತಿರಮಕೂಡಲ ನರಸೀಪುರದಲ್ಲಿ ದೊಡ್ಡ ಬೆಟ್ಟ ಚಿಕ್ಕ ಬೆಟ್ಟ ಪರಂಪರೆಗಳು, ಅಮಲ್ದಾರ್ ಪರಂಪರೆಗಳ ಬರವು, ಹೋಗು, ಇರುವಿಕೆಗಳನ್ನು ಮಹಾರಾಜರ ಪ್ರಜೆ ಗಳಿಗೆ ಪ್ರಚಾರ ಗೊಳಿಸುತ್ತಿದ್ದರು.

ನನಗೆ ಕಹಳೆಯದು ಒಂದು ವ್ಯಂಗ್ಯವಾದ ಕಥೆ ಜ್ಞಾಪಕಕ್ಕೆ ಬರು ತ್ತದೆ. ಅಮಲ್ದಾರರು ಐದುದಿನಗಳ Casual ರಜಾ ತೆಗೆದುಕೊಂಡು ಶಿರಸ್ತೇದಾರರು ತಾಲ್ಲೂಕಿನ ಛಾರ್ಜಿನಲ್ಲಿದ್ದರು. ಈ ಶಿರಸ್ತೇದಾರರಿಗೆ ಅಮಲ್ದಾರರು ತಮಗೆ ಉಚಿತವಾದ ಮರ್ಯಾದೆಯನ್ನು ಕೊಡುತ್ತಿಲ್ಲ ವೆಂಬ ಒಳಸಂಕಟ ಬಹಳ ದಿನಗಳಿಂದ ಇತ್ತು. ತಾಲ್ಲೂಕ್ ಛಾರ್ಜನ್ನು ವಹಿಸಿದ ಕೂಡಲೇ ಅಮಲ್ದಾರೀ ಅಧಿಕಾರವನ್ನು ಸಂಪೂರ್ಣವಾಗಿ ಚಲಾಯಿಸಲು ನಿಶ್ಚಯಿಸಿ ಮೊದಲು ಕಹಳೆಯವನ ಸೇವೆಯನ್ನು ಬಲ ವಾಗಿ ಹಿಡಿದರು. ಅವನಿಗೆ ಮೊದಲನೆಯ ದಿನ ಖಾಯಂ ಅಮಲ್ದಾರರ ಮನೆಯ ಹತ್ತಿರ ಬರಲಿಕ್ಕೆ ಪುರಸತ್ತಾಗಲಿಲ್ಲ. ಅಮಲ್‌ದಾರರು ಕೋಪ ಮಾಡಿಯಾರೆಂದು ಮಾರನೆಯ ಬೆಳಗ್ಗೆ ಅಷ್ಟು ಹೊತ್ತಿಗೇ ಅವರ ಬಾಗಿಲಿಗೆ ಹೋಗಿ "ಮಹಾಸ್ವಾಮಿ ಶಿರಸ್ತೇದಾರ್ರ ಹಾಜರಾತಿಯಲ್ಲೇ ಇದ್ದೆ" ಎಂದು ಅಡ್ಡಬಿದ್ದ. ಅಮಲ್ದಾರರು, ನಕ್ಕು "ಸರಿಕಣೋ ನಾನು ರಜಾದಮೇಲೆ ಇರುವುದರಿಂದ ಅವರೇ ಧಣಿಗಳು. ಅವರ ತೈನಾತೀಲೇ ಇರಬೇಕು. ನಮ್ಮ ಮನೆಯತಾವು ಬರಬೇಕಾದ್ದಿಲ್ಲ. ಅವರು ಎದ್ದರೆ ಕೂತರೆ ಮಿಸಾಯೋಕೆ ಹೋದರೆ ಕೊನೆಗೆ ಒಂದಕ್ಕೆ

ಹೋದರೆ ಕಹಳೆ ಸಲಾಮತ್ತು ಮಾಡಬೇಕು. ಇಲ್ಲವಾದರೆ ನಿನ್ನ ಕೆಲಸದ ಬಾಯಲ್ಲಿ ಮಣ್ಣು'' ಅಂದರು. ಕೊಂಬಿನವನು ಜಾಣ, ''ಅಪ್ಪಣೆ, ಬುದ್ದಿ, ಮಗ ಸರಿಯಾಗಿ ನಡೆದುಕೊಳ್ತೇನಿ,'' ಎಂದು ಭರವಸೆ ಕೊಟ್ಟು ಹೋದ. ಮಾರನೆಯ ದಿನ ಮಹತ್ತರವಾದ ಕಹಳೆ ವಾದ್ಯ ಸಮೇತರಾಗಿ ಶಿರಸ್ತೇದಾರರು ಅಮಲ್ದಾರರ ಮನೆಗೆ ಬಂದರು. ಮೊಗವೆಲ್ಲಾ ಕೋಪದಿಂದ ಕೆಂಪೇರಿತ್ತು. ಅಮಲ್ದಾರರು, ''ದಯಮಾಡಿ, ಇನ್‌ಛಾರ್ಜ್ ಅಮಲದಾರ್ರೇ. ಏನು, ಪುರಸತ್ತಾಗಿ ಬಂದಿರಲ್ಲ,'' ಎಂದರು.

''ಈ ಕಹಳೆಯವನು ನನಗೆ ಚಿತ್ರಹಿಂಸೆ ಮಾಡುತ್ತಿದ್ದಾನೆ. ಬೆಳಿಗ್ಗೆ ಬಹಿರ್ಭೂಮಿಗೆ ಹೋದರೆ ಊದುತ್ತಾನೆ. ಹೊಳೆಗೆ ಸ್ನಾನಕ್ಕೆ ಹೋದರೆ ಕೂಗು. ಒಂದಕ್ಕೆ ಹೋದರೆ ಕೂಗು. ಎರಡಕ್ಕೆ ಎದ್ದರೆ ಆವಾಜು. ನಾನು 'ಯಾಕೋ ಹೀಗೆ ಕಾಡಿಸುತ್ತೀ ನಿಲ್ಲಿಸೋ ಸಾಕು,' ಎಂದರೆ, 'ಯಜಮಾನರ ಅಪ್ಪಣೆಯಾಗಿದೆ,' ಎಂದು ಹೇಳುತ್ತಾನೆ. ನನಗೆ ಇವನ ನಡವಳಿಕೆಯಿಂದ ನಗೆಗೇಡು, ಮಾನಭಂಗ. ಇದು ತಮ್ಮ ಉದ್ದೇಶ ವಿರಲಾರದು,'' ಎಂದು ಶಿರಸ್ತೇದಾರರು ಮೊರೆಯಿಟ್ಟರು.

ಅಮಲ್ದಾರರು, ''ಇದೆಲ್ಲಾ ಪದವಿಯ ಯಾತನೆಗಳು ನೋಡಿ. ಅಮಲ್ದಾರಿ ಸಾಮಾನ್ಯವಲ್ಲ. ಕೊಂಬಿನ ಕೂಗು ಕರ್ಣಕಠೋರ. ಎಲೋ, ಯಾಲಕ್ಕಿ, ಯಾಕೋ ಹಾಗೆ ಹಿಂಸೆ ಮಾಡುತ್ತಿ? ಅವರು ಒಂದಕ್ಕೆ ಹೋಗೋದು ಎರಡಕ್ಕೆ ಹೋಗೋದು ಎಲ್ಲಾ ಜನಗಳಿಗೆ ತಿಳಿಯ ಬೇಕೇನೊ? ಅವರು ಕಛೇರಿಗೆ ಹೋಗೋದು, ಕಛೇರಿ ಬರಕಾಸ್ತಾಗುವುದು, ತಿಳಿದರೆ ಸಾಕು ಕಣೋ,'' ಎಂದರು.

''ಅಪ್ಪಣೆ, ಬುದ್ಧಿ,'' ಎಂದು ಅಡ್ಡಬಿದ್ದು ಹೋದ.

ನಾನು ಚಿಕ್ಕವನಾಗಿದ್ದಾಗ ನಮ್ಮ ಊರಾದ ದೇವನಹಳ್ಳಿಯಲ್ಲಿ ಒಬ್ಬ ದರ್ಪವಂತರಾದ ಅಮಲ್ದಾರರು — ಅವರ ಹೆಸರು ಶ್ರೀನಿವಾಸ ರಾಯರೆಂದು — ಇದ್ದರು. ಅವರು ಪೇಟೆ ಬೀದಿಯ ಮಾರ್ಗವಾಗಿ ಕಛೇರಿಗೆ ಹೋಗುವ ವಾಡಿಕೆ. ಅವರ ಮನೆ ಕೋಟೆಯಲ್ಲಿ. ಅವರು ಕೋಟೆಯಿಂದ ಹೊರಟಾಗ ಕಹಳೆ; ಪೇಟೆಗೆ ಪ್ರವೇಶಮಾಡಿದಾಗ— ಕಹಳೆ; ಪೇಟೆಯನ್ನು ದಾಟಿ ಹೊರಮೂಡಿದಾಗ ಪುನಃ ಕಹಳೆ. ಪೇಟೆಯ

ಬಾಗಿಲಲ್ಲಿ ಕಹಳೆಯ ಕೂಗು ಕೇಳಿದ ಕೂಡಲೆ ಅಂಗಡಿಯವರು ತಮ್ಮ ತಮ್ಮ ಅಂಗಡಿಯ ಮುಂದೆ ಎದ್ದು ನಿಂತು ಅಮಲ್ದಾರರು ಬರುವುದನ್ನು ಎದುರು ನೋಡುವರು. ಅಮಲ್ದಾರರು ಒಂದೊಂದು ವೇಳೆ ಕುದುರೆಯ ಮೇಲೆ ಕುಳಿತು, ತಾವೇ ಬಲಗೈಯಲ್ಲಿ ಕೊಡೆಯನ್ನು ಹಿಡಿದು ಬರುವರು. ಒಂದೊಂದು ವೇಳೆ ದಫೇದಾರ ಹಿಡಿದಿದ್ದ ಕೊಡೆಯ ನೆರಳಿನಲ್ಲಿ ಗಂಭೀರ ವಾದ ಮಂದಗಮನದಿಂದ ಪಾದಚಾರಿಯಾಗಿ ಬರುವರು. ಹ್ಯಾಗೇ ಬರಲಿ ಅದು ಮೆರವಣಿಗೆ. ಮುಂದೆ ಇಬ್ಬರು ಪೋಲೀಸಿನವರು, ನಾಲ್ಕು ಜನ ಬಿಲ್ಲೆ ಜವಾನರು. ಪೂರ್ವದಲ್ಲಿ ಹಗಲು ದೀವಟಿಗೆಯೂ ಇರುತ್ತಿ ತ್ತಂತೆ. ಅದನ್ನು ನಾನು ನೋಡಿಲ್ಲ. ಯಾರೋ ಬುದ್ಧಿ ಶಾಲಿಯಾದ ಸುಬೇದಾರರು ದೀವಟಗೆ ಇಲ್ಲದೆಯೇ ಹಗಲನ್ನು ನೋಡಬಹುದೆಂದು ಕಂಡುಹಿಡಿದ ಮೇಲೆ ಈ ಪದ್ಧತಿ ನಿಂತಿರಬೇಕು.

ಸರಿ, ನಮ್ಮ ಅಮಲ್ದಾರರ ಮೆರವಣಿಗೆ ಅಂಗಡಿ ಬೀದಿಯಲ್ಲಿ ಸಾಗುತ್ತಿರುವಾಗ ಪ್ರತಿಯೊಬ್ಬ ಅಂಗಡಿಯವನೂ ಅವರಿಗೆ ಕೈಮುಗಿಯುವ ಪದ್ಧತಿ. (ಈ ಪದ್ಧತಿ ನಾನು ಅಮಲ್ದಾರನಾದಾಗಲೂ ಇತ್ತು. ಯಾರಾ ದರೂ ಕಂತಿಳಿವಳಿಕಸ್ಥರು ಅಥವಾ ಪರಸ್ಥಳದವರಾದ್ದರಿಂದ ಸ್ಥಳ ಮರ್ಯಾದೆಯನ್ನು ಅರಿಯದವರು ಎದ್ದು ನಿಲ್ಲದಿದ್ದರೆ ಅಮಲ್ದಾರ ಪರಿವಾರದವರು ಅವರನ್ನು ಏಳಬೇಕೆಂದು ಇಷಾರೆ ಮಾಡುತ್ತಿದ್ದರು.)

ಹೀಗಿರುವಲ್ಲಿ ಬೆಂಗಳೂರು ಮದರಾಸುಗಳನ್ನು ಕಂಡು ಬಹಳ ಹಣ ವನ್ನೂ ಗಳಿಸಿ ಹೊಸ ಭಾಗ್ಯದಿಂದ ಸ್ವಲ್ಪ ದೃಪ್ತರಾದ ಒಬ್ಬ ವರ್ತಕರು ದೇವನಹಳ್ಳಿಯಲ್ಲಿ ಒಂದು ವ್ಯಾಪಾರವನ್ನು ಹೂಡಿದರು. ಯಾವ ಕಾರಣ ದಿಂದಲೋ ಅವರಿಗೆ ಅಮಲ್ದಾರರ ಮೇಲೆ ದ್ವೇಷವುಂಟಾಯಿತು. ಅಮಲ್ದಾರರಿಗೆ ಅವಮಾನಮಾಡಬೇಕು, ಅವರನ್ನು ಯಾವರೀತಿಯಲ್ಲಾ ದರೂ ಲಾಘವಕ್ಕೆ ತಂದು ಅವರಿಗೆ ಕೋಪ ಬರಿಸಬೇಕು, ಎಂದು ಸಂಕಲ್ಪಮಾಡಿದರೆಂದು ತೋರುತ್ತೆ. ಮೊದಲು, ಅಮಲ್ದಾರರ ಸವಾರಿ ಬಂದಾಗ ಎಲ್ಲರೂ ನಿಂತಂತೆ ಇವರು ನಿಲ್ಲದೆ ಇನ್ನಿಷ್ಟು ಎಲ್ಲರೂ ನೋಡು ವಂತೆ ಕಾಲನ್ನು ಚಾಚಿಕೊಂಡು ಕುಳಿತುಕೊಳ್ಳುವುದನ್ನು ಮೊದಲು ಮಾಡಿದರು. ಜನಗಳು 'ಯಾಕೆಸ್ವಾಮಿ ಹೀಗೆ ಮಾಡುತ್ತೀರಿ' ಎಂದ

ದ್ದಕ್ಕೆ, 'ನನ್ನ ಲೋಡು, ನನ್ನ ದಿಂಬು, ನನ್ನ ಕಾಲು' ಎಂದರಂತೆ. ಇದು ಅಮಲ್ದಾರರಿಗೆ ತಿಳಿದಾಗ ಅವರು ನಕ್ಕು ಸುಮ್ಮನಾದರು. ಕೆಲವು ದಿನಗಳ ನಂತರ ಸಾಹುಕಾರರಿಗೆ ಒಂದು ಉಜ್ವಲವಾದ ಯೋಚನೆ ಹೊಳೆಯಿತು. ಒಬ್ಬ ಕಹಳೆಯುವವನನ್ನು ತಮ್ಮ ಸ್ವಂತ ಸೇವೆಗೆ ನೇಮಿಸಿ ಕೊಂಡರು. ಅವರ ಹಿತಚಿಂತಕರೋ ಅಮಲ್ದಾರರಿಂದ ಪ್ರೇರಿತರಾದ ವರೋ ಅವರಿಗೆ, 'ಬಲವದ್ವೈರ ಬೇಡ, ಹೀಗೆ ಯಾಕೆ ಮಾಡುತ್ತೀರಿ?' ಎಂದು ಹೇಳಿದ್ದಕ್ಕೆ, 'ಕಹಳೆ ನನ್ನದು. ಕಹಳೆಯುವನಿಗೆ ನಾನು ಸಂಬಳ ಕೊಡುತ್ತೇನೆ' ಎಂದರು ಹೀಗೆ ಕೆಲವು ದಿನ ನಡೆಯಿತು. ಆಮೇಲೆ ಸಾಹುಕಾರರು ಅಂಗಡಿಗೆ ಬರುವವೇಳೆಗೆ ಅಂಗಡಿಯಿಂದ ಮನೆಗೆ ಹೋಗುವವೇಳೆಗೆ ಅವರ ಕಹಳೆಯು ಜಾಹೀರಾತಿಯೊಂದಿಗೆ ಇನ್ನೊಂದು ಪ್ರಕಟನೆ ಕ್ರಮವಾಗಿ ನಡೆಯಲು ಇಟ್ಟಿತು. ಆ ಹೊತ್ತಿಗೆ ಸರಿಯಾಗಿ ಅಂಗಡಿಯ ಎದುರಿಗೆ ತಪ್ಪದೆ ನಿಂತು ಒಬ್ಬ ಆಜಾನುಬಾಹುವಾದ ಕಾಳ ಪುರುಷ ಜಲವಿಸರ್ಜನೆ ಮಾಡುವನು. ನಾಲ್ಕೈದು ದಿವಸ ಈ ರೀತಿ ನಡೆದಮೇಲೆ ಸಾಹುಕಾರರಿಗೆ ಇವನು ಬೇಕೆಂದೇ ಹೀಗೆ ಮಾಡುತ್ತಿದ್ದಾ ನೆಂದು ಗೊತ್ತಾಯಿತು. ಅವನು ತಾಲ್ಲೂಕ್ ಕಛೇರಿಯಲ್ಲಿ ದಫ್ತರ ಬಂದಿಯೋ ಕಾಪಿಯಿಸ್ಟೋ ಆಗಿದ್ದಾನೆಂದು ತಿಳಿಯಿತು. ಅವನ ಮೇಲೆ ಕೈಮಾಡಿದರೆ ಅದೇ ನೆವದಮೇಲೆ ತಮಗೆ ಕ್ರಿಮಿನಲ್ ಕೋರ್ಟಿನಲ್ಲಿ— ಅಮಲ್ದಾರರೇ ನ್ಯಾಯಾಧೀಶರು — ಶಿಕ್ಷೆ ತಪ್ಪದೆಂದು ಗೊತ್ತಾಯಿತು ಅವರು ಅವನನ್ನು ಕರೆದು,

"ಏನಪ್ಪಾ, ಈ ನಾಚಿಗೆ ಕೇಡು. ದನದ ಹಾಗೆ ನಿನ್ನ ಮೈಯೆಲ್ಲಾ ಬಿಟ್ಟುಕೊಂಡು ಜಲಬಾದಿಗೆ ಹೋಗುತ್ತೀಯಲ್ಲ? ಮಾನಮರ್ಯಾದೆ ಇಲ್ಲವೇ?"

ಎಂದು ಕೇಳಿದರು.

"ಸಾಹುಕಾರರೆ, ಈ ಬೀದಿಯಲ್ಲಿ ಮಾನವೆಂಬುದೇ ಇಲ್ಲವೆಂದು ಕಾಣುತ್ತದಲ್ಲ! ಕಹಳೆ ನಿಮ್ಮದೆಂದು ನೀವು ಊದಿಸುತ್ತೀರಲ್ಲ. ಹಾಗೆ, ಮೈ, ಮೂತ್ರ ನನ್ನವಲ್ಲವೋ? ನೀವು ಮರ್ಯಾದೆ ಬಿಟ್ಟು ಊದಿಸು ವುದಾದರೆ, ನಾನು ಮರ್ಯಾದೆ ಬಿಟ್ಟು ಒಂದಾ ಮಾಡಬಾರದೇಕೆ?"

ಎಂದು ಜವಾಬು ಬಂತು.

ಸಾಹುಕಾರರಿಗೆ ಅರ್ಥವಾಯಿತು. ಕಹಳೆ ನಿಂತುಹೋಯಿತು. ಕ್ರಮೇಣ ಅವರು ಅಮಲ್ದಾರರ ಸ್ನೇಹವನ್ನು ಸಂಪಾದಿಸಿ, ಊರಿನ ಮುಖಂಡರಲ್ಲಿ ಒಬ್ಬರಾದರು.

ನಾನು ಮೈಸೂರಿನಲ್ಲಿ ಪ್ರೊಬೇಷನರಾಗಿದ್ದಾಗ, ಬಹು ಜನಗಳಿಗೆ–ಏಕೆ ಇಡೀ ದೇಶಕ್ಕೇ–ವ್ಯಸನವನ್ನುಂಟುಮಾಡಿದ ಒಂದು ಅಪಘಾತ ವಾಯಿತು. ನಿಬಿಡಸ್ನೇಹದಿಂದ ಈ ವ್ಯಸನದಲ್ಲಿ ನನಗೆ ಜನಸಾಮಾನ್ಯ ಕ್ಕಿಂತಲೂ ವಿಶೇಷ ಭಾಗದ ಬಾಧ್ಯತೆಯಿತ್ತು. ಈಗಲೂ ಆಗಿನ ನೆನಪು ಬಂದರೆ, ಆಗಿನ ಗೆಳೆಯರನ್ನು ನೋಡಿದರೆ—ವಾರ್ಧಕದಲ್ಲಿ ನೆನವು ಹೇರಳ, ಗೆಳೆಯರು ವಿರಳ,—ಆ ಹಳೆಯ ದುಃಖವು ಹೊಸದಾಗಿ, ಕುದಿದು ಎದೆಯಿಂದ ಕಣ್ಣಿಗೆ ಉಕ್ಕುತ್ತೆ.

ನಾನು ಹಿಂದೆ ಹಾಡ್ಯದ ದಾಸಪ್ಪನವರ ಪರಿಚಯವನ್ನ ವಾಚಕರಿಗೆ ಮಾಡಿಸಿದ್ದೇನಲ್ಲವೆ? ನಾನು ಪ್ರೊಬೇಷನರಾಗಿದ್ದಾಗ ಅವರು ಮೈಸೂರಿನಲ್ಲಿ District Excise Officer ಆಗಿ ಬಂದರು. ಕೆಲಸಗಳ ವಿರಾಮ ಕಾಲದಲ್ಲಿ ನಾವು ಸಾಧ್ಯವಾದ ಮಟ್ಟಿಗೂ ಜೊತೆಗೇ ಇರುತ್ತಿದ್ದೆವು. ನಮ್ಮ ದೃಢವಾದ ಸ್ನೇಹ ಬಂಧಕ್ಕೆ ಅನೇಕ ಎಳೆಗಳಿದ್ದವು. ಸಾಹಿತ್ಯ, ಸಂಸ್ಕೃತಿ, ವ್ಯಾಯಾಮ, ಸವಾರಿ, ಬಂದೂಕು ವಿದ್ಯೆ ಇವು ಕೆಲವು ತಂತುಗಳು. ಸರಿ, ಸ್ನೇಹದ ಮೂಲವನ್ನೂ, ಅದರ ಬೆಳವಣಿಗೆಯ ಕಾರಣಗಳನ್ನೂ ಕಂಡವರು ಯಾರು? ಭವಭೂತಿ ಹೇಳುವಂತೆ:

ಭೂಯಸಾ ಜೀವಿಧರ್ಮ ಏಷಯಪ್ರಸಮುಯೀ ಕಸ್ಯಚಿದ್ಕ್ವ ಚಿತ್ಪ್ರೀತಿಃ ।<br>
ತಂ ಅಪ್ರತಿ ಸಂಖ್ಯೇಯಂ ಅನಿಬಂಧನಂ ಪ್ರೇಮಾಣಂ ಆಮನಂತಿ ।<br>
ಅಹೇತುಃಪಕ್ಷಪಾತೋಯಸ್ತಸ್ಯನಾಸ್ತಿಪ್ರತಿಕ್ರಿಯಾ ।

ನಮ್ಮಿಬ್ಬರಿಗೂ ಬಹಳ ಬೇಕಾದ ಹಿರಿಯ ಆಪ್ತರು ಹಾಡ್ಯದ ದಾಸಪ್ಪನವರ ಸೋದರಮಾವ ಬೆಳವಾಡಿ ದಾಸಪ್ಪನವರು. ಅವರೂ ಈಗ ಕೀರ್ತಿಶೇಷರಾಗಿದ್ದಾರೆ; ಅವರ ನೆನಪು ನನ್ನ ಹೃದಯದಲ್ಲಿ ನನ್ನ ಜೀವವಿರುವವರಿಗೂ ಹಸಿಯಾಗಿ ಹಸುರಾಗಿರುತ್ತದೆ. ಅನೇಕ ರೀತಿ ಗಳಲ್ಲಿ ಅವರು ನನ್ನ ಗುರುಗಳ ಗುಂಪಿಗೆ ಸೇರಿದವರು. ಅವರಿಗೆ ಪ್ರೌಢ ವಾದ ಸಾಹಿತ್ಯ ಮತ್ತು ವೈದಿಕ ಜ್ಞಾನವಿದ್ದಾಗ್ಯೂ, ಅದು ಸಾಮಾನ್ಯ

ವಾಗಿ ಹೊರಗೆ ಕಾಣುತ್ತಿರಲಿಲ್ಲ. ಅವರ ಹೃದಯದ ಆಳವನ್ನು ಬಲ್ಲವರೇ ಬಲ್ಲರು. ಇತರರಿಗೆ ಇವರು ಒಬ್ಬ "ಖಯಾಲೀ" ಮನುಷ್ಯ (eccentric) ಎಂಬ ಭಾವ ಬರುತ್ತಿತ್ತು. ಕಾರಣ, ಅವರಿಗೆ ಯಾವ ಹೊತ್ತಿನಲ್ಲಿ ಯಾವದು ಯುಕ್ತ, ಲೋಭನೀಯವೆಂದು ತೋರುತ್ತಿತ್ತೋ ಅದನ್ನು ಸಾಧಿಸುವುದಕ್ಕೆ ತಮ್ಮ ತನು ಮನ ಧನಗಳನ್ನು ಶಂಕೆಯಿಲ್ಲದೆ ಅಖಂಡ ವಾಗಿ ವಿನಿಯೋಗಿಸುತ್ತಿದ್ದರು. ಒಂದು ಕಾಲದಲ್ಲಿ ಅವರಿಗೆ ಕುದುರೆ ಸವಾರಿ, ಶಸ್ತ್ರವಿದ್ಯೆಗಳ ಮೇಲೆ ಖಯಾಲ್ (ಅಚ್ಚಗನ್ನಡವಲ್ಲದಿದ್ದರೂ, ಸೊಗಸಾದ ಪದ, ಅದರ ಅರ್ಥ ಗಿಲಿ) ತಿರುಗಿತು. ಆಗ ಅವರು ಯೋದ್ಧರ ಪೋಷಾಕು ತೊಟ್ಟು ರೈಡಿಂಗ್ ಸ್ಕೂಲ್, ಪೋಲೋ, ಕವಾಯಿತು, ಇವುಗಳಲ್ಲೆಲ್ಲಾ ಉತ್ಸಾಹದಿಂದ ಭಾಗವಹಿಸುತ್ತಿದ್ದರು. ಒಂದು ಸಲ, ನನಗೆ ಜ್ಞಾಪಕವಿದೆ, ಕಾಂತರಾಜೇ ಅರಸಿನವರು ನನ್ನನ್ನು ಕೇಳಿದರು.

"ಏನರಿ? ನಿಮ್ಮ Friend (ಮಿತ್ರರು) ದಾಸಪ್ಪನವರು ಸಂಪೂರ್ಣ ವಾಗಿ ಸ್ಥಿಮಿತ ಬುದ್ಧಿಯುವರೇನರಿ (quite sane)?"

ನಾನು ಸ್ನೇಹದ ಆಗ್ರಹದಲ್ಲಿ ಉತ್ತರ ಕೊಟ್ಟೆ:

"ಅವರು ಬರಿ ಸ್ಥಿಮಿತ ಬುದ್ಧಿಯುವರು ಮಾತ್ರವಲ್ಲ, ಅವರು ಒಬ್ಬ (genius) ಪ್ರತಿಭಾಶಾಲಿಗಳು."

ಅವರು ನಕ್ಕು:

"ನಿನ್ನೇ ಆ genius ನ್ನು ಪೋಲೋ ಮೈದಾನದಲ್ಲಿ ನೋಡಿದ್ದೆ. ಷಂಲಾನಹಿತ ಕಂಧಾರಿ ಪೇಟ, ಮಿಲಿಟರಿ ಉಡಪು ಧರಿಸಿ, ಕತ್ತಿಕಟ್ಟಿ ಕೊಂಡು ಬಂದಿದ್ದರು. ಅವರ ಪ್ರತಿಭೆ ಆ ರೂಪು ತಾಳಿತ್ತು" ಎಂದರು.

ಇಬ್ಬರು ದಾಸಪ್ಪನವರೂ ನಾನೂ ಒಬ್ಬರ ಸಹವಾಸದಲ್ಲಿ ಒಬ್ಬರು ಆನಂದಪಡುವರಾದ್ದರಿಂದ ಸಾಧ್ಯವಾದ ಮಟ್ಟಿಗೆ ಜೊತೆಯಲ್ಲೇ ಇರು ತ್ತಿದ್ದೆವು.

ಒಂದು ದಿನ ಈಜುವುದರ ಮಾತು ಬಂತು. ನಾನು ಚನ್ನಾಗಿ ಈಜುತ್ತೇನೆ, ಕೆಲವು ವರುಷಗಳ ಹಿಂದೆ ಚುಂಚನಕಟ್ಟೆಯ ಹತ್ತಿರ ತುಂಬು ಹೊಳೆಯನ್ನು ಈಜಿದಾಟಿದೆ, ಎಂದು ನಾನು ಕೊಚ್ಚಿಕೊಂಡೆ.

ಬೆಳವಾಡಿ ದಾಸಪ್ಪನವರು ನಗುತ್ತ ತಾವು ಹೊಳೆದಾಟಬೇಕಾದರೆ ದೋಣಿಯಲ್ಲಿ ಯತ್ನಮಾಡುವ ವಾಡಿಕೆ, ತಮಗೆ ಅದೇ ವಿವೇಕಮಾರ್ಗವೆಂಬ ತಪ್ಪುತಿಳುವಳಿಕೆ ಬೇರೆ; ಆದರೆ ತಮಗೂ ಈಜು ಬರುತ್ತೆ, ಸಮಯ ತಪ್ಪಿ ನೀರಿಗೆ ಬಿದ್ದರೆ ಪ್ರಾಣ ಕಾಪಾಡಿಕೊಳ್ಳುವಷ್ಟು, ಎಂದರು. ಹಾಸ್ಯದ ದಾಸಪ್ಪ "ನನಗೂ ಬರುತ್ತೆ, ಪ್ರಾಣಕಳಕೊಳ್ಳೋಕೆ ಬೇಕಾದಷ್ಟು. ಬರುತ್ತೆಂಬ ಜಂಭದ ಮೇಲೆ ನೀರಿಗೆ ಇಳಿಯುವುದು, ಆಯತಪ್ಪಿದರೆ ಗಢಾರೆ ಚಂದದಿಂದ ಈಜುವುದು" ಎಂದರು. ಎಲ್ಲರೂ ನಕ್ಕೆವು. ಆಮೇಲೆ ಮರೆತೆವು. ಮರೆತಿದ್ದ ಈ ಮಾತು ಶಲ್ಯವಾಗಿ ನಮ್ಮ ಪ್ರಜ್ಞೆಯನ್ನು ಇರಿಯುವಂಥ ದುರಂತ ಕೆಲವು ದಿನಗಳಲ್ಲಿಯೇ ಸಂಭವಿಸಿತು. ಒಂದು ಬೆಳಗ್ಗೆ ನಾನು ಮಾಮೂಲಿನಂತೆ ಹೊರಗೆ ಹೊರಡಲು ಸಿದ್ಧನಾಗುತ್ತಿದ್ದೇನೆ—ಆಗ ಏಕಾಏಕಿ ಬೆಳವಾಡಿ ದಾಸಪ್ಪನವರು ನನ್ನ ಕೊಠಡಿಯೊಳಕ್ಕೆ ಬಂದು ಒಂದು ಕ್ಷಣ ಮಾತಿಲ್ಲದೆ ಮೃತ ಮುಖದಿಂದ ನನ್ನಕಡೆ ನೋಡುತ್ತ ನಿಂತರು. ನನಗೆ ಘಾಬರಿಯಾಯಿತು. ಏಕೆಂದರೆ

Even such a man, so faint, so spiritless,
So dull, so dead in look, so woe begone

ಅಭಿಮನ್ಯುವಿನ ವಧೆಯನ್ನು ಧರ್ಮರಾಯನಿಗೆ ತಿಳಿಸಲು ಬಂದಿರಬೇಕು.

ನಾನು 'ಏನರಿ ಏನರಿ' ಎನ್ನುವಷ್ಟರಲ್ಲಿ ಅವರು ಜೇಬಿನಿಂದ ಟೆಲಿಗ್ರಾಮನ್ನು ತೆಗೆದು ಕೊಟ್ಟರು. ಅದು Express ಟೆಲಿಗ್ರಾಂ—ನಂಜನಗೂಡಿನಿಂದ.

Dasappa drowned river come immediately

ನಾನು shock ನಿಂದ ಸ್ವಲ್ಪ ಸುಧಾರಿಸಿಕೊಂಡ ಮೇಲೆ, ಇದನ್ನು ಯಾರೋ ಇಂಗ್ಲಿಷು ಚನ್ನಾಗಿ ಬಾರದಿದ್ದವರು ಕೊಟ್ಟಿದ್ದಿರಬಹುದು, ಹೊಳೆಯ ನೀರಿನಲ್ಲಿ ಬಿದ್ದರು (fell into the river) ಎನ್ನುವುದಕ್ಕೆ ಬದಲು ಮುಳುಗಿ ಸತ್ತರು (drowned) ಎಂದು ಕೊಟ್ಟಿರಬಹುದು, ಎಂದೆ.

ದಾಸಪ್ಪನವರು ತಲೆ ಅಲ್ಲಾಡಿಸಿದರು. 'ಉಂಟೇನರಿ, ಇಂಥ ವರ್ತಮಾನ ಎಂದಿಗಾದರೂ ಸುಳ್ಳಾಗುತ್ತೆಯೇ' ಎಂದು, ಇದ್ದಕ್ಕಿದ್ದ

ಹಾಗೇ ನೆಲದ ಮೇಲೆ ಕುಸಿದು ಕುಳಿತು, ಘಟ್ಟಿಯಾಗಿ ಅತ್ತರು. ಧೀರ ರಾದ ಗಂಡಸರ ಅಳುವಿಗಿಂತಲೂ ಹೃದಯಭೇದಕವಾದ ಸದ್ದು ಇಲ್ಲ.

ಆಮೇಲೆ ದಾಸಪ್ಪನವರು ನಂಜನಗೂಡಿಗೆ ಹೋದರು. ನಾನು, ಹಾಡ್ಯದ ದಾಸಪ್ಪನವರ ತಂದೆ, ಆಗ ಚನ್ನಪಟ್ಣದ ಅಮಲ್ದಾರರಾಗಿದ್ದ ಶ್ರೀ ಸೀತಾರಾಮಯ್ಯನವರಿಗೆ ತಂತಿಕೊಟ್ಟು ಅವರಿಗೆ ನಂಜನಗೂಡಿಗೆ ಹೋಗುವುದಕ್ಕೆ ವಾಹನಗಳ ಏರ್ಪಾಡನ್ನುಮಾಡಿ, ಅವರನ್ನೂ ಅವರ ಮನೆಯವರನ್ನೂ ರೈಲ್ವೆ ಸ್ಟೇಷನ್‌ನಲ್ಲೇ ಎದುರುಗೊಂಡು ಅವರಿಗೆ ಕೂಡಲೆ ನಂಜನಗೂಡಿಗೆ ಪ್ರಯಾಣಮಾಡಲು ಬೇಕಾದ ನನ್ನ ಬಡಸೇವೆ ಯನ್ನು ಮಾಡಿದೆ.

ದಾಸಪ್ಪನವರ ಅಪಘಾತದ ವಿವರಗಳು ನನಗೆ ಆಮೇಲೆ ತಿಳಿಯ ಬಂದವು. ಅವುಗಳನ್ನು ವಿಸ್ತರಿಸಿ ವಾಚಕರ ಮನಸ್ಸನ್ನು ನೋಯಿಸಲು ಇಷ್ಟವಿಲ್ಲ, ಹಾಗೆ ಮಾಡುವುದರಿಂದ ಪ್ರಯೋಜನವೂ ಇಲ್ಲ. ಅದರಲ್ಲಿ ಒಂದು ಅತಿ ದಾರುಣವಾದ, ಕರುಣಮಯವಾದ ವಿಷಯ—ದಾಸಪ್ಪ ನವರು ಮೃತ್ಯುವಿನ ಸಂಗಡ ಹೆಣಗಾಡಿ ಸೋತಾಗ ಅವರ ಪ್ರಿಯಪತ್ನಿ—ಬಡವಾಯಿ—ಎದುರಿನಲ್ಲೇ ನಿಸ್ಸಹಾಯವಾಗಿ ನಿಂತು ನೋಡಿ ಪರಮ ಸಂಕಟದಲ್ಲಿ ಬೆಂದರು.

ದಾಸಪ್ಪನವರಿಗೆ ಭಗವಂತನು ಆಯುಸ್ಸು ಕೊಟ್ಟಿದ್ದರೆ ಅವರು ಏರಲು ಅಸಾಧ್ಯವಾದ ಪದವಿಯೇ ಇರಲಿಲ್ಲ. ದಯೆಯಿಲ್ಲದ ದೈವದಿಂದ ಅವರು ಈಗ ಉಳಿದಿರುವ ಅವರ ಮಿತ್ರರ ನೆನಪಿನಲ್ಲಿ ಮಾತ್ರ ನಿಂತಿ ದ್ದಾರೆ. ಅವರ ಧೀರಪತ್ನಿ ಅವರ ಕಾಲಾನಂತರ ತಮ್ಮ ಯಾವಜ್ಜೀವ ವ್ಯಸನದ ವೇಗವನ್ನು ಸಹಿಸಿಕೊಂಡು, ತಮ್ಮನ್ನು ಹೊತ್ತುಬಂದ ಭಾರ ವನ್ನು ನಿರ್ವಹಿಸಿ, ವಿದ್ಯೆಯನ್ನುಗಳಿಸಿ, ಯೂನಿವರ್ಸಿಟಿ ಪದವೀಧರರಾಗಿ, ಹೆಣ್ಣು ಮಕ್ಕಳ ವಿದ್ಯೆ, ಅವರುಗಳ ಕಷ್ಟಗಳ ನಿವಾರಣೆ, ಇವುಗಳ ದೀಕ್ಷೆ ಗೊಂಡು ತಮ್ಮ ಅಕ್ಕತಂಗಿಯರ, ತಮ್ಮ ಮಾತೃಭೂಮಿಯ, ಸೇವೆ ಯನ್ನು ಮಾಡುತ್ತಿದ್ದಾರೆ

ನಾನು ಮೈಸೂರು ತಾಲ್ಲೂಕಿನ ಛಾರ್ಜನ್ನು ತೆಗೆದುಕೊಂಡ ಕೆಲವು ದಿನಗಳಲ್ಲೇ ತಾಲ್ಲೂಕ್ ಬೋರ್ಡ್ ಮೀಟಿಂಗ್ ನಡೆಯಬೇಕು. ಅದಕ್ಕೆ

ಪ್ರೆಸಿಡೆಂಟರು ಅಸಿಸ್ಟೆಂಟ್ ಕಮಿಷನರು; ವೈಸ್-ಪ್ರೆಸಿಡೆಂಟರು ಅಮಲ್ದಾರರು, ಅಂದರೆ ನಾನು. ಮೀಟಿಂಗು ನಾಳೆ ಇದೆಯೆನ್ನುವಾಗ ನಾನು ಅಸಿಸ್ಟೆಂಟ್ ಕಮಿಷನರು ಕೃಷ್ಣರಾಯರಿಗೆ ಈ engagement ನ್ನು ಜ್ಞಾಪಿಸಲಿಕ್ಕೆ ಹೋದೆ.

"ಒಳ್ಳೆ ಕೆಲಸ ಮಾಡಿದಿರಿ. ನನಗೆ ಮರೆತುಹೋಗಿತ್ತು. ಮೀಟಿಂಗು ಹ್ಯಾಗೆ ನಡಿಸಬೇಕೆಂದು ತೋರಿಸಿಕೊಡುತ್ತೇನೆ. ತಾಲ್ಲೂಕ್ ಬೋರ್ಡ್ ಎಂದರೆ Local autonomy. ಪೂರ್ತ democracy. ಗೊತ್ತೇ?" ಎಂದರು.

'ಈಗ ಗೊತ್ತಿಲ್ಲದಿದ್ದರೆ ತಮ್ಮಂಥ ಮಾರ್ಗದರ್ಶಕರಿರುವಾಗ ಮುಂದಾದರೂ ಮುಂದಟ್ಟು ಮಾಡಿಕೊಳ್ಳುತ್ತೇನೆ' ಎಂದೆ.

ಮಾರನೆಯ ದಿವಸ ಮಧ್ಯಾಹ್ನ ಹನ್ನೆರಡು ಗಂಟೆಗೆ ಮೀಟಿಂಗು. ನಾಲ್ಕು ಜನ ದೊಡ್ಡ ದೊಡ್ಡ ಗ್ರಾಮಗಳ ಪಟೇಲರೂ, ಇಬ್ಬರು ಶ್ಯಾನು ಭೋಗರೂ, ನಾಲ್ಕೈದು ಮಂದಿ ರೈತರೂ, ಸಾಹುಕಾರರೂ, ವ್ಯಾಪಾರ ಸ್ಥರೂ, ಅಂತೂ ಒಟ್ಟಿನಲ್ಲಿ ಹತ್ತು ಹನ್ನೆರಡು ಜನ ಹಾಜರಾದರು. ಅವರಲ್ಲಿ ಕೆಲವರು ಸಾಮಾನ್ಯವಾಗಿ ಕೋಟು ಪೇಟ ಹಾಕುವರಲ್ಲ. ಕುರ್ಚಿಯ ಮೇಲೆ ಕೂಡಬೇಕೆಂದು ಬಹಳ ಬಲವಂತ ಮಾಡಿದ ಮೇಲೆ ಆಸನದ ಅಂಚಿನ ಮೇಲೆ ಮುಳ್ಳಿನ ಮೇಲೆ ಕುಳಿತ ಹಾಗೆ ಕುಳಿತರು. ನಾನು ವೈಸ್-ಪ್ರೆಸಿಡೆಂಟ್ ಪೀಠವನ್ನಲಂಕರಿಸಿದೆ. ಪ್ರೆಸಿಡೆಂಟ್ ಸಾಹೇಬರು ಬರುತ್ತೇವೆಂದು ಹೇಳಿದ್ದರಾದ್ದರಿಂದ ಅವರಿಗಾಗಿ ಕಾದೆವು. ಅರ್ಧ ಗಂಟೆ ತಡಮಾಡಿಕೊಂಡು ಬಂದರು. ಅವರ ಬರುವಿಕೆಗೆ ಹದ್ದು ಬಂದರೆ ಬೆದರುವ ಕೋಳಿ ಮರಿಗಳಂತೆ ಕೆದರಿಹೋಗಿದ್ದ ಸಭೆ ಮತ್ತೆ ಸ್ವಲ್ಪ ತಹಬಂದಿಗೆ ಬಂತು. ಮೀಟಿಂಗು ಪ್ರಾರಂಭವಾಯಿತು. Local fund ಗುಮಾಸ್ತೆ ಜಮಾ ಖರ್ಚು ಲೆಕ್ಕವನ್ನು ಓದಿದ. ಅನಂತರ,

"ಹೂಂ, ಇನ್ನಾಗಲಿ. ಏನಾದರೂ subject ಚರ್ಚೆಗೆ ತರುವುದಿದ್ದರೆ ತನ್ನಿ," ಎಂದರು ಪ್ರೆಸಿಡೆಂಟರು.

ಸದಸ್ಯರು ಒಬ್ಬರ ಮುಖ ಒಬ್ಬರು ನೋಡುತ್ತಾ ಸುಮ್ಮ ನಿದ್ದರು.

'ಹೂಂ ಹೇಳಿ ಏನಾದರೂ! ಇದೇನು ಹಸೆಗೆ ಕರೆಯುವ ಹಾಡು! ನೀನು ಹೇಳು ನೀನು ಹೇಳು ಎಂಬ ಮುತ್ತೈದೇರಹಾಗೆ ಸುಮ್ಮನಿದ್ದೀರಿ. ಹೇಳಿ, ಏನಾದರೂ ಹೇಳಿ. ಎಷ್ಟೊತ್ತು ಕಾಯೋದು? ನೀನು ಹೇಳಯ್ಯ ಗೌಡ. ನೀನು R A ನಂಬರು ಅಲ್ಲವೇ?' ಎಂದು ಒಬ್ಬ ಭಾರಿ ರೈತರಾದ ಜರೀ ಪೇರಾದ ಪಟೇಲರಿಗೆ ಆಹ್ವಾನವಿತ್ತರು.

ಗೌಡರು ನಿಧಾನವಾಗಿ ಎದ್ದರು. ಶಿಕೆ ಮತ್ತು ಸಭಾಕಂಪ. ಈ ಅಸಿಸ್ಟೆಂಟ್ ಕಮಿಷನರ್ ಸಾಹೇಬರ ಸಾನ್ನಿಧ್ಯ ಬೇರೆ. ಹಣೆಯ ಮೇಲೆ ಬೆವರು ಕಿತ್ತಿತು.

'ಸೋಮಿ, ನಮ್ಮೂರಿಗೆ ಇಲವಾಲ ರಸ್ತೆಯಿಂದ ಒಂದು ರೋಟು ಹಾಕಿಸಿ ಕೊಡಬೇಕು.'

ಅಸಿಸ್ಟೆಂಟ್ ಕಮಿಷನರ್: 'ರೋಟಂತೆ, ರೋಟು! ನೀ ಕೆಟ್ಟೆ. ಇನ್ನೇನಾದರೂ ಹೇಳೋದಿದ್ದರೆ ಹೇಳು. ಇಲ್ಲದಿದ್ದರೆ ಕುಕ್ಕರಿಸು.'

ಕುಕ್ಕರಿಸಿದ.

ಸಾಹೇಬರು ಇನ್ನೊಬ್ಬ ಸದಸ್ಯರ ಕಡೆಗೆ ತಿರುಗಿ — ಅವರು ಒಂದು ಭಾರಿ ಗ್ರಾಮದಲ್ಲಿ ಸಾವಿರಾರು ರೂಪಾಯಿಗಳ ಲೇವಾದೇವಿ ಮಾಡುವ ಸಾಹುಕಾರರು —

"ಸಾಹುಕಾರ್ರೆ, ನಿಮ್ಮ ಊರಿನ ಕುನ್ನೀರು ಕಟ್ಟೆಯನ್ನು ನಾವು ನೋಡಿದೇವೆ. ಕಲ್ಲು ಕಟ್ಟಡವೆಲ್ಲಾ ಶಿಥಿಲವಾಗಿ ಹೋಗಿದೆ. ಅದನ್ನು ರಿಪೇರಿ ಮಾಡಿಸೋದಕ್ಕೆ ಅಂದಾಜ ಬಂದಿದೆ."

ಸಾಹುಕಾರರು ಮಾತನಾಡುವದರೊಳಗಾಗಿ ಒಬ್ಬರೈತ ಸದಸ್ಯರು ಧಟ್ಟನೆ ಎದ್ದು,

"ಬೇಡ ಬುದ್ಧಿ, ನಿಮ್ಮ ಪಾದ. ಎರಡೂ ಗ್ರಾಮಗಳವರಿಗೆ ಆ ಕಟ್ಟೆಯಿಂದಲೇ ಜೀವಣ. ಅದರಲ್ಲಿ ಯಾವ ಕಾಲಾನೂ ನೀರಿರುತ್ತೆ. ಅದನ್ನು ಈ ಶೆಟ್ಟರಿಗೆ ರಿಪೇರೀಗೆ ಕೊಟ್ಟರೆ ಹೊಂಟೇ ಹೋಯ್ತು ಬುದ್ಧಿ. ಚಾಮನದೊಡ್ಡಿ ಕಟ್ಟೇನ ಸರ್ಕಾರದವರು ರಿಪೇರಿ ಮಾಡಿಸಿದಿರಿ. ಆಗಿನಿಂದ ದೊಡ್ಡಿಯವರು ಕುಡಿಯುವ ನೀರಿಗೆ ಶಾಮಲಾಪುರದ ಬಾವಿಗೆ ಹೋಗುತ್ತಾರೆ" ಎಂದು ಹೇಳಿದರು.

ಅಧ್ಯಕ್ಷರು "ನಿನಗೆ ಬುದ್ಧಿಯಿಲ್ಲ. ಸಾಕು, ಕೂತುಕೊ. ಇನ್ನ್ಯಾರಾದರೂ ಏನಾದರೂ ಹೇಳುತ್ತೀರೋ" ಎಂದು ಎದ್ದರು.

ಇನ್ನ್ಯಾರೂ ಏನನ್ನೂ ಹೇಳಲಿಲ್ಲ. ಹೇಳದಿದ್ದದ್ದು ನನಗೆ ಆಶ್ಚರ್ಯವಾಗಿ ತೋರಲೂ ಇಲ್ಲ. ಅಸಿಸ್ಟೆಂಟ್ ಕಮಿಷನರ್ ಹೋಗುವುದಕ್ಕೆ ಮುಂಚೆ, "ಸರಿಯಾಗಿ watch ಮಾಡಿದಿರಾ ಸುಬೇದಾರ್ರೇ. ಮುಂದೆ ಮೀಟಿಂಗುಗಳನ್ನು ನೀವೇ handle ಮಾಡ್ತೀರಿ ತಾನೇ?" ಎಂದರು.

ಬಹಳ ವಿಷಯಗಳು ವೇದ್ಯವಾದವೆಂದು ಹಿರಿಯ ಆಫೀಸರಿಗೆ ಧನ್ಯವಾದವನ್ನು ಅರ್ಪಿಸಿದೆ.

ಅವರನ್ನು ಗಾಡಿಯವರೆಗೂ ಕಳುಹಿಸಿ ಕೊಟ್ಟು ಬರುವಾಗ,

"ಹಳೇ ಹುಲಿ [illegible]ಲ್ಲಾಡಿ" "ಖದೀಮರು" ಎಂಬ ಮೆಚ್ಚು ಮಾತುಗಳು ಸಭೆಸೇರಿದ್ದ ಕಡೆಯಿಂದ ನನ್ನ ಕಿವಿಗೆ ಬಿದ್ದವು.

ಶ್ರೀ ವೆಂಕಟವರದಯ್ಯಂಗಾರರಲ್ಲಿ ನನಗೆ ಬಹಳ ಗೌರವ. ಒಂದು ವಿಧವಾದ ಪ್ರೇಮವೆಂದು ಹೇಳಿದರೂ ಹೇಳಬಹುದು. ಅವರು ನಿಸ್ಪೃಹರು. ಕೇವಲ ನಿರ್ದಾಕ್ಷಿಣ್ಯಪರರು. ಅವರ ನಿಸ್ಪೃಹತೆ ಒಂದೊಂದು ವೇಳೆ ಲೋಕರೀತಿಯನ್ನು ಮೀರಿ ಪರಿಹಾಸಕ್ಕೆ ಕಾರಣವಾಗುತ್ತಿತ್ತು. ಒಂದು ಕತೆಯನ್ನು ಕೇಳಿದ್ದೆ. ಅವರು ಬಿಟ್ಟಿ ಎತ್ತುಗಳನ್ನು ಸರ್ಕೀಟಿನ ಗಾಡಿಗೆ ಕಟ್ಟಿಸುತ್ತಿರಲಿಲ್ಲ. ಒಂದು ಸಲ ಒಂದು ಜೊತೆ ಸೊಗಸಾದ ಎತ್ತುಗಳನ್ನು ಒಬ್ಬ ಭಾರಿ ರೈತ ಡೆಪ್ಯುಟಿ ಕಮಿಷನರ್ ಸಾಹೇಬರು ನೋಡಿ ಮೆಚ್ಚಲೆಂದು ಅವರ ಗಾಡಿಗೆ ಕಟ್ಟಿ ಒಂದು ಐದು ಮೈಲಿ ಮಜಲು ಓಡಿಸಿದನಂತೆ. ಸಾಹೇಬರು ಮೆಚ್ಚಿ ಅವನಿಗೆ ಹತ್ತಾಣೆ— ಮೈಲಿಗೆ ಎರಡಾಣೆಯಂತೆ— ಬಾಡಿಗೆ ಕೊಡಲು ಹೋದರಂತೆ. ಅವನು ಒಲ್ಲದೆ ಹೋದನಂತೆ. ಸಾಹೇಬರು ಕೋಪಗೊಂಡು ಬೇರೆ ಜೊತೆ ಎತ್ತುಗಳನ್ನು ತರಿಸಿ ಬಂದಿದ್ದ ಐದು ಮೈಲಿ ವಾಪಸ್ ಹೋದರಂತೆ. ಇದು ನಿಜವೆಂಬುದಕ್ಕೆ ನಾನು ಖಾತರಿ ಕೊಡಲಾರೆ. ಇದೇ ತರಹದ ಕಥೆಯೊಂದನ್ನು ಒಬ್ಬ ಆಯುರ್ವೇದ ಪಂಡಿತರ ವಿಷಯವಾಗಿ ಕೇಳಿದ್ದೇನೆ. ಬಿಳೀಶಾಮಾ ಪಂಡಿತರು ವೈದ್ಯ ಮನೆತನದವರು. ಹಿರಿಯರ ಕಾಲದ ಮಹಾಮಾತ್ರ್ರಗಳ ಸಹಾಯದಿಂದ ಖ್ಯಾತಿಯನ್ನೂ ತಕ್ಕಷ್ಟು ಹಣವನ್ನೂ

ಗಳಿಸಿದರು. ಒಂದು ವಿಷಮ ಶೀತಜ್ವರದ ಕೇಸಿನಲ್ಲಿ ಶಿಷ್ಯನನ್ನು ಕರೆದು ಮಹಾಭೈರವ ಮಾತ್ರೆಯನ್ನು ಗೋಮೂತ್ರದಲ್ಲಿ ಐದುಸುತ್ತು ಸಾಣೆಯ ಕಲ್ಲಿನಮೇಲೆ ತೇದು ರೋಗಿಗೆ ಕೊಡುವಂತೆ ಆಜ್ಞೆಕೊಟ್ಟರು. ಅವನು ಮರೆತೋ ಇಲ್ಲವೇ ಮತ್ತೇನೋ ಯೋಚನೆ ಮಾಡುತ್ತಲೋ ಏಳು ಸುತ್ತು ತೇದುಬಿಟ್ಟ. 'ಎಲೋ ಎಷ್ಟು ಸುತ್ತು ತೇದು ಬಿಟ್ಟೆಯೋ?' ಎಂದು ಕೇಳಿದರು. 'ಏಳು ಸುತ್ತು ಗುರುಗಳೇ' ಎಂದ ಸತ್ಯವಾದಿ. 'ಅಯ್ಯೋ ದಡ್ಡ, ಹೋಗಲಿ. ಎರಡು ಸುತ್ತು ಹಿಂದಕ್ಕೆ ತೇದು ಬಿಡು' ಎಂದರು ಗುರು. ಶಿಷ್ಯ ಮೊದಲು ಏಳು ಸುತ್ತು ಪ್ರದಕ್ಷಿಣೆಯ ರೀತಿ ಯಲ್ಲಿ ಸುತ್ತಿದ್ದವನು ಎರಡು ಸುತ್ತು ಅಪಸವ್ಯವಾಗಿ ತಿರುವಿದ. ರೋಗಿಗೆ ವಾಸಿಯಾಯಿತೇ ಇಲ್ಲವೇ ಎಂಬ ವಿಚಾರ ಇತಿಹಾಸದಿಂದ ಸ್ಪಷ್ಟಪಡುವುದಿಲ್ಲ.

ವೆಂಕಟವರದಯ್ಯಂಗಾರರ ವಿಚಾರ ನಾನು ಕೇಳಿದ ಇನ್ನೊಂದು ಕತೆ ಜ್ಞಾಪಕಕ್ಕೆ ಬರುತ್ತೆ. ಅವರು ಸಾಯಂಕಾಲಗಳಲ್ಲಿ ವಾಸವಾಗಿದ್ದ ಮಹಡಿಯ ವರಾಂಡದಲ್ಲಿ ಕುಳಿತು ಕಾಗದಗಳನ್ನು ನೋಡುವ ವಾಡಿಕೆ. ಆ ವರಾಂಡಕ್ಕೆ ಹೋಗಬೇಕಾದರೆ ಮೆಟ್ಟಲುಗಳನ್ನು ಏರಿಹೋಗಬೇಕು. ಆ ಹಂತದ ಬಳಿಯಲ್ಲಿ ಅವರ ಜಮಾದಾರ— ಅವನ ಹೆಸರು ಖಾಸಿಂ ಖಾನನೋ ಇನ್ನೆಂಥ ಖಾನನೋ, ಅಂತು ದಟ್ಟವಾದ ದಾಡಿಯ ಮುಸಲ್ಮಾನನು — ಕಾವಲು ಇದ್ದು ಡೆಪ್ಯುಟಿ ಕಮಿಷನರ್ ಭೇಟಿಗೆ ಬಂದವರನ್ನು ಅವರ ಅಪ್ಪಣೆ ಪಡೆದು ಅವರಲ್ಲಿಗೆ ಕರೆದೊಯ್ಯುತ್ತಿದ್ದ. ಒಂದು ದಿನ ಜಮಾದಾರ್ ತನ್ನ ಸ್ಥಾನವನ್ನು ಬಿಟ್ಟು ಯಾರ ಸಂಗಡಲೋ ಮಾತನಾಡುತ್ತನಿಂತ ವೇಳೆಯಲ್ಲಿ ಡೆಪ್ಯುಟಿ ಕಮಿಷನರ್‌ರವರನ್ನು ನೋಡಲಿಕ್ಕೆ ಬಂದಿದ್ದ ಒಬ್ಬ ಅರ್ಜಿದಾರನು ಯಾರ ನಿರ್ಬಂಧವೂ ಇಲ್ಲದೆ ಹಂತವನ್ನು ಹತ್ತಿ ವರಾಂಡವನ್ನು ಪ್ರವೇಶಮಾಡಿ ಅಲ್ಲಿ ಒಂದು ಬನಿಯ ನ್ನನ್ನು ಹಾಕಿಕೊಂಡು ಕುಳಿತಿದ್ದ ವ್ಯಕ್ತಿಯನ್ನುನೋಡಿ, "ಸಾಹೇಬರೆಲ್ಲಿ? ಸಾಹೇಬರು?" ಎಂದು ಬಹಳ ಆತುರದಿಂದ ಕೇಳಿದ. ಅಷ್ಟರಲ್ಲಿ ಜಮೇದಾರನು ಕರ್ತವ್ಯ ಲೋಪವಾದ ಗಾಬರಿಯಿಂದ ಹಿಂದೇ ಓಡಿ ಬಂದ.

ವೆಂಕಟವರದಯ್ಯಂಗಾರ್ರು — ಆ ವ್ಯಕ್ತಿಯು ಅವರೇ — ದುಡುಂ ಪ್ರವೇಶಮಾಡಿದವನ ಕಡೆ ನಸುನಗೆಯಿಂದ ನೋಡಿ,

'ಯಾರು ಬೇಕು?' ಎಂದು ಕೇಳಿದರು.

'ಸಾಹೇಬರು. ಡೆಪ್ಯುಟಿ ಕಮಿಷನರ್ ಸಾಹೇಬರು' ಎಂದ ಕಕ್ಷಿಗಾರ

ಅಯ್ಯಂಗಾರ್ರು 'ಅಪ್ಪಾ ಡೆಪ್ಯುಟಿ ಕಮಿಷನರ್ ಬೇಕಾದರೆ ನಾನು. ಬ್ರಾಹ್ಮಣ. ಅಯ್ಯಂಗಾರಿ. ಸಾಹೇಬರು ಬೇಕಾದರೆ ನೋಡು ಅವರು. ಅವರ ದಾಡಿ ನೋಡು.' ಎಂದು ಜಮೇದಾರರನ್ನು ತೋರಿಸಿದರಂತೆ. ವೆಂಕಟವರದಯ್ಯಂಗಾರ್ಯರಿಗೆ ಕೋಪ ಬಂದದ್ದನ್ನು ನಾನು ನೋಡಲಿಲ್ಲ. ಒಂದು Land Acquisition ಕೇಸು. Extension ಗಾಗಿ ಜಮೀನನ್ನು acquire ಮಾಡುತ್ತಿದ್ದರು. ಸರ್ಕಾರದ ಪರವಾಗಿ ಡೆಪ್ಯುಟಿ ಕಮಿಷನರ್ ಕೊಡಲು ಸಿದ್ಧವಾಗಿದ್ದ ಪರಿಹಾರ (Compensation) ನ್ಯಾಯವಾದ್ದಾಗಿತ್ತು. ಹಲವರು ಆ ದರವನ್ನು ಒಪ್ಪಿದರು. ಒಬ್ಬರು ಚೌಬೀನಿ ಎಂಥಾದ್ದೋ ಸಾಹೇಬರು ಬಹಳ ತಕರಾರು ಹೂಡಿದರು. ಇವರ ಹಟದಿಂದ ವ್ಯವಸ್ಥೆಗೆ ಬಂದಿದ್ದ ಇತರ ಕೇಸುಗಳು ಪುನಃ ಚರ್ಚೆಗೆ ಬೀಳುವ ಸಂಭವ ಕಂಡಿತು. ವೆಂಕಟವರದಯ್ಯಂಗಾರರು ಎಷ್ಟು ಬಗೆಯಿಂದ ಸಮಾಧಾನ ಹೇಳಿದರೂ ಚೌಬೀನಿ ಸಾಹುಕಾರರು ಕೇಳಲಿಲ್ಲ.

"ಇತರರು ಎಕರೆ ಒಂದಕ್ಕೆ ೫೦೦ ರೂ ಕೊಡುವುದಕ್ಕೆ ಸಿದ್ಧರಿದ್ದಾರೆ. ನಿಮಗೆ ೩೦೦ ಕ್ಕೆ ಹೇಗೆ ಕೊಡಲಿ?"

"ಕೇಳಿ! ಸಾಹೇಬರೆ. ಅಲ್ಲಿನ ಜಮೀನು ಕ್ರಯಪತ್ರಗಳ ದಾಖಲೆ ಸಬ್ ರಿಜಿಸ್ಟ್ರಾರ್ ಆಫೀಸಿನಿಂದ ತರಿಸಿದ್ದೇನೆ. ೨೫೦ ರೂ. ದರವಮೇಲೆ ಯಾವುದೂ ಇಲ್ಲ. ಎಲ್ಲರೂ ಒಪ್ಪಿರುವಂತೆ ನೀವೂ ಒಪ್ಪಿ."

"ನೈ ಸಾಬ್ ಕಬ್ಬಿ ನೈ ಹೋತಾ. ಮೈ ಝೂಟ್ ನೈ ಬೊಲ್ತಾಹು. ಮೈ ಝೂಟ್ ಬೋಲ್ಯಾ ತೊ ನಜಾ ದೇ ದಾಲೊ. ಜೈಲ್ ಕೊ ಭೇಜೊ."

ಚೌಬೀನಿಯವರ ಪ್ರತಿಯೊಂದು ವಾದಕ್ಕೂ ಇದೇ ಪಲ್ಲವಿ. "ಜೈಲು" "ಸಜಾ".

ರಾತ್ರಿ ಎಂಟು ಗಂಟೆಯಾಯಿತು. ವೆಂಕಟವರದಯ್ಯಂಗಾರರ ಊಟದ ಸಮಯ. ಇನ್ನೂ ಈ ಪಂಚಾಯಿತಿ ಮುಗಿಯಲೇ ಇಲ್ಲ.

"ಜೈಲ್ ಕು ಭೇಜೊ. ಸಜಾ ದೇ ದಾಲೊ."

ಡೆಪ್ಯುಟಿ ಕಮಿಷನರ್ ನಿಟ್ಟುಸಿರು ಬಿಟ್ಟು ಎದ್ದರು. "ಬೇಡ, ಸಾಹೇಬ್ರೆ, ಕೆಟ್ಟ ಮಾತನಾಡಬೇಡಿ. ಜೈಲು, ಸಜಾ ಅಷ್ಟೇನೂ ಭೋಗದ ವಸ್ತುಗಳಲ್ಲ. ಅವುಗಳನ್ನು ಅನುಭವಿಸುವುದಕ್ಕೂ ಸ್ವಲ್ಪ ಪ್ರಯತ್ನ ಮಾಡಬೇಕು. ಈಗ ನೋಡಿ, ನಿಮಗೆ ಅಷ್ಟು ಕುತೂಹಲವಿದ್ದರೆ ಒಂದು ಉಪಾಯ. ಈ ಮೇಜಿನ ಮೇಲಿರುವ ಸಾಮಾನು ಯಾವುದನ್ನಾದರೂ ಎತ್ತಿಕೊಂಡು ಓಡಿ. ನಿಮ್ಮ ಆಶೆತೀರುತ್ತೆ. ಒಂದು ಹದಿನೈದು ದಿನ ವಾದರೂ ಆ ಸುಖ ಅನುಭವಿಸಬಹುದು."

ಎಂದು ಹೇಳಿ ಕೇಸನ್ನು ಮುಂದಿನ ದಿನಕ್ಕೆ ಹಾಕಿ ಎದ್ದುಹೋದರು. ಮಾರನೆಯ ದಿನ ಕೇಸನ್ನು ಪುನಃ ತೆಗೆದುಕೊಂಡಾಗ ಚೌಬೀನಿ ಸಾಹೇಬರು ಹಟವನ್ನು ಬಿಟ್ಟಿದ್ದರು.

ನಾನು ಮೈಸೂರಿನ ಹಂಗಾಮಿ ಅಮಲ್ದಾರನಾದಾಗ ನನಗೆ ಕೆಲಸದ ಅನುಭವವೇನೂ ಆಗಲಿಲ್ಲ. ಖಾಯಂ ಅಮಲ್ದಾರರು ಕಾಗದಗಳನ್ನೆಲ್ಲಾ ಅಮಾನತ್ತಿನಲ್ಲಿಡಬೇಕೆಂದು ಗುಮಾಸ್ತರುಗಳಿಗೆ ಹೇಳಿದ್ದರಂತೆ. ಗುಮಾಸ್ತರುಗಳ ದಫ್ತರಗಳನ್ನು ಬಿಚ್ಚಿಸಿ ಕಾಗದಗಳನ್ನು ಈಚೆಗೆ ತೆಗೆಯಿಸಿ ನನ್ನ ಅಧಿಕಾರವನ್ನು ಹಟಾತ್ತಾಗಿ ಚಲಾಯಿಸಲು ನನಗೆ ಅನುಭವ ಸಾಲದು. ಅವಶ್ಯಕತೆಯೂ ಕಾಣಲಿಲ್ಲ. ಆ ಕಾಲದಲ್ಲಿ ನನಗೆ ಮೂರನೆ ಕ್ಲಾಸ್ ಮ್ಯಾಜಿಸ್ಟ್ರೇಟರ ಅಧಿಕಾರ ಬಂತು. ತಾಲ್ಲೂಕಿನ ಮತ್ತು ಶಹರಿನ ಆ ದರ್ಜೆಯ ಮೊಕದ್ದಮೆಗಳನ್ನು ನನ್ನ ಅಧಿಕಾರಕ್ಕೆ ಒಳಪಡಿಸಿದರು. ನಾನು ಹಿಂದೆ ಲಾಯರಾಗಿದ್ದವನಾದ್ದರಿಂದ ಈ ಅಧಿಕಾರದಿಂದ ಬಹಳ ಹೆಮ್ಮೆಯುಂಟಾಯಿತು. ಸ್ವಲ್ಪ ಅಹಂಕಾರವನ್ನೂ ತೋರಿಸುತ್ತಿದ್ದೆನೆಂದು ಕಾಣುತ್ತೆ. ಈ ಸಂಬಂಧದಲ್ಲಿ ಒಂದೆರಡು ಸಂಗತಿಗಳು ಈಗಲೂ ನೆನಪಿಗೆ ಬರುತ್ತವೆ.

೫

ಒಂದು ಸಲ ಖಾಯಂ ಅಮಲ್ದಾರರು ನನ್ನನ್ನು ಎಂದೂ ಇಲ್ಲದೆ ತಮ್ಮ ಜೊತೆಗೆ ಸರ್ಕೀಟಿಗೆ ಬರಬೇಕೆಂದು ಕರೆದರು. ಹೋದೆ. ಅವರ

ಸಂಗಡ ಚಟ್ಟನಹಳ್ಳಿಯ ಹತ್ತಿರ ಯಾವುದೋ ಗ್ರಾಮಕ್ಕೆ ಹೋದೆ. ಅಲ್ಲಿ ನಮ್ಮನ್ನು ಎದುರುಗೊಳ್ಳಲು ಬಂದವರಲ್ಲಿ ನನ್ನ ಕೋರ್ಟಿನಲ್ಲಿ ತನಿಖೆಯಲ್ಲಿದ್ದ ಒಂದು ಮೊಕದ್ದಮೆಯ ಆಪಾದಿತನಿದ್ದ. ಅಮಲ್ದಾರರು ನನಗೆ ಅವನನ್ನು ತೋರಿಸಿ, 'ನೋಡಿ ಪ್ರೊಬೇಷನ್ನರೆ' ಇವರು ಬಸವೇಗೌಡರೆಂಬ ಭಾರಿ ರೈತರು. ಬಹಳ ದೊಡ್ಡ ಮನುಷ್ಯರು. ನನಗೆ ತುಂಬ ಬೇಕಾದವರು. ಇವರ ಮೇಲೆ ಯಾರೋ ಪುಂಡರು ಮೊಖದ್ದಮೆ ಮಾಡಿದ್ದಾರಂತೆ,' ಎಂದು ಹೇಳಿದರು. ಬಸವೇಗೌಡರು ಬಗ್ಗಿ ಕೈಮುಗಿದು ನಿಂಬೇಹಣ್ಣನ್ನು ಒಪ್ಪಿಸಿದರು.

ನನಗೆ ಇದು ಅಕ್ರಮವೆಂದು ಕಂಡಿತು. ನಾನು ಅಮಲ್ದಾರರಿಗೆ ಆಮೇಲೆ ನನ್ನ ಅಸಮಾಧಾನವನ್ನು ಸೂಚಿಸಿದೆ. ಮುಂದೆ ನಡೆದ ವಿಚಾರಣೆಯಲ್ಲಿ ಕೇಸು ರುಜುವಾತ್ ಸಾಲದ್ದರಿಂದ ಬಸವೇಗೌಡನನ್ನು ಖುಲಾಸೆ ಮಾಡಿದೆ. ಅವನು ಅಮಲ್ದಾರರ ಶಿಪಾರ್ಸಿನಿಂದ ಅನುಕೂಲವಾಯಿತೆಂದು ತಿಳಿದನೋ ಏನೋ ಕಾಣೆ. ಆದರೆ ಅಮಲ್ದಾರರು ಪುನಃ ನನ್ನ ಹತ್ತಿರ ಶಿಪಾರ್ಸಿಗೆ ಬರಲಿಲ್ಲ.

ಇನ್ನೊಂದು ಮೊಕದ್ದಮೆಯಲ್ಲಿ ಆಪಾದಿತನಾದವನು ಪಾಂಡುರಂಗ ಶೆಟ್ಟಿ ಎಂಬ ಒಬ್ಬ ಲಾಯರ್ ಗುಮಾಸ್ತ. ಅವನು ಬಹಳ ತಂಟ್ಕಲುಮಾರಿ. ಪ್ರಬಲ. ದೊಡ್ಡ ಸ್ಥಳಗಳಲ್ಲಿ ವ್ಯಾಪಕ. ಅನೇಕ ಮನೆಗಳನ್ನು ಹಾಳುಮಾಡಿದ್ದನೆಂದು ಪ್ರತೀತಿ. ಅವನನ್ನು ಕಂಡರೆ ಜನಗಳು ಹೆದರುತ್ತಿದ್ದರು. ಅವನದು ಬಹಳ ಧೈರ್ಯವಾದ ಧೋರಣೆ. ಅವನ ಮೇಲಿನ ಆಪಾದನೆ, ನೆರೆಮನೆಯ ಒಬ್ಬ ಗರೀಬ ವಿಧವೆ ತಂದು ಹಾಕಿಕೊಂಡಿದ್ದ ಕಲ್ಲು ಚಪ್ಪಡಿಯನ್ನು ಅವಳು ಬೇಡವೆಂದರೂ ಧಿಕ್ಕಾರದಿಂದ ತನ್ನ ಮನೆಗೆ ಬಚ್ಚಲ ಉಪಯೋಗಕ್ಕಾಗಿ ತೆಗೆದುಕೊಂಡು ಹೋದನೆಂದು. ನಡೆದ ಸಂಗತಿ ಸಂದೇಹಕ್ಕೆ ಅವಕಾಶವಿಲ್ಲದಂತೆ ರುಜುವಾತಾಯಿತು. ಶೆಟ್ಟಿ ಒಂದೊಂದು ಹೀರಿಂಗಿಗೂ ಒಬ್ಬೊಬ್ಬ ದೊಡ್ಡ ಲಾಯರನ್ನು ಕರೆದುಕೊಂಡು ಬರುತ್ತಿದ್ದ. ಪ್ರಾಸಿಕ್ಯೂಷನ್ ಸಾಕ್ಷಿಗಳೆಂದರೆ ಅವನಿಗೆ ಬಹಳ ತಿರಸ್ಕಾರ. ಕೋರ್ಟು ಎಂದರೂ ಅಷ್ಟೇನೂ ಗೌರವವಿಲ್ಲ. ಅನೇಕ ಕೋರ್ಟುಗಳನ್ನು ನೋಡಿದವನು. ನನ್ನದು ಮೂರನೆಯ ಕ್ಲಾಸ್

ಕೋರ್ಟು—ತೀರಾ ಜುಜುಬಿ. ವಿಚಾರಣೆ ಮುಗಿದಮೇಲೆ, ನಾಳೆ ಜಡ್ಜ್‌ಮೆಂಟ್ ಹೇಳುತ್ತೇನೆ; ೧೧ ಗಂಟೆಗೆ ಬರಬೇಕೆಂದು ಹೇಳಿದೆ. ಆಪಾದಿತನು, ಆಗುವುದಿಲ್ಲ ನನಗೆ ಡಿಸ್ಟ್ರಿಕ್ಟ್ ಕೋರ್ಟಿನಲ್ಲಿ ಕೆಲಸವಿದೆ, ಎಂದ. ಕೆಲಸ ತೀರಿಸಿಕೊಂಡು ೩ ಗಂಟೆಗೆ ಬನ್ನಿ, ಎಂದೆ. ೩ ಗಂಟೆಗೆ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟ್ ಕೋರ್ಟಿನಲ್ಲಿ ಅಪೀಲಿದೆ, ಎಂದ. ಆಮೇಲೆ ಕೆಲಸ ಮುಗಿಸಿಕೊಂಡು ೪ ಗಂಟೆಗೆ ಬರುತ್ತೇನೆಂದು ಭರವಸೆ ಕೊಟ್ಟ. ೪ ಗಂಟೆಗೆ ಬಂದ. 'ಜಡ್ಜ್‌ಮೆಂಟ್ ತಯಾರಾಗಿದೆಯೇ?' ಎಂದು ಕೇಳಿದ. ನಾನು ಬೇರೆ ಏನೋ ಕೆಲಸಮಾಡುತ್ತಿದ್ದೆ. 'ಸ್ವಲ್ಪ ತಡೆಯಿರಿ' ಎಂದೆ. 'ಏನು ಮಹಾಸ್ವಾಮಿ, ನಾನು ಪುನಃ ಕೋರ್ಟಿಗೆ ಹೋಗ ಬೇಕು' ಎಂದ. ಅವರಿಗೆ, 'ಏನ್ರಿ ಇಷ್ಟು ಆತುರಪಡುತ್ತೀರಿ' ಎಂದೆ. 'ನನಗೆ ಬಹಳ ಕೆಲಸವಿದೆ ಸ್ವಾಮಿ. ಇದು ಒಂದೇ ಅಲ್ಲ. ಪುನಃ ಕೋರ್ಟಿಗೆ ಹೋಗಬೇಕು' ಎಂದ.

'ಹಾಗೋ? ನಿಮಗೆ ಈಗ ಹದಿನೈದು ದಿನ 'rest' (ವಿಶ್ರಾಂತಿ)ಗೆ ಏರ್ಪಾಡಾಗಿದೆ. ನಿಮ್ಮ ಕೋರ್ಟು ಕೆಲಸಗಳಿಗೆ ಬೇರೆ ಯಾರನ್ನಾದರೂ ಕಳುಹಿಸಿಬಿಡಿ' ಎಂದು ಹದಿನೈದು ದಿವಸದ ಸಜಾತೀರ್ಪನ್ನು ಕೊಟ್ಟೆ.

ಆ ಮೊಕದ್ದಮೆ ಆಗಿನ ಕಾಲದಲ್ಲಿ ಬಹಳ ಗಡಿಬಿಡಿಯನ್ನು (Sensation) ಉಂಟುಮಾಡಿತು. ಆಮೇಲೆ ಲಾಯರುಗಳ ಓಡಾಟವೇನು, ಜಾಮೀನು ಅಪ್ಲಿಕೇಷನ್ನುಗಳೇನು, ಹುಡುಗ ಮ್ಯಾಜಿಸ್ಟ್ರೇಟರ ದುಡುಕಿನ ಫಿರ್ಯಾದುಗಳೇನು. ನಾನು ಎಲ್ಲಿಗೆ ಹೋದರೂ ಜನಗಳು 'ಇವರೇಯಪ್ಪ ಪಾಂಡುರಂಗ ಶೆಟ್ಟಿಗೆ ಸಜಾ ಕೊಟ್ಟವರು' ಎಂಬಂತೆ ನನ್ನ ಕಡೆಗೆ ನೋಡು ತ್ತಿದ್ದರು.

ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರ ಹತ್ತಿರ 'appeal' ದಾಖಲಾಯಿತು. ಆಗ ಮೈಸೂರಿನಲ್ಲಿ ಪ್ರಖ್ಯಾತ ಲಾಯರಾದ ಎಂ. ಸಿ. ರಂಗೈಯ್ಯಂಗಾರರು ಅಪ್ಪಲ್ಲೆಂಟ್ ಕಡೆ ವಕಾಲತ್ ತೆಗೆದು ನನ್ನ ದುಡುಕನ್ನೂ ದರ್ಪವನ್ನೂ ಅವರ ವಾದದಲ್ಲಿ ಚೆನ್ನಾಗಿ ಖಂಡಿಸಿದರೆಂದು ಕೇಳಿದೆ. ವಾದವಾದ ಮಾರನೆಯ ದಿನ ನಾನು ಕೋರ್ಟಿನಿಂದ ಮನೆಗೆ ಹೋಗುತ್ತಿದ್ದಾಗ ಪೋಲೋ ಆಡಲು ಹೋಗುತ್ತಿದ್ದ ಸರ್ದಾರ್ ಕಾಂತರಾಜೇ ಅರಸಿನವರು

ಎದುರಿಗೆ ಸಿಕ್ಕಿದರು. ಅವರೇ ಡಿಸ್ಟ್ರಿಕ್ಟು ಮ್ಯಾಜಿಸ್ಟ್ರೇಟರು. ನಾನು ಕೈ ಮುಗಿದದ್ದಕ್ಕೆ ಜವಾಬು ಕೈ ಮುಗಿದು, 'ಏನ್ರಿ, You seem inclined to a wholesome severity,' ಎಂದರು.

"ನಿಮ್ಮದು ಸ್ವಲ್ಪ ಕಠಿಣ ಚಿಕಿತ್ಸೆಯ ವೈದ್ಯಕೆಯೆಂದು ಕಾಣುತ್ತೆ."

ನಾನು ಇನ್ನೂ ಹುಡುಗ. ರಕ್ತದ ಕಾವು, ಚಲನೆ ಎರಡೂ ಜೋರಾಗಿದ್ದವು. "You are referring to Panduranga Setty's case, I believe Sir. He seemed to me to deserve what I gave him His appeal is before you. If you think him an illused worthy man my mistake is easily mended" ಎಂದೆ.

"ತಾವು ಪಾಂಡುರಂಗ ಶೆಟ್ಟಿಯ ಕೇಸನ್ನು ಪ್ರಸ್ತಾಪಿಸುವಂತೆ ತೋರುತ್ತೆ. ನಾನು ಅವನಿಗೆ ತಕ್ಕ ಶಿಕ್ಷೆ ಕೊಟ್ಟೆನೆಂದು ಭಾವಿಸಿದೆ. ಅವನ ಅಪ್ಪೀಲು ತಮ್ಮಲ್ಲಿದೆ. ಅವನು ಅನ್ಯಾಯವಾಗಿ ಶಿಕ್ಷಿಸಲ್ಪಟ್ಟ ಯೋಗ್ಯನೆಂದು ತಾವು ತಿಳಿದರೆ, ನನ್ನ ತಪ್ಪನ್ನು ಸುಲಭವಾಗಿ ತಿದ್ದಬಹುದು."

ಅವರು ನಕ್ಕು ಸುಮ್ಮನೆ ಹೊರಟು ಹೋದರು. ನಾನು ಹಾಗೆ ಮಾತನಾಡಬಾರದಾಗಿತ್ತೆಂದು ನನ್ನ ಮನಸ್ಸು ಅಳುಕಿತು. ಆದರೆ ನಾನಾಗಿ apologise ಮಾಡಲಿಕ್ಕೆ ಗರ್ವಬಿಡದು. ಕೆಲವು ದಿನಗಳ ನಂತರ ಯಾವುದೋ ಕೆಲಸಕ್ಕಾಗಿ ಡಿಸ್ಟ್ರಿಕ್ಟ್ ಆಫೀಸಿಗೆ ಹೋದೆ. ಆಗ ಅರಸಿನವರು ನನ್ನನ್ನ ಅವರ chamberಗೆ ಕರೆಸಿ ಮುಗುಳು ನಗೆಯಿಂದ:

"I am afraid poor Panduranga Setty did not seem a saint to me either, Mr Rama Rao. I dismissed his appeal." ಎಂದರು.

"ಪಾಂಡುರಂಗ ಶೆಟ್ಟಿ ಪರಮ ಭಾಗವತನೆಂದು ನನಗೂ ಕಾಣಲಿಲ್ಲ, ರಾಮರಾಯರೆ, ಅವನ ಅಪ್ಪೀಲನ್ನು ವಜಮಾಡಿದೆ."

ನಾನು,

"Sir, I am sorry for the fellow, but I am grateful to you for giving me this opportunity for expressing my

regret for a very foolish thing I said to you. Please accept my apology," ಎಂದೆ.

"ಸ್ವಾಮಿ ಪಾಪ, ಬಡಪಾಯಿ, ಹೋಗಲಿ. ನಾನು ಅವತ್ತು ಬಹಳ ಅವಿವೇಕವಾಗಿ ಆಡಬಾರದ ದುಡುಕುಮಾತನ್ನು ತಮಗೆ ಆಡಿದೆ. ಅದಕ್ಕೆ ಕ್ಷಮಾಪಣೆ ಬೇಡಿಕೊಳ್ಳಲು ಅವಕಾಶಕೊಟ್ಟದ್ದಕ್ಕೆ ಕೃತಜ್ಞ ನಾಗಿದ್ದೇನೆ. ನನ್ನ ಈ ಬೇಡಿಕೆಯನ್ನು ಮನ್ನಿಸಬೇಕು."

"Oh, I have also been young," "ನಾನೂ ಹುಡುಗ ನಾಗಿದ್ದೆ, ಮರೆತಿಲ್ಲ" ಎಂದು ಅವರು ನನ್ನ ಕೈಯನ್ನು ಅಲ್ಲಾಡಿಸಿ ಬೀಳ್ಕೊಟ್ಟರು.

ನಾನು ಮೈಸೂರಿನಲ್ಲಿ ಪ್ರೊಬೇಷನರ್ ಆಗಿದ್ದಾಗಲೇ ನನ್ನನ್ನು ಹದಿನೈದು ದಿನಗಳ ಮಟ್ಟಿಗೆ ಅತ್ತಿಕುಪ್ಪೆ (ಕೃಷ್ಣರಾಜಪೇಟೆ) ತಾಲ್ಲೂಕಿಗೆ ಅಲ್ಲಿನ ಖಾಯಂ ಅಮಲ್ದಾರ್ ಶ್ರೀ ಕೃಷ್ಣಾಜಿ ನಾರಾಯಣರು ರಜಾ ತೆಗೆದುಕೊಂಡ vacancy ಯಲ್ಲಿ Acting Amildar ಆಗಿ ಕಳುಹಿಸಿದರು. ಆಗತಾನೆ ನನ್ನ 'riding course' ಮುಗಿದಿತ್ತು. ನನಗೆ ಕುದುರೆ ಸವಾರಿ ಯೆಂದರೆ ಬಹಳ ಷೋಕಿಯಿತ್ತು. Shooting ಎಂದರೆ ನನಗೆ ಬಹಳ ಉತ್ಸಾಹ. ಒಂದು ಸೊಗಸಾದ Winchester repeating rifle ಮತ್ತು Webley revolver ನನ್ನ ಶಕ್ತಿಗೆ ಮೀರಿದ ಕ್ರಯ ಕೊಟ್ಟು ಕೊಂಡಿದ್ದೆ. ಬಹಳ ಗತ್ತಾದ ಒಂದು ಬಿಳೀ ಕುದುರೆಯನ್ನೂ ಇಟ್ಟದ್ದೆ. ಸವಾರಿಗೆ, ಷಿಕಾರಿಗೆ ಉಚಿತವಾದ ಉಡುಪನ್ನು ಧರಿಸುತ್ತಿದ್ದೆ. ನಾನು ಅತ್ತಿಕುಪ್ಪೆ ಕಸಬಾಕ್ಕೆ ರಾತ್ರಿ ತಲುಪಿ ಮಾರನೆಯ ಬೆಳಗ್ಗೆ ಕೃಷ್ಣಾಜಿ ನಾರಾಯಣ ರನ್ನು ನೋಡಲಿಕ್ಕೆ ಹೋದೆ. ನನ್ನ ವೇಷ ಅಲ್ಲಿಗೆ ಹೊಸದೆಂದು ಕಾಣುತ್ತದೆ. ನಾನು ತಂಗಿದ್ದ Traveller's Bungalow ಬಿಡುತ್ತಲೇ ಕಹಳೆಯವನು ನನ್ನ ಆಗಮನವನ್ನು ಘೋಷಿಸಿದ. ಅಲ್ಲಿಂದ ಕಛೇರಿಗೆ ತಲುಪುವವರೆಗೂ ಹೊಸ ಅಮಲ್ದಾರರು, ಹುಡುಗ ಅಮಲ್ದಾರರನ್ನು ನೋಡಲಿಕ್ಕೆ ಬೀದಿಯುದ್ದಕ್ಕೂ ಜನ ನೆರೆದಿದ್ದರು. ಕೃಷ್ಣಾಜಿ ನಾರಾಯಣರು ನನಗೆ ಹಸ್ತಲಾಘವವನ್ನು ಕೊಟ್ಟು 'Good morning' ಎಂದು ಇಂಗ್ಲೀಷಿನಲ್ಲಿ ಹೇಳಿದರು.

ಕೃಷ್ಣಾಜಿ ನಾರಾಯಣರು ವೃದ್ಧರು. ನಾನು 'Good morning Sir. I am glad to meet you' ಎಂದೆ.

ಅವರು 'Yes' ಎಂದರು.

ಅವರ ಮುಂದೆ ಮೇಜಿನ ಮೇಲೆ ಕಾಗದಗಳ ರಾಶಿಯಿತ್ತು. ನಾನು ಹೋದಾಗ ಕಾಗದಗಳನ್ನು ಸೈನು ಮಾಡುತ್ತಿದ್ದರು.

'I am not in a hurry to assume charge I can await your convenience When will it be convenient to you to hand over ?' ಎಂದು ಕೇಳಿದೆ.

ಅವರು ಮತ್ತೆ 'Yes' ಎಂದರು.

ಅರ್ಥವಾಯಿತು. ಅವರ ಹಿಂದೆ ನಿಂತಿದ್ದ ಕೆಲವರು ಗುಮಾಸ್ತರುಗಳು ಒಬ್ಬರ ಕಡೆ ಒಬ್ಬರು ಹುಸಿನಗೆಯಿಂದ ನೋಡುತ್ತಿದ್ದುದನ್ನು ನನ್ನ ದೃಷ್ಟಿಯಿಂದ ಅಡಗಿಸಿ, ನಾನು ಕನ್ನಡದಲ್ಲಿ,

'ಏನೂ ಅವಸರವಿಲ್ಲಾ ಸ್ವಾಮಿ, ತಮಗೆ ಛಾರ್ಜ್ ಕೊಡಲು ಯಾವಾಗ ಅನುಕೂಲವೋ ಅಪ್ಪಣೆಯಾದರೆ ಆಗ ಬರಲಿಕ್ಕೆ ಸಿದ್ಧನಾಗಿದ್ದೇನೆ. ನನಗೆ ಅನಾನುಕೂಲವೇನೂ ಇಲ್ಲ' ಎಂದೆ.

ಅವರ ಮುಖ ಪ್ರಸನ್ನವಾಯಿತು ಅನಂತರ ಬುದ್ಧಿಶಾಲಿ ದೊಡ್ಡ ಮನುಷ್ಯರಂತೆಯೇ ಮಾತನಾಡಿದರು ಅವರ 'Yes' ವಾದದ ಮರ್ಮವೇನೆಂದರೆ, ಅವರಿಗೆ ಇಂಗ್ಲೀಷಿನ ಪರಿಚಯವಿಲ್ಲ. ನಾನು ಕೇವಲ ಕುಂಪಣಿ ಸಂಪ್ರದಾಯದವನೆಂದು ತಿಳಿದು, ಅವರಿಗೆ ಬಂದ ಇಂಗ್ಲೀಷನ್ನು ನನ್ನ ಮೇಲೆ ಪ್ರಯೋಗ ಮಾಡಿದರು. ನಾನು ನಾಡ ಮನುಷ್ಯ, ಕನ್ನಡಿಗನೆಂದು ನನ್ನ ನಡತೆಯಿಂದ, ಮಾತಿನಿಂದ ಅವರಿಗೆ ಗೊತ್ತಾದ ಮೇಲೆ, ಅವರು ಮೇಧಾವಿಗಳು ದೊಡ್ಡ ಮನುಷ್ಯರು, ಎಂದು ನನಗೂ ಗೊತ್ತಾಯಿತು. ಶೀಘ್ರದಲ್ಲೇ ನಮ್ಮ ಸ್ನೇಹ ಬೆಳೆಯಿತು.

ನಾನು ಆ ತಾಲ್ಲೂಕಿನಲ್ಲಿ ಇದ್ದಷ್ಟು ಕಾಲವೂ ನರ್ಕೀಟು, ಶಿಕಾರಿ, ಹೊಳೆಗಳಲ್ಲಿ ಅಂದರೆ ಕಾವೇರಿ ಹೇಮಾವತಿ ಇವುಗಳಲ್ಲಿ ಮೊಸಳೆಗಳನ್ನು shoot ಮಾಡುವುದು. ನಾನು ಅತ್ತಿಕುಪ್ಪೆಯವರಿಗೆ ಹುಡುಗ ಅಮಲ್ದಾರ. ನನ್ನ ಮೇಲೆ ಅವರಿಗೆ ಬಹಳ ಪ್ರೀತಿ. ಯಾವ ಹಳ್ಳಿಗೆ ಹೋದರೂ ಜನಗಳೆ

ಲ್ಲರೂ ನನ್ನನ್ನು ಬಹಳ ಆದರದಿಂದ ಕಾಣುತ್ತಿದ್ದರು. ಈ ಗ್ರಾಮಕ್ಕೆ ಏನಾದರೂ ಕುಂದು ಕೊರತೆಗಳಿವೆಯೇ ಎಂದು ಕೇಳಿದರೆ, 'ಏನೂ ಇಲ್ಲ ಮಹಾ ಸ್ವಾಮಿ. ತಮ್ಮ ದಯದಿಂದ ಎಲ್ಲವೂ ಅನುಕೂಲವಾಗಿದೆ,' ಎನ್ನುವರು. ನೋಡಿ, ಅಮಲ್ದಾರರು ಮಹಾಸ್ವಾಮಿ; ತಾಲ್ಲೂಕಿಗೆ ಸೌಖ್ಯವನ್ನು ಕೊಡುತ್ತಿದ್ದದ್ದು ಅವರ ದಯ. ಎಲ್ಲಿ ಹೋದರೂ ನಮ್ಮ ಸಾಮಾನಿನ ಗಾಡಿಗೆ ಬಿಟ್ಟಿ ಎತ್ತುಗಳು; ಮಿತಿಯಿಲ್ಲದಷ್ಟು ಹಾಲು, ಮೊಸರು, ಬೆಣ್ಣೆ. ಇವುಗಳನ್ನು ತೆಗೆದುಕೊಳ್ಳದಿದ್ದರೆ ಗ್ರಾಮಸ್ಥರಿಗೆ ಅಸಮಾಧಾನ. ಇದರ ವಿಚಾರವಾಗಿ ಒಂದು ನಿಜವಾದ ಕಥೆಯನ್ನು ಕೇಳಿದ್ದೆ. ಚಾಮರಾಜನಗರದ ತಾಲ್ಲೂಕಿನಲ್ಲಿನ ಒಂದು ಭಾರಿ ಗ್ರಾಮಕ್ಕೆ (ಅದರ ಹೆಸರು ಬೇಡ) ಅಮಲ್ದಾರರು (ಅವರ ಹೆಸರೂ ಅಪ್ರಕೃತ) ಹೋಗಿ ಮೊಕ್ಕಾಂ ಮಾಡಿದರಂತೆ. ಆ ಗ್ರಾಮದ ಒಬ್ಬ ಪುಣ್ಯವಂತ ರೈತ ಒಂದು ಮುದ್ದೆ ಚಿನ್ನದ ಹಾಗಿದ್ದ ಹಸುವಿನ ಬೆಣ್ಣೆಯನ್ನು ಕಾಣಿಕೆಯಾಗಿ ತಂದ. ಅಮಲ್ದಾರರು ವೆಂಕಟವರದಯ್ಯಂಗಾರರ ಶಿಷ್ಯರು.

'ತೂಕಮಾಡು ಬೆಣ್ಣೇನ. ನಾವು ಬಂದಿರುವುದು ಒಬ್ಬರು. ಇಷ್ಟು ಯಾಕೆ? ಅಚ್ಚೇರು ಕೊಟ್ಟರೆ ಸಾಕು.'

ರೈತ ಬಿರಬಿರನೆ ನೋಡಿದ, ಕಕ್ಕಾಬಿಕ್ಕಿಯಾಗಿ ನೋಡಿದ. ಅವನಿಗೆ ಅರ್ಥವಾಗಲಿಲ್ಲ.

ಪಟೇಲ, 'ಮಹಾಸ್ವಾಮಿ, ಮಾದೇಗೌಡರು ದೊಡ್ಡ ಕುಳ; ನೂರಾರು ಕಾಲನಡೆ ಇದೆ. ಅವರ ಹಟ್ಟೀಲಿ ಹೊತ್ತಿಗೆ ಮೂವತ್ತು ಸೇರು ಹಿಟ್ಟು ಬೇಯುತ್ತೆ. ಬೆಣ್ಣೆ ಅವರ ಕರಾವಿನದೇ. ಸ್ಥಳ ಮರ್ಯಾದೆಗೆ ಒಪ್ಪಿಸಲು ತಂದಿದ್ದಾರೆ. ಒಪ್ಪಿಸಿಗೋಬೇಕು,' ಎಂದ.

'ಛೇ! ನಾನು ಬಿಟ್ಟಿ ತೆಗೆದುಕೊಳ್ಳಬೇಕೆ? ಭಿಕ್ಷುಕನೆ?'

'ನಾನು ಮಾರೋಕೆ ಕವಾಡಿಗನೇ? ಬೇಡಿ ಬುದ್ಧಿ. ನಿಮ್ಮ ಧರ್ಮ ನಿಮ್ಮದು, ನಮ್ಮ ಧರ್ಮ ನಮ್ಮದು.'

ರೈತನಿಗೆ ಕೋಪ ಬಂದು ಕಣ್ಣುಗಳು ಕೆಂಪೇರಿದವು. ಹತ್ತಿರದಲ್ಲಿದ್ದ ಒಬ್ಬ ತಿರುಕ ಜಂಗಮನನ್ನು 'ಬನ್ನಿ ಶಿವನೆ' ಎಂದು ಕರೆದು, 'ಇದ

ಕೊನ್ನಿ. ನಮ್ಮ ಹಟ್ಟಿಗೆ ಹೋಗಿ ಎರಡು ಸೇರು ಅಕ್ಕಿ ಇಸುಕೊಂಡು ಸುಖವಾಗಿ ಊಟ ಮಾಡಿ. ಹೋಗೋ ಹೈದ; ಕೊಡಿಸೋ,' ಎಂದು ಅವನು ಅಮಲ್ದಾರರಿಗೆ ಕೈಮುಗಿದು ಹೊರಟುಹೋದನಂತೆ.

ಆಗಿನ ಕಾಲದಲ್ಲಿ ಅಮಲ್ದಾರರು ಸರ್ಕೀಟು ಹೊರಟರೆ ಅವರ ಸಂಗಡ ಬಹಳ ಪರಿವಾರವಿರುತ್ತಿತ್ತು. ಅವರು, ಅವರ ಖಾಸ ಆರ್ಡರ್ಲಿ, ಕುದುರೆಯಾಳು, ಗಾಡಿ ಹೊಡೆಯುವವನು, ಕೊಂಬಿನವರು, ದಫೇದಾರ; ಅಲ್ಲದೆ ಹೋಬಳಿ ಶೇಕದಾರರು, ಗುಮಾಸ್ತರು, ನಾಲ್ಕೈದು ಮಂದಿ ಬಿಲ್ಲೆ ಜವಾನರು, ಫಿರ್ಕಾ ಶ್ಯಾನುಭೋಗರುಗಳು, Tank Inspector, Work Inspector, ಒಂದೊಂದು ವೇಳೆ ಪೋಲೀಸು ಇನ್‌ಸ್ಪೆಕ್ಟರು, ಇವರುಗಳೆಲ್ಲರೂ ಇರುತ್ತಿದ್ದರು. ಮೊದಲು ಯಾರಿಗೂ Travelling allowance ಸೇ ಇರಲಿಲ್ಲ; ಅನಂತರ ಅಮಲ್ದಾರರಿಗೆ ದಿನಕ್ಕೆ ಒಂದು ರೂಪಾಯಿ ಕೊಡುತ್ತಿದ್ದರೆಂದು ಜ್ಞಾಪಕ. ಇಷ್ಟು ಜನಕ್ಕೂ ಅಮಲ್ದಾರರ ಬಿಡಾರದಲ್ಲೇ ಊಟ. ಇವರಿಗಲ್ಲದೆ ಊರಿನ ವಾಪಿ, ಪರದೇಶಿ, ಭೋಜನ ವೇಳೆಗೆ ಅಲ್ಲಿಗೆ ಬಂದಿರಬಹುದಾದ ಆಗಂತುಕರು, ಇವರುಗಳಿಗೂ ಸಮಾರಾಧನೆ. ಆಗಿನ ಮಾಮೂಲು, ಆ ಮೊಕ್ಕಾಂನ ಆಸುಪಾಸು ಗ್ರಾಮಗಳವರು ತಮ್ಮ ತಮ್ಮ ಗ್ರಾಮಗಳ ಗೌರವ ಶಕ್ತಿಗಳಿಗೆ ತಕ್ಕಂತೆ ಲವಾಜಮೆಯನ್ನು ಹೋಬಳಿ ಶೇಕದಾರರಲ್ಲೋ ಅಥವಾ ಯಾರಾದರೂ ಮುಖಂಡರಾದ ಗ್ರಾಮ ನೌಕರರಲ್ಲೋ ತಲಪಿಸಿಬಿಡುತ್ತಿದ್ದರು. ಹಾಲು, ಮೊಸರು, ಬೆಣ್ಣೆ, ಕಾಳು, ಕಡ್ಡಿ, ಕೊನೆಗೆ ಸೌದೆ ಸಹ, ಚಾವಡಿಯ ಬಳಿಯಲ್ಲಿ ಶೇಖರವಾಗುತ್ತಿತ್ತು. ಅಲ್ಲಿ ಎಷ್ಟು ದಿನಗಳ ಮೊಕ್ಕಾಂ ಎಂದು ಮೊದಲೇ ತಿಳಿದು ಅದಕ್ಕೆ ತಕ್ಕಂತೆ ಗ್ರಾಮ ಕಾಮಧೇನುವನ್ನು ಕರೆಯುತ್ತಿದ್ದರು. ಅಡಿಗೆಗೆ ಪರಿಚಾರಿಕೆಗೆ ಆ ವಿದ್ಯೆಗಳಲ್ಲಿ ಪರಿಶ್ರಮ ಅಥವ ಧೈರ್ಯವಿರುವ ಶ್ಯಾನುಭೋಗರುಗಳು, ತಾಲ್ಲೂಕು junior ಸಿಬ್ಬಂದಿ—ಅಂದರೆ ದಫ್ತರಬಂದಿ, ಜುನಾರದಾರ, ವಗೈರೆ—ಯವರೆಲ್ಲರೂ ಸೇರುತ್ತಿದ್ದರು. ಸಾಮಾನ್ಯವಾಗಿ ಅಡಿಗೆಯೆಂದರೆ, ಅನ್ನ, ಸಾರು, ಹುಳಿ, ಚಟ್ನಿ, ಮಜ್ಜಿಗೆ, ತುಪ್ಪ. ಸಾರು, ಹುಳಿ, ಬಹಳ ರುಚಿಯಾಗಿ ಇಳಿಯುತ್ತಿದ್ದವೆಂದು ನನಗೆ ನೆನಪು. ಊಟದ ಹೊತ್ತೆಂದರೆ

ಮಧ್ಯಾಹ್ನ ಒಂದು ಗಂಟೆಯಾಗುತ್ತಿತ್ತು. ಅಮಲ್ದಾರರು (ಊಟದ ವೇಳೆಯಲ್ಲಿ ಇವರನ್ನು ಯಜಮಾನರೆಂದು ಕರೆಯುವ ಪದ್ಧತಿ) ಮೊದಲಾಗಿ ಬ್ರಾಹ್ಮಣರೆಲ್ಲರೂ ಸಾಧ್ಯವಾದ ಮಟ್ಟಿಗೆ ಒಂದೇ ಕಡೆಯಲ್ಲಿ ಕೂಡುತ್ತಿದ್ದರು.

ನಾನು ನೋಡಿದ ಹಾಗೆ ಈ ಮಾಮೂಲು ಬದಲಾಯಿಸಿತು. ನಾನು ಹನ್ನೊಂದು ಅಥವಾ ಹನ್ನೆರಡು ಗಂಟೆಯೊಳಗಾಗಿ ಊಟಮಾಡುತ್ತಿದ್ದವನಾದ್ದರಿಂದ ನನಗಾಗಿಯೇ ಬೇರೆ ಅಡಿಗೆಯನ್ನು ನನ್ನ ಅಡಿಗೆಯವನಿಂದಲೇ ಮಾಡಿಸುತ್ತಿದ್ದೆ. ಆದರೆ ಯಾವಾಗಲಾದರೂ ಸಾಮಾನ್ಯ ಕೂಟಕ್ಕೂ ಸೇರುತ್ತಿದ್ದೆ.

ನಾನು ಅಸಿಸ್ಟೆಂಟ್ ಕಮಿಷನರ್ ಆದಾಗ ತಾಲ್ಲೂಕ್ ಅಮಲ್ದಾರರುಗಳ ದರ್ಪ ಸ್ವಲ್ಪ ಕಡಮೆಯಾಗಿದ್ದಂತೆ ನನ್ನ ಭಾವನೆ. ಆದರೂ Camp ಗಳ ಆಡಳಿತ ಮೊದಲಿನಂತೆಯೇ ಇತ್ತೆಂದು ನನಗೆ ತೋರಿತು. ಆದರೆ ಈ ಏರ್ಪಾಡುಗಳು ಅಸಿಸ್ಟೆಂಟ್ ಕಮಿಷನರ್‌ರ ಗಮನಕ್ಕೆ ಬರುವುದಿಲ್ಲ. ಕಣ್ಮರೆಯಾಗಿ ನಡೆಯುತ್ತವೆ. ಅನೇಕ ವರ್ಷಗಳ ನಂತರ ಒಂದು ಸಲ ತಾಲ್ಲೂಕಿನಲ್ಲಿ (ಆಗ ನಾನು ಅಸಿಸ್ಟೆಂಟ್ ಕಮಿಷನರ್, ಸಬ್‌ಡಿವಿಜನ್ ಆಫೀಸರಾಗಿದ್ದೆ) ರೀ ಸರ್ವೆ ನಡೆಯುತ್ತಿತ್ತು. ಒಂದೇ ಮೊಕ್ಕಾಂನಲ್ಲಿ ಸರ್ವೇ ಆಫೀಸರು (ಒಳ್ಳೆ ಖದೀಮರು, ಬ್ರಿಟಿಷ್ ಆಫೀಸರುಗಳ ಹತ್ತಿರ ತರಬೇತಾದವರು), ಅಮಲ್ದಾರರು, ನಾನು ಇದ್ದೆವು. ಸರ್ವೇ ಆಫೀಸರವರ ಬಿಡಾರದಲ್ಲಿ ಊಟ. ಊಟ ಮುಗಿದ ಕೂಡಲೇ ಸರ್ವೇ ಆಫೀಸರು ಧಟಕ್ಕನೆ,

"ಇನ್ನು ಇಲ್ಲಿ ಸಾಕು ಸುಬೇದಾರ್ರೆ. ಮುಂದಿನ ಕ್ಯಾಂಪಿಗೆ ಹೋಗೋಣ," ಎಂದರು.

ಅಮಲ್ದಾರ್ರು, 'ಇನ್ನೂ ಎರಡು ದಿನಗಳು ಇಲ್ಲೇ ಮೊಕ್ಕಾಂ ಇದೆ. ಜನಗಳಿಗೂ ನೋಟೀಸ್ ಕೊಟ್ಟಿದೆ,' ಎಂದರು.

ಸರ್ವೇ ಸಾಹೇಬರು, 'ಜನಗಳು ಅಲ್ಲಿಗೂ ಬರುತ್ತಾರೆ. ಈ ಮೊಕ್ಕಾಂ ಸಾಕು. ಇನ್ನು ತಡೆಯಲಾರದು. ತರ್ಕಾರಿಯಿಲ್ಲ, ಅಂಗಡಿ ತುಪ್ಪ,' ಎಂದರು.

ನ್ಯಾಯವಾದ ಮಾತು. ಅದೇ ಸಾಹೇಬರು, 'It is the business of the villagers to keep us comfortable We come on their work. Not our Papa's work !'

ಸಾಹೇಬರ ಇಂಗ್ಲೀಷು ಅಷ್ಟು ಸೊಗಸಾದ್ದಲ್ಲದಿದ್ದರೂ ಅವರ ಅನುಭವ ವಿವೇಚನೆ ಅಮೋಘವಾದವು. ನಾವು ಬೇರೆ Campಗೆ ಹೋದೆವು. ಒಡನೆ ಸಾಹೇಬರ ಬುದ್ಧಿವಂತಿಕೆಯ ಫಲವನ್ನು ಅನುಭವಿಸಿದೆವು.

ಸಪ್ಲೈ ವಿಚಾರವನ್ನು ಬಿಡುವುದಕ್ಕೆ ಮುಂಚೆ ಇನ್ನೊಂದು ಸಣ್ಣ ಕಥೆ. ನಾನು ನೌಕರಿಗೆ ಸೇರಿದ ಅನೇಕ ವರ್ಷಗಳ ನಂತರ, ಸಬ್ ಡಿವಿಜನ್ ಆಫೀಸರಾದ ನಾನೂ ನನ್ನ ಡೆಪ್ಯುಟಿ ಕಮಿಷನರ್ ಶ್ರೀ ಕೆ. ಶ್ರೀನಿವಾಸ ರಾಯರೂ ಚನ್ನಗಿರಿ ತಾಲ್ಲೂಕಿನಲ್ಲಿ Tour ಮಾಡುತ್ತಿದ್ದೆವು. ಅಲ್ಲಿ (ಪಾಂಡುರಂಗರಾಯನೆಂಬ ಹೆಸರೆಂದು ಜ್ಞಾಪಕ) ಒಬ್ಬ ಶೇಕದಾರನಿದ್ದ. ಆತನು ಮೊದಲು ಸರ್ವೇ ಇಲಾಖೆಯಲ್ಲಿದ್ದು ಅನಂತರ ಶೇಕದಾರಿಗೆ ಬಂದವನು. ಕೆಲಸದಲ್ಲಿ ಬಹಳ ನಿಸ್ಸೀಮ. ಒಂದು ಒಳ್ಳೆ ಧಾರವಾಡದ ತಟ್ಟು ಇಟ್ಟಿದ್ದ. ಅದರ ಮೇಲೆ ಖೋಗೀರು, ಒಂದು ಹಸಿಬೆ ಚೀಲ. ಆತನ ಮೇಲೆ ಅನೇಕ ಅರ್ಜಿಗಳು; ಅನೇಕ ಕಡೆಯಿಂದ ಅರ್ಜಿಗಳು; ಅವುಗಳ ಸಾರಾಂಶ ಮಾತ್ರ ಒಂದೇ. ಯಾವ ಗ್ರಾಮಕ್ಕೆ ಬಂದರೂ ಶೇಕದಾರ್ರಿಗೆ ಕೆನೆಮೊಸರು, ಹಾಲು, ತುಪ್ಪ, ದ್ರಾಕ್ಷಿ, ರವೆ, ಸಕ್ಕರೆ ಸಪ್ಲೈಮಾಡಬೇಕು. ಇಲ್ಲವಾದರೆ ಒತ್ತುವರಿ, ಬಾಂದು ಕಲ್ಲು, ವಗೈರೆ ಮೊಕದ್ದಮೆಗಳು ಹಾಕಿ ನೀರುಗಂಟಿಗೆ, ಕೊತ್ವಾಲರಿಗೆ, ಬಂದೋಬಸ್ತು ಮಾಡಿ ನೂರೆಂಟು ಕಿರುಕುಳ ಕೊಡುತ್ತಾನೆಂದು; ಸಪ್ಲೈ ತೆಗೆದುಕೊಂಡು ತಿಂದು ಉಳಿದದ್ದನ್ನು ತನ್ನ ಹಸಿಬೇ ಚೀಲಕ್ಕೆ ತುಂಬಿಕೊಂಡು ಮನೆಗೆ ತೆಗೆದುಕೊಂಡು ಹೋಗುತ್ತಾನೆಂದು.

ನಾನು ಗೂಢವಾಗಿ ವಿಚಾರಿಸಲಾಗಿ, ಈ ಆಪಾದನೆಗಳು ಉತ್ಪ್ರೇಕ್ಷಿತವಾದರೂ ನಿರಾಧಾರವಾದವುಗಳಲ್ಲವೆಂದು ಗೊತ್ತಾಯಿತು. ಶೇಕದಾರ್ರನ್ನು ಕೇಳಲಾಗಿ,

''ಮಹಾಸ್ವಾಮಿ, ಈ ಪ್ರಾಂತ್ಯದಲ್ಲೆಲ್ಲಾ ಲಿಂಗಾಯಿತರೇ ಇರೋದು. ಒಂದು ತುತ್ತು ಅನ್ನ ಬ್ರಾಹ್ಮಣನಿಗೆ ಸಿಕ್ಕುವುದಿಲ್ಲ. ನಾನು.

ಸಪ್ಲೈ ಕೊಂಡುಕೊಂಡು ಅಡಿಗೆ ಮಾಡಿಕೊಳ್ಳುತ್ತೇನೆ. ನನ್ನ ಹಸಿಬೇ ಚೀಲದಲ್ಲಿ ಅಡಿಗೆ ಪಾತ್ರೆ ಒಪ್ಪೊತ್ತಿನ ಸಾಮುಗ್ರಿ ಯಾವಾಗಲೂ ಇದ್ದೇ ಇರುತ್ತೆ!'' ಎಂದ.

"ಹಾಲು, ದ್ರಾಕ್ಷಿ, ಕೀರು ಈ ಸಮಾಚಾರವೇನರಿ?''

"ಕಷ್ಟ ಪಡುವವನಿಗೆ ಒಳ್ಳೆಯ ಊಟ ಒಂದೊಂದು ವೇಳೆ ಯಾದರೂ ಬೇಕಾಗುತ್ತೆ. ನಾನು ದುಡ್ಡು ಕೊಟ್ಟು ಸಾಮಾನು ಕೊಂಡು ಕೀರು, ಕರಿದ ಸೇವಿಗೆ ಪಾಯಸ ಕುಡಿಯುವುದು ಉಂಟು ಸ್ವಾಮಿ,'' ಎಂದು ಹೇಳಿದ. ನೋಡಿದರೆ ಚೆನ್ನಾಗಿ ಭೋಜನ ಮಾಡುವ ಮೈಕಟ್ಟಿನ ಮನುಷ್ಯ.

"ಒಳ್ಳೇದು ಹೋಗಿ,'' ಎಂದು ಕಳಿಸಿಕೊಟ್ಟೆ.

ಡೆಪ್ಯುಟಿ ಕಮಿಷನರ್ ಏನೋ ಮಾತು ಬಂದಾಗ,

'ಏನು, ಸಾರ್, ಆ ಕೀರು, ಕರಿದ ಸೇವಿಗೆ ಪಾಯಸದ ಶೇಕದಾರನ ಸಮಾಚಾರವೇನು? ಏನು ಮಾಡುತ್ತೀರಿ ಅವನ್ನ?' ಎಂದು ನಗುತ್ತಾ ಕೇಳಿದರು.

ಅವರೂ ನಾನೂ ಒಂದೇ Traveller's Bungalow ನಲ್ಲಿ ತಂಗಿದ್ದೆವು. ನನ್ನ ಕೋಣೆಯ ಪಕ್ಕದ ಕೋಣೆಯೇ ಅವರದು ವಿಚಾರಣೆಯ ವಾದ ಸಂವಾದಗಳು ಅವರಿಗೆ ಕೇಳಿಸಿರಬೇಕು.

ನಾನು ಹೇಳಿದೆ, "ಅವರು ಕೀರು, ಪಾಯಸ ಕುಡಿದರೆ ಏನೂ ಬಾಧಕವಿಲ್ಲ. ಆದರೆ ಜಲುಮಿಯಿಂದ ಸಪ್ಲೈ ಹಿರಿಯುತ್ತಾನೆಂದು ಫಿರ್ಯಾದು ಬಂದಿದೆ. ಅದು ನಿಜವಾಗಿದ್ದರೆ ಏನಾದರೂ Notice ಮಾಡಬೇಕಾಗುತ್ತೆ,'' ಎಂದು.

ಡೆಪ್ಯುಟಿ ಕಮಿಷನರ್ ಸಾಹೇಬರು,

"ಬೇಡ, ಸಾ, ನಿಮ್ಮ ಧರ್ಮಕ್ಕೆ. ಈಗಿನ ಸಪ್ಪೆ ಕಾಲದಲ್ಲೂ ಈ ಪರಿಂಗ ರೈತರಿಂದ ಕೀರು, ಪಾಂಗಿಭಾತು ವಸೂಲ್‌ಮಾಡೋ ಧೀರ ಶೇಕದಾರನಿದ್ದಾನಲ್ಲ. ನನಗೆ ಅದೇ ಸಂತೋಷ. ಅವನಿಗೆ ಹೆಚ್ಚು ಗಲಾಟೆಗೆ ಅವಕಾಶಕೊಡಬೇಡವೆಂದು ನೀವೇ Private ಆಗಿ warn ಮಾಡಿಬಿಡಿ,'' ಎಂದು ಹೇಳಿದರು. ಹಾಗೇ ಮಾಡಿದೆ. ಅದರಿಂದ ಅವನ ಕೀರು, ಸೇವಿಗೆ ಪಾಯಸಕ್ಕೇನೂ ಕುಂದಕಬರಲಿಲ್ಲವೆಂದು ಕಾಣುತ್ತೆ.

೬

ನಾನು ಮೈಸೂರಿನಲ್ಲಿ ಪ್ರೊಬೇಷನ್ನರಾಗಿದ್ದಾಗ, ನಮ್ಮನ್ನಾಳುತ್ತಿದ್ದ ಮಹಾಸ್ವಾಮಿಗಳಾದ ಶ್ರೀ ಕೃಷ್ಣರಾಜ ಒಡೆಯರವರು ಮೈಸೂರಿನಿಂದ ತಿರುಮಕೂಡ್ಲು ನರಸೀಪುರಕ್ಕೆ ಸರ್ಕೀಟು ಹೊರಟರು. ಆಗ ಹುಜೂರ್ ಸವಾರಿ ಬಿಜಯಮಾಡಿಸುವುದೆಂದರೆ ಬಹಳ ದೊಡ್ಡ ಉತ್ಸವ. ದಾರಿಯುದ್ದಕ್ಕೂ ತೋರಣಗಳು, ಮಂಟಪಗಳು. ಮಹಾರಾಜರಲ್ಲಿ ಪ್ರಜೆಗಳಿಗಿರತಕ್ಕ ಭಕ್ತಿ ಪ್ರೇಮ ಸೂಚಕಗಳಾದ ಇತರ ಮಂಗಳ ಅಲಂಕಾರಗಳು, ದೃಶ್ಯಗಳು ಏರ್ಪಾಡಾಗುತ್ತಿದ್ದವು. ಪ್ರಜೆಗಳಿಗೆ ಮಹಾರಾಜರವರಲ್ಲಿ ನಿಜವಾದ ಪ್ರೇಮ ಭಕ್ತಿ ಇದ್ದವೆಂದರೆ ಈಗಿನ ಕಾಲದಲ್ಲಿ ಕೆಲವರು ನಂಬದಿರಬಹುದು ಆದರೆ ಅದು ಸತ್ಯವಾದ ಮಾತು. ನಾವುಗಳು, ಅಂದರೆ ತಾಲ್ಲೂಕು ಮತ್ತು ಡಿಸ್ಟ್ರಿಕ್ಟ್ ಅಧಿಕಾರಿಗಳು, ಸವಾರಿಯ ಮಾರ್ಗದಲ್ಲಿನ ಏರ್ಪಾಡುಗಳೆಲ್ಲಾ ಸುವ್ಯವಸ್ಥೆಯಾಗಿ ನಡೆಯುತ್ತಿವೆ ಎಂಬುವನ್ನು ದೃಢಪಡಿಸಲು ಬಹಳ ಮುತುವರ್ಜಿವಹಿಸುತ್ತಿದ್ದೆವು. ಸಾಲುಮರಗಳಿಗೆಲ್ಲಾ ಸುಣ್ಣ ಕೆಮ್ಮಣ್ಣು ಪಟ್ಟೆಗಳನ್ನು ಬಳಿದು, ರಸ್ತೆಯೊಳಗಿನ ಕಶ್ಮಲಗಳನ್ನು ತೆಗೆದು, ವಿಷಮ ಸ್ಥಳಗಳನ್ನು ಸಮಮಾಡಿ, ನೋಡಲು ಅಸಹ್ಯವಾದ ಸನ್ನಿವೇಶಗಳನ್ನು ಮರೆಮಾಡಿ, ರಸ್ತೆಯಲ್ಲಿನ ಪ್ರತಿಯೊಂದು ಗ್ರಾಮದ ಮುಂದೂ ಆ ಗ್ರಾಮದ ಯೋಗ್ಯತೆಗೆ ತಕ್ಕ ಚಪ್ಪರವನ್ನು ಹಾಕಿಸಿ, ಸವಾರಿ ಬರುವ ವೇಳೆಗೆ ಗ್ರಾಮ ಮುಖಂಡರುಗಳು ಸರಿಯಾದ ಉಡುಪುಗಳನ್ನು ಧರಿಸಿ, ಚಪ್ಪರದಲ್ಲಿ ಮಹಾಸ್ವಾಮಿಗಳನ್ನು ಸ್ವಾಗತಿಸಿ ಭಕ್ತಿಪ್ರೇಮಯುತವಾದ ಸಪರ್ಯೆಯನ್ನು ಮಾಡುವುದಕ್ಕೆ ನಾವುಗಳೇ ಜವಾಬ್ದಾರಿಯನ್ನು ವಹಿಸುತ್ತಿದ್ದೆವು. ಜನಗಳಿಗೆ ಇದಕ್ಕಾಗಿ ಬಲವಂತ ಪಡಿಸಬೇಕಾದ ಅವಶ್ಯಕತೆಯೇನೂ ಇರಲಿಲ್ಲ. ಅವರ ನೈಸರ್ಗಿಕ ಮಮತೆ ಭಕ್ತಿಗಳನ್ನು ಕ್ರಮವಾಗಿ ಪ್ರದರ್ಶಿಸುವುದಕ್ಕೆ ನಾವು ಹೊಣೆಯಾಗಬೇಕಿತ್ತಷ್ಟೆ.

ಸರಿ, ಆ ಸಂದರ್ಭದಲ್ಲಿ ನನ್ನನ್ನು ಮೇಗಳಪುರಕ್ಕೂ ವರುಣಕ್ಕೂ ಮಧ್ಯದ ರಸ್ತೆಯ ಛಾರ್ಜಿಗೆ ನೇಮಿಸಿ ಸವಾರಿ ಬರುವ ಹೊತ್ತಿಗೆ ಮೇಗಳಪುರದ ಚಪ್ಪರದಲ್ಲಿ ಹಾಜರಿದ್ದು ಮಹಾರಾಜರಿಗೆ ಹಾರತುರಾಯಿಗಳನ್ನು ಒಪ್ಪಿಸಬೇಕೆಂದು ಡೆಪ್ಯುಟಿ ಕಮೀಷನರ್ ಸಾಹೇಬರ ನಿರೂಪವಾಯಿತು.

ಶಿರಸಾವಹಿಸಿ ಎಲ್ಲಾ ಏರ್ಪಾಡುಗಳನ್ನೂ ಮಾಡಿದೆ. ವರುಣದಲ್ಲಿ ತಾಲ್ಲೂಕು ಅಮಲ್ದಾರರೂ ನಾನೂ ಮೊಕ್ಕಾಂ ಮಾಡಿದ್ದೆವು. ನಾಳೆ ಸವಾರಿ ಬರುತ್ತೆಂಬ ವೇಳೆಯಲ್ಲಿ ಒಂದು ಚಿಂತಾದಾಯಕವಾದ ಸುದ್ದಿ ಬಂತು. ಮೇಗಳಪುರದಲ್ಲಿ ಕೆಲವು ಬೆಲೆ ಬಾಳುವ ಜಮೀನುಗಳನ್ನು ಹಿಂದಿನ ಅಮಲ್ದಾರರೊಬ್ಬರು ತಮ್ಮ ಕಡೆಯವರಿಗೆ—ಯಾಕೆ, ಬೇನಾಮಿ ಯಾಗಿ ತಮ್ಮ ಸ್ವಂತಕ್ಕೆ—ಕೊಟ್ಟಿದ್ದರಂತೆ. ಅದರ ಮೇಲೆ ಕೆಲವು ತಕರಾರುಗಳು ಬಂದರೂ ಲಕ್ಷ್ಯಕ್ಕೆ ತಾರದೆ ಕೊಟ್ಟಿದ್ದನ್ನೇ ಖಾಯಂ ಮಾಡಿದರಂತೆ. ಡೆಪ್ಯುಟಿ ಕಮಿಷನರ್ ಸಾಹೇಬರಲ್ಲಿ ಅಪೀಲು ಮಾಡಿ ದರೂ ಅಮಲ್ದಾರರು ಡೆಪ್ಯುಟಿ ಕಮಿಷನರ್ ಸಾಹೇಬರ ಅನುಗ್ರಹಕ್ಕೆ ಪಾತ್ರರಾದ್ದರಿಂದ ನ್ಯಾಯ ದೊರೆಯಲಿಲ್ಲವಂತೆ ಅದಕ್ಕೋಸ್ಕರ ಮೈಸೂರು ಬಸವರಾಜಪ್ಪನೆಂಬ ಫೂಟ್ ಲಾಯರಿ ಮಹಾರಾಜರು ಮೇಗಳಪುರಕ್ಕೆ ಬಂದಾಗ ಗಾಡಿಯ ಮುಂದೆ ಅಡ್ಡಬಿದ್ದು ಈ ಅನ್ಯಾಯವನ್ನು ಅವರ ಗಮನಕ್ಕೆ ತರಬೇಕೆಂದು ಗೊತ್ತುಮಾಡಿದ್ದನಂತೆ. ಬಸವರಾಜಯ್ಯ ತಂಟಲುಮಾರಿ ಎಂದು ನನಗೆ ಗೊತ್ತು. ಅವನು ಮೇಗಳಪುರಕ್ಕೆ ಬಂದಿ ದ್ದಾನೆಂತಲೂ ಗೊತ್ತು. ಅಮಲ್ದಾರರು ಮೇಗಳಪುರದ ಮುಖಂಡರು ಕೆಲವರನ್ನು ಕರಯಿಸಿ ವಿಚಾರಿಸಿದರು. ಆ ಗ್ರಾಮದವರಿಗೆ ಈ ತರಹದ ಗಲಾಟೆಗಳು ಬೇಕಾಗಿಲ್ಲ. ಅವರು ಬೇಡವೆಂದರೂ ಬಸವರಾಜಯ್ಯ ಈ ಆಭಾಸವನ್ನು ಮಾಡಲೇಬೇಕೆಂದು ಹಟ ಹಿಡಿದಿದ್ದಾನೆ, ಯಾರ ಮಾತನ್ನೂ ಕೇಳುವುದಿಲ್ಲ, ಎಂದು ಹೇಳಿದರು.

'ಹಾಗಾದರೆ ನಿಮ್ಮ ಗ್ರಾಮದ ಒಳ್ಳೆಯ ಹೆಸರನ್ನು ಉಳಿಸುವುದಕ್ಕೆ ನಾನು ಮಾಡುವ ಪ್ರಯತ್ನಕ್ಕೆ ಕುಮ್ಮಕ್ ಮಾಡುತ್ತೀರಾ?' ಎಂದೆ.

ಅವಶ್ಯಕವಾಗಿ, ಎಂದು ಅವರು ಆಗ್ರಹದಿಂದ ಒಪ್ಪಿದರು.

ಮಾರನೆಯ ದಿನ ಬೆಳಕು ಹರಿಯುವ ಮುನ್ನ ಮೇಗಳಪುರಕ್ಕೆ ಹೋದೆ. ಗ್ರಾಮದ ಹಿಂದೆ ಸುಮಾರು ಒಂದು ಫರ್ಲಾಂಗ್ ದೂರದಲ್ಲಿ ಒಂದು ಹಳೆಯ ದೇವಸ್ಥಾನ. ಅದರ ಗರ್ಭಗುಡಿಗೆ ಭದ್ರವಾದ ಕದಗಳಿ ದ್ದವು. ಪಟೇಲನನ್ನು ಕರೆದು ಅವನಿಗೆ ಗೋಪ್ಯವಾಗಿ "ಬಲವಾದ ನಾಲ್ಕು ಆಳುಗಳನ್ನು ಸಿದ್ಧಪಡಿಸಿಕೊಂಡಿರು. ನಾನು ಹೇಳಿದ ಕೂಡಲೇ

ಬಸವರಾಜುವನ್ನು ಅನಾಮತ್ ಎತ್ತಿಕೊಂಡು ಹೋಗಿ ಆ ದೇವಸ್ಥಾನ ದಲ್ಲಿ ಹಾಕಿ ಬಾಗಿಲು ಬಂದ್ ಮಾಡಿಕೊಂಡು ಬರಲಿ. ಏನಾದರೂ ಅವನ ಗಲಭೆ ಚಪ್ಪರದ ಹತ್ತಿರ ಕೇಳಿಸಿದರೆ, ಅವನು ನಮ್ಮೂರ ಹುಚ್ಚ ಬುದ್ಧಿ, ಬುದ್ಧಿ ಶುದ್ಧವಾಗಿಲ್ಲ, ಕೆಟ್ಟಮಾತುಗಳನ್ನಾಡಿಯಾನೆಂದು ದೂರ ಇರಿಸಿದ್ದೇವೆ, ಎಂದು ಹೇಳಬೇಕು" ಎಂದು ಕಟ್ಟು ಮಾಡಿದೆ.

ಮಹಾಸ್ವಾಮಿಗಳ ಗಾಡಿ ಒಂದು ಮೈಲಿ ದೂರದಲ್ಲಿದ್ದಾಗಲೇ ಕಾಣುವಂತಿರುವ ಒಂದು ಬೋರೆಯ ಮೇಲೆ ಒಬ್ಬ ಕೊಂಬಿನವನನ್ನು ಇಟ್ಟು, ಗಾಡಿ ಕಂಡ ಕೂಡಲೇ ಕಹಳೆ ಮಾಡುವಂತೆ ನೇಮಿಸಿದೆ.

ಇಲ್ಲಿ ಚಪ್ಪರದಲ್ಲಿ ಮೇಜಿನ ಮೇಲೆ ಫಲ ಪುಷ್ಪ ಮೊದಲಾದ ಸಾಮಗ್ರಿಗಳನ್ನು ಇರಿಸಿಕೊಂಡು ಕಾದಿದ್ದೆವು. ಬಸವರಾಜಯ್ಯನಿಗೆ 'ಯಾಕರಿ, ಈ ಹೊತ್ತಿನಲ್ಲಿ ಉತ್ಸವವನ್ನು ಕೆಡಿಸಬೇಕೆಂದಿದೀರಿ? ನಿಮ್ಮ ಅಹವಾಲಿದ್ದರೆ ನನ್ನಲ್ಲಿ ಕೊಡಿ, ನಾನು ವಿಚಾರಿಸಿ ಡೆಪ್ಯುಟಿ ಕಮಿಷನರ್ ಸಾಹೇಬರಲ್ಲಿ ವರದಿ ಮಾಡಿ ನಿಮಗೆ ಅನ್ಯಾಯವಾಗಿದ್ದರೆ ಅದನ್ನು ಸರಿಪಡಿಸುವುದಕ್ಕೆ ಯತ್ನಮಾಡುತ್ತೇನೆ,' ಎಂದು ವಗೈರೆ ಎಷ್ಟೋ ವಿಧದಲ್ಲಿ ಹೇಳಿದೆ. ಅವನು ಕೇಳಲಿಲ್ಲ. ಸಮಾಧಾನವಾಗಿ ಮಾತನಾಡಿದಷ್ಟೂ ಅವನು ಆಟ್ಟಕ್ಕೇರಿದ.

ಅಷ್ಟು ಹೊತ್ತಿಗೆ ಕಹಳೆ ನಾದವಾಯಿತು. ನಾನು ಪಟೇಲನಿಗೆ ಸನ್ನೆ ಮಾಡಿದೆ ಕೂಡಲೇ ನಾಲ್ಕಾರು ಜನ ಬಸವರಾಜಯ್ಯನನ್ನು ಹಿಡಿದು ಅವನ ಕೂಗುಗಳನ್ನು ಲಕ್ಷ್ಯಮಾಡದೆ ಅನಾಮತ್ ಎತ್ತಿಕೊಂಡು ಹೋದರು. ಗ್ರಾಮಸ್ಥರಿಗೆ ಪಟೇಲರು ಮೊದಲೇ ಹೇಳಿದ್ದರೆಂದು ಕಾಣುತ್ತೆ. ಕೆಲವರು ನಕ್ಕರು. ಕೆಲವರು ಗಂಭೀರವಾಗಿ ಸುಮ್ಮನಿದ್ದರು. ಯಾರೂ ಏನೂ ಬಸವರಾಜಯ್ಯನ ಪಕ್ಷವನ್ನು ವಹಿಸಿ ಆಕ್ಷೇಪಣೆ ಮಾಡಲಿಲ್ಲ. ಬಸವರಾಜಯ್ಯನ ಆಕ್ರೋಶ ಸ್ವಲ್ಪ ದೂರ ಕೇಳಿ ಆಮೇಲೆ ನಿಂತು ಹೋಯಿತು.

ಅಷ್ಟು ಹೊತ್ತಿಗೆ ಶ್ರೀಮನ್ ಮಹಾರಾಜರವರ ಸವಾರಿ ಬಂತು. ಜೊತೆಗೆ ಡೆಪ್ಯುಟಿ ಕಮಿಷನರ್ ಸಾಹೇಬರು, ಮಹಾಸ್ವಾಮಿಗಳವರ ಸೋದರಮಾವಂದಿರೂ ಭಾವನವರೂ ಆದ ಸರ್ದಾರ್ ಕಾಂತರಾಜೇ

ಅರಸಿನವರಿದ್ದರು. ಗಾಡಿ ಚಪ್ಪರದಲ್ಲಿ ನಿಂತಿತು. ಡೆಪ್ಯುಟಿ ಕಮಿಷನರ್ ಮಹಾಸ್ವಾಮಿಯವರಿಗೆ ನನ್ನ ಪರಿಚಯವನ್ನು ಹೇಳಿದರು. ಮಹಾಸ್ವಾಮಿಯವರು ಇಂಗ್ಲೀಷಿನಲ್ಲಿ ಒಂದೆರಡು ಅನುಗ್ರಹ ಪೂರ್ವಕವಾದ ಮಾತುಗಳನ್ನು ಹೇಳಿ, "ಗ್ರಾಮದಲ್ಲಿ ಎಷ್ಟು ಮನೆಗಳಿವೆ? ಏನು ಪ್ರಜಾ ಸಂಖ್ಯೆ?" ವಗೈರೆ ಮಾಮೂಲು ಪ್ರಶ್ನೆಗಳನ್ನು ಕೇಳಿದರು ಏನು ಉತ್ತರ ಕೊಟ್ಟೆನೋ ದೇವರೇ ಬಲ್ಲ. ನನಗೆ ದೇವಸ್ಥಾನದ ಕಡೆಯಿಂದ ಗೋಳು ಕೂಗು ಎಲ್ಲಿ ಬರುತ್ತೆಯೋ ಎಂಬ ಒಂದೇ ಯೋಚನೆ ಮಹಾಸ್ವಾಮಿಗಳು ಪ್ರಸನ್ನವದನರಾಗಿ, ಒಳ್ಳೇದು, ಸಂತೋಷ, ಎಂದಷ್ಟು ಕೇಳಿದೆ. ನಮ್ಮ ಡೆಪ್ಯುಟಿ ಕಮಿಷನರ್ ಸಾಹೇಬರು ಮುಖದಲ್ಲಿ ತೃಪ್ತಿಯನ್ನು ತೋರಿಸಿದರು. ಸವಾರಿ ಮುಂದೆ ಬೆಳೆಯಿತು. ಬದುಕಿತಪ್ಪ ಬಡಜೀವ ಎಂದು ಧಾರಾಳವಾಗಿ ಉಸಿರುಬಿಟ್ಟೆ.

೭

ನನ್ನ ಪ್ರೊಬೇಷನರಿ ಕಾಲ ಮುಗಿಯುವುದರೊಳಗಾಗಿ ಗುಂಡ್ಲುಪೇಟೆಗೆ ಸ್ಪೆಷಲ್ ಡ್ಯೂಟಿಗೆ ಡೆಪ್ಯುಟಿ ಕಮಿಷನರ್ ನನ್ನನ್ನು ಕಳುಹಿಸಿದರು. ಇಂಡಿಯಾ ಸರ್ಕಾರದ ಎರಡು ರೆಜಿಮೆಂಟುಗಳು ರಸ್ತೆಯ ಮಾರ್ಗವಾಗಿ ಬೆಂಗಳೂರಿಂದ ನೀಲಗಿರಿಗೆ ಹೋಗುತ್ತಾ ಬಂಡಿಪುರವೆಂಬ ಅರಣ್ಯ ಪ್ರದೇಶದಲ್ಲಿ ಒಂದು ದಿನ ಮೊಕ್ಕಾಂ ಮಾಡುತ್ತವೆ, ಅವುಗಳಿಗೆ, ಮುಖ್ಯವಾಗಿ ಅವುಗಳ ಫರಂಗಿ ಆಫೀಸರುಗಳಿಗೆ, ಆಹಾರ ಮೊದಲಾದ ಸರಬರಾಜನ್ನು ಒದಗಿಸಲು ಗುಂಡ್ಲುಪೇಟೆ ಅಮಲ್ದಾರ್ ಅರಸಿನವರಿಗೆ ಕುಮ್ಮಕ್ಕು ಮಾಡಬೇಕು, ಎಂದು ನನ್ನನ್ನು ನೇಮಿಸಿದರು. ನಾನು ಗುಂಡ್ಲುಪೇಟೆಗೆ ಹೋಗಿ ಅಮಲ್ದಾರರನ್ನು ಕಂಡೆ. ಅವರಿಗೆ ಡೆಪ್ಯುಟಿ ಕಮಿಷನರ್ ನನ್ನನ್ನು ಕಳುಹಿಸಿದ್ದು ಅಸಮಾಧಾನ. ಅವರು ಪೂರ್ವ ಕಾಲದ ಮನುಷ್ಯರು. ಅರಸರು; ಯಾವುದೋ ರೀತಿಯಲ್ಲಿ ಶ್ರೀಮನ್ ಮಹಾರಾಜರ ಬಳಗ ಎಂಬ ಅಹಂಕಾರ ಬೇರೆ. ನಾನು ಅವರನ್ನು ನೋಡಲಿಕ್ಕೆ ಹೋದಾಗ ಅವರ ಮನೆಯ ಹಜಾರದಲ್ಲಿ ತಾಬೇದಾರರು, ಊರಿನ ವರ್ತಕರು, ಮೊದಲಾದವರನ್ನು ಸೇರಿಸಿಕೊಂಡು ದರ್ಬಾರು

ಮಾಡುತ್ತಿದ್ದರು. ನನ್ನ ಕಾರ್ಡನ್ನು ಕಳುಹಿಸಿದೆ. ಏನೂ ಉತ್ತರ ಬರದಿರಲು ನಾನೇ ಒಳಕ್ಕೆ ಪ್ರವೇಶಿಸಿದೆ.

'ಓಹೋ, ಬನ್ನಿ, ಬನ್ನಿ, ಕೂಡ್ರಿ. ಇವರು ಮೈಸೂರಿನಿಂದ ಪ್ರೊಬೇಷನರ್ ಬಂದಿದ್ದಾರೆ. (ಇದು ಸಭೆಗೆ) ಕೆಲಸ ಕಲಿಯುತ್ತಿದ್ದಾರೆ. ಸ್ಪೆಷಲ್ ಡ್ಯೂಟಿ ಇವರಿಗೆ ಅನುಭವ ಮಾಡಿಕೊಡಬೇಕೆಂದು ಇವರನ್ನು ನನ್ನಲ್ಲಿಗೆ ಡೆಪ್ಯುಟಿ ಕಮಿಷನರ್ ಕಳುಹಿಸಿದ್ದಾರೆ'' ಎಂದರು.

ನಾನೇ ಜಾಗಮಾಡಿಕೊಂಡು ಕುಳಿತು ''ನಾನು ಬಂಡೀಪುರಕ್ಕೆ ಹೊರಡಲು ಸಿದ್ಧನಾಗಿ ಬಂದಿದ್ದೇನೆ. ನನಗೆ ತಮ್ಮ instructions ಏನು? ಕುಮ್ಕಿಗೆ ಯಾರನ್ನು ನೇಮಿಸುತ್ತೀರಿ?'' ಎಂದು ಕೇಳಿದೆ.

''ಕೂತುಕೊಳ್ಳಿ. ಏನು ಅವಸರ. (ಸಭೆಯನ್ನುದ್ದೇಶಿಸಿ) ನಾನು ಹೇಳುತ್ತಿದ್ದುದು—ನಾವು ಮೈಸೂರಲ್ಲಿದ್ದರೆ ಯಾವಹೊತ್ತಿನಲ್ಲಿ ಏನು ಬುಲಾವು ಬರುತ್ತದೋ ಹೇಳೋಕಿಲ್ಲ ನೋಡಿ. ಇದ್ದಕ್ಕಿದ್ದ ಹಂಗೆ ಬತ್ತವನೆ ಓಲೆಕಾರ, 'ಹುಜೂರ್ ಅಪ್ಪಣೆ ಆಯ್ತದೆ ಆರೋಗಣ್ಗೆ ಅರಮನ್ಗೇ ಬರ್ಬೇಕಂತೆ.' ಅಲ್ಲೋ? ನಮ್ಮಪ್ಪ, ಬೇಡಿ! ಊಟಕ್ಕೆ ಕುಂತ್ರೆ ಮಾತಾಡೋಕಿಲ್ಲ, ನಗೋಕಿಲ್ಲ, ಕೆಮ್ಮೋಕಿಲ್ಲ, ಕೊನೆಗೆ, ಗೊಣ್ಣೆ ತೂಯೋಕಿಲ್ಲ ನೋಡಿ. ಊಟವಾದಮೇಲೂ ಹಂಗೇ ಹಂಗಾಮು. ಹುಜೂರ್ ಎದ್ದಮೇಲೆ ನಮ್ಮ ಮಾತುಕತೆ ಆಟ ಎಲ್ಲ.''

ವಗ್ಯೆರೆ, ವಗ್ಯೆರೆ. ರಾಜಬಂಧುಗಳ ಸಂಪತ್ತು ಗೌರವಗಳ ಆಧಿಕ್ಯವನ್ನು ಅಲ್ಲಿ ಬಾಯಿಬಿಟ್ಟು ವಿಸ್ಮಯದಿಂದ ಕೇಳುತ್ತಿದ್ದವರಿಗೆ ವಿವರಿಸಿದರು.

ನಂತರ ನನಗೆ, ''ತಾವು, ರಾತ್ರಿ ಗಾಡಿಮಾಡಿಕೊಂಡು ಬಂಡೀಪುರಕ್ಕೆ ಹೋಗಿ. ಪೋಲೀಸ್ ಇನ್‌ಸ್ಪೆಕ್ಟರು, ಖಾನ್ ಸಾಹೇಬರು ಬಹಳ ಅನುಭವಸ್ಥರು. ಎಲ್ಲಾ ಮಾಡುತ್ತಾರೆ. ತಮ್ಮ ಜೊತೆಗೆ ಬರುತ್ತಾರೆ. ತಾವು ನವಮಾತ್ರಕ್ಕೆ ಹಾಜರಿದ್ದರೆ ಸಾಕು. ಶೇಕದಾರರಿಗೆ, ಫಾರೆಸ್ಟ್ ರೇಂಜರಿಗೆ, ತಾಕೀದು ಹೋಗಿದೆ. ಕೆಲಸವೆಲ್ಲಾ ಸರಿಯಾಗಿ ಮಾಡಿಬಿಡುತ್ತಾರೆ. ಆಮೇಲೆ ತಾವು ವ್ಯಾಸುಮಾಡಿದೋರು ಸೊಗಸಾದ ರಿಪೋರ್ಟ್ ಬರೆದುಬಿಟ್ಟರಾಯಿತು'' ಎಂದು ಅಪ್ಪಣೆ ಕೊಟ್ಟರು.

ನನಗೆ ಬಹಳ ಕೋಪ ಬಂತು. ಆದರೆ ಮಾಡುವುದೇನು?

ಇನ್‌ಸ್ಪೆಕ್ಟರ್ ಪರಿಚಯವನ್ನು ಮಾಡಿಕೊಂಡೆ. ಅವರ ಹೆಸರು ನನಗೆ ಜ್ಞಾಪಕವಿಲ್ಲ. ಅವರು ಆರ್ಕಾಟು ನವಾಬರುಗಳ ಮನೆತನದ ಸಂಬಂಧೀಕರಂತೆ. ಯಾವ ತರಹದ ಸಂಬಂಧೀಕರೆಂಬುದು ನನಗೆ ಅವರ ಹೇಳಿಕೆಯಿಂದ ಆಗಲೇ ಗೊತ್ತಾಗಲಿಲ್ಲ. ನನಗೆ ಜ್ಞಾಪಕವಿರುವಮಟ್ಟಿಗೆ ಅವರ ನೆಂಟಸ್ತನ ಹೆಚ್ಚು ಕಡಮೆ ಹೀಗೆ: ಅವರ ತಾತನ ಚಿಕ್ಕತಾಯಿ (ಅಥವಾ ದೊಡ್ಡತಾಯಿ) ದೊಡ್ಡಪ್ಪನ (ಅಥವಾ ದೊಡ್ಡಮ್ಮನ) ಮೈದುನನ (ಅಥವಾ ಅತ್ತಿಗೆಯ) ಸೋದರಮಾವಂದಿರು ಮಹಮ್ಮದಾಲಿ ನವಾಬರ ಎರಡನೆಯ ನಿಖಾ ಬೀಬಿಯವರು ಒಬ್ಬ ತಾಯಿಯ ಮಕ್ಕಳು. ಅಂತೂ ಬಹಳ ಸಮೀಪ ಬಳಗ. ಈ ಭಾರಿ ವಂಶಾವಳಿಗೆ ತಕ್ಕ ದರ್ಪ, ಮಾತಿನ ಠೀವಿ. ಅಮಲ್ದಾರರ ಮನೆಯಿಂದ ಈಚೆಗೆ ಬಂದಕೂಡಲೆ ನಾನು ಅವರಿಗೆ 'shakehand' ಕೊಟ್ಟು,

"ಮಹಮ್ಮದ್ ಜಾಫರ್‌ಸಾಹೇಬರು (ಅವರು D.S.P. ಯವರು) ನನಗೆ ಬಹಳ ಬೇಕಾದವರು (ಅದು ನಿಜ) ಅವರು ತಮ್ಮ ಹೆಸರು ಹೇಳಿ ನನಗೆ Special ಆಗಿ ತಮ್ಮ ಸ್ನೇಹವನ್ನು ಬೆಳಸುವಂತೆ ಹೇಳಿದರು" ಎಂದೆ. (ಇದು ಸುಳ್ಳು—ಆದರೆ Diplomacy ಜಾತಿಗೆ ಸೇರಿದ ಸುಳ್ಳು, ಅನಿವಾರ್ಯವಾದ್ದು. ಯಾಕೆಂದರೆ ನಾನು ಈ ನವಾಬ ಸಾಹೇಬರ ಸಂಗಡ ಎರಡು ಮೂರು ದಿನ ಅರಣ್ಯ ಪ್ರದೇಶದಲ್ಲಿದ್ದು ಇವರ ಕುಮ್ಮಕ್ಕಿನಿಂದ ಕೆಲಸಮಾಡಬೇಕು.)

ಪೋಲೀಸ್ ಇನ್‌ಸ್ಪೆಕ್ಟರ್, 'ಬಹಳ ಸಂತೋಷ ಸಾ॥ ನಾನು ಮೈಸೂರಿಗೆ ಹೋದರೆ ಜಾಫರ್ ಸಾಹೇಬರ ಮನೆಯಲ್ಲಿಯೇ ಇರುವುದು. ಅವರು ನನಗೆ ದೂರದ ಬಳಗ. (ಆರ್ಕಾಟು ನವಾಬರಷ್ಟು ಸಮೀಪವಲ್ಲ.) ತಮ್ಮ ಹೆಸರನ್ನು ನಾನು ಅವರಿಂದ ಕೇಳಿದ್ದೇನೆ. ಬಹಳ ಬಹಾದುರಿ ಮ್ಯಾಜಿಸ್ಟ್ರೇಟರೆಂದು,' ಎಂದರು.

ನಾವು ಸ್ನೇಹಿತರಾದೆವು, ಆತ ಬಹಳ vain (ದುರಭಿಮಾನಿ) ಮನುಷ್ಯ. ಸ್ವಪ್ರತಿಷ್ಠೆ, ಆತ್ಮಸ್ತುತಿ, ಸೋಮಾರಿತನ, ಮೊಗಲಾಯಿ ತರಹದ ನಡವಳಿಕೆ. ಇವೆಲ್ಲಾ ಸರಿ; ಆದರೆ ಸಹಜವಾದ ಒಳ್ಳೆ ಮನುಷ್ಯ, ಉಪಕಾರಿ, ಸ್ನೇಹಪರ. ಆತನ ಸಂಗಡ ಬಂಡಿಪುರದಲ್ಲಿ ನಾನು ತಂಗಿದ

ಮೂರು ನಾಲ್ಕು ದಿನಗಳು ಬಹಳ ವಿನೋದವಾಗಿ ಕಳೆದವು. ನಾನೂ ಖಾನ್‌ಸಾಹೇಬರೂ ಪೋಲೀಸು out post ಕಟ್ಟಡದಲ್ಲಿ ತಂಗಿದ್ದೆವು. ಸಾಹೇಬರ ಸಂಗಡ ಬಂದಿದ್ದ ಮೂರು ನಾಲ್ಕು ಜನ ಪೋಲೀಸರಲ್ಲದೆ out post ನಲ್ಲಿ ಎರಡು ಮೂರು ಆಳು ಪೋಲೀಸಿನವರು ಇದ್ದರು. ಇವರೆಲ್ಲರಿಗೂ ಸ್ವಲ್ಪವೂ ಸೋಮಾರಿತನಕ್ಕೆ ಅವಕಾಶವಿಲ್ಲದಂತೆ ಸಾಹೇಬರು ಕೆಲಸಕಾರ್ಯಗಳನ್ನು ಒದಗಿಸುತ್ತಿದ್ದರು. ಬೆಳಗ್ಗೆ ಎದ್ದಕೂಡಲೇ, 'ಕಾಸಿಂ — ಹೂಕಾ ಲಾವ್.' ಆ ಅಗ್ನಿಹೋತ್ರದ ಸೇವೆ ಅರ್ಧಗಂಟೆ. ನಂತರ 'ಎಲೋ ನಿಂಗಾ. ಚಹಾಗೆ ಹಾಲು ತಯಾರಿದೆ? ಅಯ್ಯೋ ಬೇಕೂಫ್ ಓಡಿಹೋಗಿ ತಕ್ಕೊಂಡು ಬಾ.' ಅನಂತರ, 'ಅಂಡೆ ಲಾಯೇ, ನೈ, ಕ್ಯಾರೆ? ನಾಶ್ಟಾಕು ಕ್ಯಾ ಬನಾಕರ್ ಹ್ಯ?' ಆಮೇಲೆ, 'ಏನು, ಪಟೇಲ? ಬಾಡು ಸಿಕ್ಕೋಕಿಲ್ಲ? ಹಾಳಾದ ಕೊಂಪೆ. ಹೋಗಲಿ ಒಂದು ಕೋಳಿ ಮರೀನೂ ಇಲ್ವೆ? ನಾವು ಸರ್ಕಾರ ಕೆಲಸಕ್ಕೆ ಬಂದು ಈ ಕಾಡಿನಲ್ಲಿ ಉಪಾಸ ಸಾಯಬೇಕೆ?'

ಹೀಗೆ ರಾತ್ರಿ ಮಲಗುವ ವೇಳೆಯವರೆಗೂ.

ನಾಳೆ ಬೆಳಗ್ಗೆ ರೆಜಿಮೆಂಟುಗಳು ಬರುತ್ತವೆಂದರೆ ಇವತ್ತು ಸಂಜೆಗೆ ಕೆಲವು ಆಫೀಸರುಗಳು ಏರ್ಪಾಡುಗಳೆಲ್ಲಾ ಸರಿಯಾಗಿವೆಯೋ ನೋಡುವುದಕ್ಕೆ ಬಂದರು. ಅವರ ಪೈಕಿ ಸುಬೇದಾರ್ ಮೇಜರು ಷೋಳಾಪುರಿ ಎಂಬ ಹೆಸರುವಾಸಿ sportsman ಒಬ್ಬರು. Rifle shooting ನಲ್ಲಿ ಅವರು ಅದ್ವಿತೀಯರು. ಅನೇಕ ಬಹುಮಾನಗಳನ್ನು ಗೆದ್ದಿದ್ದರು. ಅವರ ಹೆಸರನ್ನು ನಾನು ಪೇಪರುಗಳಲ್ಲಿ ಅನೇಕ ವೇಳೆ ನೋಡಿದ್ದೆ. ನನಗೂ ಬಂದೂಕು ಪಿಸ್ತೂಲು ಎಂದರೆ ಬಹಳ ಪ್ರೇಮ. ಒಂದು ಸೊಗಸಾದ rifle, ಒಂದು revolver ಸಹ ಇಟ್ಟಿದ್ದೆ. ಕ್ಯಾಂಪಿಗೆ ತೆಗೆದುಕೊಂಡೂ ಹೋಗಿದ್ದೆ. ನನಗೂ ಷೋಳಾಪುರಿಯವರಿಗೂ ಬಹಳ ಜಾಗ್ರತೆಯಾಗಿ ಪರಸ್ಪರ ಸ್ನೇಹವುಂಟಾಯಿತು. ಈ ಕಾಡಿನಲ್ಲೂ ತಮ್ಮ ಕೀರ್ತಿಯನ್ನು ಕೇಳಿದವರಿದ್ದಾರಲ್ಲ ಎಂದು ಅವರಿಗೆ ಸಂತೋಷ. ನನ್ನ ಆಯುಧಗಳನ್ನು ಶಸ್ತ್ರವಿದ್ಯ ನಿಪುಣರಿಗೆ ತೋರಿಸಿ ಅವುಗಳ ಪ್ರಭೆಯಲ್ಲಿ ನಾನು ಸ್ವಲ್ಪ ಹೊಳೆಯೋಣವೆಂದು ನನ್ನ ಹಂಬಲ. ಅವರ ಸಂಗಡ ಇಬ್ಬರು ಕಾಲೇಜು

ಹುಡುಗರಂತಿದ್ದ ಬ್ರಿಟಿಷ್ ಆಫೀಸರುಗಳು ಇದ್ದರು. ಅವರ ಚರ್ಮದ ಬಣ್ಣದ ಮಹತ್ವದಿಂದ ಅವರು ಷೋಲಾಪುರಿಯವರ ಮೇಲ್ಪಟ್ಟ ಅಧಿಕಾರಿಗಳು. ಪಾಶ್ಚಾತ್ಯ ಸಾಹಿತ್ಯ, ಇತಿಹಾಸ, ಶಾಸ್ತ್ರ ಮೊದಲಾದುವುಗಳಲ್ಲಿ, ಅವರ ಕಸುಬಿನ ಸಂಬಂಧವಾದ ಸಾಹಿತ್ಯದಲ್ಲಿ ಕೂಡ,— ಅಂದರೆ Napoleanic wars, Franco-German war, Sudan Campaign, Boer war ಇವುಗಳಲ್ಲೂ, ನಾನು ತಕ್ಕಮಟ್ಟಿಗೆ ವ್ಯಾಸಂಗವುಳ್ಳವನೆಂದು ತಿಳಿದ ಮೇಲೆ ಅವರಿಗೂ ನನ್ನಲ್ಲಿ ಗೌರವವುಂಟಾಯಿತು. ಅವರಿಗೆ ತಾವು ಬಂಡೀಪುರದಲ್ಲಿ ಮೊಕ್ಕಾಂ ಮಾಡುವ ಒಂದು ದಿನದಲ್ಲಿ ಏನಾದರೂ ಷಿಕಾರಿ ಮಾಡಬೇಕೆಂದು ಬಹಳ ಆಸೆ. 'ಇದು ಚಳಿಗಾಲ. ಕಾಡಿನಲ್ಲಿ ಹಣ್ಣು ಎಲೆಗಳು ಉದುರಿ ಶಬ್ದವಿಲ್ಲದೆ ಓಡಾಡುವುದು ಅಸಾಧ್ಯ. ಷಿಕಾರಿಗೆ ಏನೂ ಸಿಕ್ಕುವುದಿಲ್ಲ. ಆದರೂ ನೋಡೋಣ ಕಾಡುಕೋಳಿಗಳಾದರೂ ಸಿಕ್ಕುತ್ತೇನೋ' ಎಂದು ಬೆಟ್ಟದ ಕುರುಬರ ಯಜಮಾನ ಹೇಳಿದ. ಮಾರನೆಯ ದಿವಸ ಬೆಳಗ್ಗೆ ಹತ್ತು ಗಂಟೆ ಹೊತ್ತಿಗೆ ರೆಜಿಮೆಂಟುಗಳು ರಣವಾದ್ಯಗಳ ಸಂಗೀತಕ್ಕೆ ಸರಿಯಾಗಿ ಹಜ್ಜೆಯಿಡುತ್ತ ಬಂಡೀಪುರಕ್ಕೆ ತಂಡತಂಡವಾಗಿ ಬಂದವು. ಅದು ಬಹಳ ಆಹ್ಲಾದಕರವಾದ ದೃಶ್ಯ. ಆ ಘಾಟಿ ರಸ್ತೆಯಲ್ಲಿ ಪಂಕ್ತಿಯ ಮೇಲೆ ಪಂಕ್ತಿಯಾಗಿ ಯೋಧರ ಸಾಲುಗಳು ಧೂಳಿನಿಂದ ಸ್ವಲ್ಪ ಕಂದುಬಣ್ಣ ಹೊಂದಿದ ಚಳಿಗಾಲದ ಎಳೆಬಿಸಿಲಿನಲ್ಲಿ ತಳತಳಿಸುವ ಆಯುಧಗಳನ್ನು ಧರಿಸಿ ನಡೆಯುತ್ತಿರುವುದನ್ನು ನೋಡಿ ನನಗೂ ಹೇಳಲಸಾಧ್ಯವಾದ ಹುಮ್ಮಸ್ಸು ಹೆಮ್ಮೆ ಉಂಟಾದವು. ಅಲ್ಲಿ ಮೊದಲೇ ಬಂದಿದ್ದ ಅವರ ಆಫೀಸರುಗಳ ಆನಂದವನ್ನು ಏನೆಂದು ವರ್ಣಿಸಲಿ? ಅವರ ಪೈಕಿ ಒಬ್ಬನು — Lt. Ramsay ಎಂದು ಅವನ ಹೆಸರೆಂದು ಜ್ಞಾಪಕ, ಆದರೆ ಬಹು ದಿನದ ಹಿಂದಿನ ಮಾತು—ಮದರಾಸು Pioneers ರೆಜಿಮೆಂಟಿನವನು, ತನ್ನ ರೆಜಿಮೆಂಟು ವಾದ್ಯ ಸಮೇತವಾಗಿ ವಾಳಿಯ ಭೂಮಿಗೆ ಬರುತ್ತಿದ್ದುದನ್ನು ನೋಡಿ ಹಿಗ್ಗಿ, ಮೈಯುಬ್ಬಿ ಉತ್ಸಾಹವನ್ನು ತಡೆಯಲಾರದೆ ಹೀಗೆಂದ,

"Now, look at them, Tahsildar Saheb. Look at the little rascals. How they march! Cheerful little devils,

hard as nails, and afraid of nothing. People may talk of Sikhs and Ghurkas Fine fellows no doubt, but my Ramosamy's are good enough for me, thank you!"

'ನೋಡಿ, ತಹಸಿಲ್ದಾರ್ ಸಾಹೇಬರೆ, ನನ್ನ ಮೆಚ್ಚಿನ ಪುಂಡರನ್ನು ನೋಡ್ಯಾದರೂ ನೋಡಿ! ಏನು ಬೆಡಗಿನಿಂದ ಕಾಲಿಡುತ್ತಾರೆ! ನಗುಮೊಕದ ಕಳ್ಳರು. ಉಕ್ಕಿನ ಕುಡಿ, ಮುಂಡೇಗಂಡಂದಿರು, ಭಯವೆಂಬುದನ್ನು ಕನಸಿನಲ್ಲೂ ಕಾಣರು. ಶಿಕ್ಖರನ್ನ ಘುರ್ಕಾಗಳನ್ನ ಹೊಗಳೋರು ಹೊಗಳಲಿ, ಅವರೂ ಧೀರರೇಸರಿ—ಆದರೆ ನನ್ನ ರಾಮೊಸಾಮಿಗಳು ನನಗೆ ಸಾಕು, ಸ್ವಾಮಿ.'

ಹೀಗೆ ಹೇಳುತ್ತಿರುವವನ ಕಣ್ಣುಗಳಲ್ಲಿ ತಡೆದ ಆನಂದಬಾಷ್ಪವನ್ನು ನೋಡಿದೆ. ನನಗೆ ಆಗ ಮಂದಟ್ಟಾಯಿತು, ನಮ್ಮ ಸಿಪಾಯಿಗಳು ಯಾಕೆ ಈ ವಿದೇಶೀಯ ನಾಯಕರ ನೇತೃತ್ವದಲ್ಲಿ ಅಷ್ಟು ಚೆನ್ನಾಗಿ ಯುದ್ಧ ಮಾಡುತ್ತಾರೆಂಬುದು.

ಪರಂಗಿ ರೆಜಿಮೆಂಟಿನ ಮುಖ್ಯ ನಾಯಕರು Col Stevens; ನನ್ನ ಗುರುಗಳಾದ Tait ಸಾಹೇಬರ ಸ್ನೇಹಿತರಂತೆ. ಅವರಿಗೆ ನನ್ನ ಗುರುಗಳು ನನ್ನ ವಿಚಾರ ಹೇಳಿದ್ದರೆಂದು ಕಾಣುತ್ತೆ. ಅವರು ನನ್ನನ್ನು ಬಹಳ ಗೌರವದಿಂದ ಕಂಡರು.

ಅವತ್ತು ಷಿಕಾರಿಗೆ ಹೋಗಿದ್ದ ಆಫೀಸರುಗಳಿಗೆ ಷಿಕಾರಿಯೂ ಆಯಿತಂತೆ. ಅವರು ಸಂಜೆಯವೇಳೆಗೆ ಐದು ಆರು ಸತ್ತ ಕೋಳಿಗಳನ್ನು ಹಿಡಿದುಕೊಂಡು ಬಹಳ ಸಂತೋಷದಿಂದ ಬಂದು Colonel ಸಾಹೇಬರಿಗೆ,

'We did have some sport after all sir ...fallen leaves made tracking tricky, but we got a few jungle fowl. They are said to be rather good eating. Only a bit tough unless they are kept overnight,' ಎಂದು ಹೇಳಿದರು.

'ಹ್ಯಾಗೋ, ಅಂತೂ ಸ್ವಲ್ಪ ಶಿಕಾರಿ ಸಿಕ್ಕಿತು, ಸ್ವಾಮಿ. ತರಗು ಎಲೆಗಳ ಸರಸರದಿಂದ ಬೇಟೆ ಸ್ವಲ್ಪ ಅತಂತ್ರವೇ, ಆದರೂ ಕೆಲವು ಕಾಡುಕೋಳಿಗಳೇನೋ ಸಿಕ್ಕಿದವು. ಅವು ತಕ್ಕಮಟ್ಟಿಗೆ ರುಚಿ ಎಂದು.

ಬಲ್ಲವರು ಹೇಳುತ್ತಾರೆ, ಆದರೆ ಒಂದು ರಾತ್ರಿಯಾದರೂ ತಂಗಳು ಬಿಡ ಬೇಕಂತೆ; ಇಲ್ಲದಿದ್ದರೆ ಸ್ವಲ್ಪ ನಾರಂತೆ.'

ಇದರ ಮರ್ಮ ನನಗೆ ಮಾರನೆಯ ದಿನ ಗೊತ್ತಾಯಿತು. ಬೆಟ್ಟದ ಕುರುಬರ ಗೌಡನಿಗೆ ಷಿಕಾರಿ ತೋರಿಸಿದರೆ ಭಾರಿ ಬಹುಮಾನವನ್ನೂ, ಸರ್ಟಿಫಿಕೇಟನ್ನೂ ಕೊಡುವುದಾಗಿ ಹೇಳಿದರಂತ. 'ತರಗು ಎಲೆ ಬಿದ್ದಿದೆ ಕಾಡು ತುಂಬ, ಸದ್ದಿಲ್ಲದೆ ತಿರುಗಾಡುವುದಕ್ಕೆ ಆಗುವುದಿಲ್ಲ,' ಎಂದನಂತೆ. ಕೊನೆಗೆ ಕಲವು ಕಾಡುಕೋಳಿಗಳನ್ನು ಹೂಡಿಸಲು ಯತ್ನಮಾಡು ತ್ತೇನೆಂದು ಒಪ್ಪಿಕೊಂಡನಂತೆ. ಅವನು ಒಳ್ಳೆಯ ಉಪಾಯಗಾರ. ಕ್ಯಾಂಪು ಸಪ್ಲೈಗೆ ಬಂದಿದ್ದ ಹತ್ತು ಕೋಳಿಗಳನ್ನು ತೆಗೆದು ಕಾಡಿಗೆ ಕಳುಹಿಸಿ, ಅಲ್ಲ ಬಿದಿರುಮೆಳೆಯಲ್ಲಿ ಬಿಡುಗಡೆ ಮಾಡಿಸಿದನಂತೆ. ಅವು ಗಳ ಪೈಕಿ ಐದು ಆರು ಷಿಕಾರಿಯಾದವು. ಆಮೇಲೆ ಉಳಿದವುಗಳನ್ನು ವಾಪಸ್ಸು ತರಿಸಿಕೊಂಡು ಸರಿಯಾಗಿ ವಿನಿಯೋಗ ಮಾಡಿದ. ನೋಡಲಿಕ್ಕೆ ಊರು ಕೋಳಿಗೆ ಕಾಡುಕೋಳಿಗೆ ವ್ಯತ್ಯಾಸವೇ ಇಲ್ಲ. ಕಾಡುಕೋಳಿಗೆ ಹಾರಲಿಕ್ಕೆ ಬರುತ್ತೆ, ಊರುಕೋಳಿಗೆ ಬರುವುದಿಲ್ಲ. ರುಚಿಯಲ್ಲಿ ಊರು ಕೋಳಿಯೇ ಮೇಲಂತೆ.

ಈ ಸ್ಪೆಷಲ್ ಡ್ಯೂಟಿ ಮುಗಿಸಿಕೊಂಡು ಮೈಸೂರಿಗೆ ಬಂದ ಕೆಲವು ದಿನಗಳಲ್ಲಿಯೇ ನನಗೆ ಯಡತೊರೆ ತಾಲ್ಲೂಕಿಗೆ ಅಮಲ್ದಾರರಾಗಿ ನೇಮಿಸಿ ಆರ್ಡರ್ ಬಂತು.

## ೮

ನಾನು ಯಡತೊರೆಗೆ ಹೋಗುವುದಕ್ಕೆ ಮುಂಚೆಯೇ ಅಲ್ಲಿಯ ಕೇಸು ಒಂದು ಮೈಸೂರಿಗೆ ವಿಚಾರಣೆಗೆ ಬಂದಿದ್ದರ ಪರಿಚಯವೂ, ಅದುವರೆಗೂ ಅಲ್ಲಿ ಅಮಲ್ದಾರರಾಗಿದ್ದು ಮುಂದೆ ನನಗೆ ಛಾರ್ಜು ಕೊಡತಕ್ಕವರಾದ ಶ್ರೀ ಕೃಷ್ಣರಾಯರೆಂಬುವರ ಭೇಟಿಯೂ, ಆದವು. ಆ ಕೇಸಿನಲ್ಲಿ ಅಣ್ಣ ತಮ್ಮಂದಿರಿಬ್ಬರು ತಕ್ಸೀರುದಾರರು. ತಕ್ಸೀರು ಭಯಂಕರವಾದ ಕೊಲೆ, ಸ್ಥಳ ಯಡತೊರೆ ತಾಲ್ಲೂಕು ಅಬ್ಬೂರೆಂಬ ಕಾವೇರೀ ತೀರದ ಗ್ರಾಮ. ಕೊಲೆ ಪಾತಕರೂ ಕೊಲೆಗೀಡಾದವರೂ ದಾಯಾದಿಗಳು; ಹಳ್ಳಿಯ

ಒಂದು ಓಣಿಯಲ್ಲಿ ಆಸು ಪಾಸು ಮನೆಗಳಲ್ಲಿ ವಾಸವಾಗಿದ್ದವರು. ಸ್ವಲ್ಪ ಜಮೀನಿನ ವಿಚಾರ ಜಗಳ. ಮುನ್ಸೀಫ್ ಕೋರ್ಟು ಮೊದಲು ಛೀಫ್ ಕೋರ್ಟಿನವರೆಗೂ ಹತ್ತಿ, ಪರಿಣಾಮದಲ್ಲಿ ಮೃತ್ಯುವು ಜಯರೂಪದಲ್ಲಿ ಒಂದು ಕಕ್ಷಿಯ ಪಾಲಾಯಿತು. ಊರಿನವರೆಲ್ಲರೂ ಸೋತ ಕಕ್ಷಿಯವರಿಗೆ ಸ್ವಲ್ಪ ಭಾಗ ನೆಲವನ್ನು ಬಿಡಿಸಿಕೊಟ್ಟು ಈ ಜ್ಞಾತಿಗಳನ್ನು ರಾಜೀ ಮಾಡಿಸೋಣವೆಂದು ಯತ್ನಮಾಡಿದರು. ಒಂದು ಸೂಜಿಯ ಮೊನೆಯೂರುವಷ್ಟು ನೆಲವನ್ನೂ ಕೊಡೆನೆಂದು ಹಿಂದೆ ಕಾಲಪೀಡಿತನಾದ ದೊರೆ ಹೇಳಿದಂತೆಯೇ ಈಗಲೂ ಮೃತ್ಯುಗೀಡಾದ ರೈತ ಹೇಳಿದ. ಹೀಗಿರುವಲ್ಲಿ ಹೆಂಗಸರ ಹಂಗಿಸಾಟ, ಗ್ರಾಮಸ್ಥರ ಅಪಹಾಸ್ಯ, 'ಏನಯ್ಯ ದೊಡ್ಡ ಹೈದ. ಮುಗೀತೋ ನಿನ್ನ ಹಾರಾಟ? ನಿನ್ನ ಜಮೀನಿನಲ್ಲಿ ಚಿನ್ನದಂಥ ಪೈರು ಬೆಳಿದಿದ್ದಾನೆ ಮಾದಯ್ಯ, ನೀನೆಂದಾದರೂ ಅಂಥ ಬೆಳೆ ಮಾಡಿದ್ಯ?' ವಗೈರೆ. 'ಬೆಳೆದದ್ದು ಊಟಮಾಡಿದಾಗ ನೋಡೋಣಂತೆ' ಅಂದ ದೊಡ್ಡ ಹೈದ. ಅವನ ತಮ್ಮ ಪುಟ್ಟಸಾಮಿ ನಕ್ಕು ಸುಮ್ಮನಿದ್ದ.

'ಹೀಗೇ ಅಂತ, ಅಂತ, ಮನೆ ಮಠ ಎಲ್ಲಾ ಬೋಗ್ಯಮಾಡಿ ಲಾಯರಿಗೆ ಇಟ್ಟೆರಿ ಮಸಣ ಒಂದರಮೇಲೆ ಸಾಲ ತೆಗೆದಿಲ್ಲ' ಅಂದ ಗೆಳೆಯ. ಅವನು ಮಾದೈಯನ ಕಡೆಯವನು.

ದೊಡ್ಡ ಹೈದ, 'ಮಸಣ ನಿಮ್ಮ ಹಕ್ಕಪ್ಪ; ಕೋರ್ಟು ಕಛೇರಿ ಇಲ್ಲದೆಯೇ ಗೆಲ್ಲುವಂತೀರಿ' ಅಂದ.

ಸುಗ್ಗೀಕಾಲ. ಫಾಳಿ ತೂರುವುದಕ್ಕೆ ಅನುಕೂಲವಾಗಿದ್ದುದರಿಂದ ಊರಿನವರು ಕಣಗಳಲ್ಲಿ ತೂರಿಕೊಂಡು ಬತ್ತವನ್ನು ಮನೆಗೆ ಹೊರುತ್ತಿದ್ದರು. ಅವತ್ತು ಸಂಜೆಗೆ ಮಾದೈಯು, ಅವನ ತಮ್ಮಂದಿರಿಬ್ಬರು, ಅವರ ಹೆಂಡಂದಿರು, ಜೀತದ ಆಳುಗಳು, ಬತ್ತ ಹೊತ್ತು ಮನೆಗಳಿಗೆ ತರಬೇಕು. ಆ ಹೊತ್ತಿಗೆ ದೊಡ್ಡ ಹೈದ ಅವನ ತಮ್ಮ ಪುಟ್ಟಸಾಮಿ ಅವರಿಗೆ ಕಾದುಕೊಂಡಿದ್ದು ಮಾದೈಯು, ಅವನ ತಮ್ಮ, ಅವನ ಹೆಂಡತಿ, ಮಾದೈಯನ ಎಂಟು ವರ್ಷದ ಮಗ, ಒಬ್ಬ ಜೀತದ ಆಳು, ಇಷ್ಟು ಜನಗಳನ್ನೂ ಖೂನ್ ಮಾಡಿದರು. ಈ ಕೃತ್ಯದ ಕ್ರಮ, ಮಾದೈಯನ ಕಡೆಯವರು ಓಣಿಯ ಒಳಕ್ಕೆ ಬಂದ ಕೂಡಲೆ ಬಿಚ್ಚುಕೊಡಲಿ ಹಿಡಿದು

ಪುಟ್ಟಸಾಮಿ ಓಣಿ ಬಾಗಿಲಿಗೆ ಅಡ್ಡಲಾಗಿ ನಿಂತು ಪ್ರವೇಶಿಸಿದವನು ಹೊರಗೆ ಹೋಗದಂತೆ ಹೊರಗಿನಿಂದ ಯಾರೂ ಒಳಕ್ಕೆ ಬರದ ಹಾಗೆ ಬಂದು ಮಾಡುವುದು, ಒಳಕ್ಕೆ ಬಂದವರನ್ನು ಹರಿತವಾದ ಮಚ್ಚು ಹಿಡಿದಿದ್ದ ದೊಡ್ಡ ಹೈದ ಕಡಿದುಬಿಡುವುದು. ಮೊದಲು ಬಂದ ಜೀತಗಾರನನ್ನು ಅವನು ಸದ್ದು ಮಾಡುವುದಕ್ಕೆ ಕೂಡ ಅವಕಾಶ ದೊರೆಯದಂತೆ ಕೊಂದರು ನಂತರ ಬಂದ ಮಾದೈಯನಿಗೆ ಹೊಡೆದ ಪೆಟ್ಟು ಬುರುಡೆಯ ಒಂದು ಭಾಗವನ್ನು ಕೆತ್ತಿ ಭುಜಕ್ಕೆ ಕಚ್ಚಿತು. ಮಚ್ಚನ್ನು ಕಿತ್ತು ತೆಗೆದು ಇನ್ನೊಂದು ಪೆಟ್ಟು ಹೊಡೆಯಬೇಕಾಯಿತು. ಅವನು ಕೂಗಿಕೊಂಡದ್ದನ್ನು ಕೇಳಿ ಅವನ ಹೆಂಡತಿಯೂ ಮಗನೂ ಓಣಿಯೊಳಕ್ಕೆ ಓಡುತ್ತ ಬಂದರು. ಅವರಿಗೆ ಒಂದೊಂದೇ ಪೆಟ್ಟು ಸಾಕಾಯಿತು. ಓಣಿಯ ಬಚ್ಚಲಲ್ಲಿ ಹರಿಯುತ್ತಿದ್ದ ನೆತ್ತರನ್ನು ನೋಡಿ ಓಣಿಯ ಮುಖದಿಂದ ಓಡಿಹೋಗುತ್ತಿದ್ದ ಮಾದೈಯನ ತಮ್ಮನನ್ನು ಪುಟ್ಟಸಾಮಿ ಅಟ್ಟಿಹೋಗಿ ಕೊಡಲಿಯಿಂದ ಕಡಿದ. ಅವನ ಹೆಂಡತಿ ಮಾತ್ರ ಯಾರದೋ ಮನೆಯೊಳಕ್ಕೆ ನುಗ್ಗಿ ಸಾಪಿಸಿಂದ ಪಾರಾದಳು.

ತಲೆಯಿಂದ ಕಾಲಿನವರೆಗೂ ರಕ್ತದಿಂದ ಲೇಪಿತರಾಗಿ ರಕ್ತವನ್ನು ತೊಟ್ಟುತ್ತಿರುವ ಆಯುಧವನ್ನು ಹಿಡಿದು ರಕ್ತದಿಂದ ತೊಯ್ದ ನೆಲದಮೇಲೆ, ಹೆಣಗಳ ಮಧ್ಯೆ ಕಾಲಭೈರವರಂತೆ ನಿಂತಿದ್ದ ಈ ಕೊಲೆಪಾತಕರನ್ನು ಹಿಡಿಯುವ ಕಲಿತನ ಊರಲ್ಲಿ ಯಾರಿಗೂ ಇಲ್ಲ ಪಟೇಲನು ಕೂಡಲೇ ಹನಸೋಗೆ Police Out Post ಗೆ ರಿಪೋರ್ಟ್ ಕೊಟ್ಟ. ಹನಸೋಗೆಯಲ್ಲಿ ಇಬ್ಬರು ಪೋಲೀಸಿನವರು. ಒಂದು ಬಂದೂಕು, ಆದರೆ ಆ ಬಂದೂಕಿಗೆ ತೋಟಾಗಳಿಲ್ಲ. ಒಬ್ಬ ಪೋಲೀಸಿನವನು ಬ್ರಾಹ್ಮಣ. ಅವನ ಹೆಸರು ಗುಂಡಪ್ಪನೆಂದು ನೆನಪು. ಇನ್ನೊಬ್ಬ ಪರಿವಾರದವನು. ಇವರಿಬ್ಬರೂ ಹನಸೋಗೆಯಲ್ಲಿನ ಕೆಲವರು ಕೆಚ್ಚೆದೆಯ ವ್ಯಕ್ತಿಗಳನ್ನು ಜೊತೆಮಾಡಿಕೊಂಡು ಅಬ್ಬೂರಿಗೆ ಬಂದರು. ಆಗ ರಾತ್ರಿ. ತಿಂಗಳ ಬೆಳಕು ಸುಮಾರಾಗಿತ್ತು. ಪಟೇಲ ನಡೆದ ಕೃತ್ಯವನ್ನು ತಪಸೀಲಾಗಿ ವಿವರಿಸಿ, "ಓಣಿ ಬಾಗಿಲಿನಲ್ಲಿ ದೊಡ್ಡ ಹೈದ ಮಚ್ಚುಹಿಡಿದು ನಿಂತಿದ್ದಾನೆ. (ಪುಟ್ಟಸಾಮಿ ಹೇಗೋ ತಪ್ಪಿಸಿಕೊಂಡು ಪರಾರಿಯಾಗಿರುವಂತೆ ಕಾಣುತ್ತೆ.) ಯಾರು ಬಂದರೂ

ಕಡಿದುಹಾಕಿಬಿಡುವುದಾಗಿ ಅರಚುತ್ತಿದ್ದಾನೆ. ಅವನಿಗೆ ಬುದ್ಧಿ ಕೆಟ್ಟರು ವಂತೆ ಕಾಣುತ್ತೆ. ಅವನ ಹೆಂಡತಿ ಹಟ್ಟಿಯೊಳಕ್ಕೆ ಸೇರಿಕೊಂಡು ಬಾಗಿಲುಃಹಾಕಿಕೊಂಡು ಬಿಟ್ಟಿದ್ದಾಳೆ. ಅವಳಿಗೂ ಪ್ರಾಣ ಭಯ'' ಎಂದು ಹೇಳಿದ. "ದೊಡ್ಡ ಹೈದ ಬಹಳ ಬಲವಾದ ಆಳು. ಈಗ ಪ್ರಾಣದ ಆಶೆಕೂಡ ಬಿಟ್ಟಿದ್ದಾನೆ. ಯಾರು ಹೋದರೂ ಒಂದು ಬಲಿಯನ್ನಾದರೂ ತೆಗೆದುಕೊಳ್ಳುತ್ತಾನೆ. ಅವನನ್ನು ಕೋವಿಯಿಂದ ಸುಟ್ಟುಬಿಡುವುದು ಅಥವಾ ಜಖಂ ಆದರೂ ಮಾಡಿಬಿಡುವುದು ಉತ್ತಮ.'' ಎಂದು ಸೂಚಿಸಿದ. ಆದರೆ ತೋಟೆ ಇಲ್ಲದ ಕೋವಿಯನ್ನು ಹಾರಿಸುವುದು ಹೇಗೆ?

ಆಗ ಗುಂಡಪ್ಪನಿಗೆ ಒಂದು ಯೋಚನೆ ಹೊಳೆಯಿತು. ಪಟೇಲನ ಮನೆಯಿಂದ ಮೆಣಸಿನಕಾಯಿ ಪುಡಿಯನ್ನು ತರಿಸಿ, ಅದರೊಂದಿಗೆ ಪುಡಿ ಮಣ್ಣನ್ನು ಬೆರಸಿ, ನಂತರ ಅವನ ಉಪಾಯವನ್ನು ಹೇಳಿದ.

"ಲಾಠಿ ತುದಿಯಮೇಲೆ ಪೇಟಾವನ್ನು ಇಟ್ಟು ಆ ಓಣಿಯೊಳಕ್ಕೆ ತಳ್ಳೋಣ, ಪೋಲೀಸಿನವರು ಯಾರೋ ಬಂದರೆಂದು ಅದನ್ನು ಕಡಿಯ ಹೋಗುತ್ತಾನೆ. ಹಾಗೆ ಕಡಿಯುವ ಯತ್ನದಲ್ಲಿ ಅವನ ಮುಖವೂ ಸ್ವಲ್ಪ ಹೊರಬೀಳುತ್ತೆ. ಒಂದು ಸಲ ಕಡಿದವನು ಇನ್ನೊಂದು ಹೊಡೆತಕ್ಕೆ ಮಚ್ಚು ಎತ್ತಬೇಕಾದರೆ ಸ್ವಲ್ಪಕಾಲ ಬೇಕು. ಅಷ್ಟರಲ್ಲಿ ನಾನು ಮೆಣಸಿನ ಪುಡಿಯನ್ನು ಅವನ ಕಣ್ಣಿಗೆ ಎರಚಿ, ಅವನು ಚೇತರಿಸಿಕೊಳ್ಳುವುದರೊಳಗಾಗಿ ಮುಂದೆ ನುಗ್ಗಿ ಅವನನ್ನು ತಬ್ಬಿ ಹಿಡಿಯುತ್ತೇನೆ ಆಕೂಡ್ಲೆ ನೀವುಗಳೆಲ್ಲರೂ ಬಂದು ನನ್ನ ಬಚಾಯಿಸಿ, ಅವನನ್ನು ಹಿಡಿಯಬೇಕು.''

ಈ ಮಾತಿಗೆ ಎಲ್ಲರೂ ಒಪ್ಪಿದರು. ಗುಂಡಪ್ಪ ಪೋಲೀಸು ಪೇಟಾವನ್ನು ಲಾಠಿಯ ಕೊನೆಗೆ ತಗಲಿಹಾಕಿ ಒಂದೆರಡು ಸಲ, ಭಯದಿಂದ, ಸಂದೇಹದಿಂದ ಇಣಿಕಿ ನೋಡುವವನ ತಲೆಯಂತೆ ಆ ಓಣಿ ಮೂಲೆಯಲ್ಲಿ ಸ್ವಲ್ಪ ಮುಂದೆ ನೂಕುವುದು ವಾಪಸು ಸೆಳೆದುಕೊಳ್ಳುವುದು ಹೀಗೆ ಮಾಡಿದ. ಕೊನೆಗೆ ಥಟಕ್ಕನೆ ಕೂಗಿ ಒಳಗೆ ತಳ್ಳಿದ. ಕೂಡಲೆ ಓಣಿಯೊಳಗಿನಿಂದ ಮಚ್ಚಿನ ಬಲವಾದ ಪೆಟ್ಟು ಪೇಟಾಮೇಲೆ ಬಿದ್ದು ಪೇಟಾದಲ್ಲಿ ಮಚ್ಚು ಕಚ್ಚಿ ಸಿಲುಕಿತು. ಆ ಕ್ಷಣವೇ ಗುಂಡಪ್ಪನು ಓಣಿಯೊಳಗೆ ನುಗ್ಗಿ ಮೆಣಸಿನಪುಡಿ ಬೆರಕೆಯಾದ ಮಣ್ಣನ್ನು ಅಲ್ಲಿದ್ದ ಕೊಲೆ

ಪಾತಕನ ಮುಖಕ್ಕೆ ಎರಚಿ ಅವನು—ಅಯ್ಯೋ—ಎಂದು ಮುಚ್ಚು ಕೆಳಗೆ ಹಾಕುವಷ್ಟರಲ್ಲೇ ಅವನನ್ನು ತನ್ನ ಬಲವೆಲ್ಲಾ ಬಿಟ್ಟು ಬಿಗಿದು ಅಪ್ಪಿದನು. ಇಬ್ಬರೂ ಕೆಳಗೆ ಬಿದ್ದರು. ಆ ಕೂಡಲೆ ಪೋಲೀಸಿನವರ ಕುಮ್ಮಕ್ಕಿಗೆ ಬಂದಿದ್ದ ಜನಗಳು ಮುಂದೆ ನುಗ್ಗಿ ದೊಡ್ಡ ಹೈದನನ್ನು ಹಿಡಿದು ಬಂಧಿಸಿದರು. ಅವನ ತಮ್ಮ ಪುಟ್ಟಸಾಮಿಯೂ ಮಾರನೆಯ ದಿವಸ ಹೊಳೆಯೊಳಗಣ ಒಂದು ತಿಟ್ಟಿನಲ್ಲಿ ಅವಿತುಕೊಂಡಿದ್ದವನು ಸಿಕ್ಕ.

ಈ ಮೊಕದ್ದಮೆಯೇ ನಾನು ಯಡತೊರೆಗೆ ಹೋಗುವ ವೇಳೆಯಲ್ಲಿ ಮೈಸೂರಿನಲ್ಲಿ ತನಿಖೆಯಾಗುತ್ತಿದ್ದದ್ದು.

ಯಡತೊರೆಗೆ ಸಂಸಾರ ಸಮೇತ ಮೈಸೂರಿನಿಂದ ಹೊರಟೆ. ಯಡತೊರೆ ತಾಲ್ಲೂಕು ಸರಹದ್ದು ಮುಟ್ಟಿದಕೂಡಲೆ ನಾನು ನನ್ನ ಅಧಿಕಾರದ ಎಲ್ಲೆಯಲ್ಲಿದ್ದೇನೆಂದು ಗೊತ್ತಾಯಿತು. ಸರಹದ್ದಿನಲ್ಲಿ ಚಪ್ಪರ, ತೋರಣ, ಹಣ್ಣು, ಹೂ, ಹಾರ, ತಾಂಬೂಲ ಇವುಗಳ ತಟ್ಟೆಗಳನ್ನೊಪ್ಪಿಸುವ ಜನ. ಗ್ರಾಮ ಗ್ರಾಮದ ಎಲ್ಲೆಯಲ್ಲೂ ಕಹಳೆ ವಗ್ಯೆರೆ. ನನ್ನ ಇಬ್ಬರು ಮಕ್ಕಳಿಗೆ ಬಹಳ ಆನಂದ—ಓಹೋ ಹೋ ಹೋ ಎಷ್ಟು ಹಣ್ಣು, ಎಷ್ಟು ಹೂವು, ತಿನ್ನಬಹುದೇನಮ್ಮ?—ಎಂದು ಕೇಳುವರು. ನನ್ನ ಹೆಂಡತಿಗೆ—ಇದೇನು, ಇಷ್ಟು ಹೆಚ್ಚಾಗಿ ಉಪಚಾರಮಾಡುತ್ತಾರಲ್ಲ—ಇದಕ್ಕೆ ಬದಲು ನಾವು ಏನುಮಾಡುತ್ತೇವೆಂದು ತಿಳಿದುಕೊಂಡಿದ್ದಾರೋ ಏನೊ—ಎಂಬ ಸಂದೇಹ, ಒಂದು ರೀತಿ ಕಳವಳ ಎಂದರೂ ಸಲ್ಲುತ್ತಿತ್ತು.

ಮಧ್ಯಾಹ್ನ ಸುಮಾರು ಮೂರು ಘಂಟೆಗೆ ಯಡತೊರೆ ಸೇರಿದೆವು. ಹೋದ ಸ್ವಲ್ಪ ಹೊತ್ತಿಗೆಲ್ಲ ಛಾರ್ಜನ್ನು ತೆಗೆದುಕೊಂಡು, ಅದಕ್ಕೆ ಸಂಬಂಧಪಟ್ಟ ಕಾಗದಗಳಿಗೆ ರುಜುಹಾಕಿ, ಭೋಜನ ಮಾಡಲಿಕ್ಕೆ 'Travellers' Bangalow' ಗೆ ವಾಪಸು ಬಂದೆ. ಅಲ್ಲಿಗೆ ಅಡಿಗೆಯವನನ್ನು ಹಿಂದಿನ ದಿವಸವೇ ಕಳುಹಿಸಿದ್ದೆ. ಆದರೆ ನಾನು ಕಳುಹಿಸಿದ ಸಾಮಾನು, ನನ್ನ ಕಡೆ ಆಳು, ಇವೆರಡೂ ಅಲ್ಲಿನ ಸನ್ನಿವೇಶದಲ್ಲಿ ಬೆಳೆ ಎದ್ದು ಅಡಿಗೆ ಮನೆ ಸುಗ್ಗಿಯ ಕ್ಷೇತ್ರವಿದ್ದ ಹಾಗಿತ್ತು. ನಾನು ನನ್ನ ಹೆಂಡತಿ ಗಲಾಟೆಮಾಡಿ ಹೆಚ್ಚು ಜನವನ್ನು ಹೊರಡಿಸಿದ ಮೇಲೂ

ಛತ್ರದ ಪಾರುಪತ್ತೇಗಾರ
ಛತ್ರದ ಪರಿಚಾರಕ, ಬಳ್ಳಕ್ಕಿ ಸೀನ
ಛತ್ರದ ಅಡಿಗೆ ಪುಟ್ಟಣ್ಣಯ್ಯ
ಕಸಬಾ ಶೇಕದಾರರು
ಕಸಬಾ ಪಟೇಲರು
ದೇವಸ್ಥಾನದ ಪಾರುಪತ್ತೇಗಾರರು—

ಇನ್ನೂ ಯಾರು ಯಾರೋ ಏಳು ಎಂಟು ಜನಗಳಿದ್ದರು.

ನನ್ನ ಅಡಿಗೆಯವನ ಕೈಲಿ ನಮ್ಮ ಊಟವನ್ನು ನಮ್ಮ ಕೊಠಡಿಗೆ ತರಿಸಿಕೊಂಡೆವು.

ಊಟಮಾಡಿದ ಮೇಲೆ ವಿಚಾರಿಸಲಾಗಿ ಛತ್ರದಿಂದ ಮೂರು ಸೇರು ಅಕ್ಕಿ ಲವಾಜಮೆ ತಂದು ಬಂಗಲೆಯಲ್ಲಿ ನನಗಾಗಿ ಅಡಿಗೆ ಮಾಡಿದ್ದರೆಂದು ಗೊತ್ತಾಯಿತು. ನನಗೆ ಬಹಳ ಕೋಪ ಬಂತು. ಛತ್ರವಿರುವುದು ಆಗಂತುಕರಿಗೆ, ಅಮಲ್ದಾರರ ಮೇಜವಾನೆಗಲ್ಲ. ಅವತ್ತಿನ ಅಕ್ರಮ ಖರ್ಚು ಪಾರ್ಪತ್ತೇಗಾರರ ತಲಬಿನಲ್ಲಿ ಹಿಡಿಯುತ್ತೇನೆಂದು ಹೇಳಿದೆ. ಪಾರುಪತ್ತೇಗಾರರು—ಹೆಡ್‌ಗುಮಾಸ್ತರ ಅಪ್ಪಣೆಯಾದಂತೆ ಮಾಡಿದ್ದಾಗಿ ಹೇಳಿದರು; ಹೆಡ್‌ಗುಮಾಸ್ತರು ಶಿರಸ್ತೇದಾರರ ಪ್ರಮಾಣವನ್ನು ಹೇಳಿದರು, ಶಿರಸ್ತೇದಾರರು ರಹಸ್ಯವಾಗಿ—ಹಿಂದಿನ ಅಮಲ್ದಾರರೇ ತಾವು ಬರುವುದು ಎಷ್ಟು ಹೊತ್ತಾಗುತ್ತೋ ಏನೋ ಒಂದಿಷ್ಟು ಅನ್ನ ಸಾರುಮಾಡಿಸಿ ರೆಡಿಯಾಗಿಡಿಸಿ ಬಿಡಿ ಎಂದು ಸಲಹೆಕೊಟ್ಟಿದ್ದರೆಂದು ಹೇಳಿದರು. ಸರಿ, ಒಳ್ಳೇ ಉದ್ದೇಶ, ತಪ್ಪು ಕೆಲಸ. ಅದೇನೂ ಅಷ್ಟು ಅಪೂರ್ವವಲ್ಲ ತಾನೆ?

ಬಳ್ಳಕ್ಕಿ ಸೀನ. ಬಳ್ಳಕ್ಕಿ ಸೀನನ್ನ ನೋಡಬೇಕೆಂದು ನನಗೆ ಕುತೂಹಲವಾಯಿತು. ಲಂಕೆ ಹನುಮ, ಗದೆ ಭೀಮ, ಪರಶುರಾಮ, ಹೀಗೇ ಇವನೂ ವಿಶೇಷಣದಿಂದ ವಿಶಿಷ್ಟನಾದ ಪ್ರಭೃತಿ. ಅಲ್ಲದೆ ಎಲ್ಲಿಯೋ ಓದಿದ್ದೇನೆ—ಈ ಲೋಕದಲ್ಲಿ ಜನಗಳನ್ನು ಸಾಕಿ ಅವರ ನೆಮ್ಮದಿಯನ್ನು ಗಳಿಸಿಕೊಟ್ಟವರಗಿಂತ ಅವರನ್ನು ಧ್ವಂಸಮಾಡಿ ಲೋಕಕಂಟಕರಾದಂಥವರ ಖ್ಯಾತಿ ಹೆಚ್ಚು ಅಂತ. ಅದೇರೀತಿ ಬೆಳೆಮಾಡುವವರಿ

ಗೀತ ತಿನ್ನುವವರ ಪ್ರಶಸ್ತಿಹೆಚ್ಚು. ಬಳ್ಳಕ್ಕಿಯೆಂದರೆ ಎರಡು ಸೇರು ಅಕ್ಕಿ. ಈ ಸೀನ ಮಹಾನುಭಾವ ಒಂದು ಸಲ ಸಂಕಲ್ಪಮಾಡಿ ಕುಳಿತರೆ ಎರಡು ಸೇರು ಅಕ್ಕಿ ಅನ್ನ ಊಟ ಮಾಡುತ್ತಾನಂತೆ. ಇತರರು ಎಕರೆಗೆ ಇಪ್ಪತ್ತೈದು ಪಲ್ಲ ಭತ್ತ ಬೆಳೆಯುತ್ತಾರೆಂದು ಕೇಳಿದ್ದೆ, ಆದರೆ ಇದಕ್ಕೆ ಜಮೀನು, ನೀರು ಗೊಬ್ಬರ, ಬೀಜ ಆರಂಬ ಎಲ್ಲ ಬೇಕು; ಸೀನಂದು ಈ ಬಾಹ್ಯ ಸಲಕರಣೆಗಳನ್ನು ಧಿಕ್ಕರಿಸುವ ಅಸಹಾಯ ಶೌರ್ಯ.

ಸೀನನಿಗೆ ೨೫–೩೬ ವರ್ಷವಿದ್ದಿರಬಹುದು. ಕರ್ರಗೆ, ಉದ್ದಕ್ಕಿದ್ದ. ಬಲಿಷ್ಠನಾದ ಆಳೂ ಅಲ್ಲ. ಹೊಟ್ಟೆ ಬೆನ್ನಿಗೆ ಹತ್ತಿಕೊಂಡಿದ್ದ ಹಾಗಿತ್ತು.

ನಾನು ಅವನನ್ನು ಗೌರವದಿಂದ ನೋಡಿದೆ. (ಒಂದು ಪಾವಕ್ಕಿಗೆ ಬಳ್ಳಕ್ಕಿಯ ಎದುರಿನಲ್ಲಿ ನ್ಯಾಯುವಾಗಿ ಇರಬೇಕಾದ ನಮ್ರತೆಯಿಂದ, ಅನ್ನಿ)

'ಏನಯ್ಯಾ, ನಿನಗೆ ಬಳ್ಳಕ್ಕಿ ಸೀನನೆಂಬ ಬಿರುದು ಹ್ಯಾಗೆ ಬಂತು?'

'ನಾನು ಬಳ್ಳ ಅಕ್ಕಿ ಅನ್ನ ಊಟಮಾಡುತ್ತೇನಂತೆ, ಮಹಾ ಸ್ವಾಮಿ'

'ನೀನು ನಿಜವಾಗಿ ಅಷ್ಟು ಊಟಮಾಡುತ್ತೀಯೇನಯ್ಯಾ'

'ದಿನಾಗಲೂ ಅಷ್ಟು ಎಲ್ಲಿ ಸಿಕ್ಕುತ್ತೆ, ಸ್ವಾಮಿ? ಒಂದು ದಿವಸ ಸ್ವಲ್ಪ ಕಮ್ಮಿ— ಒಂದು ದಿವಸ ಸ್ವಲ್ಪ ಹೆಚ್ಚು— ಅಂತೂ ಹ್ಯಾಗೊ ಸರಿದು ಬರುತ್ತೆ' ಎಂದ.

ಅವತ್ತು 'ಸ್ವಲ್ಪ ಹೆಚ್ಚಿನ' ಸುದಿವಸವಿದ್ದಿರಬೇಕು, ನಮಗಾಗಿ ಮಾಡಿದ್ದ ಅಡಿಗೆಯನ್ನೆಲ್ಲಾ ಛತ್ರದವರೇ ಊಟಮಾಡಿರಬೇಕು. ಇವನು ಛತ್ರದ ಪರಿಚಾರಕ. ಇವನಿಗಾಗಿ ದಿನಕ್ಕೆ ಎರಡು ಸೇರು ಅಕ್ಕಿ ಹಾಕುವು ದೆಂದರೆ ಛತ್ರವೇ ಇವನಿಗೋಸ್ಕರ ಇಟ್ಟಹಾಗೆ. ಇವನನ್ನು ದವಸಭ್ರಷ್ಟ ನೆಂದು ಯಾರೂ ಮನೆಗೆ ಕೆಲಸಕ್ಕೆ ಸೇರಿಸುತ್ತಿರಲಿಲ್ಲ. ಇವನಿಗೆ ಯಾವ ಕೆಲಸವೂ ಬಾರದು. ಛತ್ರಗಳೆಂಬ ಪುರಾತನ ರೀತಿಯ ಧರ್ಮಕ್ಷೇತ್ರ ಗಳಲ್ಲಿ ಇಂಥವರು ದವಸನಾಶಕಕ್ರಿಮಿಗಳು.

ಅವನನ್ನು ಕೆಲಸದಿಂದ ತೆಗೆದುಬಿಟ್ಟರೆ, ಹೊಟ್ಟೆಗಿಲ್ಲದೆ ಕೇಡು ಕೆಲಸಗಳಿಗೆ ಬೀಳುತ್ತಾನೆ, ಇಲ್ಲವಾದರೆ ಸಾಯುತ್ತಾನೆ. ಕೊನೆಗೆ 'ಇವ

ನಿಂದ ಛತ್ರದ ಕೈ ಕೆಲಸವನ್ನೆಲ್ಲಾ ಮಾಡಿಸಿಕೊಂಡು ಇವನಿಗೆ ಅರ್ಧ ಸೇರು ಅಕ್ಕಿ ಅನ್ನವನ್ನು ಹಾಕಿ; ಇವನಿಗೆ ಪುರಸೊತ್ತು ಇದ್ದ ಕಾಲವಲ್ಲಿ ಬೇರೆ ಕೆಲಸಗಳನ್ನು ಮಾಡಿ ಹೊಟ್ಟೆಗೆ ಸಾಲದ್ದಕ್ಕೆ ಸಂಪಾದಿಸಕೊಳ್ಳ ಬಹುದು'— ಎಂದು ತಾಕೀದು ಮಾಡಿದೆ. ಇದರಿಂದ ನಾನು ಬಹಳ ಕಠಿಣನಾದ ಮನುಷ್ಯನೆಂದು ಕೆಲವರು ಆಡಿದರು. ನಮ್ಮ ಶಿರಸ್ತೇ ದಾರರೇ 'ಸ್ವಲ್ಪ 're-consider ಮಾಡಲಿಕ್ಕಾದೀತೆ? ಪಾಪ ಅವನೂ ಬದುಕಬೇಕೋ ಬೇಡವೊ' ಅಂದರು. 'ಯಾಕೆ ಬದುಕಬೇಕೊ ನನ ಗಂತೂ ಗೊತ್ತಿಲ್ಲ; ಆದರೆ ನನ್ನದೇನೂ ಆಕ್ಷೇಪಣೆ ಇಲ್ಲ. ಅಂದರೆ ಒಬ್ಬ ಮನುಷ್ಯನು ಎಂಟು ಜನದ ಆಹಾರವನ್ನು ಧ್ವಂಸಮಾಡುವುದೆಂದರೆ ಸಾಕಾದಷ್ಟು 'justification' ಬೇಡವೇ?' ಎಂದ.

ಅವನು ಸಾಯಲೂ ಇಲ್ಲ, ಖಾಯಿಲೆಯೂ ಬೀಳಲಿಲ್ಲ. ಸೋಮಾರಿ ತನದ ಕವಳದ ಸ್ಥಾನದಲ್ಲಿ ಶ್ರಮದಿಂದ ಸಂಪಾದಿಸಿದ ಊಟ ಅವನಿಗೆ ಒಳ್ಳೆಯದನ್ನೇ ಮಾಡಿತೆಂದು ಕಾಣುತ್ತೆ.

ನಾನು ಯಡತೊರ್ಪೆ ತಾಲ್ಲೂಕಿನ ಛಾರ್ಜನ್ನು ತೆಗೆದುಕೊಳ್ಳುವ ವೇಳೆಯಲ್ಲಿ 'Mr Sparkes' ಎಂಬ ಫರಂಗಿಯವರು ಡೆಪ್ಯುಟಿ ಕಮಿಷನ್ನ ರಾಗಿ ಬಂದಿದರು. ಫರಂಗಿ ಸಾಮ್ರಾಜ್ಯ ಇಂಡಿಯಾದಲ್ಲಿದ್ದಾಗ ಇಂಥ ಡೆಪ್ಯುಟಿ ಕಮಿಷನ್ನರುಗಳು ಬರುತ್ತಿದ್ದರು. ಇಂಥವರು ಕಮಿಷನ್ ಕಾಲಕ್ಕೆ ಮುಂಚೆ ಬರುತ್ತಿರಲಿಲ್ಲ; ಇನ್ನು ಮೇಲೆ ಬರುವುದೇ ಇಲ್ಲ. ಕಾರಣಾಂತರದಿಂದ ಉತ್ಪತ್ತಿಯಾಗಿ, ಕಾಲಬದಲಾವಣೆಯಿಂದ ನಾಶವಾಗಿ ಹೋದ ಅಪೂರ್ವ ಪ್ರಾಣಿವರ್ಗಕ್ಕೆ ಸೇರಿದ ವ್ಯಕ್ತಿಗಳಾದ್ದರಿಂದ ಇವರ ಪರಿಚಯವನ್ನು ನಮ್ಮ ವಾಚಕರಿಗೆ ಸ್ವಲ್ಪ ವಿಶದವಾಗಿ ಮಾಡಿಸಬೇಕು.

ಧಾಂಡಿಗ ಆಳು. ಚನ್ನಾದ ಆಹಾರ ಪಾನಗಳ ಮಹಿಮೆಯಿಂದ ಮೊಖದ ಮೇಲೆ ಆರೋಗ್ಯ; ನಿರಂಕುಶ ಅಧಿಕಾರ ಚಲಾವಣೆಯಿಂದ, ಐಶ್ವರ್ಯದರ್ಪ, ನಮ್ಮ ದೇಶದ ಭಾಷೆಗಳಲ್ಲಿ— ವಿಸ್ಕಿ ಸೋಡ ತೆಗೆದು ಕೊಂಡು ಬಾ — ಅಡಿಗೆಯಾಯಿತೆ — ಕುದುರೆ ತರಹೇಳು — ಇವೇ ಮೊದಲಾದ ಆಜ್ಞೆಗಳನ್ನು ಕೊಡುವಷ್ಟು ಮಾತ್ರ ಪರಿಚಯ. ತಮ್ಮ ಮಾತೃ ಭಾಷೆಯಲ್ಲಿಯೂ ಸಾಮಾನ್ಯ ಜನರಿಗಿರುವಷ್ಟು ವಿದ್ವತ್ತೇ

ಹೊರತು, ವಿದ್ಯಾವಂತರಿಗಿರುವಷ್ಟಲ್ಲ, ಓದುಬರಹ ಬಲ್ಲರೇ ಹೊರತು ವಿದ್ಯಾವಂತರಲ್ಲ; ಸರ್ಕಾರಿ ಅಧಿಕಾರಕ್ಕೆ ಬರುವುದಕ್ಕೆ ಮುಂಚೆ ಕಾಫಿ ಪ್ಲಾಂಟೇಷನ್ನಲ್ಲಿ ಕೆಲಸದಲ್ಲಿದ್ದವರು. ಅವರ ಬಾಯಿಯಿಂದ ಹೊರಡುವ ಭಾಷೆ ಸ್ವಲ್ಪ ಗ್ರಾಮ್ಯ; ರೇಗಿದರೆ (ಬಹುಬೇಗ ರೇಗುವುದುಂಟು) ಅಶ್ಲೀಲ. ಆದರೆ ಪ್ರಕೃತಿ ಕೆಟ್ಟದಲ್ಲ, ಬಡವರೆಂದರೆ— ಅವರಿಗೆ ನಾವೇ ದಿಕ್ಕು ಎಂಬ ಭಾವನೆಯಿಂದ— ಆದರ, ಸಹನೆ; ದೇವರು ತಮಗೆ ಕೊಟ್ಟಿರುವಷ್ಟು ಬುದ್ಧಿ ಇದ್ದಷ್ಟು ನ್ಯಾಯಪರರು. ಆಗಿನ ಕಾಲದ 'standard' ಪ್ರಕಾರ ಸತ್ಯವಂತರು. ಅಂದರೆ ಲಂಚ, ಋಷವತ್ತು ಗಳನ್ನು ತೆಗೆದುಕೊಳ್ಳುತ್ತಿರಲಿಲ್ಲ, ತಮ್ಮ ಅನುಗ್ರಹಕ್ಕೆ ಪಾತ್ರರಾದವರಿಗೆ 'ಬಾರಖೂನ್ ಮಾಫ್' ಏನು ಉಪಕಾರವನ್ನಾದರೂ ಮಾಡಿ ಕೊಟ್ಟು ಬಿಡುವರು. ಆ ದೇವರ ವರ ಪಡೆಯಬೇಕಾದರೆ ಅವರ ಪೂಜಾರಿ ಬಟ್ಲರು ಮುಖಾಂತರ, "ದೊರೇಕಿ ನಲ್ಲತೀಸಿ ತಿನಿಚಿಟ್ಟು, ಸರಿಯಾನ ವೇಳೇ ವಾತ್ತು ಚೊಲ್ಲರೇ" ಎಂದು ಪೂಜಾರಿ ಹೇಳಿದರೆ, ಕೆಲಸವಾಯಿತೆಂದೇ ಲೆಕ್ಕ. ಈ ಫರಂಗಿ ಸರದಾರರುಗಳದು ಒಂದು ಸ್ಥಿರವಾದ ಮತ ಎಲ್ಲ ವಿಷಯದಲ್ಲೂ ಎಲ್ಲ ಇಂಡಿಯನ್ ಜನಗಳಿಗಿಂತಲೂ ತಾವು ಉತ್ತಮರು; ತಾವು ಈ ಕೀಳು ಜನಗಳ ಜನ್ಮಭೂಮಿಯಲ್ಲಿ ದೌಲತ್ತು ಮಾಡುವುದು ಆ ಕೀಳು ಜನಗಳ ಉದ್ಧಾರಕ್ಕಾಗಿ— ತಾವು ಬಿಳೀ ತೊಗಲಿನ ದೇವತಾ ಪುರುಷರಾದ್ದರಿಂದ ಜಗದೋದ್ಧಾರದ ಕರ್ತವ್ಯದ ಹೊರೆಯನ್ನು ಹೊರಲೇ ಬೇಕು. ಈ ರೀತಿ ತಮ್ಮ ಜನ್ಮದ ಧ್ಯೇಯವನ್ನು ತಿಳಿದವರಿಗೆ— ತಮ್ಮ ಇಷ್ಟಬಂದದ್ದೇ ಪ್ರಮಾಣ. ಆಗಿನ ಕಾಲದಲ್ಲಿ ನಮ್ಮನ್ನು ಸಹಜವಾಗಿ ಆಳುವ ಪ್ರಭುವರ್ಗದವರಿಗೂ ಈ ಮಿಥ್ಯಾ ಆವರಣದ ಭ್ರಮೆಯು ಚನ್ನಾಗಿ ಚೇತನವನ್ನು ಮುಸುಕಿತ್ತೆಂದು ನನ್ನ ನಂಬಿಕೆ. ಇದರ ಕಾರಣ ನಮ್ಮ ಚರಿತ್ರೆಯಲ್ಲಿರಬಹುದು— ಕಾರ್ಯವೇನೋ ಅನುಭವದಲ್ಲಿ ಸಿದ್ಧ ವಾಗಿತ್ತು.

ನಾನು ಛಾರ್ಜು ತೆಗೆದುಕೊಂಡ ಕೂಡಲೆ ಸ್ಪಾರ್ಕ್ಸ್ ಸಾಹೇಬರ ಹುಕ್ಕುಂಗಳ ಸುರಿಮಳೆ ಪ್ರಾರಂಭವಾಯಿತು. ಛಾರ್ಜು ತೆಗೆದುಕೊಂಡ ಮಾರನೆಯ ದಿವಸ— 'ಈ ಅಮಲ್ದಾರರು ಇನ್ನೂ ದಿಟ್ಟಂ ಜಮಾಬಂದಿ

ಪೂರೈಸಲಿಲ್ಲ; ಇವರು ಬಹಳ ಸೋಮಾರಿ ಎಂದು ಕಾಣುತ್ತೆ'— ಎಂದು ಬಂತು. "ನಾನು ಛಾರ್ಜನ್ನು ತೆಗೆದುಕೊಂಡು ಎರಡು ದಿನವಾಯಿತು: ಲೆಖ್ಖಗಳು ತಯಾರಾಗುತ್ತಿವೆ. ಆಲಸ್ಯವಿಲ್ಲದೆ ಕೆಲಸಮಾಡುತ್ತಿದ್ದೇನೆ" ಎಂದು ಬರೆದದ್ದಕ್ಕೆ— ಪತ್ರಿಕಾ ಪ್ರಸಂಗ ಬೇಡ; ಕೆಲಸದಲ್ಲಿ ತೋರಿಸಿ (ಆಮೇಲೆ ಸಾಹೇಬರ ಸ್ವದಸ್ತೂರ್ ಇಂಗ್ಲಿಷ್‌ನಲ್ಲಿ) 'You don't seem to know your job'.

ನನಗೆ ರೆವಿನ್ಯೂ ಪರೀಕ್ಷೆ ಪ್ಯಾಸಾಗಿದ್ದರೂ ಕೂಡ ಲೆಕ್ಕ ಮೊಖಾಬಿಲೆ ಅನುಭವವಿರಲಿಲ್ಲ. ನನ್ನ 'Job' (ಕೆಲಸದ) ಯಾವದೊಂದು ಭಾಗ ವಾದರೂ ಆಗಲಿ ನನಗೆ ಚೆನ್ನಾಗಿ ಮುಂದಟ್ಟಿಲ್ಲವೆಂದರೆ ಅದು ಬಹಳ ಮಾನಕ್ಕೆ ಕಮ್ಮಿ ಎಂದು ನನ್ನ ಮತ. ನನ್ನ ಕಛೇರಿಯಲ್ಲಿನ ಅನುಭವಸ್ಥ ಗುಮಾಸ್ತೆಗಳನ್ನೂ ಖದೀಮ ಶ್ಯಾನುಭೋಗರುಗಳನ್ನೂ ಇಟ್ಟುಕೊಂಡು ಎಂಟು ಹತ್ತು ಭಾರಿ ಗ್ರಾಮಗಳ ಲೆಕ್ಕಗಳನ್ನು ನಾನೇ ತಯಾರು ಮಾಡಿದೆ. ಲೆಕ್ಕಗಳ ಮೊಖಾಬಿಲೆಯನ್ನೂ ಮಾಡಿದೆ. ತಾಲ್ಲೂಕು ಮತ್ತು ಗ್ರಾಮವಾರು ಲೆಕ್ಕಗಳಲ್ಲಿ ವ್ಯವಹಾರಗಳಲ್ಲಿ ನನಗೆ ಗೋಚರವಾಗದ ರಹಸ್ಯ ಯಾವುದೂ ಇಲ್ಲವೆಂದು ನನಗೆ ಧೈರ್ಯವಾಯಿತು.

೯

ಛಾರ್ಜನ್ನು ತೆಗೆದುಕೊಂಡ ಮೂರು ನಾಲ್ಕು ದಿನಗಳಲ್ಲಿಯೇ ನಾನು ಚುಂಚನಕಟ್ಟೆ ಜಾತ್ರೆಗೆ ಹೋಗಬೇಕಾಯಿತು. ವಿದ್ಯಾರ್ಥಿಯಾಗಿದ್ದಾಗ ನಾನು ನಮ್ಮ ಮಾವಂದಿರಾದ ಇಂಜಿನಿಯರ್ ಆನಂದತೀರ್ಥರಾಯರ ಸಂಗಡ ಜಾತ್ರೆಗೆ ಒಂದು ಸಲ ಹೋಗಿದ್ದೆ. ಈಗ ತಾಲ್ಲೂಕು ಸುಬೇದಾರನಾಗಿ ಅಲ್ಲಿಯ ವಹಿವಾಟನ್ನೆಲ್ಲಾ ನೋಡಿಕೊಳ್ಳುವ ಕೆಲಸ ನನ್ನದಾಯಿತು. ನನ್ನ ನೆನಪಿನಲ್ಲಿ ನಾನು ಚುಂಚನಕಟ್ಟೆಯಲ್ಲಿ ಮೊಕ್ಕಾಂ ಮಾಡಿದ ಸುಮಾರು ಒಂದು ವಾರ ಸ್ವರ್ಗವಾಸವೆಂಬಂತಿದೆ. ದಿನವಹಿ ಹೊಳೆಯಲ್ಲಿ ಸ್ನಾನ, ದೇವಸ್ಥಾನದಲ್ಲಿ ಶ್ರೀರಾಮರ ಸೇವೆ, ಪೂಜೆ, ಪ್ರಸಾದ; ಸಾಮಾನ್ಯವಾಗಿ ದೇವರ ಸೇವೆಗೆಂದು ದೂರದೇಶಗಳಿಂದ ಬಂದಿರುವ ಸಂಗೀತಗಾರರ ಗಾನ ಸಮರ್ಪಣೆ; ಜಾತ್ರೆಯ ಅಂಗಡಿ ಸಾಲು

ಗಳಲ್ಲಿ ಓಡಾಟ. ಯೌವನ, ಅಧಿಕಾರ, ಜನಗಳಲ್ಲಿ ಮಾನ್ಯತೆ, ಅಲ್ಲಿ ನೆರೆದಿರುವ ಸಾವಿರಾರು ಪ್ರಜೆಗಳ ನೆಮ್ಮದಿ ಸುರಕ್ಷಿತೆಗಳಿಗೆ ನಾನೆ ಜವಾಬ್ದಾರನೆಂಬ ಅಹಂಭಾವ— ಇವುಗಳೇ ಆ ಹಿಗ್ಗಿಗೆ, ಸಂತೋಷಗಳಿಗೆ ಕಾರಣವಿರಬೇಕು. ನಾನು ನನ್ನ ಹೆಂಡತಿ ಮಕ್ಕಳು "Travellers' Bungalow" ನಲ್ಲಿದ್ದೆವು.

ಆಗ ನಡೆದ ಒಂದು ಪ್ರಕರಣ— ಅದರಿಂದ ಜನಗಳಲ್ಲಿ ನನ್ನ ಖ್ಯಾತಿ ಹೆಚ್ಚಾಯಿತೆಂದು ಕಾಣುತ್ತೆ— ಜ್ಞಾಪಕಬರುತ್ತದೆ. ದೇವರ ಪೂಜೆಯ ವೇಳೆಯಲ್ಲಿ ದೇವಸ್ಥಾನದ ಆವರಣದಲ್ಲಿ ಜನಸಂದಣಿ ಬಹಳ ಹೆಚ್ಚಾಗಿರುತ್ತಿತ್ತು. ಬಹಳ ಜನ ಹೆಂಗಸರು, ಮಕ್ಕಳು, ವಸ್ತ್ರವಡವೆಗಳನ್ನು ಧರಿಸಿಕೊಂಡಿರತಕ್ಕವರೂ ಕೂಡ, ದೇವರ ದರ್ಶನಕ್ಕೆ, ಮಂಗಳಾರತಿ ನೇವೇದ್ಯಗಳನ್ನು ಪಡೆಯುವುದಕ್ಕೆ ಅಲ್ಲಿ ನೆರೆಯುತ್ತಿದ್ದರು. ಅದಕ್ಕೋಸ್ಕರ ಹೆಂಗಸರಿಗೆ ಗಂಡಸರಿಗೆ ಒಳಕ್ಕೆ ಹೋಗುವುದಕ್ಕೆ ಬೇರೆ ಬೇರೆ ಮಾರ್ಗಗಳನ್ನು ಗೊತ್ತುಮಾಡಿ, ಒಂದೊಂದು ಸಲಕ್ಕೆ ಎಷ್ಟು ಮಂದಿಯನ್ನು ಒಳಕ್ಕೆ ಬಿಡುವುದೆಂಬುದನ್ನು ನಿಯಮಮಾಡಿತ್ತು. ಈ ಬಂದೋಬಸ್ತಿನ ಭಾರ್ಜಿನಲ್ಲಿ ತಾಲ್ಲೂಕು ನೌಕರರನ್ನು ಇರಿಸಲಾಗಿತ್ತು. ಸಾಮಾನ್ಯವಾಗಿ ಈ ಏರ್ಪಾಡು ಚೆನ್ನಾಗೇ ಜರುಗಿತು. ಹೀಗಿರುವಲ್ಲಿ ಒಂದು ದಿನ, ನಾನೂ ದೇವಸ್ಥಾನದಲ್ಲೇ ಇದ್ದೇನೆ. ಆಗ, ಏಕಾಏಕಿ ಹೆಂಗಸರಿಗಾಗಿ ಗೊತ್ತುಮಾಡಿದ್ದ ಬಾಗಿಲಿನ ಎದುರಿಗೆ ಬಹಳ ಗಲಾಟೆಯಾದ್ದನ್ನು ಕೇಳಿ ನಾನು ಅಲ್ಲಿಗೆ ಹೋದೆ. ಒಬ್ಬ ಬಲಿಷ್ಠನಾದ ಧಾಂಡಿಗ ಆಳು ಬಾಗಿಲ ಹತ್ತಿರ ಡ್ಯೂಟಿ ಮೇಲಿದ್ದ ಜನಗಳನ್ನು ದಬಾಯಿಸಿ, ಒಳಕ್ಕೆ ನುಗ್ಗಲು ಯತ್ನಮಾಡುತ್ತಿದ್ದ. ಅವನ ಸಂಗಡ ಅವನಂತೆಯೇ ಹಳ್ಳೀ ಷೋಕೀಲಾಲುಗಳು— ರೇಷ್ಮೆ ವಸ್ತ್ರದ ತಲೆಗಟ್ಟು, ಬಿಳೀ ಮಲ್ಲು ಜುಬ್ಬ ವಗೈರೆ ವೇಷದ— ನಾಲ್ಕೈದು ಜನಗಳಿದ್ದರು ನಾನು ನೋಡುತ್ತಿದ್ದ ಹಾಗೇ ಡ್ಯೂಟಿ ಮೇಲಿದ್ದ ಮುಜರಾಯಿ ಗುಮಾಸ್ತೆ "ಇದು ನಿಮ್ಮ ದಾರಿಯಲ್ಲ ಕಾಣ್ರಿ, ಅಲ್ಲಿ ಹೋಗಿರಿ"— ಎಂದು ಅಡ್ಡ ಬಂದು ತಡೆಯಲು, ಆ ಹಳ್ಳಿ ಪಹಿಲ್ವಾನ್, ಪಾಪ ಆ ಗುಮಾಸ್ತೆಗೆ ಎತ್ತಿ ಕೆನ್ನೆಗೆ ಹೊಡೆದು ಕೆಳಕ್ಕೆ ಬೀಳುವಂತೆ ತಳ್ಳಿದ. ನಾನು ಆಗ ನವಗ್ರಹ ಪೂಜೆಗೆ ವೈದಿಕ ಉಡುಪು

ಹಾಕಿಕೊಂಡು ಬಂದಿದ್ದೆನಾದ್ದರಿಂದ ನನ್ನ ಹತ್ತಿರ ಯಾರೂ ಆರ್ಡರ್ಲಿ ಗಳಿರಲಿಲ್ಲ. ನಾನು ಮುಂದು ಹೋಗಿ, ಆ ಪಟಿಂಗನ ಜುಬ್ಬದ ಕತ್ತಿಗೆ ಕೈಹಾಕಿ 'ಏನೊ ಜುಲುಮೆ ಇದು; ನೀನು ದೇವರ ದರ್ಶನಕ್ಕೆ ಬಂದಿ ದ್ದೀಯೋ ದರೋಡೆಗೋ?' ಎಂಬುವಷ್ಟರಲ್ಲಿ, ಅವನು ಎರಡು ಕೈಗಳಿಂದಲೂ ನನ್ನನ್ನು ಬಿಗಿಯಾಗಿ ಹಿಡಿದ. ಹೀಗೆ ಹಿಡಿಯುವ ಬೇಕೂಫ ರಿಗೆ ಏನುಮಾಡಬೇಕೆಂಬುದು ನಾನು ಹುಡುಗನಾಗಿ ಗರಡಿಗೆ ಹೋಗು ತ್ತಿದ್ದಾಗ ಕಲಿತದ್ದು ಧಟಕ್ಕನೆ ಸ್ಫೂರ್ತಿಗೆ ಬಂದು ಅದನ್ನು ಆ ಕ್ಷಣವೇ ಮಾಡಿದೆ ಧಡೇರಂತೆ ಕೆಳಕ್ಕೆ ಬಿದ್ದ. ಅಷ್ಟರಲ್ಲೇ ಸುತ್ತುಮುತ್ತಿನ ಜನಗಳೂ ಬಂದು ಅವನನ್ನು ಹಿಡಿದು ಪೋಲೀಸು ಸ್ಟೇಷನ್ನಿಗೆ ತೆಗೆದು ಕೊಂಡು ಹೋದರು. ನಾನೇ ಆ ಮೊಕದ್ದಮೆಯನ್ನು ವಿಚಾರಿಸಬಾರ ದಾಗಿತ್ತೆಂದು ಕಾಣುತ್ತೆ. ಆದರೆ, ಬಹಿರಂಗವಾಗಿ ನಡೆದ ಪುಂಡುತನಕ್ಕೆ ಬಹಿರಂಗವಾಗಿ ಒಡನೆಯೇ ಶಿಕ್ಷೆಯಾಗುವುದು ಕ್ಷೇಮವೆಂದು, ಆ ಮಧ್ಯಾಹ್ನವೆ ಅವನ ಕೇಸನ್ನು ವಿಚಾರಿಸಿ, ಅವನಿಗೆ ದಂಡಿಸಿದೆ. ಇದರ ಫಲವಾಗಿ ದೇವಸ್ಥಾನದ, ರಥೋತ್ಸವದ, ಎಲ್ಲ ಕೆಲಸ ಕಾರ್ಯ ಗಳೂ ಯಾವ ತೊಂದರೆಯೂ ಇಲ್ಲದೆ ಸಲೀಸಾಗಿ ನಡೆದು ಹೋದವು.

## ೧೦

ಬೆಳಗಿನ ಜಾವ—ಸುಮಾರು ಐದು ಘಂಟೆ ಇದ್ದಿರಬಹುದು. ನಾನು ಮಲಗಿದ್ದ ಕೋಣೆಯ ಕಿಡಕಿಯಲ್ಲಿ ಕೆಟ್ಟ ಅಳುವು ಆಚೆ ಬೀದಿ ಯಲ್ಲಿಂದ ನುಗ್ಗಿ ಬಂದು ನಮ್ಮನ್ನು ಹೊಡೆದು ಎಬ್ಬಿಸಿತು. ನನ್ನ ಹೆಂಡತಿ 'ಯಾರೋ ಹೆಂಗಸು, ಕೆಟ್ಟ ಸ್ವರದಿಂದ ಅಳುತ್ತಿದ್ದಾಳೆ, ಏನೋ ಪಾಪ ವಿಚಾರಿಸಿ', ಎಂದು ತಾನು ಎದ್ದು ಕಿಡಕಿಯ ಬಳಿ ನಿಂತು,

'ಯಾರಮ್ಮ ಅದು? ಯಾಕಮ್ಮ ಅಳುತ್ತೀರಿ' ಎಂದು ಕೇಳಿದಳು. ಆ ವ್ಯಕ್ತಿ,

'ನಾನು ಸುಬ್ಬಮ್ಮ, ಸುಬೇದಾರರಿದ್ದಾರೆಯೇ?' ಎಂದು ಬಿಕ್ಕುಗಳ ನಡುವೆ ಕೇಳಿ, ಇನ್ನೂ ಗಟ್ಟಿಯಾಗಿ ಅಳುವುದಕ್ಕೆ ಮುಂದು ಮಾಡಿದಳು. ನನ್ನ ಹೆಂಡತಿ,

'ಅಯ್ಯೋ ಕೃಷ್ಣಪ್ಪನವರ ಹೆಂಡತಿ ಸುಬ್ಬಮ್ಮ. ನಾವು ನಿನ್ನೆ ಅವರ ಮಗಳ ಮದುವೆಗೆ ತಾಂಬೂಲಕ್ಕೆ ಹೋಗಿರಲಿಲ್ಲವೆ? ಏನಾಯಿತೋ ಏನೋ ಪಾಪ'— ಎಂದು ಎದ್ದು ಹೋಗಿ ದೀಪ ಹಚ್ಚಿ ಮನೆಯ ಬಾಗಿಲು ತೆಗೆದು,

'ಸುಬ್ಬಮ್ಮ ಯಾಕರೀ? ಏನಾಯಿತ್ರೀ? ಹೆದರಬೇಡಿ, ಒಳಗೆ ಬನ್ನಿ. ಹೂ, ಯಜಮಾನರಿದ್ದಾರೆ— ಬನ್ನಿ' ಎಂದು ಹೊರಗೆ ಅಳುತ್ತ ನಿಂತಿದ್ದ ಮುತ್ತೈದೆಯನ್ನು ಕೈಹಿಡಿದು ಒಳಕ್ಕೆ ಕರೆದುಕೊಂಡು ಬಂದಳು. ಅಷ್ಟುಹೊತ್ತಿಗೆ ಶಾಲು ಹೊದ್ದುಕೊಂಡು ನಾನೂ ಕೋಣೆಯೊಳಗಿನಿಂದ ಈಚೆಗೆ ಬಂದೆ.

ಸುಬ್ಬಮ್ಮ— ಹೆಸರುಗಳನ್ನು ಬದಲಾಯಿಸಿದ್ದೇನೆ— ಮೂವತ್ತು ಮೂವತ್ತೈದು ವರ್ಷದ ಸಂಕೇತಿ ಬ್ರಾಹ್ಮಣ ಮುತ್ತೈದೆ. ಲಕ್ಷಣವಾದ ಸಾತ್ವಿಕ ರೂಪು ಈಗ ಕ್ಲೇಶದಿಂದ ಕಳೆಗೆಟ್ಟು ವಿಕಾರವಾಗಿದೆ. ತಲೆ ಕೆದರಿದೆ. ಕಣ್ಣುಗಳು ಊದಿವೆ. ಆಕೆಯ ಯಜಮಾನರನ್ನು ನಾನು ಬಲ್ಲೆ. ಸಾಮಾನ್ಯ ಅನುಕೂಲಸ್ಥರಾದ ವೈದಿಕರು. ಸ್ವಲ್ಪ ಜಮೀನಿನಿಂದಲೂ, ವೈದಿಕವೃತ್ತಿಯಿಂದಲೂ ಜೀವನ ಮಾಡಿಕೊಂಡು ಒಬ್ಬರ ಹವ್ಯಾಸಕ್ಕೆ ಹೋಗದೆ ವೇದ, ಶಾಸ್ತ್ರ ಪುರಾಣಗಳನ್ನು ಓದುತ್ತಾ ಸಾಧುವಾಗಿ ಕಾಲ ಕಳೆಯುವ ಪ್ರಾಣಿ.

ಏನೆಂದು ವಿಚಾರಿಸಲಾಗಿ ಆಕೆ ಹೇಳಿದಳು.

'ನಮ್ಮ ಒಬ್ಬಳೇ ಮಗಳ ಮದುವೆ ಹಿಂದಿನ ದಿನ ನಮಗೆ ದೇವರು ಕೊಟ್ಟ ಮಟ್ಟಿಗೆ ಚನ್ನಾಗಿ ಮಾಡಿದೆವು. ನಾವು ಬಡವರು. ಮದುವೆ ಹೆಣ್ಣಿಗೆ— ಪಾಪ ಮಗುವಿಗೆ ಆಸೆ ಇರೋದಿಲ್ಲವೇ— ಹಾಕುವುದಕ್ಕಾಗಿ ನಮ್ಮ ನೆಂಟರು, ಸ್ನೇಹಿತರು ಇವರುಗಳ ಮನೆಯಿಂದ ವಸ್ತ್ರ, ಒಡವೆ ಎರವಲು ಇಸುಕೊಂಡು ಬಂದಿದ್ದೆವು. ಉತ್ಸವ, ಊಟ, ಉಪಚಾರ ಎಲ್ಲ ಮುಗಿಯಬೇಕಾದರೆ ಸರಿರಾತ್ರೆ ಆಯಿತು. ಮಗು ಬಹಳ ಸೋತು ಹೋಗಿ, ಕೂತ ಕಡೇನೆ ತೂಕಡಿಸಿ ಮಲಗುವುದು, ಒಡವೆ ಭಾರಕ್ಕೆ, ಅಮ್ಮ ಕಿವಿ ಜಗ್ಗುತ್ತೆ, ಮೂಗು ನೋಯುತ್ತೆ ಸೆಕೆ ಆಗುತ್ತೆ, ಎಂದು ಅಳೋದು, ಹೀಗೆ ಮಾಡ ಹತ್ತಿದಳು. ಸ್ವಲ್ಪ ತಾಳಮ್ಮ ಮಲಗೋ

ಹೊತ್ತಿಗೆ ಎಲ್ಲ ತೆಗೀವಂತೆ ಎಂದು ಸಮಾಧಾನ ಮಾಡಿ, ಸರಿರಾತ್ರಿ ಒಂದು ಘಂಟೆ ಒಂದೂವರೆ ಘಂಟೆ ಇರಬಹುದು, ಆಗ ಒಡವೆಗಳನ್ನೆಲ್ಲಾ ತೆಗೆದು ಚಿಕ್ಕ ಒಂದು ಬೆತ್ತದ ಪುಟ್ಟಿಯಲ್ಲಿ ಇರಿಸಿ, ಅದರಮೇಲೆ ಮಗು ಉಟ್ಟಿದ್ದ ಪಟ್ಟೇ ಸೀರೆಯನ್ನು ಮಡಿಸಿ ಮುಚ್ಚಿ, ನಾವು ಮಲಗುವ ಮನೆಯಲ್ಲಿನ ನಾಲ್ಕು ಕಾಲು ಮಣೆಯ ಮೇಲೆ ಇಟ್ಟು, ಅದೇ ಕೊಠಡಿಯಲ್ಲಿ ನಾವುಗಳು — ನಾಲ್ಕೈದು ಜನ ಹೆಂಗಸರು — ಮಲಗಿದೆವು. ದೀಪ ಉರಿಯುತ್ತಿತ್ತು. ಆಯಾಸವಾಗಿತ್ತಾದ್ದರಿಂದ ಪ್ರಜ್ಞೆ ತಪ್ಪಿದ ಹಾಗೆ ನಿದ್ರೆ ಬಂತು. ನಮಗೇನೂ ಭಯವಿರಲಿಲ್ಲ. ಭಯವ್ಯಾಕೆ ಹೇಳಿ? ಮನೆಯಲ್ಲಿ ಎಲ್ಲರೂ ನಮ್ಮವರೆ ಮನೆ ತಲಬಾಗಿಲು ಹಾಕಿ, ಹಜಾರದಲ್ಲಿ ಗಂಡಸರು ಮಲಗಿದ್ದರು. ನಮ್ಮ ಯಜಮಾನರು, ನಮ್ಮ ಅಣ್ಣ ವೆಂಕಟರಾಮಯ್ಯನವರು. ಇನ್ನೂ ನಾಲ್ಕೈದು ಜನ—ನಮ್ಮ ಅಣ್ಣ, ತಮ್ಮ, ಭಾವಮೈದನ, ಇಂಥವರೇ—ಮಲಗಿದ್ದರು. ಬಹಳ ಹೊತ್ತು ಮಾತನಾಡುತ್ತಾ ಇದ್ದರು. ಅವರ ಮಾತು ಮುಗಿಯುವುದರೊಳಗಾಗಿ ನನಗೆ ನಿದ್ರೆ ಬಂದು ಬಿಟ್ಟಿತ್ತು. ಬೆಳಗ್ಗೆ ದೇವಸ್ಥಾನದ ವಾಲಗ ಪೂ ಅನ್ನೋಕೆ ಮುಂಚೇನೆ ನಾನೂ ಎದ್ದೆ. ಕಣ್ಣು ಉಜ್ಜಿಕೊಂಡು ನೋಡುತ್ತೇನಲ್ಲ — ಒಡವೆ ಬುಟ್ಟಿ ಕಾಣಲಿಲ್ಲ. ಘಾಬರಿಯಾಗಿ ಗಟ್ಟಿಯಾಗಿ ಕೂಗಿ ಅತ್ತೆ. ಎಲ್ಲರೂ — ಏನು—ಏನು— ಎನ್ನುತ್ತಾ ಓಡಿಬಂದರು. ಇಷ್ಟು ಜನವಿದ್ದ ತುಂಬಿದ ಮನೆಯಲ್ಲಿ ಕಳವು ಎಂದರೇನು? ನೀನೇ ಎಲ್ಲೋ ಇಟ್ಟು ಮರೆತಿರಬೇಕು. ಜ್ಞಾಪಿಸಿಕೊ. ನೋಡು, ಅಂದರು ಮನೆಯೆಲ್ಲಾ ಹುಡುಕಿದೆವು ನಾನು ಹುಚ್ಚಿಯ ಹಾಗೆ ನಿಂತಿದ್ದೆ. ಅಷ್ಟರಲ್ಲಿ ನಮ್ಮಣ್ಣ ಪೋಲೀಸರಿಗೆ ತಿಳಿಸಿ ಪೋಲೀಸು ಇನ್ಸ್ಪೆಕ್ಟರು, ಜಮಾದಾರರು, ರೈಟರು ಇವರುಗಳನ್ನು ಕರೆದುಕೊಂಡು ಬಂದರು. ಅಷ್ಟು ಹೊತ್ತಿಗೆ ಊರಿಗೆ ಊರೆ ನಮ್ಮ ಮನೆಗೆ ಬಂದು ನೆರೆದಿತ್ತು. ನನಗೆ ಒಡವೆಗಳನ್ನು ಕೊಟ್ಟಿದ್ದವರೂ ಬಂದಿದ್ದರು. ಅವರುಗಳು ಗುಸುಗುಸು ಏನೇನೋ ಮಾತನಾಡಿಕೊಂಡು—ಆಮೇಲೆ ಅವರ ಪೈಕಿ ಒಬ್ಬರು "ನೋಡಿ, ಸುಬ್ಬಮ್ಮನವರೆ, ನಾವೂ ಬಡವರು, ನಂಬಿ ಮಾಲುಕೊಟ್ಟಿದ್ದೇವೆ, ನೀವೇ ಎಲ್ಲಿಯೋ ನಿದ್ದೆಗಣ್ಣಿನಲ್ಲಿ ಇಟ್ಟು ಮರೆತಿರಬಹುದು. ಜ್ಞಾಪಿಸಿಕೊಂಡು ತೆಗೆದುಕೊಟ್ಟುಬಿಡಿ, ಇನ್ನು ಸುಮ್ಮನೆ

ಪೋಲೀಸು, ಕೋರ್ಟು, ಕಛೇರಿ, ಯಾಕೆ?'' ಅಂದರು. ಇತರರೂ ಅದನ್ನೇ ಹೇಳೋ ಹಾಗೆ ತಲೆತೂಗಿದರು. ನನಗೆ ಎದೆ ಧಚಕ್ ಅಂದು, ಪ್ರಾಣವೇ ಹೋಗೋ ಹಾಗಾಯಿತು. '' ಎರವಲು ತಂದ ಒಡವೆಯನ್ನು ದಕ್ಕಿಸಿಕೊಳ್ಳುವುದಕ್ಕೆ ಈ ಆವಟ ಎತ್ತಿದೇವೆಂದು ತಿಳಿದಿದ್ದಾರೆ. ಇನ್ನೇನು ಗತಿ, ಯಾಕೆ ಬದುಕಿರಬೇಕು? ನಾವು ಬಡವರಾದರೂ ಮಾನಸ್ತರು, ಸತ್ಯವಂತರು ಎನ್ನಿಸಿಕೊಂಡು ಬಾಳಿದೆವು— ನಮ್ಮ ಯಜಮಾನರು ಇನ್ನು ಪ್ರಾಣವನ್ನಿಟ್ಟುಕೊಂಡಿರುವುದಿಲ್ಲ. ನನ್ನದೂ ಅದೇ ದಾರಿ; ಕಾವೇರಮ್ಮ ಕಾದಿದ್ದಾಳೆ. ನಮ್ಮ ಗೌರಿ ಗತಿ ಏನು ''— ಎಂದು ಗಟ್ಟಿಯಾಗಿ ಅತ್ತೆ. ನಮ್ಮ ಯಜಮಾನರು — ಯಾವಾಗಲೂ ನಾಲ್ಕು ಜನದ ಎದುರಿಗೆ ನನ್ನ ಸಂಗಡ ಸಲಿಗೆಯಾಗಿ ಮಾತನಾಡಿದವರೇ ಅಲ್ಲ—ಬಂದು ನನ್ನ ತಲೆಮೇಲೆ ಕೈಯಿಟ್ಟು ಕಣ್ಣು ಒರಸಿಕೊಳ್ಳಲಿಕ್ಕೆ ಅಂಗವಸ್ತ್ರ ಕೊಟ್ಟು— '' ಅಳಬೇಡಿ ದೇವರಿದ್ದಾನೆ, ದ್ರೌಪದಿಯನ್ನು ಕಾಪಾಡಲಿಲ್ಲವೇ? ನಮ್ಮನ್ನು ಕೈಬಿಟ್ಟಾನೆ'' ಎಂದು, ಅಲ್ಲಿಂದ ಜನದ ಕಡೆ ತಿರುಗಿ— '' ನೋಡಿ, ಸುಬ್ಬರಾಯರೆ, ಸೋಮಯಾಜಿಗಳೇ, ಶಾಸ್ತ್ರಿಗಳೆ, ನಾವು ಏನು ಪಾಪ ಮಾಡಿದ್ದೆವೋ ನಮಗೆ ಈ ಕಷ್ಟ ತಂದು ಬಿಟ್ಟ ಅನುಭವಿಸೋಣ ಆದರೆ ನೀವು ನಂಬಿಕೊಟ್ಟ ಒಡವೆ ಹೋಗುತ್ತೆಂದು ಕನಸಿನಲ್ಲೂ ಹೆದರಬೇಡಿ. ನನ್ನ ಮನೆ, ಬಾಗಿಲು, ಭೂಮಿ, ಕಾಣಿ, ಕೊನೆಗೆ ಪಾತ್ರೆ, ಪದಾರ್ಥ, ಬಟ್ಟೆ ಬರೇ ಕೂಡ ಮಾರಿ ಋಣವಿಮುಕ್ತರಾಗುತ್ತೇವೆ. ಇದೋ, ಅರ್ಕೇಶ್ವರನ ಸಾಕ್ಷಿಯಾಗಿ ಹೇಳುತ್ತೇನೆ'' ಅಂದರು.

'ಅಷ್ಟು ಹೊತ್ತಿಗೆ ಪೋಲೀಸು ಇನ್‌ಸ್ಪೆಕ್ಟರು ಪೋಲೀಸಿನವರು ಮನೆ ಜನಗಳ ಹೊರತು ಬಾಕಿಯವರನ್ನೆಲ್ಲಾ ಆಚೆಗೆ ಕಳುಹಿ ವಿಚಾರಣೆ ಪ್ರಾರಂಭಮಾಡಿದರು. ಕಳವಾದ ಮಾಲಿನ ಪಟ್ಟಿ ಬರೆದುಕೊಂಡರು. ಆ ಸಾಮಾನುಗಳನ್ನು ನಮಗೆ ಕೊಟ್ಟವರ ಹೆಸರು ಬರೆದುಕೊಂಡರು. ಆಮೇಲೆ ಮನೆಯನ್ನೆಲ್ಲಾ — ಅಡಿಗೆಮನೆ ದೇವರಮನೆ ಕೂಡ ಬಿಡದಹಾಗೆ– ಶೋಧಿಸಿದರು. ಅವರವರಲ್ಲೇ ಏನೇನೋ ತುರುಕು ಮಾತಿನಲ್ಲಿ ಮಾತನಾಡಿಕೊಂಡು, ಆಮೇಲೆ ಜಮೇದಾರರು ನನಗೆ '' ನೀವು ಬಹಳ ಹುಷಾರು ಹೆಂಗಸು. ಒಡವೇ ಏನಾಯಿತು ಹೇಳಿ?

ನೀವು ಹೇಳಿದ್ದೆಲ್ಲ ನಿಜವಾಗಿದ್ದರೆ, ಹೊರಗಿನವರು ಯಾರು ಬರುತ್ತಾರೆ?'' ಎಂದರು.

'ನಾನು — ''ತುರುಕನಾದವರೇನು? ಕಷ್ಟಕಾಲದಲ್ಲಿ ಯಾರ ಕಾಲು ಕಟ್ಟಿದರೇನು'' ಅಂದುಕೊಂಡು ಕೈಮುಗಿದು ನಮಸ್ಕಾರಮಾಡಿ 'ಸತ್ಯವಾಗೂ ನಾನು ಏನೂ ಕಾಣೆ — ಮನೆಯಲ್ಲಿದ್ದವರೆಲ್ಲ ನಮ್ಮವರೆ. ಸತ್ಯವಂತರು. ನಿಷ್ಠರು'' ಎಂದೆ.

'''ನಿಮ್ಮಣ್ಣ ಸತ್ಯವಂತರು, ಅವರನ್ನು ಪೋಲೀಸ್ ಸ್ಟೇಷನ್ನಿಗೆ ಕರೆದುಕೊಂಡು ಹೋದರೆ ಬಾಯಿಬಿಡುತ್ತಾರೆ'' ಎಂದು ಒಬ್ಬ ಪೋಲೀಸಿನವನನ್ನು ಕರೆದು ನಮ್ಮಣ್ಣನ ಕಡೆ ತೋರಿಸಿ ಅವರನ್ನು ಹಿಡಿಸಿ ಪೋಲೀಸಿಗೆ ಕಳಿಸಿದರು. ಸೆಳೆದುಕೊಂಡು ಹೋಗುತ್ತಿದ್ದಾಗ ನಮ್ಮಣ್ಣ ನನ್ನ ಕಡೆ ನೋಡಿದ್ದು ಜ್ಞಾಪಿಸಿಕೊಂಡರೆ ನನ್ನ ಹೊಟ್ಟೆ ಬೆಂದು, ನಾನೇಕೆ ಸಾಯಬಾರದು ಅನ್ನಿಸುತ್ತೆ. ಹೊಳೆಗೆ ಬೀಳುವುದು ಸುಲಭ ಆದರೆ ಈ ಅಪವಾದದ ಹೊಲೆ ಇರುವಾಗ ಹ್ಯಾಗೆ ಸಾಯಲಿ? ನಮ್ಮ ಯಜಮಾನರ ಗತಿ ಏನು? ನಮ್ಮ ಗೌರಿ? ಸುಬೇದಾರರು ಬ್ರಾಹ್ಮಣರು, ಒಳ್ಳೆಯವರು, ಬಹಳ ನ್ಯಾಯಮಾಡಿದ್ದಾರೆ, ಬುದ್ಧಿವಂತರು — ಅವರಲ್ಲಿ ಹೋಗಿ ನನ್ನ ಮಾನ ಪ್ರಾಣ ರಕ್ಷಿಸಿ, ನಾನೂ ನಿಮ್ಮ ಅಕ್ಕ ತಂಗಿ, ಬಡವೆ, ದೇವರ ಸತ್ಯವಾಗೂ ನಿರಪರಾಧಿ ಎಂದು ಅಡ್ಡಬೀಳೋಣವೆಂದು ಪೋಲೀಸಿನವರಿಂದ ತಪ್ಪಿಸಿಕೊಂಡು ಇಲ್ಲಿಗೆ ಬಂದೆ.'

ಹೀಗೆಂದು ಹೇಳಿ ಆಕೆ ಬಿಕ್ಕಿ ಬಿಕ್ಕಿ ಅತ್ತಳು. ನನ್ನ ಹೆಂಡತಿ ಆಕೆಯ ಹೆಗಲಿನ ಮೇಲೆ ಕೈ ಇಟ್ಟು ಆಕೆಯ ಕಣ್ಣು ಒರಸಿ 'ಅಳಬೇಡಿ' ಅಮ್ಮ, ದೇವರಿದ್ದಾನೆ. ನಮ್ಮಂಥ ಅಬಲೆಯರನ್ನ ಕಾಪಾಡೋಕೆ. ಕೂತುಕೊಳ್ಳಿ, ನಮ್ಮ ಯಜಮಾನರು ಬಂದು ಅವರೇ ಈ ಕೇಸನ್ನು ವಿಚಾರಿಸುತ್ತಾರೆ' ಎಂದು ಹೇಳಿದಳು.

ಸರಿ; ಈ ಕೇಸನ್ನು ನಾನೇ ವಿಚಾರಿಸಬೇಕೆಂದು ನಮ್ಮ ಮನೆಯ ಅಧಿಕಾರ ಸ್ಥಾನದಲ್ಲಿ ಅಪ್ಪಣೆಯಾಯಿತಲ್ಲ, ಆಗಿನ ಪೋಲೀಸು ರೂಲ್ಸಿನ ಪ್ರಕಾರ ಕೂಡ ಅದೇ ನನ್ನ ಕರ್ತವ್ಯವೂ ಆಗಿತ್ತು. ಐನೂರೋ — ಸಾವಿರವೋ — ರೂಪಾಯಿಗಳ ಮೇಲಿನ ಕಳುವುಗಳು 'Heinous offen-

ces' ಎಂಬ ವರ್ಗಕ್ಕೆ ಸೇರಿದವು; ಅವುಗಳನ್ನು ಅಮಲ್ದಾರರೇ ತನಿಖೆ ಮಾಡಬೇಕೆಂಬ ನಿಯಮ. ಅದೂ ಅಲ್ಲದೆ—ಈಗ ಹೇಳಲು ಸಂಕೋಚ ವೇಕೆ?— ಈ ಸಾಧು ಬ್ರಾಹ್ಮಣ ವೈದಿಕ ಕುಟುಂಬದವರು ಕರ್ಕಶವಾದ ತನಿಖೆಗೆ ಒಳಪಟ್ಟು ಏನು ಕ್ಲೇಶವನ್ನು ಅನುಭವಿಸುತ್ತಾರೋ ಎಂಬ ಕಳವಳ ಬೇರೆ. ನಾನು ನನ್ನ ಎತ್ತಿನಬಂಡಿ ಕಟ್ಟಿಸಿ ಅದರಲ್ಲಿ ಬರುವಂತೆ ಸುಬ್ಬಮ್ಮ ನವರಿಗೆ ಹೇಳಿ, ನನ್ನ ಕುದುರೆಯಮೇಲೆ ಕುಳಿತು ಯಡತೊರೆಗೆ ಹೋದೆ.

ಅಲ್ಲಿ ಕೃಷ್ಣಪ್ಪನವರ ಮನೆಯ ಮುಂದೆ ಪರಿಶೆ ನೆರೆದಿತ್ತು. 'ಆ ಬ್ರಾಹ್ಮಣಗಿತ್ತಿ ಚಾಲು ನೋಡಿದ! ಬದುಕು ಎತ್ತಿಅಕ್ಕೊಳ್ಳೋಣ ಅಂತ ಎತ್ತಿರೋ ಆಟಾನ!' 'ಅಯ್ಯೋ ಪಾಪ ಯಂತ ವಳ್ಳೇರೂ, ಇಂತ ಪಾಡು ಬರಬೈದಾ' 'ಕೃಷ್ಣಪ್ಪನೋರು ದೇವರಂತ ಮನುಷ್ಯರು ಇದನ್ನು ಅವರ ಹೆಂಡತಿ, ವೈದ ಸೇರಿ ಮಾಡಿರಬೇಕು.'

ಹೀಗೆ ನಾನಾ ರೀತಿಯಲ್ಲಿ ಜನ ಮಾತನಾಡುತ್ತಿದ್ದದ್ದನ್ನು ಕೇಳುತ್ತಾ ಕಳವು ನಡೆದ ಮನೆಯೊಳಕ್ಕೆ ಹೋದೆ. ಅಲ್ಲಿ ಇನ್‌ಸ್ಪೆಕ್ಟರೂ ಜಮಾ ದಾರರೂ ದರ್ಬಾರು ಮಾಡುತ್ತಿದ್ದರು. ನಾನು ಹೋದ ಕೂಡಲೆ ಎಲ್ಲರೂ ಎದ್ದರು. ಎಲ್ಲಿಂದಲೋ ಒಂದು ಕುರ್ಚಿಯನ್ನು ತಂದುಹಾಕಿ ದರು. ನಾನು ಕುಳಿತು ದರ್ಬಾರಿನ ಅಧ್ಯಕ್ಷನಾಗಿ ಅದುವರೆಗೆ ನಡೆದದ್ದರ ವರದಿಯನ್ನು ಕೇಳಿದೆ. ಇನ್‌ಸ್ಪೆಕ್ಟರು ನನ್ನ ಕಿವಿಯಲ್ಲಿ,

'ಆ ಬ್ರಾಹ್ಮಣ ಇದಾರಲ್ಲ, ಅವರು ಬಹಳ ಗುಗ್ಗು. ಇದೆಲ್ಲ ಹೆಂಗಸರದೇ ಕೆಲಸ. ಅವರ ಅಣ್ಣ ಒಬ್ಬ ಬಹಳ ಚಾಲೋಕು ಇದಾನೆ. ಅವನ್ನ ಸ್ಟೇಷನ್ನಿಗೆ ಕರೆದುಕೊಂಡು ಹೋಗಿ ದಫೇದಾರ್ ನಂಜಪ್ಪ ವಿಚಾರಿಸುತ್ತಿದ್ದಾನೆ. ಇಬ್ಬರೂ ಸೇರಿ ಮಾಡಿದಾರೆ' ಎಂದು ಹೇಳಿದರು. ನಾನು ಸುಮ್ಮನೆ ತಲೆ ಅಲ್ಲಾಡಿಸಿದೆ.

ಇನ್‌ಸ್ಪೆಕ್ಟರು "ಇದು heinous ಕೇಸು. F I R. (First Information Report) ತಾವೇ ರುಜು ಮಾಡಬೇಕು. ತನಿಖೇನೂ ತಮ್ಮ ಹೆಸರಿನಲ್ಲೇ ಆಗಬೇಕು. Heinous ಕೇಸು Head of police ರೇ ಮಾಡಬೇಕು. ನಾವೆಲ್ಲ ಇದ್ದೀವಲ್ಲ, ಮಾಡ್ತೀವಿ. ತಾವು ನಮಗೆ ಭುಜ ತಟ್ಟಿ ತಾಕೀದು ಮಾಡಿದರೆ ಸಾಕು" ಎಂದರು.

ನಾನು ಕೆಲಸಕ್ಕೆ ಹೊಸಬ. ಪೊಲೀಸು 'investigation' (ತನಿಖೆ) ಮಾಡಿದವನೇ ಅಲ್ಲ. ಇನ್‌ಸ್ಪೆಕ್ಟರು ಖದೀಮರು. ಪೊಲೀಸು ಕೆಲಸದಲ್ಲೇ ನುರಿತು ನರೆತು ಹೆಸರನ್ನೂ ಪ್ರಮೋಷನ್‌ಗಳನ್ನೂ ಗೆದ್ದವರು. ನನ್ನ ತನಿಖೆಯ ಪರಿಜ್ಞಾನ Conan Doyle ರ 'Sherlock Holmes' ಕಥೆಗಳಿಂದಲೂ, ನಾನು ಮ್ಯಾಜಿಸ್ಟ್ರೇಟಾಗಿ ವಿಚಾರಿಸಿದ ಪೊಲೀಸು ಕೇಸುಗಳಿಂದಲೂ ಬಂದು ಬೆಳೆದದ್ದು. ಈ ಮೊಕದ್ದಮೆಯನ್ನು ಅನುಭವಸ್ಥರಾದ ಇನ್‌ಸ್ಪೆಕ್ಟರ ಕುಮ್ಮಕ್ಕು ಇಟ್ಟುಕೊಂಡು ನಾನೇ ಪತ್ತೆ ಮಾಡಬೇಕೆಂಬ ಆಶೆ ಹುಟ್ಟಿತು. ಅಲ್ಲದೆ ಬೆಳಗ್ಗೆ ಅಳುತ್ತಾ ಬಂದ ಹೆಣ್ಣುಮಗಳಿಗೆ, ಅವಳ ನಿರ್ದುಷ್ಟ (ಇದು ಆಗಲೇ ಸಾಕಾದಷ್ಟು ಕಾರಣವಿಲ್ಲದ ನನ್ನ ಭಾವನೆ) ಕುಟುಂಬಕ್ಕೆ ನನ್ನಿಂದ ಏನಾದರೂ ಸಹಾಯವಾದರೆ ಆಗಲಿ, ಎಂಬ ಯೋಚನೆ. ಆಕೆ—'ಸುಬೇದಾರರು ಒಳ್ಳೆಯವರು, ಬುದ್ಧಿವಂತರು. ಅವರಲ್ಲಿ ಹೋಗಿ ಮೊರೆಯಿಡೋಣ'ವೆಂದು ಹೇಳಿದ ಮಾತಿನ ನೆನಪು. ನಾನು ಇದನ್ನು ಪತ್ತೇ ಮಾಡುತ್ತೇನೆಂಬ ನನ್ನ ಹೆಂಡತಿಯ ಸ್ಥಿರವಾದ ನಂಬಿಕೆ. ಇವೆಲ್ಲವೂ ಒಟ್ಟುಗೂಡಿ, ಈ ಮೊಕದ್ದಮೆಯ ವಿಚಾರಣೆಯನ್ನು ಕೈಗೊಳ್ಳುವುದಕ್ಕೆ ನನಗೆ ಉತ್ಸಾಹ ಕೊಟ್ಟವು. F. I. R ನ್ನು ಕಳುಹಿಸಿ, ಈ ಕೇಸನ್ನು ನಾನೇ ತನಿಖೆ ಮಾಡುತ್ತೇನೆಂದು ಡಿಸ್ಟ್ರಿಕ್ಟು ಅಧಿಕಾರಿಗಳಿಗೆ ವರದಿ ಮಾಡಿದ್ದೇನೋ ಮಾಡಿದೆ. 'Lock up' ನಲ್ಲಿದ್ದ ವೆಂಕಟರಾಮಯ್ಯನನ್ನು ಅಪ್ಪಣೆ ವಿನ ಊರುಬಿಟ್ಟು ಹೋಗಕೂಡದೆಂಬ ಷರತ್ತಿನ ಮೇಲೆ ಬಿಡುಗಡೆಮಾಡಿಸಿದೆ. ಸೊತ್ತುಗಳ ಪಟ್ಟಿಯನ್ನು ಅವುಗಳ ಮಾಲಿಕರ ತನಿಖೆಯಿಂದ ನಿರ್ದಿಷ್ಟಪಡಿಸಿ (verify) ಬೆಲೆಯ ಅಂದಾಜು ಮಾಡಿಸಿದ್ದಾಯಿತು. ಒಟ್ಟು ರೂ ೩,೫೦೦ ಬೆಲೆ ಎಂದು ಪಂಚಾಯಿತರು ರರಾಯಿಸಿದರು. ಆಮೇಲೆ ಆ ಮನೆಯಲ್ಲಿ ಅವತ್ತು ರಾತ್ರೆ ಇದ್ದವರ ಹೇಳಿಕೆಗಳನ್ನೆಲ್ಲ ತೆಗೆದುಕೊಂಡದ್ದಾಯಿತು. ಆಮೇಲೆ?

ಆ ಮನೆಯ ನಖಾಸೆ ತಯಾರ್ಮಾಡಿಸಿ ಮನೆಯೊಳಗಿನ ಪ್ರತಿಯೊಂದು ಭಾಗವನ್ನೂ ಭೂತಕನ್ನಡಿ ಶಿವಾಯಿ Sherlock Holmes ರೀತಿಯಲ್ಲಿ ನೋಡಿದ್ದಾಯಿತು.

ಕಳವು ಮಾಲುಗಳ ಪಟ್ಟಿಗಳನ್ನು ಪೊಲೀಸು ಸ್ಟೇಷನ್ ಆಫೀಸರು ಗಳಿಗೆಲ್ಲ ಕಳುಹಿಸಿ, ತಮ್ಮ ತಮ್ಮ ಖಸ್ತುವಾರಿ ಎಲ್ಲೆಗಳೊಳಗಿನ ನೇಕ ಚಾಲು ಆಸಾಮಿಗಳ ಮೇಲೂ ಸರಾಫರುಗಳ ಮೇಲೂ ಅಕ್ಕಸಾಲೆಗಳ ಮೇಲೂ ನಿಗ ಇಡಬೇಕೆಂದು ರಹಸ್ಯವಾದ ನಿರೂಪ ಕೊಟ್ಟೆವು.

ಆಯಿತು. ರಾಮಲಿಂಗ, ಪಟಾಕಿ, ಶಂಬ. ಈ ಹಳೆಯ ಕಳ್ಳರು (K. D.) ತಮ್ಮ ತಮ್ಮ ಗ್ರಾಮಗಳಲ್ಲೇ ಇದ್ದಾರೆ, ಹೊಸ ಸಾಹಸಗಳೇನೂ ಮಾಡಿದಂತಿಲ್ಲ, ಅವರುಗಳ ಚಾಲು ಚಲನೆಗಳನ್ನು ಕಾದು ನೋಡಲು ಗ್ರಾಮ ಅಧಿಕಾರಿಗಳಿಗೂ ಬೀಟು ಪೊಲೀಸಿನವರಿಗೂ ತಿಳಿಸಿದೆ: ತಂದ್ರೆಲಿಂಗ ಎಂಬ ಧೀರ K. D ತನ್ನ ಗ್ರಾಮ ಬಿಟ್ಟು ಎರಡು ತಿಂಗಳಿಂದಲೂ ಪತ್ತೆ ಇಲ್ಲದೆ ಎಲ್ಲೋ ಹೋಗಿದ್ದಾನೆ ಎಂದು ವರದಿಗಳು ಬಂದವು. ಆಮೇಲೆ ಹದಿನೈದು ದಿನ ಯಾವ ಸುದ್ದಿಯೂ ಇಲ್ಲ ಕೇಸು ತಣ್ಣಗಾಗಿ ತಂಗಳು ಬಿದ್ದಂತೆ ಕಾಣುತ್ತಿತ್ತು.

ಹೀಗಿರುವಲ್ಲಿ ಒಂದು ದಿನ ಭೇರ್ಯದ ಪೊಲೀಸು 'Out Post' ನಿಂದ ರಿಪೋರ್ಟು ಬಂತು. 'ತಂದ್ರೇಲಿಂಗನೆಂಬ ಕೆ. ಡಿ. ಸಂತೆಯಲ್ಲಿ "ಬಹಳ ರಾಂಗ್" ಮಾಡಿ ಒಬ್ಬಿಬ್ಬರನ್ನು ಮಾರಾಮಾರಿ ಮಾಡಿದ್ದರಿಂದ ಸದರಿ ಆಸಾಮಿಯನ್ನು ಸ್ಟೇಷನ್ನಿಗೆ ತಂದು ಅವೊತ್ತು ಅಲ್ಲೇ ಇಟ್ಟು ಕೊಂಡಿದ್ದು ಖುದ್ ಎಚ್ಚರಿಸಿ ಬಿಟ್ಟಿರುತ್ತೆ ಜಾಹೀರ್' ಎಂದು.

ಈ ತಂದ್ರೆಲಿಂಗನೆಂಬುವನು ಹೆಸರುವಾಸಿಯಾದ ಕೆ. ಡಿ. ಸಾಲಿಗ್ರಾಮದಿಂದ ಸುಮಾರು ಆರು ಮೈಲಿ ದೂರದಲ್ಲಿರುವ ತಂದ್ರೆ ಗ್ರಾಮದ ನಿವಾಸಿ. ಅವನಿಗೆ ಅಲ್ಲಿ ಒಂದು ಸಣ್ಣಮನೆ, ಸ್ವಲ್ಪ ಭೂಮಿ, ಸಹ ಉಂಟು, ಆದರೆ ಮನೆಗೆ ಸಾಮಾನ್ಯವಾಗಿ ಯಾವಾಗಲೂ ಬೀಗವೇ. ಭೂಮಿಯಲ್ಲಿ ದತ್ತೂರಿ, ನೆಗ್ಗಿನಮುಳ್ಳೇ ಬೆಳೆ. ಒಂದು ಸಲ ನಾನು ಅಲ್ಲಿಗೆ ಹೋದಾಗ ಪಟೇಲನನ್ನು 'ಲಿಂಗಯ್ಯ ಜಮೀನನ್ನು ಯಾಕೆ ಪಾಳು ಬಿಟ್ಟುಕೊಂಡಿದಾನೆ'— ಎಂದು ಕೇಳಿದ್ದಕ್ಕೆ ಪಟೇಲ 'ಬೇಸಾಯ ಯಾಕೆ ಬುದ್ಧಿ, ಕಾಮಧೇನಾಗಿ ಕಳ್ಳತನ ಇರೋವಾಗ' ಎಂದು ಹೇಳಿದ.

'ಹಾಗಾದರೆ ಕಂದಾಯ ?'

'ಕಂದಾಯ ಬಾಕಿಯಿಲ್ಲ ಮಾಸೋಮಿ—ಸಾಲಾಖೈರಿಗೆ ನಾವೇ ಯಾರಾದರೂ ಕಟ್ಟಿಬಿಡುತ್ತೀವೆ.'

'ಏನು? ಅವನ ಹೆದರಿಕೇಗೇ?'

'ಇಲ್ಲ ಬುದ್ಧಿ, ಖಾವಂದರ ಹೆದರಿಕೇಗೆ. ಸಾಲಾಖೈರಿಗೆ ನಮ್ಮದು ಯಾವಾಗಲೂ ಬೇಬಾಕಿ ಗ್ರಾಮ ಲಾಗಾಯ್ತಿನಿಂದಲೂ.'

ಆಮೇಲೆ ಶಾನುಭೋಗನಿಂದ ನಿಜಸ್ಥಿತಿ ತಿಳಿದುಬಂತು. ತಂಡ್ರೆಲಿಂಗ ಆ ಗ್ರಾಮದ ಅನಿಷ್ಟ ದೇವತೆ. ಅವನಿಗೆ ಬೇಡದವರ ದನ ಸಾಯುವುದು, ಬಣಬೆಗೆ ಬೆಂಕಿ ಬೀಳುವುದು. ಅಲ್ಲದೆ (ಭೀರ್ಯದ ದಫೇದಾರರ ರಸವತ್ತಾದ ಭಾಷೆಯಲ್ಲಿ) ಅವನು ರಾಂಗುಕೋರ; ಮಾರಾಮಾರಿ ಮನುಷ್ಯ. ಹಿಂದೆ ಎರಡು ಮೂರು ಸಲ ಸಜವಾಗಿದ್ದರೂ ಮೆತ್ತಗಾದವನಲ್ಲ.

ಮೊದಲನೆಯ ಸಲ ಸಜವಾದ ಕತೆ ವಿಚಿತ್ರವಾಗಿದೆ. ಯಡತೊರೆಯಲ್ಲಿ ಒಬ್ಬ ನಾಲಾ ಸಬ್ ಓವರ್ಸಿಯರ್—ಹೆಸರಿನಿಂದಲೇನು?—ವಾಸವಾಗಿದ್ದರು. ತರುಣರು. ಅವರ ಹೆಂಡತಿ ರೂಪವತಿ. ಬಹಳ ಪ್ರಣಯದ ಸಂಸಾರ. ಒಂದು ದಿನ ಸಬ್ ಓವರ್ಸಿಯರು ಅವರ ಹೆಂಡತಿಗೆ,

'ಸಾಹೇಬರು ಹೊಸ ಅಗ್ರಹಾರಕ್ಕೆ ಇನ್‌ಸ್ಪೆಕ್ಷನ್ನಿಗೆ ಬರುತ್ತಾರೆ. ಇವೊತ್ತು ಅಲ್ಲೇ ಮೊಕ್ಕಾಂ ಮಾಡುತ್ತಾರೆ. ನಾನು ಅಲ್ಲೇ ಇರಬೇಕಾಗುತ್ತೊ ಏನೊ. ಆದರೂ ಸಾಧ್ಯವಾದರೆ ಮನೆಗೆ ಬಂದುಬಿಟ್ಟು, ತಿರುಗ ಬೆಳಗ್ಗೆ ಅಷ್ಟುಹೊತ್ತಿಗೆ ಹೊಸ ಅಗ್ರಹಾರಕ್ಕೆ ಹೋದರೂ ಆಯಿತು. ಆರು ಮೈಲಿ ತಾನೆ. ಬೈಸಿಕಲ್ಲೂ ಇದೆ' ಎಂದು ಹೇಳಿದರು. ಆಕೆ,

'ಆಯಾಸ ಮಾಡಿಕೋಬೇಡಿ' ಎಂದರು.

ಸಬ್ ಓವರ್ಸಿಯರ್ 'ಹೊತ್ತಾಗುತ್ತೆಯೋ ಏನೊ! ನೀನು ಎಚ್ಚರವಾಗಿರಬೇಕಾಗಿಲ್ಲ. ಬಾಗಿಲಿಗೆ ಅಗಣಿ ಹಾಕಬೇಡ. ಹಾಗೇ ಸುಮ್ಮನೆ ಮುಚ್ಚಿರು. ಎಷ್ಟು ಹೊತ್ತಾದರೂ ಬಂದೇ ಬರುತ್ತೇನೆ' ಎಂದರು.

ಮನೆ ಮುಂದಿನ ಬೀದಿಯಿಂದ ಲಿಂಗ ಇದನ್ನು ಕೇಳುತ್ತಿದ್ದ. ಸಬ್ ಓವರ್ಸಿಯರ್ ಹೊಸ ಅಗ್ರಹಾರಕ್ಕೆ ಹೊರಟ ಸ್ವಲ್ಪ ಹೊತ್ತಿನ ಮೇಲೆ ತಾನೂ ಅಲ್ಲಿಗೆ ಪಯಣ ಬೆಳಸಿದ. ಟ್ರಾವಲರ್ಸ್ ಬಂಗಲೆಯಲ್ಲಿ ಡಿ. ಪಿ. ಡಬ್ಲ್ಯು. ಸಾಹೇಬರನ್ನು ನೋಡಲು ಬಂದಿದ್ದ ಜನಸಂದಣಿಯಲ್ಲಿ ತಾನೂ ಸೇರಿದ. ಅವೊತ್ತಿನ ಕೆಲಸ ಕಾರ್ಯಗಳೆಲ್ಲ ಮುಗಿದಮೇಲೆ ಸಾಹೇಬರು ತಮ್ಮ ಸಿಬ್ಬಂದಿಯವರಿಗೆಲ್ಲ ತಮ್ಮ ಕ್ಯಾಂಪಿನಲ್ಲೇ ರಾತ್ರಿ ಭೋಜನಕ್ಕೆ ನಿಲ್ಲಿಸಿಕೊಂಡದ್ದನ್ನು ತಿಳಿದ. ಸಾಹೇಬರ ಔತಣವೆಂದರೆ ಆಜ್ಞೆಯಲ್ಲವೆ? ಊಟ ಮುಗಿಯಬೇಕಾದರೆ ಹತ್ತು ಹನ್ನೊಂದು ಘಂಟೆಯಾಗಬಹುದೆಂದು ಊಹಿಸಿ ತನ್ನ ಯೋಚನೆ ಕೈಗೂಡಿತೆಂದು ಯಡತೊರೆಗೆ ವಾಪಸು ಬಂದ. ರಾತ್ರಿ ಒಂಭತ್ತು ಘಂಟೆಯೊಳಗಾಗಿ ತಾಲ್ಲೂಕು ಕಸಬೆ ಗ್ರಾಮಗಳು ಮಲಗಿ ಬಿಡುತ್ತವೆ. ಆಗಿನ ಕಾಲದಲ್ಲಿ ರಾಜಬೀದಿಯಲ್ಲಿ ಅಲ್ಲಲ್ಲ ಬಹು ವಿರಳವಾಗಿ ಎಣ್ಣೆ ಲಾಂದ್ರದ ಕಂಬಗಳು ಬೆಳಕನ್ನು ಕೊಡುತ್ತಿರಲಿಲ್ಲ. ಕತ್ತಲನ್ನು ತೋರಿಸುತ್ತಿದ್ದವು. ಊರಿನವರು ಮಲಗಿ ಮೊದಲ ನಿದ್ರೆಯ ಸುಖವನ್ನು ಅನುಭವಿಸುವ ಸಮಯ. ಪೋಲೀಸಿನವರು ಇನ್ನೂ ಬೀಟಿಗೆ ಹೊರಡುವ ಮುನ್ನ ನಾನೂ ಪೊಲೀಸಿನವರ ಗಸ್ತಿನ ಪರೀಕ್ಷೆಗೆ ಯತ್ನಮಾಡಿದ್ದೇನೆ. ನಾನು ಜಾಗ್ರತೆ ಯಾಗಿ ಅಜಮಾಯಿಷಿಗೆ ಹೊರಟರೆ, ಅವರು ನನ್ನ ಅಜಮಾಯಿಷಿ ಮುಗಿದು ಮನೆಗೆ ಬಂದ ಸ್ವಲ್ಪ ಹೊತ್ತಿಗೆಲ್ಲ ಡ್ಯೂಟಿಗೆ ಪ್ರಾರಂಭಿಸುತ್ತಾರೆ. ನಾನು ತಡಮಾಡಿಕೊಂಡು ಹೊರಟರೆ, ಅಷ್ಟರಲ್ಲೇ ಡ್ಯೂಟಿ ಮುಗಿಸಿ ಕೊಂಡು ಸ್ಟೇಷನ್ನಿಗೆ ವರದಿ ಒಪ್ಪಿಸಲು ಹೋಗಿರುತ್ತಾರೆ. ನಾನು ಹೊರಟ ವೇಳೆಯಲ್ಲಿ ಅಕಸ್ಮಾತ್ತಾಗಿ ಅವರಿದ್ದರೆ, ನನ್ನನ್ನು ನೋಡದೆ ಇದ್ದವರಂತೆ ಸೀಟಿಗಳಿಂದಲೂ ಕೂಗುಗಳಿಂದಲೂ ಕತ್ತಲನ್ನು ಭೀಕರವಾಗಿ ಮಾಡಿ ಎಲ್ಲ ದಿಕ್ಕುಗಳಿಂದಲೂ ಘೇರಾಯಿಸಿಕೊಂಡು ಮುತ್ತಿ — ನಾನು ಸುಬೇದಾರನಾದ್ದಕ್ಕೆ ಬದುಕಿದೆ, ಕಳ್ಳನಾಗಿದ್ದರೆ ನನ್ನ ಗತಿ ಏನು? — ಎನ್ನಿಸುತ್ತಾರೆ.

ಏನು ಹೇಳಲಿಕ್ಕೆ ಬಂದೆ? ತಂದ್ರೆಲಿಂಗ ಊರು ನಿದ್ರಿಸುವ ವೇಳೆ ಯನ್ನರಿತು ಸಬ್ ಓವರ್ಸಿಯರ್ ಮನೆಗೆ ಬಂದು ಬಾಗಿಲು ನೂಕಿ

ನೋಡಿದ. ಅವನು ನಿರೀಕ್ಷಿಸಿದ್ದಂತೆಯೇ ಅಗಣಿ ಹಾಕಿರಲಿಲ್ಲ. ತಳ್ಳಿದ. ಕೂಡಲೆ ಕದ ತೆಗೆಯಿತು. ಒಳಕ್ಕೆ ಹೋಗಿ ಕದ ಮುಂದುಮಾಡಿಕೊಂಡ. ನಡವೆಯಲ್ಲಿ ಸಬ್ ಓವರ್ಸಿಯರರ ಹೆಂಡತಿ ಮಲಗಿದ್ದರು. ಹತ್ತಿರ ಒಂದು ಕಾಲುಮಣೆಯಮೇಲೆ ಹಣತೆಯಲ್ಲಿ ದೀಪ ಉರಿಯುತ್ತಿತ್ತು. ಅದರ ಬೆಳಕಿನಲ್ಲಿ ಆಕೆಯ ಕತ್ತಿನಲ್ಲಿ ಸರಟಿಕೆ, ಕಾಸಿನಸರ ಕಂಡವು. ಕೈನಲ್ಲಿ ಚಿನ್ನದ ಬಳೆ ಇದ್ದವು. ಆಗ ಅವನು ಏನು ಮಾಡಬೇಕೆಂದು ಯೋಚಿಸಿರಬೇಕು. ಆ ಸಾಧ್ವಿಯ ಆಯುಸ್ಸು ಗಟ್ಟಿಯಾಗಿದ್ದುದರಿಂದ ಅವನಿಗೆ ಕೊಲೆ ಹೂಳೆಯಲಿಲ್ಲ. ಅವಳ ಪಾತಿವ್ರತ್ಯದ ಮಹಿಮೆಯಿಂದ ಅವನಿಗೆ ಅತ್ಯಾಚಾರದ ಆಸೆ ಆಗಲಿಲ್ಲ. ಆಕೆ ಹೊದ್ದಿದ್ದ ಬಟ್ಟೆಯಿಂದ ಆಕೆಯ ಮುಖವನ್ನು ಮುಚ್ಚಿ, ಅದೇ ಬಟ್ಟೆಯನ್ನು ಆಕೆಯ ಬಾಯಿಯಲ್ಲಿ ತುರುಕಿ, ಒದ್ದಾಡುತ್ತಿರುವಾಗ ಆಕೆಯ ಕೊರಳಿನಿಂದ ಕಾಸಿನ ಸರವನ್ನು ಕಿತ್ತು ಹರಿದುಕೊಂಡ. ಅಷ್ಟರಲ್ಲೇ ಬೀದಿಯಲ್ಲಿ ನಾಯಿ ಬೊಗಳಿದ್ದು ಕೇಳಿ ಬರಲಾಗಿ ತಟಕ್ಕನೆ ಆಕೆಯನ್ನು ಬಿಟ್ಟು, ದೀಪವನ್ನು ಊದಿ ಆರಿಸಿ, ಬಾಗಿಲ ಕಡೆಗೆ ನೆಗೆದು, ಓಡುವುದಕ್ಕೆ ಯತ್ನಮಾಡಿದ. ಅದೇ ಹೊತ್ತಿಗೆ ಹೊರಗಿನಿಂದ ಒಳಕ್ಕೆ ನುಗ್ಗಿ ಬರುತ್ತಿದ್ದ ಒಂದು ವ್ಯಕ್ತಿ ಬಾಗಿಲ ಬಳಿ ಇವನಿಗೆ ಡಿಕ್ಕಿ ಹೊಡೆದು ಇಬ್ಬರೂ ಕೆಳಕ್ಕೆ ಬಿದ್ದರು. ಇಬ್ಬರೂ, ಒಬ್ಬನು ಓಡಿಯುವುದಕ್ಕೆ, ಮತ್ತೊಬ್ಬನು ಬಿಡಿಸಿಕೊಳ್ಳುವುದಕ್ಕೆ, ಹೆಣಗಾಡುತ್ತಿರುವಲ್ಲಿ ಆ ಧೀರ ಹುಡುಗಿ ಹಾಸಿಗೆಯಿಂದ ನೆಗೆದೆದ್ದು ಕಳ್ಳ ತನಗೆ ಕವುಚಿದ್ದ ಕಂಬಳಿಯನ್ನೇ, ಕಳ್ಳನ ಅವನ ಸಂಗಡ ಹೋರಾಡುತ್ತಿದ್ದವನ, ಇಬ್ಬರ ಮೇಲೂ ಎಸೆದು ಹಿಡಿದು ಕೂಗಿಕೊಂಡಳು. ನೆರೆ ಹೊರೆಯವರೆಲ್ಲ ಬಂದು ನೋಡುವಲ್ಲಿ ಕಳ್ಳ ತಂಪ್ರಲಿಂಗನೆಂತಲೂ ಅವನನ್ನು ತಬ್ಬಿ ಹಿಡಿದು ತಡೆದ ವ್ಯಕ್ತಿ ಸಬ್ ಓವರ್ಸಿಯರ್ ಎಂತಲೂ ಗೊತ್ತಾಯಿತು. ಸಬ್ ಓವರ್ಸಿಯರ್ ಹೊಸ ಅಗ್ರಹಾರದಿಂದ ಊಟಮಾಡಿದ ಕೂಡಲೆ ತಮ್ಮ ಸಾಹೇಬರ ಅಪ್ಪಣೆಯನ್ನು ಪಡೆದು ಬೈಸಿಕಲ್ಲಿನ ಮೇಲೆ ಯಡತೊರೆಗೆ ವಾಪಸ್ಸು ಬಂದಪ್ಪರಿಂದ ಲಿಂಗ ನಿರೀಕ್ಷಿಸಿದ್ದುದಕ್ಕಿಂತ ಮುಂಚಿತವಾಗಿಯೇ ಒದಗಿದ ಅಕಸ್ಮಾತ್ತಿನಿಂದ ಲಿಂಗನ ಸಾಹಸ ಭಂಗವಾಯಿತು. ಲಿಂಗನ ಮೆಹನತ್ತಿನ ಫಲ ಎರಡು ವರ್ಷಗಳ ಕಠಿಣ ಸಜ.

ನಾನು ತಂಡ್ರೆಲಿಂಗನನ್ನು ಮೊದಲು ನೋಡಿದ ಸಂದರ್ಭವನ್ನು ಮರೆಯುವ ಹಾಗಿಲ್ಲ. ಸಾಲಿಗ್ರಾಮದಿಂದ ಅರಕಲಗೂಡಿಗೆ ಹೋಗುವ ರಸ್ತೆ ಒಂದು ಕಣಿವೆಯಲ್ಲಿ ಬರುತ್ತೆ. ಸರಕಾರಿಯ ಅಂಚೆ ಅದೇ ಮಾರ್ಗವಾಗಿ ನಡೆಯುವುದು. ಸಾಲಿಗ್ರಾಮ ವ್ಯಾಪಾರ ಮತ್ತು ಲೇವಾದೇವಿ ಮಾಡುವ ಸಾಹುಕಾರರು ಇರುವ ಸ್ಥಳವಾದ್ದರಿಂದ ಆ ಮಾರ್ಗವಾಗಿ ಟಪ್ಪಾಲು ಮನಿ ಆರ್ಡರುಗಳ ಇರಸಾಲು ನಡೆಯುತ್ತದೆ. ಅನೇಕವೇಳೆ ನೂರಾರು ರೂಪಾಯಿಗಳು ಅಂಚೆರನ್ನರುಗಳ ಚೀಲದಲ್ಲಿರುವುದುಂಟು. ಆ ದಾರಿಯಲ್ಲಿ ರಾತ್ರಿ ತಿರುಗುಗಾಡಿಗಳ ಸಂಚಾರವೂ ಹೇರಳವಾಗಿರುತ್ತಿತ್ತು. ಅನೇಕ ವೇಳೆ ಅರ್ಧ ದಾರಿಯಲ್ಲಿರುವ ಕಣಿವೆಯಲ್ಲಿ ಕಳ್ಳತನಗಳೂ ದರೋಡೆಗಳೂ ನಡೆದು, ನಡೆದುದಕ್ಕಿಂತಲೂ ನುಡಿದದ್ದು ಮಿಗಿಲಾಗಿ, ಆ ರಸ್ತೆಗೆ ಅಪಖ್ಯಾತಿಬಂದಿತ್ತು. ತಂಡ್ರೆಗ್ರಾಮವು ರಸ್ತೆಯ ನೆರವಿನಲ್ಲಿ ಇದ್ದುದರಿಂದಲೂ ಆ ಗ್ರಾಮದ ಲಿಂಗಯ್ಯನು ಹೆಸರುವಾಸಿ ಕಳ್ಳನಾದ್ದರಿಂದಲೂ ಇವನೇ ಈ ಕಳ್ಳರ ಗುಂಪಿನ ನಾಯಕ, ಕಳ್ಳತನಗಳ ನೇತೃವೆಂದು ಜನಗಳ ಗುಮಾನಿಯಿತ್ತು. ಹೀಗಿರುವಲ್ಲಿ ತಂಡ್ರೆಲಿಂಗ ಅರಕಲುಗೂಡು ಕಚೇರಿಗೆ ಹೋಗಲಿದ್ದ ಕಂದಾಯದ ಇರಸಾಲನ್ನೂ ಅಂಚೆ ರನ್ನರಿನ ಚೀಲವನ್ನೂ ದರೋಡೆಮಾಡಲು ಏರ್ಪಾಡು ಮಾಡುತ್ತಿದ್ದಾನೆಂದು ಅನೇಕ ಬೇನಾಮಿ ಅರ್ಜಿಗಳು ತಾಲ್ಲೂಕಿಗೂ ಡಿಸ್ಟ್ರಿಕ್ಟಿಗೂ ದಿವಾನ್ ಕಚೇರಿಗೂ ಬರಲಾಗಿ ಇವನ ಮೇಲೆ ಜಾಗರೂಕತೆಯಿಂದ ‘ನಿಗಾ’ ಇಡಬೇಕೆಂದು ಗೊತ್ತುಮಾಡಿದೆವು. ಆದರೆ ಪೊಲೀಸು ಆಫೀಸರುಗಳು ಯಾವಾಗ ತಂಡ್ರೆಗೆ ಹುಡುಕಿಕೊಂಡು ಹೋದರೂ ಇವನ ಭೇಟಿ ಲಭಿಸುತ್ತಿರಲಿಲ್ಲ. ಒಂದುದಿನ ನಾನು ತಂಡ್ರೆಯ ಹತ್ತಿರದ ಅಂಕನಹಳ್ಳಿಯೆಂಬಲ್ಲಿಗೆ ಅಲ್ಲಿ ನಡೆಯುತ್ತಿದ್ದ ಮರಾಮತ್ತು ಕೆಲಸಗಳ ಅಜಮಾಯಿಷಿಗಾಗಿ ಹೋಗಿದ್ದವನು ಸವಾರನಾಗಿ ತಂಡ್ರೆ ಮಾರ್ಗವಾಗಿ ಸಾಲಿಗ್ರಾಮಕ್ಕೆ ವಾಪಸ್ಸು ಬರುತ್ತಿದ್ದೆ. ತಂಡ್ರೆಗ್ರಾಮದ ಪಟೇಲನನ್ನು ‘ಲಿಂಗ ಊರಲ್ಲಿದ್ದಾನೆಯೇ?’ ಎಂದು ವಿಚಾರಿಸಿದೆ. ‘ಇದ್ದಾನೆ! ಅದೇ ನೋಡಿ! ಅದೇ ಅವನ ಮನೆ. ಅಲ್ಲಿ ನಿಂತಿರುವಳೇ ಅವನ ಹೆಂಡತಿ’ ಎಂದು ತೋರಿಸಿದ. ನಾನು ಆ ಬಳಿ ಹೋಗಿ ಆ ಹೆಣ್ಣುಮಗಳನ್ನು ‘ಲಿಂಗಯ್ಯ

ಇದ್ದಾನೇನು ತಾಯಿ?" ಎಂದು ಕೇಳಲಾಗಿ, ಅವನು ಹೊಲಕ್ಕೆ ಹೋಗಿರುವುದಾಗಿ ತಿಳಿಯಬಂತು. ಕಾಮಧೇನುವಾಗಿ ಕಳ್ಳತನವನ್ನು ಕಟ್ಟಿಕೊಂಡಿರುವ ಇವನಿಗೆ ಜಮೀನಿನ ಗೋಜು ಯಾಕೆ? ಎಂದು ತೋರಿ ಮುಂದೆ ನಡೆದೆ. ದಾರಿಯಲ್ಲಿ ಪಟೀಲ,— ಅಲ್ಲಿನ ಒಂದು ಪಾಳು ಹೊಲದಲ್ಲಿ ಬಗ್ಗಿಕೊಂಡು ಏನೋ ಮಾಡುತ್ತಿದ್ದ ಒಂದು ವ್ಯಕ್ತಿಯನ್ನು —'ಅವನೇ ಲಿಂಗ ಬುದ್ದಿ' ಎಂದು ತೋರಿಸಿ ಘಟ್ಟಿಯಾಗಿ 'ಲಿಂಗಯ್ಯ ನೋರಿ, ಬನ್ನಿ ಬುದ್ದಿ, ಸುಬೇದಾರರ ಅಪ್ಪಣೆ ಆಗುತ್ತೆ' ಎಂದು ಕೂಗಿದ. ಆ ವ್ಯಕ್ತಿ ತಲೆ ಕೂಡ ಎತ್ತ ನೋಡದೆ 'ಸುಬೇದಾರರ ತಾವು ನನಗೇನೂ ಕೆಲಸವಿಲ್ಲ ಗೌಡರೆ, ಅವರಿಗೆ ನನ್ನ ತಾವ ಕೆಲಸವಿದ್ದರೆ ಇಲ್ಲಿಗೇ ಬರಲಿ' ಎಂದ.

ನಾನು 'ಎಲೋ ಲಿಂಗ ಬಾರೋ ಇಲ್ಲಿಗೆ— ಮಗನೇ'!. ಎಂದು ಕೂಗಿದೆ. ಅವನು ಬಗ್ಗಿದ್ದವನು ನೆಟ್ಟಗೆ ನಿಂತ. ನೀಳಾದ ಎತ್ತರವಾದ ಆಳು. ಸುಮಾರು ಮುವತ್ತೈದು ವರುಷವಿದ್ದಿರಬಹುದು. ಬಲವಾದ ಶರೀರ; ಆದರೆ ಬಲಕ್ಕಿಂತಲೂ ಚಟುವಟಿಕೆ ಹೆಚ್ಚಿರುವಂತೆ ಕಾಣುತ್ತಿತ್ತು.

'ಯಾಕ್ರೀ ಬೈತೀರಾ? ನಿಮ್ಮ ದಾರಿ ಹಿಡಿದಹೋಗರಿ. ಸುಬೇದಾರರಾದರೆ ನಾನು ತಕ್ಸೀರು ಮಾಡಿದಾಗ ಹಿಡಿದು ಸಜಾ ಕೊಡುವಿರಂತೆ' ಎಂದು ನನ್ನ ಕಡೆ ನಿರ್ಲಕ್ಷ್ಯದಿಂದ ನೋಡುತ್ತಾ ನಿಂತ. ಮುಖದಲ್ಲಿ ಧೀರ ಪಟಿಂಗತನ, ಕೈಯಲ್ಲಿ ಕುಡಲು. ನನಗೆ ಬಹಳ ಕೋಪ ಬಂತು. ಹೀಗೆ ತಿರುಗಿ ಬಿದ್ದ ಕಳ್ಳನನ್ನು ನಾನು ಉಪೇಕ್ಷಿಸಿದರೆ ನಾನು ಅಂಜುಬುರುಕನೆಂದು ಜನಗಳು ತಿಳಿದು ಅಪಹಾಸ್ಯ ಮಾಡುವುದಲ್ಲದೆ, ಈ ತುಂಟ ತಾಲ್ಲೂಕನ್ನು ಹತೋಟಿಯಲ್ಲಿಡುವುದೂ ನನಗೆ ಅಸಾಧ್ಯವಾಗುತ್ತದೆಂದು ತಿಳಿದೆ. ಪಟೀಲನೂ ಸುತ್ತ ಮುತ್ತಲಿನ ಹೊಲಗಳಲ್ಲಿನ ರೈತರುಗಳೂ ನೋಡುತ್ತಿದ್ದರು. ಅವರುಗಳ ಮುಂದೆ ಅವಮಾನವೆಂಬುದು ದುಸ್ಸಹವಾಗಿತ್ತು. ನಾನು ಬಲಿಷ್ಠನಾದ ಯುವಕ. ನನ್ನ ಜೇಬಿನಲ್ಲಿ ರಿವಾಲ್ವರು ಆಗಿನ ಕಾಲದಲ್ಲಿ ಯಾವಾಗಲೂ ಇರುತ್ತಿತ್ತು. ಈ ಗ್ರಾಮ್ಯಧೀರನ ಪೊಗರು ಮುರಿಯದಿದ್ದರೆ ಸರ್ಕಾರದ ದರ್ಪಕ್ಕೇ ಕೇಡೆಂದು ಭಾವಿಸಿ, ನಾನು ಅವನ ಹತ್ತಿರಕ್ಕೆ ಕುದುರೆಯನ್ನು ನೆಗೆಸಿ,

ಕೈಲಿದ್ದ ಕುದುರೆ ಚಡಿಯಿಂದ ಅವನನ್ನು ಒಂದು ಪೆಟ್ಟು ಹೊಡೆದೆ. ಕೂಡಲೆ ಅವನು ಕುದುರೆಯ ಲಗಾಮನ್ನು ಎಡಗೈಯಿಂದ ಹಿಡಿದು ಬಲಗೈಯಿಂದ ಕುಡಲನ್ನು ಎತ್ತಿದ. ಅವನು ಹೊಡೆಯುವುದಕ್ಕೇ ಎತ್ತಿದನೋ, ಹೆದರಿಸುವುದಕ್ಕೆ ಮಾತ್ರವೋ, ನನಗೆ ತಿಳಿಯದು. ನಾನು ಆ ಕ್ಷಣವೇ ಜೇಬಿನಿಂದ ರಿವಾಲ್ವರನ್ನು ತೆಗೆದು ಅವನ ತೋಳಿನ ಕಡೆಗೆ ಗುರಿಯಿಟ್ಟು, ಸುತ್ತಲಿದ್ದವರು ಹಾಹಾಕಾರ ಮಾಡುತ್ತಿರಲು,

'ಹಾಕೋ ಕೆಳಗೆ ಕುಡಲನ! ಇಲ್ಲದಿದ್ದರೆ ಇಕ್ಕೋ ನಿನ್ನ ರೆಕ್ಕೆ ಮುರಿಯುತ್ತೇನೆ' ಎಂದು ಘರ್ಜಿಸಿದೆ. ಕುಡಲನ್ನು ಕೆಳಗೆ ಬಿಸುಟ. ನನ್ನ ಪಿಸ್ತೂಲು ಬಾರಾಗಿರಲಿಲ್ಲವೆಂದು ನನಗೆ ಜ್ಞಾಪಕವಿರಲಿಲ್ಲ. ಅವನಿಗೇನು ಗೊತ್ತು ಪಾಪ. ಅವನಿಗೆ ಇನ್ನೆರಡು ಮೂರು ಏಟುಗಳನ್ನು ಬಿಗಿದು, ಅಷ್ಟುಹೊತ್ತಿಗೆ ಅಲ್ಲಿಗೆ ಬಂದಿದ್ದ ನನ್ನ ಆರ್ಡರ್ಲಿ, ಪಟೇಲ, ತಳವಾರ ಇವರುಗಳ ಉಸ್ತುವಾರಿಯಲ್ಲಿ ಅವನ ಮೇಲೆ ಬಂದಿದ್ದ ಅರ್ಜಿಗಳ ವಿಷಯದ ವಿಚಾರಣೆಗಾಗಿ ಸಾಲಿಗ್ರಾಮದ ಪೋಲೀಸು ಸ್ಟೇಷನ್ನಿಗೆ ಕಳುಹಿಸಿದೆ.

ಈಗ ತಂದ್ರೆಲಿಂಗ ಯಾರು, ಎಂಥವನು, ಎನ್ನುವುದು ಸ್ವಲ್ಪ ಭಾವನೆಗೆ ಬರಬಹುದು.

ಲಿಂಗ ಭೇರ್ಯಕ್ಕೆ ಹೋಗಿದ್ದನೆಂದು ತಿಳಿದ ಕೂಡಲೆ ನಾನು ಬೇರೆ ಕೆಲಸದ ನೆಪದಮೇಲೆ ಆ ಗ್ರಾಮಕ್ಕೆ ಹೋಗಿ ಏನೋ ಮಾತಿನಮೇಲೆ ಮಾತೆಂಬಂತೆ ಅವನ ಚಲನೆಗಳನ್ನು ವಿಚಾರಿಸಿದೆ. ಛತ್ರದ ಪಾರುಪತ್ತೇಗಾರರು ಹೇಳಿದರು : " ತಂದ್ರೆಲಿಂಗಯ್ಯ ನಡುಮಧ್ಯಾಹ್ನ ಬಂದು ಅನ್ನ ಕೊಡಿ ಎಂದು ಕೇಳಿದ. ಅನ್ನ ಉಳಿದಿರಲಿಲ್ಲ. 'ಯಾವ ಚತ್ರವಿದ್ದರೂ ನಿಮ್ಮ ಹಾಳು ಹಾರುವರ ಹೊಟ್ಟೆಗೇ ಸಾಲದು' ಎಂದು ಗೊಣಗುಟ್ಟಿಕೊಂಡು ಪಟೇಲರ ಮನೆಗೆ ಹೋದ ನಾನೂ ಹೋಗಿ

'ಬನ್ನಿ ಲಿಂಗಯ್ಯನವರೇ, ಅಕ್ಕಿ ಕೊಡ್ತೀನಿ ನೀವೇ ಮಾಡಿಕೊಂಡು ಉಣ್ಣಿ' ಅಂದೆ.

'ಅಯ್ಯೋ ಬ್ಯಾಡ, ನೀವೇ ಉಣ್ಣಿ, ನಿಮ್ಮ ಹೊಟ್ಟೇಲೆ ಚಿನ್ನ ಆಗಲಿ' ಅಂದ.

ಪಟೇಲರ ಮುಂದೆ 'ನೋಡಿ, ಗೌಡರೆ. ಊರುಬಿಟ್ಟು ಮೂರು ತಿಂಗಳಾಯಿತು; ಇದೇ ಅತ್ತಿಗುಪ್ಪೆ ಕಡೆಯಿಂದ ದಾರಿ ನಡೆದು ಬಿಸಿಲಲ್ಲಿ ಬೆಂಡಾಗಿ ಬಂದಿದ್ವಿ. ಮುದ್ದೇ ಏನಾದರೂ ಸಿಕ್ಕಾತ' ಅಂದ. ಪಟೇಲರ ಮನೆಯಲ್ಲಿ ಊಟಮಾಡಿದ."

ಎಂದು.

ಪಟೇಲನೂ ಇದೇ ಮಾತನ್ನು ಹೇಳಿದ. ತಂದ್ರೆಲಿಂಗ ತಾನು ಮೂರು ತಿಂಗಳ ಹಿಂದೆ ಊರನ್ನು ಬಿಟ್ಟವನು ಆವೊತ್ತು ತಾನೆ ಭೇರ್ಯಕ್ಕೆ ಬಂದೆನೆಂಬುವುದನ್ನು ದೃಢಪಡಿಸುವುದಕ್ಕಾಗಿ ಛತ್ರಕ್ಕೆ, ಪಟೇಲನ ಮನೆಗೆ, ಸಂತೆಗೆ, ಅಲ್ಲಿ ಜಗಳಮಾಡಿಕೊಂಡು ಪೋಲೀಸು ಸ್ಟೇಷನ್ನಿಗೆ, ಸಾಕ್ಷ್ಯಕ್ಕಾಗಿ ಭೇಟಿಕೊಟ್ಟು ರುಜುವಾತು ಹುಟ್ಟಿಸಿ ಕೊಳ್ಳಲು ಈ ರೀತಿ ವರ್ತಿಸಿದ್ದಾನೆಂದು ನನಗೆ ತೋರಿತು. ಇಲ್ಲವಾದರೆ ಇಷ್ಟು ನಾಟಕವೇತಕ್ಕೆ? ಈ ನನ್ನ ಅನುಮಾನ ವಾಸ್ತವವಾಗಿದ್ದರೆ, ಅವನು ಅದಕ್ಕೆ ಮುಂಚೆಯೇ—ಕಳುವು ನಡೆದ ನೆರವಿನಲ್ಲೇ ಏಕಿರ ಬಾರದು?—ಬೇರೆ ಮಾರ್ಗವಾಗಿ ತಂದ್ರೆಗೆ ವಾಪಸು ಹೋಗಿರಬೇಕು. ಕಳವು ನಡೆದದ್ದು ಯಡತೊರೆಯಲ್ಲಿ. ಅದನ್ನು ಮಾಡಿದವನು ಲಿಂಗ ನಾಗಿದ್ದರೆ ಅವನು ಅದೇ ರಾತ್ರಿ ಕಳವು ಮಾಲಿನ ವಿಲೇವಾರಿಗಾಗಿ ಮೈಸೂರಿಗೆ ಹೋಗಿದ್ದರೂ ಹೋಗಿರಬಹುದು. ಅಥವ ವಿಲೇವಾರಿಗೆ ಅಷ್ಟೇ ಸೌಕರ್ಯವುಳ್ಳ ಸಾಲಿಗ್ರಾಮಕ್ಕಾದರೂ ಹೋಗಿರಬಹುದು; ಇದು ಮೈಸೂರಿಗಿಂತಲೂ ಇವನಿಗೆ ಅನುಕೂಲವಾದ ಸ್ಥಳ, ಏಕೆಂದರೆ ಇಲ್ಲಿ ಇವನ ಪರಿಚಯದ, ಬಹುಶಃ ಆಪ್ತಸಹಚರ್ಯದ, ಜನಗಳಿರಬೇಕು. ಅಥವ ಕೃತ್ಯ ನಡಸಿದ ಬಿಸಿಯಲ್ಲಿ ಮಾಲುಗಳ ಬಿಕರಿಗೆ ಯತ್ನಮಾಡು ವುದು ಅಪಾಯ, ಎಲ್ಲ ಕಡೆಗಳಲ್ಲೂ ಪತ್ತೇ ತರದೂದು ನಡೆಯುತ್ತಿರುತ್ತೆ ಜನಗಳು ಜಾಗರೂಕರಾಗಿರುತ್ತಾರೆ ಆದ್ದರಿಂದ ಕೆಲವು ಕಾಲ ಮಾಲು ಗಳನ್ನು ಗೋಪ್ಯವಾಗಿ ಮುಚ್ಚಿಟ್ಟಿದ್ದರೆ, ಆಮೇಲೆ ಒಂದೊಂದನ್ನಾಗಿ ವಿಲೇವಾರಿ ಮಾಡಬಹುದೆಂಬುದು ಇವನ ಎಣ್ಣವಾಗಿದ್ದರೆ ಹಾಗೆ ಮಾಡು ವುದಕ್ಕೆ ಇವನು ತಂದ್ರೆಗೇ ಹೋಗಿರಬಹುದು. ಯಡತೊರೆಯಿಂದ ತಂದ್ರೆಗೆ ಹೋಗಬೇಕಾದರೆ ಎರಡು ಸಾಮಾನ್ಯವಾದ ಮಾರ್ಗಗಳು—

ಒಂದು ಯಡತೊರೆಯಿಂದ ಸೇತುವೆ ಮೇಲೆ ಹಾದು ಹಂಪಾಪುರ, ಮಿರ್ಲೆ, ಅಂಕನಹಳ್ಳಿ ಮೇಲೆ; ಸಾಮಾನ್ಯವಾಗಿ ಇದೇ ವಾಡಿಕೆಯಾದ ದಾರಿ. ಮತ್ತೊಂದು, ಹೊಳೆಯ ದಕ್ಷಿಣಕ್ಕೆ ಹೊಳೆಯ ಸಾಲನ್ನೇ ಹಿಡಿದು ಹೋಗುವ ಚುಂಚನಕಟ್ಟೆ ದಾರಿ. ಈ ಎರಡನೆಯ ದಾರಿಯಲ್ಲಿ ಹೋದರೆ ಸೇತುವೆಯಿಲ್ಲ; ಹೊಳೆಯನ್ನು ಚಿಕ್ಕನಾಯಕನಹಳ್ಳಿಯ ಹತ್ತಿರವಿರುವ ಕಡುವಿನಲ್ಲಿ ಹಾಯಬೇಕು. ಆಗಿದ್ದಂತೆ ಹೊಳೆಯಲ್ಲಿ ನೀರು ಇದ್ದರೆ— ಏಕೆ, ಬೇಸಿಗೆ ಮೂರು ನಾಲ್ಕು ತಿಂಗಳುಗಳ ಹೊರತು ಬಾಕಿ ಕಾಲದಲ್ಲೆಲ್ಲಾ – ಹರಿಗೋಲಿನಲ್ಲೇ ಹೊಳೆಯನ್ನು ದಾಟಬೇಕು. ಈ ಎರಡನೆಯ ದಾರಿ ಸ್ವಲ್ಪ ಬಳಸಾದರೂ, ವಾಡಿಕೆ ದಾರಿಯಷ್ಟು ಸುಗಮವಲ್ಲದಿದ್ದರೂ, ಗೋಪ್ಯವಾಗಿ ನಡೆಯಬೇಕೆಂಬುವವನಿಗೆ ಇದರಲ್ಲಿ ಮುಖ್ಯವಾದ ಅನುಕೂಲತೆಗಳುಂಟು. ಈ ದಾರಿಯಲ್ಲಿ ದೊಡ್ಡ ಗ್ರಾಮಗಳಿಲ್ಲ. ಹೆಚ್ಚಾಗಿ ತಿರುಗಾಟವಿಲ್ಲ. ಇದರಲ್ಲಿ ರಾತ್ರಿಗಳಲ್ಲಂತೂ ಸಂಚಾರವೇ ಇಲ್ಲ. ಸೇತುವೆ ಮೇಲಿನ ರೋಡು ತುಂಬ ಟ್ರಾಫಿಕ್ (ಸರಿದಾಟ) ಇರುವ ರಾಜಮಾರ್ಗ. ಸೇತುವೆಯ ಮುಂಭಾಗದಲ್ಲೇ ಒಂದು ಉಕ್ಕಡವಿದೆ. ಹೊಳೆಯನ್ನು ದಾಟಿದ ಕೂಡಲೆ ಹಂಪಾಪುರ— ಹಂಪಾಪುರದ ಊರ ಬಾಗಿಲಲ್ಲೇ ಅಮಲ್ದಾರರ ಮನೆ. ಅವರ ಆಳುಗಳು, ಆರ್ಡರ್ಲಿಗಳು ಒಬ್ಬರಲ್ಲ ಒಬ್ಬರು ಎದ್ದೇ ಇರುತ್ತಾರೆ. ನಂತರ ಮಿರ್ಲೆ. ಅಲ್ಲಿ ಪೋಲೀಸು Out-Post ಇದೆ. ಯಡತೊರೆಯಲ್ಲಿ ರಾತ್ರಿ ಕಳ್ಳತನ ಮಾಡಿದವನು ಕಳವು ಮಾಲು ಸಮೇತ ತಂದ್ರೆಗೆ ಹೋಗಬೇಕಾದರೆ, ಅವನು ಅಸಲು ಬೇಕೂಫನಲ್ಲದಿದ್ದರೆ, ಚುಂಚನಕಟ್ಟೆ ಮಾರ್ಗವನ್ನೇ ಹಿಡಿದಾನೆಂದು ನನಗೆ ತೋರಿತು.

ಆದರೆ, ಲಿಂಗ ಕೃಷ್ಣಪ್ಪನವರ ತುಂಬು ಮನೆಯೊಳಗೆ, ಅದರಲ್ಲೂ ಹೆಂಗಸರು ಮಲಗಿದ್ದ ಒಳಗಣ ಕೋಣೆಯೊಳಗೆ, ಪ್ರವೇಶಮಾಡಿದ್ದಾದರೂ ಹೇಗೆ? ಸಬ್ ಓವರ್ಸಿಯರ್ ಮನೆಯೊಳಕ್ಕೆ ನುಗ್ಗಿದ್ದ ಧೀರನೇನೊ ಹೌದು! ಆದರೆ ಆ ಸನ್ನಿವೇಶವೇ ಬೇರೆ. ಇದನ್ನು ನೋಡಿದರೆ, ಯಾರೋ ಮನೆಯವರೇ— ಕುಟುಂಬದ ನಂಬಿಕೆಯನ್ನು ಸಂಪಾದಿಸಿದವರೇ— ಅವನಿಗೆ ಶಾಮೀಲಾಗಿದ್ದಿರಬೇಕು. ನಡದದ್ದು

ಹೀಗಿರಬಹುದು: ಈ ಒಳಗಿನ ದ್ರೋಹಿಗೂ ಲಿಂಗನಿಗೂ ಚೆನ್ನಾಗಿ ಪರಿಚಯವಿದ್ದಿರಬೇಕು; ದ್ರೋಹಿಯು ಹೊಂಚುಕಾದು 'ಸಿಕ್ಕಿದ್ದನ್ನು ಕದ್ದು ನಿನ್ನ ಕೈಗೆ ಕೊಡುತ್ತೇನೆ, ನೀನು ಅದನ್ನು ತೆಗೆದುಕೊಂಡು ಭದ್ರ ಮಾಡಿಕೊ; ಆಮೇಲೆ ಹಂಚಿಕೊಳ್ಳೋಣ' ಎಂದು ಲಿಂಗನ ಸಂಗಡ ಒಪ್ಪಂದ ಮಾಡಿಕೊಂಡಿರಬೇಕು. ಆ ದ್ರೋಹಿಯು ಮನೆಯವರ ಕೆಲಸಕ್ಕಾಗಿ ಬಳಕೆಯಾಗಿ ಓಡಾಡುತ್ತಿರುವ ಮನುಷ್ಯನಿದ್ದಿರಬೇಕು. ಕಳವು ಮಾಲು ಮೇಲಿನ ಏರ್ಪಾಡಿನಂತೆ ತನ್ನ ಕೈಗೆ ಬಂದ ಕೂಡಲೆ ಲಿಂಗ ಚುಂಚನಕಟ್ಟೆ ಸಿರ್ಮಾನುಷ ರೋಡಿನ ಮೂಲಕ ಅದೇ ರಾತ್ರಿ ಓಡಿರಬೇಕು — ಇದು ಬಹುಮಟ್ಟಿಗೆ ಊಹೆ — ಆಕಾಶ ಕಟ್ಟಡ. ಆದರೆ ಇದಕ್ಕಿಂತಲೂ ತರ್ಕಕ್ಕೆ ಸಾಧುವಾದ ಮತ್ತಾವ ಉದಾಹರಣೆ ಸಾಧ್ಯ? ಅಂತೂ ನೋಡೋಣ. ಈ ಊಹೆ (Hypothesis) ಸರಿಯಾಗಿದ್ದರೆ ಚಿಕ್ಕನಾಯಕನಹಳ್ಳಿಯ ಹತ್ತಿರ ಇವನು ಹರಿಗಲಲ್ಲಿ ಹೊಳೆ ದಾಟಿರಬೇಕು. ಅಂಬಿಗರನ್ನು ಉಪಾಯವಾಗಿ ವಿಚಾರಿಸೋಣವೆಂದು ನಿಶ್ಚಯಿಸಿದೆ.

ಜನಗಳ ಸಂಗಡ ಬಳಕೆಯಾಗಿ ಬೆರೆತು ಉಪಾಯವಾಗಿ ಸಂಗತಿಗಳನ್ನು ಹೊರಡಿಸುವುದರಲ್ಲಿ ಆಗ ನಮ್ಮಲ್ಲಿದ್ದ ಪೋಲೀಸ್ ಇನ್‌ಸ್ಪೆಕ್ಟರ್ರು— ಅವರ ಹೆಸರು ಖಾಜಾ ಮುಹಮ್ಮದ್ — ಬಹಳ ಬುದ್ಧಿವಂತರು. ಏಕೆ? ನಾನು ನೋಡಿದ ಪೋಲೀಸು ಆಫೀಸರುಗಳಲ್ಲಿ ಇವರಿಗಿಂತಲೂ ಶಕ್ತರು ಯಾರೂ ಇಲ್ಲ. ಅವರು ಮಾತನಾಡುವ ಕನ್ನಡ ಆಗಿನ ಸಾಬರ ಕನ್ನಡ, ಷ, ಸ, ಶ, ಇವುಗಳಿಗೆ ಒಂದೇ ಬೆಲೆ. ಆ ಹೊತ್ತಿಗೆ ಯಾವುದು ನಾಲಿಗೆಗೆ ಅಥವ ಜ್ಞಾನಕ್ಕೆ ಸಿಕ್ಕುತ್ತೋ ಅದನ್ನೇ ಚಲಾಯಿಸಿ ಬಿಡುತ್ತಿದ್ದರು. (ಈಗ ಅನೇಕ ಮುಸ್ಲಿಮರು ಕನ್ನಡವನ್ನು ಸೊಗಸಾಗಿ ಮಾತನಾಡುತ್ತಾರೆ, ಬರೆಮೂ ಬರೆಯುತ್ತಾರೆ; ಕೆಲವರು ಕನ್ನಡದಲ್ಲಿ ಪ್ರವೀಣರೂ ಹೌದು, ನಾನು ಹೇಳುತ್ತಿರುವುದು ಸುಮಾರು ಐವತ್ತು ವರುಷದ ಹಿಂದಿನ ಮಾತು). ಆದರೆ ಅವರ ವರದಿಗಳೂ ಮಾತೂ ಸಾಹಿತ್ಯವಲ್ಲದಿದ್ದರೂ ಅಪ್ಪಟ ವಿವೇಕ ಪ್ರಪಂಚಜ್ಞಾನಗಳಿಂದ ತುಂಬಿರುತ್ತಿದ್ದುವು. ಮನುಷ್ಯನೋ ಬಹಳ ಸತ್ಯವಂತ, ಸ್ನೇಹಪರ. ಒಳ್ಳೆಯ ನಿಯತ್ತಿನವರು.

ನಾನು ಇನ್‌ಸ್ಪೆಕ್ಟರನ್ನು ಸಂಗಡ ಕರೆದುಕೊಂಡು ಚುಂಚನಕಟ್ಟೆಗೆ ಹೋಗಿ, ಅಲ್ಲಿಂದ ಅವರನ್ನು ತಂದ್ರೆಲಿಂಗ ಆ ದಾರಿಯಲ್ಲಿ ಸಂಚಾರ ಮಾಡಿದ ಸುಳಿವು ಏನಾದರೂ ಸಿಕ್ಕೀತೇ ಎಂಬ ವಿಚಾರಣೆಗೆ ಕಳುಹಿಸಿ ಕೊಟ್ಟೆ. ಯಡತೊರೆಯಿಂದ ಚುಂಚನಕಟ್ಟೆವರೆಗೆ ರಸ್ತೆಯ ಬಾಜೂನಲ್ಲಿ ಯಾವ ಗ್ರಾಮಗಳೂ ಇಲ್ಲ. ಅಲ್ಲದೆ, ನನ್ನ ಊಹೆಯಲ್ಲಿ ಲಿಂಗ ಆ ಭಾಗವನ್ನು ಕೇವಲ ಕತ್ತಲಿರುವಾಗಲೇ ನಡೆದಿರಬೇಕು. ಅಲ್ಲಿಂದ ಮೇಲೂ ಯಾವ ಸುಳಿವೂ ಸಿಕ್ಕಲಿಲ್ಲ. ಆಮೇಲೆ ಇನ್‌ಸ್ಪೆಕ್ಟರು ಚಿಕ್ಕನಾಯಕನಹಳ್ಳಿ ಕಡುವಿನಲ್ಲಿ ಹರಿಗಲನ್ನು ನಡೆಸುವ ಅಂಬಿಗರನ್ನು ವಿಚಾರಿಸಿದರು. ಅಲ್ಲಿ ನಮ್ಮ ಅದೃಷ್ಟ ಸ್ವಲ್ಪ ಖುಲಾಯಿಸಿದಂತೆ ಕಂಡಿತು. ಅಂಬಿಗರನಾಯಕ 'ತಂದ್ರೆಲಿಂಗ'ನನ್ನು ಬಲ್ಲ. ಅವನನ್ನು ಚಿಕ್ಕನಾಯಕನ ಹಳ್ಳಿಯಲ್ಲಿ ಒಂದೆರಡು ಸಲ ನೋಡಿದ್ದ. ಅವರವರು ಬಹಳ ದೋಸ್ತಿ.

'ಲಿಂಗಯ್ಯನನ್ನು ಕೊನೆ ಸಲ ನೋಡಿದ್ದು ಯಾವಾಗ' ಎಂದು ಕೇಳಿದ್ದಕ್ಕೆ

"ನಮಗೇನು ಜ್ಞಾಪ್ತಿ ಬುದ್ಧಿ? ನಾವೇನು ಬರಹಗಾರ್ರಾ? ಹದಿನೈದು ಇಪ್ಪತ್ತು ದಿನ, ಒಂದು ತಿಂಗಳು ಇರಬೈದೇಳಿ. ಹೂ, ಒಂದು ತಿಂಗಳೂ ಅಂತೇ ಇಟ್ಟುಕೊಳ್ಳಿ. ನಾನೂ ಬೆಳಿಗ್ಗೆ ಎದ್ದವನು ಮೊಕ ತೊಳಿಯೋಕೆ ವಳೇತಾವಕೆ ಬಂದಿ, ಲಿಂಗಯ್ಯನೂ ಅತ್ತಲ ಕರೇಲಿ ನಿಂತು ಕೂಗಿ ಕೈಬೀಸಿ ಕರೆದರು. ಹರಿಗಲು ತೊಗೊಂಡು ಹೋದಿ. 'ಏನು ಬುದ್ಧಿ, ಹೊತ್ತಾನೇ ಬಂದು ಬುಟ್ಟಿರಿ' ಅಂದಿ. 'ಬಂದಿ ಕಣೋ ಬಾಳ ಕೆಲಸ ಅದೇ ಊರಾಗೆ; ಮಾತನಾಡಬೇಡ, ಕರಕೊಂಡು ನಡೀ' ಅಂದರು. 'ಅಪ್ಪಾಜಣ್ಣ ಊರಾಗವನ' ಅಂತ ಕೇಳಿದರು. 'ನನಗೇನು ಗೊತ್ತು, ಇರಬೈದು' ಅಂದಿ. ವಳೆ ದಾಟಿದ ಮೇಲೆ ರುಸುಂ ಕೇಳಿದಿ. 'ಚಿಲ್ಲರೆ ಅದೇನೋ' ಅಂತ ಒಂದು ರೂಪಾಯಿ ತೆಗೆದರು. 'ನನ್ನ ತಾವು ಚಿಲ್ಲರೆ ಎಲ್ಲಿ ಬಂತು ಬುದ್ಧಿ' ಅಂದಿ. 'ಇರಲಿ ತೊಗೋ ಬಡ್ಡಿ ಮಗನೆ. ನಾನು ಬಂದ ಸುದ್ದಿ ಬಾಯಿ ಬಿಟ್ಟೀಯ. ನೀನು ಒಳ್ಳೇವ ನಾಗಿದ್ದರೆ, ತಿರಗ ಚುಂಚನಕಟ್ಟೆ ಜಾತ್ರೆಗೆ ಬಂದಾಗ ಬಾರಿ ಇನಾಮು ಕೊಟ್ಟೇನೆ'ಂದರು. ಕಾವಂದರು ಕೇಳಿದರೆ ಯೇಳದೆ ಇರೋಕಾದಾತಾ?

ಏನು? ಆಗ ಅವರ ತಾವ ಏನು ಸಾಮಾನಿತ್ತು ಅಂತೀರ? ಏನೂ ಇರಲಿಲ್ಲ. ತಾಳಿ, ಒಂದು ಟವಾಲಿನಲ್ಲಿ ಕಟ್ಟಿದ ಪಟ್ಟಲ ಮಾತ್ರ ಇತ್ತು. ಅದು ಚಿಕ್ಕಪಟ್ಲ ಏಳಿ; ಒಂದು ಕುಂಬಳಕಾಯಿಗೆ ಸ್ವಲ್ಪ ದಪ್ಪನಾಗಿತ್ತು; ಕೈಲೇ ಹಿಡಿದಿದ್ದರು. ಅದು ಬಾರವಾಗಿತ್ತೊ ಇಲ್ಲವೋ ನಾನು ಬಲ್ಲನಾ? ನಾನು ಮುಟ್ಟಲೇ ಇಲ್ಲ.''

ಮೇಲಿಂದು ಅಂಬಿಗರ ನಾಯಕನಿಂದ ಇನ್‌ಸ್ಪೆಕ್ಟರಿಗೆ ಬಂದ 'ಬಾತ್ಮಿ'ಯು ಸಾಧ್ಯವಾದ ಮಟ್ಟಿಗೆ ಅವನು ಆಡಿರಬಹುದಾದ ಮಾತಿನಲ್ಲೇ ಸಾರಾಂಶ. ಮೇಲಿನ ಕತೆಯಲ್ಲಿ ಹೆಸರು ಬಂದಿರುವ ಅಪ್ಪಾಜಿ ಚಿಕ್ಕನಾಯಕನಪಳ್ಳಿಯ ಅಕ್ಕಸಾಲಿ. ಅವನಿಗೆ ಹಿಂದೆ ಒಂದು ಕಳವು ಮಾಲಿನ ಮೊಕದ್ದಮೆಯಲ್ಲಿ ಮೂರು ತಿಂಗಳು ಸಜ ಆಗಿತ್ತು. ಅದು ಆಗಲೇ ಬಹಳ ದಿವಸದಮಾತು. ಈಚೆಗೆ ಇವನು ತನ್ನ ಉದ್ಯೋಗಕ್ಕೆ ಸಂಬಂಧಪಟ್ಟ ಸಣ್ಣಪುಟ್ಟ ಮಾಮೂಲು ವರ್ತನೆಗಳ ಸಿವಾಯಿ ಸಂಭಾವಿತನಾಗಿ ಊರಿನಲ್ಲಿ ನಾಲ್ಕು ಜನಕ್ಕೆ ಬೇಕಾದವನಾಗಿದ್ದ. ಅಂಬಿಗನ ಮಾತಿನಿಂದಲೂ ಇತರರನ್ನು ವಿಚಾರಿಸಿದ್ದರಲ್ಲೂ ಇವನಿಗೂ ತಂದ್ರೆಲಿಂಗನಿಗೂ ಪರಿಚಯವಿದ್ದಂತೆ ಗೊತ್ತಾಯಿತು. ಇನ್‌ಸ್ಪೆಕ್ಟರ ಊಹೆ—ಇಬ್ಬರೂ ಏಕಕಾಲದಲ್ಲಿ ಜೈಲಿನಲ್ಲಿದ್ದಿರಬೇಕೆಂದು. ಆಮೇಲೆ ವಿಚಾರಿಸಿದ್ದರಲ್ಲಿ ಇದೂ ವಾಸ್ತವವೆಂದು ತಿಳಿಯಿತು, ಆ ಸನ್ನಿವೇಶದಲ್ಲಿ ಅಂಕುರವಾದ ಸ್ನೇಹ ನಂತರ ಉಭಯತ್ರರ ಕಸಬುಗಳ ಅನ್ಯೋನ್ಯತೆಯಿಂದ ವೃದ್ಧಿಗೊಂಡಿರಬೇಕು.

ಇನ್‌ಸ್ಪೆಕ್ಟರು ಅಪ್ಪಾಜಿಯನ್ನು ಯಾವುದೋ ನೆವದ ಮೇಲೆ ತಮ್ಮ ಸಂಗಡ ಚುಂಚನಕಟ್ಟೆಗೆ ಕರೆದುಕೊಂಡು ಬಂದು ಪೋಲೀಸ್ ಸ್ಟೇಷನ್ನಿನಲ್ಲಿಟ್ಟಿದ್ದರು.

'ಅಪ್ಪಾಜಿಯನ್ನು ನಾವು ಸ್ಪರ್ಶಿಸಿದ ಸಂಗತಿ ಲಿಂಗನಿಗೆ ಗೊತ್ತಾದ ಕೂಡಲೆ ಅವನು ಗಾಬರಿ ಬಿದ್ದು ಪರಾರಿಯಾದಾನು, ಅವನನ್ನು ಕೂಡಲೇ ದಸ್ತಗಿರಿಮಾಡಿ' ಎಂದು ಇನ್‌ಸ್ಪೆಕ್ಟರಿಗೆ ಹೇಳಿದೆ. ಅವರು ಆ ರೀತಿ ಮಾಡಲು ಕೂಡಲೆ ಜಮಾದಾರರನ್ನು ಹೊಳೆಹಾಸಿದ ಒಳದಾರಿಯಲ್ಲಿ ತಂದ್ರೆಗೆ ಕಳುಹಿಸಿದರು.

ಅಪ್ಪಾಜಿ ರಾತ್ರಿ ಪೋಲೀಸ್ ಸ್ಟೇಷನ್ನಿನಲ್ಲಿ ಪೋಲೀಸಿನವರ ಗರ್ಭ ವಾಸದಲ್ಲೇ ಇದ್ದ. ಅವರವರ ಸರಸ ಸಲ್ಲಾಪಗಳ ರಿಕಾರ್ಡು ಇಲ್ಲ. ಮಾರನೆಯ ಬೆಳಗ್ಗೆ ಅವನನ್ನು 'Traveller's Bungalow' ಗೆ ನನ್ನಲ್ಲಿಗೆ ಕರೆದುಕೊಂಡು ಬಂದರು. ಅವನು ಹೇಳಿದ ಕಥೆ. (ನನ್ನ ಮಾತಿನಲ್ಲೇ ಹೇಳುತ್ತೇನೆ.)

"ತಂದ್ರೆಲಿಂಗಯ್ಯನಿಗೆ ನನಗೆ ಗುರುತು ಉಂಟು. ಅಂಥ ಹೆಚ್ಚು ಸ್ನೇಹ ಎಂದು ಹೇಳಲಿಕ್ಕಾಗುವುದಿಲ್ಲ. ಏನಾದರೂ ಕೆಲಸವಿದ್ದರೆ ನನ್ನಲ್ಲಿ ಬರುವುದುಂಟು. ಕೆಲಸವೆಂದರೆ ನನ್ನ ಜಾತಿ ಕೆಲಸ. ಒಡವೆ ಗಿಡವೆ ಇಂಥವು ಮಾಡುವ ಕೆಲಸ. ಅವನ ಹೆಂಡತಿಗೆ ಕಡಗ, ಡಾಬು ಮಾಡಿಕೊಟ್ಟಿದ್ದೇನೆ. ಲಿಂಗಯ್ಯ ಸ್ವಲ್ಪ ಷೋಕೀ ಮನುಷ್ಯ. ಹೆಂಡತಿಯಲ್ಲದ ಇತರರಿಗಾಗಿಯೂ ನನ್ನ ಕೈಲಿ ಗೆಜ್ಜೆ, ಗುಂಡು ಮಾಡಿಸಿದಾನೆ. ಈಗ ಸುಮಾರು ಹದಿನೈದು ಇಪ್ಪತ್ತು ದಿನದ ಹಿಂದೆ, ಬೆಳಗ್ಗೆ ಒಂದು ಮಾರು ಹೊತ್ತಿನಲ್ಲಿ ನಮ್ಮ ಹಟ್ಟಿಗೆ ಬಂದ. ಬಹಳ ಸೋತು ಬಂದಿದ್ದಂತೆ ಕಂಡು ರಾತ್ರಿಯೆಲ್ಲಾ ದಾರಿ ನಡೆದಿರ ಬೇಕೆಂದು ತೋರಿತು. 'ಏನಪ್ಪ ಬಂದಿರಿ?' ಅಂದದ್ದಕ್ಕೆ 'ಹೇಳುತ್ತೇನೆ; ಮೊದಲು ತಿನ್ನೋಕೆ ಕೊಬ್ಬರಿ, ಕಡಲೆ, ಹಣ್ಣು, ಏನಾದರೂ ತಂದು ಕೊಡು, ಹಾಲು ಸಕ್ಕರೆ ತೊಗೊಂಡು ಬಾ' ಎಂದು ಒಂದು ರೂಪಾಯಿ ಕೊಟ್ಟ. ತಂದುಕೊಟ್ಟೆ. 'ಇಲ್ಲೆ ಶಿವಾಚಾರದವರ ಮನೆ ಇದೆ. ಕಡಬು ಗಿಡಬು ಮಾಡಿಸಲೇನಪ್ಪ? ಅಲ್ಲೇ ಊಟಕ್ಕೂ ಹೇಳುತ್ತೇನೆ' ಅಂದೆ. 'ಒಂದೂ ಬೇಡ ಮಹರಾಯ; ನಾನು ನೆಂಟರ ಮನೆ ಆರೋಗಣೆಗೆ ಬರಲಿಲ್ಲ. ನಿನ್ನಿಂದ ಕೆಲಸವಾಗಬೇಕಾಗಿದೆ' ಅಂದ. 'ಬಾಗಿಲು ಮುಚ್ಚಿ ಅಗಣಿ ಹಾಕು. ಯಾರು ಇಲ್ಲ ತಾನೆ ಮನೇಲಿ? ನಿನ್ನ ಹೆಂಡತಿ ಎಲ್ಲಿ?' ಅಂದ. 'ನಾಲಿಗ್ರಾಮಕ್ಕೆ ತಂಗಿ ಮನೆಗೆ ಹೋಗಿದ್ದಾಳೆ' ಎಂದೆ. 'ಬೇಷ್, ಒಂದೆರಡು ಸಾಮಾನು ಕರಗಿಸಿ ಗಟ್ಟಿಹೊಯ್ದು ಕೊಡು, ಬೇಗ' ಅಂದ 'ಇದೇನು ಲಿಂಗಯ್ಯ! ಅಂಥ ಕೆಲಸ ನನಗೆ ಹೇಳ ಬೇಡಪ್ಪ' ಎಂದೆ. 'ಇರಲಿಕಣೋ ಕಂಡಿವನಿ. ಬೇಗ ಕರಗಿಸಿ ಗಟ್ಟಿ ಹೊಯ್ಯಿ. ನಾನು ಹೋಗಬೇಕು' ಅಂದ. ನಾನು ಏನು ಮಾಡಲಿ. 'ಆಗಲಪ್ಪ' ಎಂದೆ. ಅವನು ಹಣ್ಣು ಕಡಲೆ ತಿನ್ನುತ್ತ ಇದ್ದ ಹಾಗೇ

ನಾನು ಅಗ್ಗಿಷ್ಟಿಕೆ ಹೊತ್ತಿಸಿ ಮೂಸೇ ಸಿದ್ಧಪಡಿಸಿಕೊಂಡು 'ಯಾವುದನ್ನಪ್ಪ ಕರಗಿಸೋದು' ಎಂದು ಕೇಳಿದೆ. ಅವನು ಟುವಾಲಿನಲ್ಲಿ ಕಟ್ಟಿದ್ದ ಗಂಟು ಬಿಚ್ಚಿ ಎರಡು ಚಿನ್ನದ ಬಳೆಗಳು ಒಂದು ಬಂದಿ ತೆಗೆದ. ಅವನ್ನು ತೂಕ ಮಾಡಲಿಕ್ಕೆ ತ್ರಾಸು ತೆಗೆಯಲಾಗಿ 'ಏನೂ ಬೇಕಿಲ್ಲ ನನ್ನ ಎದುರಿಗೇ ಕರಗಿಸಿ ಗಟ್ಟಿಯನ್ನು ಕೊಡುತ್ತೀಯಲ್ಲ' ಎಂದ. ನನ್ನ ಅಂದಾಜು, ಅವನು ತೆಗೆದುಕೊಟ್ಟ ಸಾಮಾನುಗಳು ಹದಿನೆಂಟು ಇಪ್ಪತ್ತು ತೊಲ ಅಂದರೆ ಸುಮಾರು ಮೂರು ಸಾವಿನ ತೂಕವಿದ್ದಿರಬಹುದು.

ನಾನು ಅಕ್ಕಸಾಲಿಯನ್ನು ಕೇಳಿದೆ. "ಅವನು ನೀನು ಹೇಳಿದಂತೆ ಗಂಟಿನಿಂದ ಎರಡು ಬಳೆ ಒಂದು ಬಂದಿಯನ್ನು ತೆಗೆಯಬೇಕಾದರೆ ಅವುಗಳನ್ನು ಹುಡುಕಿ ತೆಗೆದಿರಬೇಕು. ಆ ಗಂಟಿನಲ್ಲಿದ್ದ ಇತರ ಮಾಲು ಗಳು ಕಾಣಿಸಿರಬೇಕಲ್ಲವೆ?" ಬಹಳ ನಿರುತ್ಸಾಹದಿಂದ, ಹೇಳಲಾರದೆ ಹೇಳಿದ "ಹೌದು, ಮಹಾಸ್ವಾಮಿ! ಚಂದ್ರಮುರ, ಅಡ್ಡಿಕೆ, ಪದಕ, ವಾಲೆಗಳು, ನಾಗಮುರಿಗೆ, ಇವುಗಳನ್ನು ನೋಡಿದೆ. 'ಎಲ ಬಡ್ಡಿಮಗನೇ' ಅಂದೆ. 'ನಾನು ತೊಕ್ಕೊಂಡು ಏನು ಮಾಡಲಪ್ಪ! ಆದರೆ ಭಾರಿ ಲೂಟಿ ಹೊಡೆದಿದ್ದೀ' ಎಂದೆ. 'ಹೂ, ಆಯಾ ತಪ್ಪಿದರೆ ಭಾರಿ ಸಜಾ ಬೀಳೋನೂ ನಾನೆ ನಿನ್ನ ಕೆಲಸ ನೀನು ಮಾಡು' ಅಂದ. ಅವನು ಕೊಟ್ಟ ಒಡವೆಗಳನ್ನು ಜಜ್ಜಿ ಮೂಸೆಯಲ್ಲಿ ಹಾಕಿ ಕರಗಿಸಿ, ಎರಡು ಗಟ್ಟಿ— ಒಂದು ಇನ್ನೊಂದರಿಗಿಂತ ಸ್ವಲ್ಪ ದೊಡ್ಡದು, ಹುಯ್ದು ಕೊಟ್ಟೆ. ಗಟ್ಟಿ ಹುಯ್ಯುವುದರಲ್ಲಿ ಚಿನ್ನದ ರಸ ಸಿಡಿದು ಸುಮಾರು ಅರ್ಧ ತೊಲೆ ಗುಂಡು ಬೇರೆ ಬಿತ್ತು. ಅದನ್ನು ನನಗೆ ಮಜೂರಿಯಾಗಿ ಕೊಟ್ಟ."

'ಅದು ನಿನ್ನಲ್ಲಿಯೇ ಇದೆಯೋ?' ಎಂದು ಇನ್‌ಸ್ಪೆಕ್ಟರು ಕೇಳಿದರು.

ಇರುವುದಾಗಿ ಹೇಳಿದ. ಇನ್‌ಸ್ಪೆಕ್ಟರು 'ಅವನು ಷೋಕಿ ಮನುಷ್ಯ — ಯಾರ್ಯಾರಿಗೊ ಒಡವೆ ಮಾಡಿಸಿಕೊಟ್ಟ ಅಂದಿಯಲ್ಲಾ ಅವರು ಯಾರು ಬಲ್ಲೆಯಾ?' ಎಂದು ಕೇಳಿದರು.

ಬಹಳ ಬಲವಂತ ಪಡಿಸಿದ ಮೇಲೆ ಸಾಲಿಗ್ರಾಮದಲ್ಲಿನ ಒಬ್ಬ ವೇಶ್ಯೆಯ ಹೆಸರು ಹೇಳಿದ. ನನಗೆ ಈಗ ಆ ಹೆಸರು ಮರೆತು ಹೋಗಿದೆ, ಕೆಂಪಿ ಅಂತ ಇಟ್ಟುಕೊಳ್ಳೋಣ.

ಅದೇ ದಿವಸ ಇನ್‌ಸ್ಪೆಕ್ಟರನ್ನು ಚಿಕ್ಕನಾಯಕನಹಳ್ಳಿಗೆ ಕರೆದು ಕೊಂಡು ಹೋಗಿ ಸುಮಾರು ಮುಕ್ಕಾಲು ತೊಲೆ ತೂಕದ ಒಂದು ಚಿನ್ನದ ಗುಂಡನ್ನು ಪಂಚಾಯಿತರ ರೂಬುರೂಬು ತೆಗೆದುಕೊಟ್ಟ. ಅದಕ್ಕೆ ಮಹಜರಾಯಿತು. ಅದೇ ಈ ಮೊಕದ್ದಮೆಯಲ್ಲಿ ಮೊದಲು ದೊರೆತ ಮಾಲು.

ಅದೇ ದಿನ ತಂದ್ರೆಯಲ್ಲಿ ತನ್ನ ಮನೆಯಲ್ಲಿ ಖಾಯಿಲೆ ಎಂದು ಮಲಗಿದ್ದ ಲಿಂಗನನ್ನು ದಸ್ತಗಿರಿಮಾಡಿ, ಸಾಲಿಗ್ರಾಮದ ಪೋಲೀಸ್ ಲಾಕಪ್ಪಿನಲ್ಲಿ ಬಂಧಿಸಿದರು. ಅಪ್ಪಾಜಿ ಲಿಂಗ ಬಿಚ್ಚಿದ ಗಂಟಿನಲ್ಲಿ ಕಂಡ ದ್ದಾಗಿ ವಿವರಿಸಿದ ಒಡವೆಗಳು ಕಳವಾದ ಮಾಲುಗಳ ಪಟ್ಟಿಯಲ್ಲಿ ನಮೂದಿಸಿದವುಗಳ ಪೈಕಿಯಾಗಿದ್ದವು.

ಕಳವಾದ ೩,೫೦೦—೪,೦೦೦ ರೂಪಾಯಿಗಳ ಸ್ವತ್ತಿನ ಪೈಕಿ ಮುಕ್ಕಾಲು ತೊಲೆ ಭಂಗಾರ ಮಾತ್ರ ಸಿಕ್ಕಿತು. ತಂದ್ರೆ ಲಿಂಗ ಕಳ್ಳನೆಂದು ನಿರ್ದಿಷ್ಟವಾಗಿ ಗೊತ್ತಾಯಿತು. ಉಳಿದ ಮಾಲುಗಳು? ಲಿಂಗ ಕಳವು ಮಾಡಿದ ರೀತಿ ಹೇಗೆ? ಅವನಿಗೆ ಸಹಾಯಕರಿದ್ದರೆ, ಯಾರು? ಈ ವಿಚಾರಗಳು ಪತ್ತೆಯಾಗಬೇಕು

ನಾನು ಮಾರನೆಯ ದಿನ ಸಾಲಿಗ್ರಾಮಕ್ಕೆ ಈ ವಿಚಾರಣೆ ಮುಂದು ವರಿಸಲು ಹೋದೆ.

ಪೋಲೀಸ್ ಇನ್‌ಸ್ಪೆಕ್ಟರು ಅದುವರೆಗೆ ದೊರೆತಿದ್ದ ಸುಳಿವುಗಳ ಮೇಲೆ ಮಾಮೂಲು ತನಿಖೆ ಮಾಡಿದರು ವೇಶ್ಯೆ ಕೆಂಪಿಯ ಮನೆಯಲ್ಲಿ ಪಟ್ಟೆಸೀರೆ ಸಿಕ್ಕಿತು, ಅದೇ ಒಡವೆಗಂಟ್ಟಿದ್ದ ಪುಟ್ಟಿಯ ಮೇಲೆ ಹೊದೆಸಿದ್ದ ಸೀರೆ ಎಂದು ಗುರುತಿಸಲ್ಪಟ್ಟಿತು. ಅದನ್ನು ಲಿಂಗ ಅವಳಿಗೆ ಬಹುಮಾನವಾಗಿ ಕೊಟ್ಟನೆಂದು ಹೇಳಿದಳು. ಗಾಬರಿ ಬಿದ್ದಿದ್ದ ಆ ಬಡಪಾಯಿಯ ಮೂಲಕ ಲಿಂಗನ ಆಪ್ತ ಒಡನಾಡಿಗಳು ಹಲವರ ಪರಿಚಯವಾಯಿತು. ಅವರ ಪೈಕಿ— ಪಟೇಲ ದೇವರಸೇಗೌಡನ ಅಣ್ಣನ ಮಗನೋ ತಮ್ಮನ ಮಗನೋ ಆದ—ಲಚುಮೇಗೌಡನೆಂಬುವ ನೊಬ್ಬ. ಇವರುಗಳ ದರ್ಯಾಪ್ತಿಯಿಂದ ಕಳವು ನಡೆದ ಮಾರನೆಯ ದಿನವೇ ಲಿಂಗ ಸಾಲಿಗ್ರಾಮಕ್ಕೆ ಬಂದು ಕೆಂಪಿಯ ಮನೆಯಲ್ಲಿ ರಹಸ್ಯವಾಗಿ

ಇದ್ದುಕೊಂಡು ತನ್ನ ಸ್ನೇಹಿತರನ್ನೂ ಅಲ್ಲಿಗೇ ಕರೆಸಿಕೊಂಡು, ಊಟ, ತಿಂಡಿ ವಗೈರೆ ಮಜಮಾಡಿ, ಇಸ್ಪೀಟ್ಟು, ಪಗಡೆ ಇವುಗಳಲ್ಲಿ ಕಾಲ ಕಳೆಯುತ್ತಿದ್ದನೆಂದು ತಿಳಿದುಬಂತು. ಅವನು ಸಾಲಿಗ್ರಾಮಕ್ಕೆ ಬರುವುದಕ್ಕೆ ಮುಂಚೆಯೇ ತಂದ್ರೆಗೂ ಹೋಗಿದ್ದ; ಅವನು ಸಾಲಿಗ್ರಾಮದಲ್ಲಿದ್ದಾಗ ಅವನ ಹೆಂಡತಿ ಒಂದೆರಡು ಸಲ ಅಲ್ಲಿಗೆ ಬಂದಿದ್ದಳು, ಲಿಂಗನ ಕೈಲಿ ದುಡ್ಡು ಓಡಾಡುತ್ತಿರುವಂತಿತ್ತು, ಎಂದು ಗೊತ್ತಾಯಿತು. ಅವನು ಚಿಕ್ಕನಾಯಕನಹಳ್ಳಿಯಲ್ಲಿ ಹುಯಿಸಿದ ಗಟ್ಟಿಗಳ ಪೈಕಿ ಒಂದನ್ನು, ಅಥವಾ ಎರಡನ್ನೂ ಇದ್ದರೂ ಇರಬಹುದು, ಮಾರಿರಬೇಕು. ಎಷ್ಟು ಮೆಹನತ್ತು ಮಾಡಿದರೂ ಯಾರಿಗೆ ಮಾರಿದನೆಂಬುದು ಪತ್ತೆಯಾಗಲಿಲ್ಲ. ತಂದ್ರೆಯಲ್ಲಿ ಲಿಂಗನ ಮನೆಯನ್ನು ಝಡ್ತಿಮಾಡಲಾಗಿ ಅದರಲ್ಲಿ ಅಡಿಗೆ ಉಗ್ರಾಣದ ಸಾಮಾನುಗಳ ಹೊರತು ಮತ್ತೇನೂ ಇರಲಿಲ್ಲ; ಅವನ ಹೆಂಡತಿಯ ಗೋಳಾಟ— ತನ್ನ ಗಂಡ ತನಗೆ ಕೊಡುತ್ತಿರುವ ಪೇಚಾಟ, ಅವನ ದುಷ್ಟತನ— ಕಳ್ಳನ ಹೆಂಡತಿ ಎಂದಿಗಿದ್ದರೂ ಮುಂಡೆ ಬುದ್ಧಿ, ಅವನ್ನ ಹಿಡಿದು ಜೈಲಿಗೆ ಹಾಕಿ, ನನ್ನ ಹೊಟ್ಟೆ ತಣ್ಣಗಾಗುತ್ತೆ ಎಂಬ ಬಯಕೆ— ಇವುಗಳೇ ಝಡ್ತಿಯ ಮುಖ್ಯ ಫಲಿತಾಂಶ.

ನನಗೆ ಇದರಿಂದ ತೋರಿದ್ದು, ಲಿಂಗನ ಹೆಂಡತಿಗೂ ಅವಳ ಗಂಡನಿಗೂ ಈ ಕಳವು ಮಾಲುಗಳ ವಿಚಾರದಲ್ಲಿ ಏನೋ ಒಳ ಸಂಬಂಧವಿದೆ. ಅದನ್ನು ಮರೆ ಮಾಡುವುದಕ್ಕೆ ಈ ತಿರಸ್ಕೃತ ಸತೀರೋಷ ದ್ವೇಷಗಳ ಪ್ರದರ್ಶನವೆಂದು. ಇನ್‌ಸ್ಪೆಕ್ಟರು 'ಬಹಳ ಘಾಟಿ ಮುಂಡೆ' ಎಂದು ಅನುಮೋದಿಸಿದರು.

ಲಿಂಗ ಲಾಕಪ್ಪಿನಲ್ಲಿ ರಿಮ್ಯಾಂಡಿನ ಮೇಲಿದ್ದ ಅವನನ್ನು ದಿನವಹಿ ಪೋಲೀಸಿನವರು ಪ್ರಶ್ನಿಸುತ್ತಿದ್ದರು. ಆದರೆ, ಆ ಮಂತ್ರಕ್ಕೆ ಮಾವಿನ ಕಾಯಿ ಬೀಳಲಿಲ್ಲ. ಕಲ್ಲಿಗೂ ಬೀಳಲಿಲ್ಲವೆಂದು ಕಾಣುತ್ತೆ. ನಾನು ಅವನನ್ನು ಒಂದು ಸಲ ಕೇಳಿದಾಗ 'ನನ್ನ ಒಂದೇ ಸಲ ಗಲ್ಲಿಗೆತ್ತಿಬಿಡಿ. ಈ ಪೋಲೀಸಿನವರ ಹಿಂಸೆ ಯಾಕೆ ಕೊಡಿಸುತ್ತೀರಿ?' ಅಂದ.

'ನೀನು ಈ ಕಳವು ಮಾಡಿದ್ದೇನೋ ಚೆನ್ನಾಗಿ ಗೊತ್ತಾಯಿತು. ಯಾರ ಸಹಾಯದಿಂದ ಮಾಡಿದೆ? ಮಾಲು ಎಲ್ಲಿ?' ಎಂದು ಕೇಳಿದೆ. ಅವನು ನಕ್ಕು,

"ಅಪ್ಪಾಜೀನ ಕೇಳಿ. ಕೆಂಪೀನ ಕೇಳಿ ಅವರು ಮಾಲು ಕೊಟ್ಟ ರಂತೆ, ಅವರಿಗೆ ಗೊತ್ತಿರಬೇಕು. ಕೇಳಿ, ಒಂದು ಮಾತು ಹೇಳುತೀನಿ. ಹತ್ತು ಹಳೇ ಕಳ್ಳರು ಸೇರಿದರೆ ಒಬ್ಬ ಖದೀಮ ಇನ್‌ಸ್ಪೆಕ್ಟರು; ನಿಮ್ಮ ಇನ್‌ಸ್ಪೆಕ್ಟರನ್ನೇ ಕೇಳಿ. ನೀವು ಹುಡುಗರು, ಪಾಪ; ನಿಮ್ಮನ್ನು ತೊಗಲು ಬೊಂಬೇ ಆಡಿಸುತ್ತಿದ್ದಾರೆ" ಅಂದ. ಆಗ ಅಲ್ಲೇ ಇದ್ದ ಇನ್‌ಸ್ಪೆಕ್ಟರು "ಯಾಕೆ ಸುಮ್ಮನೆ ಸತಾಯಿಸುತ್ತೀಯೋ? ಈಗಿರುವ ರುಜುವತ್ತೇ ಸಾಕು, ನಿನಗೆ ಸಜ ಆಗೋಕೆ. ಇರೋ ಸಂಗತಿ ಹೇಳೊ. ನಿನಗೆ ೪-೫ ವರುಷ ಸಜಾ ಆದರೆ ನೀನು ಜೈಲಿನಲ್ಲೇ ಸಾಯುತ್ತೀಯೋ ಏನೋ. ಮಾಲನ್ನು ಯಾರು ಅನುಭವಿಸುತ್ತಾರೋ ಏನೋ" ಅಂದರು.

"ನಾನು ಇದನ್ನು ಮಾಡಿದವನಲ್ಲ. ಮಾಲನ್ನು ಅನುಭವಿಸುವ ಪುಣ್ಯಾತ್ಮರು ಅನುಭವಿಸಲಿ ಆದರೆ ನೀವೇಳೋದು ಎಂತ ಮಾತು ಸಾಹೇಬರೆ? ಪಿಂಚಿನಿ ತಗೋಬೇಕೆಂದು ನಮ್ಮಂತ ಬಡಬಗ್ಗರನ್ನೆಲ್ಲಾ ಬಡೀತೀರಲ್ಲ. ನೀವು ಪಿಂಚಿನೀ ತೆಗೆಯೋಕೆ ಮುಂದೇ ಸಾಯ್ತೀರೋ ಏನೋ ಬಲ್ಲಿರಾ?"

ಪ್ರಯೋಜನವಿಲ್ಲದ ಮಾತು ಅಲ್ಲಿಗೆ ನಿಲ್ಲಿಸಿದೆ.

ಬಳಿಕ ಸ್ಟೇಷನ್ ಹೌಸ್ ಆಫೀಸರಿಂದ ತಿಳಿಯುಬಂತಲ್ಲ ಲಿಂಗನನ್ನು ಲಾಕಪ್ಪಿಗೆ ಕೂಡಿದ ಮೇಲೆ ಅನೇಕ ಜನ ಅಲ್ಲಿ ಸುಳಿದಾಡುತ್ತಾರೆ. ಕೆಲವರು ಅವನನ್ನು ನೋಡಬೇಕೆನ್ನುತ್ತಾರೆ ಅವಕಾಶ ಕೊಡಬಹುದೆ? ಎಂದು.

ಸರಿ, ಸುಳಿದಾಡುವವರ ಉದ್ದೇಶ, ಅವನನ್ನು ನೋಡಬೇಕೆಂಬ ಅಕ್ಕರೆಯ ಹೇತು, ನನಗೆ ಸ್ಪಷ್ಟವಾಗಿ ಕಂಡಿತು ದೇವರ ವಿಗ್ರಹದ ಕಣ್ಣುಗಳು ರತ್ನಗಳೆಂದು ತಿಳಿದ ಮೇಲೆ ಅಕ್ಕಸಾಲಿ ಅಸಲು ಭಕ್ತನಾದ ನಂತೆ. ಹಾಗೆ ಲಿಂಗನ ಹತೋಟೀಲಿ ಕಳವು ಮಾಲು ಮುಕ್ಕಾಲು ಮೂರುವೀಸ ಪಾಲು ಅಮಾನತ್ತಿನಲ್ಲಿರುವುದು ಅವನ ಭಕ್ತರಿಗೆ ಗೊತ್ತಿರಬೇಕು.

ಯಾರು ಯಾರು ಖೈದಿಯನ್ನು ನೋಡಲಿಕ್ಕೆ ಬಂದವರೆಂದು ವಿಚಾರಿಸಲಾಗಿ, ದೇವರಸೇಗೌಡನ ಕಡೆ ಇಬ್ಬರು, ಒಬ್ಬಿಬ್ಬರು ಆಚಾರಿ

ಗಳು— ಅಂದರೆ ಅಕ್ಕಸಾಲಿಗಳು, ಒಬ್ಬಿಬ್ಬರು ಜೈನ ವರ್ತಕರು, ಎಂದು ಗೊತ್ತಾಯಿತು. ಇದು ನನ್ನ ಸಂದೇಹವನ್ನು ಖಾತರಿಮಾಡಿತು. ಯಾರನ್ನೂ ಸ್ಟೇಷನ್ನಿನ ಒಳಗೆ ಬಿಡಕೂಡದು; ಖೈದಿಯ ಸಂಗಡ ಮಾತ ನಾಡಲಿಕ್ಕಂತೂ ಅವಕಾಶ ಕೊಡಲೇ ಕೂಡದೆಂದು ಕಟ್ಟುನಿಟ್ಟಾಗಿ ಅಪ್ಪಣೆ ಮಾಡಿ, ಈ ಹುಕ್ಕುಂ ಸರಿಯಾಗಿ ಜಾರಿಯಾಗುವ ಜವಾಬ್ದಾರಿಯನ್ನು ತಾಲ್ಲೂಕು ಜವಾದಾರರಿಗೆ ವಹಿಸಿದೆ.

ಆದರೂ ನನಗೆ ಸಮಾಧಾನವಿಲ್ಲ. ಪಟೇಲರ ಕಡೆಯುವರು ಯತ್ನ ಮಾಡುತ್ತಿದ್ದಾರೆಂದರೆ, ಪಟೇಲನ ಬೆಂಬಲ ಅವರಿಗಿರಬಹುದು. ಬಹುಶಃ ಪಟೇಲನೇ ಇದಕ್ಕೆ ಆಸೆಪಟ್ಟಿದ್ದರೂ ಸಟ್ಟಿರಬಹುದು. ಅವನ ಪರವಾಗಿ ಅವನ ಶಿಷ್ಯರು ಓಡಾಡುತ್ತಿರಬಹುದೆಂದು ತೋರಿತು. ಪಟೇಲ, ಪಾಳೇಗಾರ; ಬಹಳ ಪ್ರಬಲ; ಚರಿತ್ರಾರ್ಹನಾದ ಮನುಷ್ಯ. ಅಕ್ಕಸಾಲೆ ಗಳು ಜೈನವರ್ತಕರ ಕಡೆ ದೂತರಿರಬಹುದು. ಜೈನ ವರ್ತಕರ ಪೈಕಿ ಕೆಲವರು ಮುಖ್ಯವಾಗಿ ಲಾಕಪ್ಪಿನ ಖೈದಿಯ ದರ್ಶನವನ್ನಪೇಕ್ಷಿಸಿದವರು. ಇದೂ ಒಂದು ವ್ಯಾಪಾರ; ವ್ಯಾಪಾರ ಧರ್ಮಕ್ಕೆ ಲಾಭವೇ ಸೂತ್ರವೆಂದು ತಿಳಿಯುವರು. ಇವರುಗಳೆಲ್ಲರೂ ಕೇವಲ ಲಿಂಗನ ಪ್ರಿಯದರ್ಶನಕ್ಕಾಗಿ ಲಾಕಪ್ ಯಾತ್ರೆಯನ್ನು ಕೈಗೊಂಡಿಲ್ಲ. ಅಂತೂ ಇಂಥ ಅತಿರಥ ಮಹಾರಥರ ಸಂಘಟನೆಯಲ್ಲಿ ಕಳವು ಮಾಲು ಚಿಂದಿ ಉಡಾಯಿಸಿ ಹೋಗುವುದರಲ್ಲಿ ಸಂದೇಹವಿಲ್ಲ; ಬೇಗನೆ ಸಿಕ್ಕಿದರೆ ಸಿಕ್ಕಿದ ಹಾಗೆ, ಇಲ್ಲದಿದ್ದರೆ ಅದರ ವಾಸನೆಯೇ ಉಳಿದಿರುವುದಿಲ್ಲವೆಂದು ತೋರಿತು.

ಇದೇ ವಿಚಾರವನ್ನು ಇನ್‌ಸ್ಪೆಕ್ಟರ ಸಂಗಡ ಮಾತನಾಡುತ್ತಿರುವಲ್ಲಿ ನನಗೊಂದು ಉಪಾಯ ಹೊಳೆಯಿತು. ಇವರುಗಳೆಲ್ಲರೂ ಲಿಂಗನಿಗೆ ಅವನ ಮೇಲೆ ಬಂದಿರುವ ಕೇಸಿನ ಬಚಾವಿನದೋ ಅಥವಾ ಇನ್ನೇನೊ ಆಶೆಯನ್ನು ತೋರಿಸಿ, ಆ ಯತ್ನಕ್ಕೆ ತಗಲಬಹುದಾದ ಖರ್ಚಿನ ಸಲುವಾಗಿ ಕಳವು ಮಾಲುಗಳಲ್ಲಿ ಯಾವುದನ್ನಾದರೂ ಕೊಡುವಂತೆ ಪುಸಲಾಯಿಸ ನೋಡುತ್ತಿದ್ದಾರೆ. ಅವನು ಒಂದು ಮಾಲನ್ನು ತೆಗೆದರೂ ಉಳಿದ ಮಾಲುಗಳೆಲ್ಲಿವೆ ಎಂಬುದರ ಗುಟ್ಟು ತಿಳಿಯುತ್ತೆ. ಆ ಮಾಲುಗಳನ್ನೆಲ್ಲಾ ತಾವೇ ಅಪಹರಿಸಬಹುದೆಂಬ ಆಸೆ ಇರಬೇಕು.

"ಅವರ ಪೈಕಿ ಯಾರನ್ನಾದರೂ ನಮ್ಮವರನ್ನಾಗಿ ಮಾಡಿಕೊಂಡು ಈ ಗುಟ್ಟನ್ನು ಕಂಡುಹಿಡಿಯುವುದಕ್ಕೆ ಆಗುವುದಿಲ್ಲವೇ ಇನ್‌ಸ್ಪೆಕ್ಟರೇ?"

'ಒಳ್ಳೇ ಯೋಚನೆ, ಆದರೆ ಹ್ಯಾಗೆ ಅದನ್ನು ರೂಪಗೊಳಿಸೋದು?'

ಬಹಳ ಹೊತ್ತು ಯೋಚನೆಮಾಡಿ ಕೊನೆಗೆ ಒಂದು ಸಿದ್ಧಾಂತಕ್ಕೆ ಬಂದೆವು. ಇನ್ನು ಎರಡು ಮೂರು ದಿನಗಳಲ್ಲೇ ಖೈದಿಯನ್ನು ಮೈಸೂರು ಜೈಲಿಗೆ ರವಾನೆ ಮಾಡುತ್ತೇವೆಂದು ಸುದ್ದಿ ಹುಟ್ಟಿಸುವುದು ಇದರಿಂದ ಬೀಳಿನ ಮೇಲೆ ಪರಿದಾಡುವ ಹದ್ದುಗಳಿಗೆ ಹಸಿವು ತೀವ್ರವಾಗುತ್ತದೆ. ಲಿಂಗ ಸಾಗಿಹೋಗುವುದರೊಳಗಾಗಿ ಏನಾದರೂ ಇತ್ಯರ್ಥಕ್ಕೆ ಬರ ಬೇಕೆಂದು ಯತ್ನ ದುಗ್ಗಣಿಸುತ್ತಾರೆ. ಸರಿಯಾದ ವೇಳೆ ಮತ್ತು ಆಸಾಮಿಯನ್ನು ನೋಡಿ, ಅವನಿಗೆ ಲಿಂಗನ ಸಂಗಡ ಮಾತನಾಡಲಿಕ್ಕೆ ಅಕಸ್ಮಾತ್ತಾಗಿ ದೊರೆಯಿತೆಂಬಂತೆ ಅವಕಾಶ ಕೊಡುವುದು ಈ ಮಾತು ನಡೆಯುವಾಗ ನಮ್ಮ ರಹಸ್ಯದಲ್ಲಿರುವ ಒಬ್ಬ ಮನುಷ್ಯ ಹಾಜರಿದ್ದು, ಅವರ ಸಂಭಾಷಣೆಯನ್ನು ನಮಗೆ ತಿಳಿಸುವಂತೆ ಏರ್ಪಾಡು ಮಾಡು ವುದು

ಈ ಉಪಾಯ ನಮ್ಮ ರಹಸ್ಯದಲ್ಲಿನ ಮನುಷ್ಯನ ಬುದ್ಧಿಶಕ್ತಿ, ಅದಕ್ಕಿಂತ ಹೆಚ್ಚಾಗಿ ನಿಯತ್ತು, ಇವುಗಳ ಮೇಲೆ ನಿಲ್ಲಬೇಕು, ಅಥವಾ ಬೀಳಬೇಕು. ಆ ಮನುಷ್ಯ ನಮ್ಮ ಶಹಭಾಷುಗಿರಿಗಿಂತಲೂ ಅವರ ಲೂಟಿಯ ಪಾಲಿನ ಮೇಲೆ ಹೆಚ್ಚು ಬೆಲೆ ಕಟ್ಟಿದರೆ ಕೆಲಸ ಕೆಟ್ಟಿತು. ಅವರೂ ಅವನೂ ಸೇರಿ ಪಾಲು ಹಂಚಿಕೊಳ್ಳುವಾಗ ನಮ್ಮನ್ನು ಅಪಹಾಸ್ಯ ಮಾಡಿ, ಲಾಭಕ್ಕೆ ಲಾಭ, ವಿನೋದಕ್ಕೆ ವಿನೋದ, ಎಂದು ಹಿಗ್ಗಬಹುದು. ಇದು ಕಳ್ಳರ ಒಳ ಸಭೆಯಲ್ಲಿ ಎಂಥ ಸೊಗಸಾದ ಪ್ರಹಸನವಾಗುತ್ತಿ?

ಆದರೆ ಬೇರೆ ಮಾರ್ಗ ಯಾವುದೂ ಕಾಣದೆ, ಕೊನೆಗೆ ಈ ಉಪಾ ಯದ ನೇತೃತ್ವದ ಜವಾಬ್ದಾರಿಯನ್ನು ನಾನೇ ಇಟ್ಟುಕೊಂಡೆ. ನನ್ನ ತೈನಾತಿಯಲ್ಲಿ ಷೇಕ್ ಮೊಹದಿನ್ ಎಂಬ ಕಾನ್ಸ್ಟೇಬಲ್ ಇದ್ದ. ಅವನು ಚೆನ್ನಾಗಿ ಬಾಳಿದ ಮನೆಯವನು. ಪೋಲೀಸಿನಲ್ಲಿ ಹೊಸದಾಗಿ ಸೇರಿದವ ನಾದ್ದರಿಂದ ಕಮ್‌ದರ್ಜಾ ಪೋಲೀಸಿನವರ ರೀತಿಗಳನ್ನು ಕಲಿತವನಲ್ಲ. ಒಳ್ಳೆಯ ಹೆಸರು ತೆಗೆದುಕೊಂಡು, ಬೇಗನೆ ಪ್ರಮೋಷನ್ ಪಡೆಯ

ಬೇಕೆಂಬ ಆಶೆಯುಳ್ಳವನು. ಬಲಿಷ್ಠನಾದ ಖಸರತೀ ಆಳು ನನ್ನ ಅಭಿಪ್ರಾಯದಲ್ಲಿ ಧೈರ್ಯವಂತ, ನಿಯತ್ತುಳ್ಳವನು. ಮುಖ್ಯವಾಗಿ ನನ್ನ ಕಂಡರೆ ಅವನಿಗೆ ತಂದೆ, ವಸ್ತಾದ್, ಯಜಮಾನ ಎಂಬ ಮೂರು ಎಳೆಯುಳ್ಳ ಪ್ರೇಮ, ಭಕ್ತಿ ನಾನು ಇವನಿಗೆ ನನ್ನ 'ಪ್ಲಾನ್' (ನೀತಿ, ಉಪಾಯ)ವನ್ನು ಹೇಳಿ ಈ ರೀತಿ ಇನ್‌ಸ್ಟ್ರಕ್ಷನ್ ಕೊಟ್ಟೆ.

'ನಿನ್ನ ಸುಪರ್ದಿನಲ್ಲಿ ಖೈದಿಯನ್ನು ನನ್ನ ಬಳಿಗೆ ಈ Traveller's Bungalow 'ಗೆ ಕಳಿಸಬೇಕೆಂದು ನಾನು ತಾಕೀದು ಕೊಡುತ್ತೇನೆ. ಹಾಗೆ ಕಳಿಸುವುದಕ್ಕೆ ಮುಂಚೆ ಅವನಿಗೆ ಕಾಲಿಗೆ ಕೈಗೆ ಬೇಡಿ ಹಾಕಬೇಕೆಂದು ಬರೆಯುತ್ತೇನೆ. ಅವನು ರಾಂಗು ಮಾಡುತ್ತಾನೆ, ಓಡಿ ಹೋಗುತ್ತಾನೆ ಎಂಬ ಭಯವಿಲ್ಲ. ಕೆರೆ ಕೋಡಿ ಹಳ್ಳ ನಿಮ್ಮ ದಾರಿಯಲ್ಲಿದೆ ಅಲ್ಲಿ ಯಾರಾದರೂ ಅವನ ಸಂಗಡ ಮಾತನಾಡುವುದಕ್ಕೆ ಬಂದರೆ, ಮೊದಲು ಬಿಲ್‌ಖುಲ್ ಆಗುವುದಿಲ್ಲವೆಂದು ಜೋರುಮಾಡಿ ಆಮೇಲೆ ಅವರ ಪುಸಲಾವಣೆಗೆ ಮರುಳಾದವನಂತೆ ನಟಿಸಿ, ಅವರ ಮಾತನ್ನೆಲ್ಲಾ ಕೇಳಿ ನನಗೆ ವರದಿ ಮಾಡಬೇಕು. ಒಂದು ಕ್ಷಣವೂ ನೀನು ಕಳ್ಳನ ಬೇಡಿ ಸರಪಣಿಯನ್ನು ನಿನ್ನ ಕೈಯಿಂದ ಬಿಡತಕ್ಕದ್ದಲ್ಲ, ಅವನು ನಿನ್ನ ಕಣ್ಣೆದುರಿನಲ್ಲೇ ಇರಬೇಕು. ಅವರು ನಿನ್ನನ್ನು ಒಪ್ಪಿಸಲಿಕ್ಕೆ ಲಂಚ ರುಷುವತ್ತು ಕೊಡುವುದಾಗಿ ಆಸೆ ತೋರಿಸಬಹುದು ಅದಕ್ಕೂ ಸಮ್ಮತಿಸಿದವನಾಗಿ ನಡೆ. ಮುಖ್ಯವಾಗಿ ನಿನ್ನನ್ನು ಒಳವು ಮಾಡಿಕೊಂಡೆವೆಂಬ ನಂಬಿಕೆ ಅವರಿಗೆ ಪೂರಾ ಆಗಬೇಕು ನೀನು ಹೆದರಬೇಡ. ಆ ಕೋಡಿ ಹಳ್ಳದ ಬಾಜೂದಲ್ಲಿರುವ ಮುಂಡುಗಳ್ಳಿ ಪೊದೆಯಲ್ಲಿ ನಿನ್ನ ರಕ್ಷಣೆಗಾಗಿ ಇಬ್ಬರು ಕಾನ್‌ಸ್ಟೇಬಲ್‌ಗಳು ಬಂದೂಕು ಸಹಿತವಾಗಿ ನೆರೆಯಾಗಿರುತ್ತಾರೆ.'

ಇನ್‌ಸ್ಪೆಕ್ಟರು ದಾಡಿ ನೀವಿ—'ಇನ್‌ಷಲ್ಲಾ, ನೀನು ಈ ಕೇಸು, ಪತ್ತೆಯಾದ ಕೂಡಲೆ ದಫೇದಾರ್ ಆಗುತ್ತೀಯಾ' ಎಂದು ಅವನಿಗೆ ಭುಜತಟ್ಟಿ, ತಮ್ಮ ರಿವಾಲ್ವರನ್ನು ಅವನಿಗೆ 'ಇರಲಿ, ಜೇಬಿನಲ್ಲಿಡು' ಎಂದು ಕೊಟ್ಟರು.

ನಾನು ಮೇಲೆ ಹೇಳಿದಂತೆ ತಾಕೀದು ಬರೆದು ಸ್ಟೇಷನ್ ಹೌಸ್ ಆಫೀಸರಿಗೆ ಕಳಿಸಿದೆ. 'ಷೇಕ್ ಮೊಹದಿನ್ ಕುಮ್ಮಕ್ಕಿಗೆ ಯಾರನ್ನೂ

ಕಳಿಸಬೇಕಾಗಿಲ್ಲ; ಖೈದಿಗೆ ಬಲವಾಗಿ ಕೈಗೆ ಕಾಲಿಗೆ ಬಳಿ ಸಂಕೋಲೆ ಹಾಕಿದರೆ ಸಾಕೆಂ'ದು 'Confidential' ಆಗಿ ಬರೆದೆ.

ಪೋಲೀಸ್ ಸ್ಟೇಷನ್ನಿನಿಂದ 'Traveller's Bungalow'ಗೆ ಮುಕ್ಕಾಲು ಮೈಲಿದೂರ. ರಸ್ತೆ ಕೆರೆಯ ಏರಿ ಮೇಲೆ ಸ್ವಲ್ಪದೂರ ಹಾಯ್ದು ಕೋಡಿ ಹಳ್ಳವನ್ನು ದಾಟಿ ಬಂಗಲೆಗೆ ತಲಪುತ್ತದೆ. ಷೇಕ್ ಮೊಹದಿನ್ ನನ್ನ ಆರ್ಡರನ್ನು ತೆಗೆದುಕೊಂಡು ಹೋಗಿ ಒಂದು ಒಂದೂವರೆ ಘಂಟೆಯಾಯಿತು. ನನಗೆ ಏನೇನೋ ಸಂದೇಹಗಳು, ಊಹೆಗಳು, ಚಿಂತೆಗಳು. ಷೇಕ್ ಮೊಹದಿನ್ ಅಪಾಯಕ್ಕೆ ಗುರಿಯಾಗಿರ ಬಹುದು; ಅವನನ್ನು ಖೂನ್‌ಮಾಡಿ ಖೈದಿಯೂ ಅವನ ಸ್ನೇಹಿತರೂ ಪರಾರಿಯಾಗಿರಬಹುದು. ಷೇಕ್ ಮೊಹದಿನ್ ಅವರ ಸಂಗಡಲೇ ಸೇರಿ ಕೊಂಡು ಪರಾರಿಯಾಗಿರಬಹುದು. ಒಬ್ಬ ಅನುಭವವಿಲ್ಲದ ಹುಡುಗನ ಮೇಲೆ ಎಷ್ಟು ಭಾರಿಪಜನ್ ಹೊರೆಸಿದ್ದೇನೆ! ಪೋಲೀಸು ಇನ್‌ಸ್ಪೆಕ್ಟರು— ತಾವು ಮಾಡಿರುವುದು ಬಹಳ ಒಳ್ಳೆಯ ಉಪಾಯ; ಆದರೆ ಅದರಲ್ಲಿ ಅಪಾಯ ಉಂಟು. ಷೇಕ್ ಮೊಹದಿನ್ ಒಳ್ಳೆಯ ಹುಡುಗ. ಆದರೆ ಅನುಭವವಿಲ್ಲದವನು. ಏನಾಯಿತೊ ನೋಡುವುದಕ್ಕೆ ಯಾರನ್ನಾದರೂ ಕಳಿಸೋಣವೆ? ಅಪ್ಪಣೆಯಾದರೆ ನಾನೇ ಹೋಗ್ತೀನಿ!' ಎಂದರು.

ಅರೆ ಮನಸ್ಸಿನಿಂದ—ತಾಳಿ, ನೋಡೋಣವೆಂದೆ. ಇನ್ನು ಸ್ವಲ್ಪ ಕಾಲ ಹೀಗೇ ಸಂದೇಹದೋಲನದಲ್ಲಿದ್ದರೆ ಇನ್‌ಸ್ಪೆಕ್ಟರನ್ನು ಕಳುಹಿಸು ವುದು ಹಾಗಿರಲಿ, ನಾನೇ ಹೊರಡುತ್ತಿದ್ದೆ. ಅಷ್ಟರಲ್ಲೇ ಒಬ್ಬ ಪೋಲೀಸಿ ನವನು ಒಳಕ್ಕೆ ಬಂದು ಖೈದಿಯನ್ನು ಕರೆತರುತ್ತಿದ್ದಾರೆಂದು ಹೇಳಿದ. ಷೇಕ್ ಮೊಹದಿನ್ ಬಲವಾಗಿ ಬೇಡಿ ಸರಪಳಿಗಳಿಂದ ಬಂಧಿತನಾದ ಲಿಂಗನನ್ನು ಹಿಡಿದುಕೊಂಡು ಬಾಗಿಲ ಹತ್ತಿರ ಬಂದು ಕೊಠಡಿಯೊಳಕ್ಕೆ ಕರೆತಂದನು.

ಖೈದಿಯು ಸಿಡುಕು ಮೊಂಡು ಧಿಕ್ಕಾರದ ಮೋರೆ ಮಾಡಿಕೊಂಡು ನಮ್ಮ ಕಡೆ ನೋಡದೆ ಸುಮ್ಮನೆ ನಿಂತ. ನಾನು,

"ಇನ್‌ಸ್ಪೆಕ್ಟರೇ, ಲಿಂಗನನ್ನು ನಿಮ್ಮ ಕೊಠಡಿಗೆ ಕರೆದುಕೊಂಡು ಹೋಗಿ ಈಚೆಗೆ ಬಂದಿರುವ ಬಾತ್ಮಿ ಮೇಲೆ ಅವನನ್ನು ವಿಚಾರಿಸಿ" ಎಂದು

ಹೇಳಿದೆ. ಅವರು 'ಅಪ್ಪಣೆ ಸಾರ್', ಎಂದು ಷೇಕ್ ಮೊಹದಿನ್ ಕೈಗೆ ಬಂಧಿಸಲ್ಪಟ್ಟಿದ್ದ ಖೈದಿಯನ್ನು ಬಿಡಿಸಿಕೊಂಡು ತಮ್ಮ ಕಡೆ ಕಾನ್ಸ್ಟೇಬಲ್ ಇಬ್ಬರನ್ನು ಕರೆದು ಅವರ ಸುಪರ್ದಿನಲ್ಲಿ ಹಿಡಿಸಿಕೊಂಡು ಹೋದರು. ಷೇಕ್ ಮೊಹದಿನ್ ಒಬ್ಬನೆ ಉಳಿದನು ನಾನು ಅವನನ್ನು 'ಏನಾಯಿತು ಬಹಳ ಹೊತ್ತು ದಾರಿಯಲ್ಲಿದ್ದಿರಲ್ಲ?' ಎಂದು ಕೇಳಿದೆ. ಅವನು ಹೇಳಿದ್ದು

"ನಾನು ಈಚೆಗೆ ಬರುತ್ತಿದ್ದ ಹಾಗೇ ಸ್ಟೇಷನ್ ಮುಂದೆ ನಿಂತಿದ್ದ ಲಚುಮ, ಪಟಾಕಿ, ಇವರು ಗಲ್ಲಿಕಡೆ ತಿರುಗಿ ಕಣ್ಣುಮರೆಯಾದರು. ದಫೇದಾರರು ನನಗೆ 'ಏನೋ ಮೋದು! ನಾನು ಬರಲೆ?' ಎಂದು ಕೇಳಿದರು ಖೈದಿ 'ಯಾಕೆ ದಫೇದಾರ್ರೇ, ನಾನು ಓಡಿಹೋದೇ ನೆಂತಲೇ? ನಾಕೈದು ಮಣ ಕಬ್ಬಿಣ ತೊಡಿಸಿದ್ದೀರಿ ಇನ್ನೂ ಭಯವೆ?' ಅಂತ ನಕ್ಕ ಯಜಮಾನರು ನೀನೇ ಕರೆದುಕೊಂಡು ಬಾ ಅಂತ ಹುಕ್ಕುಂ ಮಾಡಿದ್ದಾರೆ ಅಂದೆ. ಸರಿ ಇನ್ನೊಂದು ಸರಪಳಿ ಹಾಕಿ ಕಾಲಿನ ಬೇಡಿಗಳಿಗೆ ನನ್ನ ಕೈಗೆ ಜಾಯಿಂಟು ಮಾಡಿ ಖೈದಿಯನ್ನು ನನ್ನ ಸುಪರ್ದು ಮಾಡಿದರು. ನಾನು ಅವನನ್ನು ಹಿಡಿದುಕೊಂಡು ಊರಾಚೇ ಬಂದಾಗ ಅವನು ನನ್ನ ಸಂಗಡ ಬಹಳ ದೋಸ್ತಿಗೆ ಬಂದ. ಏನೇನೋ ಹೇಳಿದ. ನಮ್ಮ ತಂದೆಯವರಿಗೆ ಅವನಿಗೆ ಬಾಳ ಬಾಳ ಅಂತೆ. 'ಹೂ' ಅಂದೆ. ಈ ಚಾಕರಿಯಿಂದ ಏನೋ ಆಗೋದು? 'ನಿನ್ನಂತ ರುಸ್ತುಂ ಹುಡುಗ ಈ ಗುಲಾಂಗಿರಿಯಲ್ಲಿರಬಾರದು' ಅಂದ. 'ಆಗಲಪ್ಪ, ನನಗೆ ಜಾಗೀರಿ ಬಂದಾಗ ಯಾಕಿ ತೆಗೆದುಬಿಡುತ್ತೇನೆ. ಇನ್ನು ಖುಷ್ ಆಗು, ಹಲ್ಲು ಮುಚ್ಚಿಕೊ', ಅಂದೆ. ಅಷ್ಟು ಹೊತ್ತಿಗೆ ಕೋಡಿ ಹಳ್ಳಕ್ಕೆ ಬಂದೆವು. ಅಲ್ಲಿ ಒಂದು ಮರದ ಹಿಂದಿನಿಂದ ಲಚುಮೇಗೌಡ ಬಂದ. 'ಮೊಯಿದಿನ್ ಸಾಬರೆ' ಅಂದ. 'ಖೈದಿ ಜತೆಗೆ ವಸಿ ಗ್ರಾಕತ್ಯ ಮಾತಾಡಬೇಕಲ್ಲ' ಅಂದ. 'ಆಗಲಪ್ಪ, ಬಂಗಲೇ ತಾವಕೆ ನೀನೂ ಬಾ, ಮಾತಾಡಮಿಂತಿ' ಅಂದೆ. 'ಇಲ್ಲ, ಇಲ್ಲೇ ಮಾತಾಡಬೇಕು, ನಾಕು ಮಾತು. ನಿನಗೆ ಅದರಿಂದ ನುಕಸಾನಿಲ್ಲ' ಅಂದ. ಜೇಬಿನಿಂದ ಎರಡು ನೋಟು ತೆಗೆದ. ನಾನು ಹೇಳಿದೆ, "ನಾನು ನೋಟು ನೋಡಿದೀನಿ ಗೌಡ, ನಿನ್ನ ದುಡ್ಡಿನ

ಆಸೆಗೆ ನಾನು ಅನ್ನದ ಬಾಯಲಿ ಮಣ್ಣು ಹಾಕಿಕೊಳ್ಳ? ಸಾಕು ಹೋಗು" ಅಂದೆ. ಅವನು 'ನೋಡಿದ್ರೊ, ಇದೇ ಸಾಬನ ಬುದ್ಧಿ ಅನ್ನೋದು!' ಅನ್ನದ ಬಾಯಲಿ ಮಣ್ಣು ಹಾಕ್ಕೊ, ಅಂದೆನಾ? ಅನ್ನದ ಜೊತೆಗೆ ಬಿರಾಸಿ ತಿನ್ನು, ಖಬಾಬು ತಿನ್ನು, ಅಂತ ಹೇಳತಿವಿನಿ ನಾನು, ಕೇಳಾದರೂ ಕೇಳು, ನಾವು ಲಿಂಗನ ಸಂಗಡ ನಾಲ್ಕು ಮಾತಾಡುತ್ತೀವಿ. ಇಪ್ಪತ್ತು ರೂಪಾಯಿ ತೊಗೋ. ನಿನಗೆ ಇಪ್ಪತ್ತು ರೂಪಾಯಿ ಬರಬೇಕಾದರೆ ಎರಡು ತಿಂಗಳು ದುಡೀಬೇಡವೆ? ಒಂದು ಗಳಿಗೇಲಿ ಬರತದೆ ನೋಡು? ಇದು ಯಾರಿಗೆ ಗೊತ್ತಾಗುತ್ತೆ? ಸುಬೇದಾರ್ರಿಗೆ ತಿಳೀತ್ತೆ ಅಂತಲೋ? ನೀನು ಹೇಳ್ತೀಯಾ? ನಾನು ಹೇಳ್ತೀನೊ? ಲಿಂಗಣ್ಣ ಹೇಳ್ತಾನೋ? ಪಟಾಕಿ ಹೇಳ್ತಾನೊ?" (ಅಷ್ಟು ಹೊತ್ತಿಗೆ ಹತ್ತಿರವೇ ಇದ್ದ ಇನ್ನೊಂದು ಮರದ ಹಿಂದಿನಿಂದ ಪಟಾಕಿ ಬಂದ ನನ್ನ ಜೇಬಿನಲ್ಲಿದ್ದ ಪಿಸ್ತೂಲನ್ನು ನೆನೆದು ನನಗೆ ಎಷ್ಟೋ ಬೇಸ್ಸಿಕರ್ ಆಯಿತು). ನಾನು ಸುತ್ತು ಮುತ್ತು ನೋಡಿ, ಬಹಳ ಕಷ್ಟದಿಂದ ಒಪ್ಪಿದವನ ಹಾಗೆ ತೋರಿಸಿ, ಲಚುಮುನಿಂದ ಹತ್ತು ಹತ್ತು ರೂಪಾಯಿನ ಎರಡು ನೋಟುಗಳನ್ನು ಇಸುಕೊಂಡೆ. ಇದೋ ಹಾಜರ್ಮಾಡಿದೇನೆ. ಲಚುಮ 'ಇನ್ನು ನೀನು ದೂರ ಹೋಗು. ನಾವು ಮಾತಾಡಬೇಕು' ಅಂದ. ನಾನು 'ಬಿಲ್‌ಖುಲ್ ಆಗೋದಿಲ್ಲ. ನಾನು ಖೈದಿಯನ್ನು ಬಿಡುವುದಕ್ಕೆ ಆಗೊಲ್ಲ. ನನ್ನ ಕೈಗೆ, ಅವನ ಕಾಲು ಜೋಡಿಗೆ ಚೈಂಟು ಮಾಡಿದ್ದಾರೆ, ನೋಡಿ! ನೀವು ಏನು ಬೇಕಾದರೂ ಮಾತನಾಡಿಕೊಳ್ಳಿ, ನಾನು ನಿಮ್ಮ ಹತ್ತಿರ ರುಷುವತ್ತು ತಿಂದು ಮಾತ ನಾಡೋಕೆ ಬಿಟ್ಟಿದ್ದನ್ನು ನಾನೇ ಯಾರಿಗಾದರೂ ತಿಳಿಸುತ್ತೇನೆ" ಎಂದೆ. 'ಚೈಂಟ್ ಬಿಡುಸುತ್ತೀವಿ ಕಣೋ' ಎಂದು ಹೆದರಿಸುವುದಕ್ಕೆ ಬಂದರು. ನಾನು ಹೆದರಲಿಲ್ಲ. ನಮ್ಮೋರು ಅವಾಯುನಾದರೆ ಕುಮ್ಮಕ್ಕಿಗೆ ಹತ್ತಿರ ದಲ್ಲೇ ಇರುತ್ತಾರೆಂದು ಗೊತ್ತು. ಆಮೇಲೆ 'ಅವನು ಹೇಳೋದು ನಿಜ ಕಣೋ, ಅವನೇ ಹೇಳ್ತಾನೆ ಲಂಚ ತಿಂದೆ ಅಂತ? ಇನ್ನೋಡ್ರಿ ಸಾಬ್ರೆ, ಈಗ ಕೊಟ್ಟಿರುವ ಇಪ್ಪತ್ತು ರೂಪಾಯಿಯಲ್ಲದೆ, ನಮ್ಮ ಕೆಲಸ ಸರಿಯಾಗಿ ಆದರೆ ಇನ್ನೂ ಎಂಬತ್ತು ರೂಪಾಯಿ ಕೊಡುತೀವಿ. ಅಲ್ಲದೆ, ನೀವು ನಮ್ಮವರೆಂದು ಯಂಥ ಕಷ್ಟ ಬಂದರೂ ಬಚಾಯಿಸುತ್ತೀವಿ. ನೀವು

ಬಾಯಿ ಬಿಟ್ಟರೆ ಅಂದರೆ, ನಮಗಾಗೋದು ಅಷ್ಟರಲ್ಲೇ ಇದೆ, ಶಾ—; ನಿಮ್ಮ ಜನ್ಮ ತೀರೀತು ಅನ್ನಿ'— ಎಂದು ಲಚುಮ ಅಂದ. ಪಟಾಕಿ, ಲಿಂಗ ಇಬ್ಬರೂ 'ಹೌದು ಕಣೋ ಸಾಬಿ, ನಿನ್ನ ಬುದ್ದಿ ನಿನ್ನ ಕೈಲಿರಲಿ,' ಅಂದರು. ನಾನು ಹೆದರಿದವನ ಹಾಗೆ 'ಆಗಲಪ್ಪ, ಆದರೆ ದುಡ್ಡಿನ ಮಾತು ಮರೀಬೇಡ; ಎಂಬತ್ತು ಸಾಲದು, ನೂರಾದರೂ ಮಾಡಿಕೊ', ಅಂದೆ. ಲಿಂಗ ನಕ್ಕು 'ಸಾಬಿ ಪರವ ಇಲ್ಲ ಕಣೋ, ನೂರಕ್ಕೆ ಒಪ್ಪು' ಅಂದ. ಆಯಿತು.''

ಆಮೇಲೆ ನಡೆದದ್ದನ್ನು ನನ್ನ ಮಾತಿನಲ್ಲೇ ಹೇಳುತ್ತೇನೆ. ಲಿಂಗನ ಮೇಲೆ ಇರುವ ರುಜುವಾತ್ತು ಸಾಲದು, ಪೋಲೀಸ್ ಜಬರದಸ್ತಿಯಿಂದ ಹ್ಯಾಗಾದರೂ ಕೇಸನ್ನು ಬನಾವಟ್ಟು ಮಾಡಬೇಕೆಂದು ಆ ಮುದಿಯ ಇನ್‌ಸ್ಪೆಕ್ಟರು ನೋಡುತ್ತಿದ್ದಾನೆ. ಲಿಂಗನನ್ನು ಬಿಟ್ಟರೆ ಯಾರೂ ಧೈರ್ಯ ವಾಗಿ ಸಾಕ್ಷ್ಯ ನುಡಿಯುವುದಿಲ್ಲವೆಂದು ಅವನನ್ನು 'ಲಾ'ಕ್ಕೆ ವಿರೋಧ ವಾಗಿ ಲಾಕಪ್ಪಿನಲ್ಲಿಟ್ಟಿದ್ದಾರೆ. ಒಳ್ಳೆಯ ಲಾಯರನ್ನಿಟ್ಟು ಶೆಷನ್ ಛೀಪ್ ಕೋರ್ಟುಗಳವರಿಗೂ ಹೋಗಿ ಮೊದಲು ಲಿಂಗನನ್ನು ಜಾಮೀನಿನ ಮೇಲೆ ಬಿಡಿಸಬೇಕು. ಇದಕ್ಕೆ ಹಣ ಬೇಕು. ಲಿಂಗ ಕಳವು ಮಾಲಿನ ಪೈಕಿ ಕೆಲವನ್ನಾದರೂ ಲಚುಮ (ಲಕ್ಷ್ಮೀಗೌಡ)ನ ವಶಕ್ಕೆ ಕೊಟ್ಟರೆ, ಅದನ್ನು ಗೋಪ್ಯವಾಗಿ ಬಿಕರಿಮಾಡಿ, ಲಾಯರನ್ನಿಟ್ಟು, ಹೇಳೋರಿಗೆ ಹೇಳಿ, ಕೊಡೋರಿಗೆ ಕೊಟ್ಟು, ಲಿಂಗನನ್ನು ಜಾಮೀನಿನ ಮೇಲೆ ಮೊದಲು ಬಿಡಿಸಿಕೊಂಡು, ಆಮೇಲೆ ಅವನ ಬಚಾವಿಗೆ ಅವಶ್ಯವಾದ ಮುಂದಿನ ಯತ್ನಮಾಡುವುದಕ್ಕೆ ಲಚುಮ ಜವಾಬ್ದಾರ. ಹೀಗೆ ತಂದ್ರೆ ಲಿಂಗನಿಗೆ ಆಶೆ ತೋರಿಸಿದರು. ಅವನು ಕ್ರಮೇಣ ಅವರ ಮಾತಿಗೆ ಸೋತು, ತುರತು ಎಷ್ಟು ಹಣ ಬೇಕಾಗುತ್ತದೆಂದು ಕೇಳಿದ. ನಾನ್ನೂರು ಐನೂರು ರೂಪಾಯಿಯಾದರೂ ಬೇಕಾಗಬಹುದೆಂದು ಲಚುಮ ಹೇಳಿದ. ಹಾಗಾದರೆ ಪೂಜಾರಿ ಮಲ್ಲಯ್ಯನನ್ನ ಕರೆದುಕೊಂಡು ಅದೇ ರಾತ್ರಿ— ನಡುರಾತ್ರಿ ಸುಮಾರಿಗೆ ತಂದ್ರೆಗೆ, ತನ್ನ ಮನೆಗೆ ಹೋದರೆ, ತನ್ನ ಹೆಂಡತಿ ಯನ್ನು ಕೇಳಿದರೆ— ಅವಳಿಗೆ ಎಲ್ಲವೂ ಗೊತ್ತಿದೆ— ಅನುಕೂಲವಾಗ ಬಹುದು. ಆದರೆ ಮಲ್ಲಯ್ಯನೇ ಹೋಗಬೇಕು, ಅವನ ಸಂಗಡ

ಇನ್ನಾರಾದರೂ ಒಬ್ಬರು ಹೋಗಬಹುದು. ಮಲ್ಲಯ್ಯನ ಹೊರತು ಇನ್ನ್ಯಾರು ಹೋದರೂ ಆಗದು; ಒಬ್ಬರಿಗಿಂತ ಹೆಚ್ಚು ಜನ ಅವನೊಂದಿಗೆ ಹೋದರೂ ಕೆಲಸ ಕೆಡುತ್ತೆ. ಹೀಗೆ ಹೇಳಿ ಅವರಿಂದ ಆಣೆ ಪ್ರಮಾಣ ಮಾಡಿಸಿಕೊಂಡನಂತೆ. ಅದಕ್ಕೇ ಇಷ್ಟು ಹೊತ್ತಾದದ್ದು. ಸುಬೇದಾರರು ಕೇಳಿದರೆ ಖೈದಿ ಎರಡಕ್ಕೆ ಹೋಗಬೇಕೆಂದು ಹೇಳಿದ, ಅವನಿಗೆ ಹೊಟ್ಟೆ ನೋವಂತೆ, ಎಂದು ಹೇಳುವಂತೆ ಷೇಕ್ ಮೊಹದಿನ್‌ಗೆ ಕುಂಸಲ್ (ಬಹುಶಃ Counsel ನ ಅಪಭ್ರಂಶವಿರಬೇಕು) ಮಾಡಿದರಂತೆ.

ಅಷ್ಟು ಹೊತ್ತಿಗೆ ಇನ್‌ಸ್ಪೆಕ್ಟರು ಖೈದಿಯನ್ನು ಕರೆದುಕೊಂಡು ನನ್ನ ಕೊಠಡಿಗೆ ತಿರುಗಿ ಬಂದರು. ಖೈದಿ ಅವರಿಗೆ ಬಹಳ ಸತಾಯಿಸಿ ಅವರ ತಾಬೇದಾರರ ರೂಬು ರೂಬು ಬಹಳ ಅವಮಾನಕರವಾಗಿ ಹೀಯಾಳಿಸಿರ ಬೇಕು—ಅವರ ಮುಖವೆಲ್ಲ ಕೆಂಪೇರಿ, ಅವರ ನರೆದಾಡಿಯೇ ರೋಷದಿಂದ ಕುಣಿಯುವಂತೆ ಕಾಣುತ್ತಿತ್ತು. ಖೈದಿಗೆ ನನ್ನ ಕೊಠಡಿ ಬಾಗಿಲ ಹತ್ತಿರ — ಅವನು ಮುಗ್ಗರಿಸಿ ಮುಂದೆ ಬೀಳುವಂತೆ ಬಲವಾಗಿ ಒದ್ದರು.

'ಏನೂ ಬಾಯಿ ಬಿಡಲಿಲ್ಲವೋ ಇನ್‌ಸ್ಪೆಕ್ಟರೇ' ಎಂದೆ

"ಈ—ಗೆ, ಈ—ಮಗನಿಗೆ ಮಾಡೋದುಮಾಡಿದರೆ ಬಾಯಿ ಬಿಡುತ್ತಾನೆ ಸಾರ್. ತಮ್ಮ ಅಪ್ಪಣೆಯಾದರೆ ಚುಂಚನಕಟ್ಟೆ ಸ್ಟೇಷನ್ನಿಗೆ ಕರೆದುಕೊಂಡು ಹೋಗುತ್ತೀನಿ' ಎಂದರು

'ಆಗಲಿ ನೋಡೋಣ ಸಾಹೇಬರೆ, ಈಗ ಸದ್ಯಕ್ಕೆ ಮಾಡಿರುವುದು ಸಾಕು. ಆ ಔಷಧಿ ಸಣ್ಣ 'dose' ಗಳಲ್ಲಿ ಕೊಟ್ಟರೆ ಒಳ್ಳೇದು' ಎಂದೆ.

ಲಿಂಗ "ಪತ್ತೆಮಾಡಲು ಕ್ಷೈಲಾಗದ ಇನ್‌ಸ್ಪೆಕ್ಟರು, ಮನೆ ಹೆಂಗಸನ್ನ ಸುದಾರಿಸಲಾರದ ಮುದಿಗಂಡ. ಇವರುಗಳು ಹೊಡತ ಹೊಡದು ತಾನೆ ಗಂಡಸ್ತನ ತೋರಿಸೋದು" ಅಂದ

ಇನ್‌ಸ್ಪೆಕ್ಟರಿಗೆ ಚಿಕ್ಕ ಸಂಸಾರ; ಲಿಂಗನಿಗೆ ಕೂಡಲೆ ಪ್ರಯೋಗ ವಾಗುತ್ತಿದ್ದ ಇನ್ನೊಂದು ಭಾರಿ 'dose ನ್ನು ನಾನು ತಡೆದೆ.

"ಅವನು ಲುಚ್ಚಾ—ಮಗ, ಆದರೆ ಖೈದಿಯನ್ನು ಹೊಡೆಯು ವುದು ತಕ್ಸೀರು. ನಮ್ಮ ಎದುರಿಗಂತೂ ಮಾಡತಕ್ಕದ್ದೇ ಅಲ್ಲ. ನಾವು ನೋಟೀಸು ಮಾಡದೇ ಇರಲು ಆಗುವುದಿಲ್ಲ," ಹೀಗೆಂದು ಅವರಿಗೆ

ಮಾತ್ರ ಕೇಳುವಂತೆ ಕಿವಿಯಲ್ಲಿ ಹೇಳಿದೆ. ಆಮೇಲೆ ಆಯುಧಪಾಣಿಗಳಾದ ಇಬ್ಬರು ಕಾನ್ಸ್ಟೇಬಲ್‌ಗಳ ಸುಪರ್ದಿನಲ್ಲಿ ಖೈದಿಯನ್ನು ಲಾಕಪ್ಪಿಗೆ ವಾಪಸು ಕಳುಹಿಸಿದೆವು.

ಇನ್‌ಸ್ಪೆಕ್ಟರಿಗೆ ಕೋಪ ಸ್ವಲ್ಪ ಶಮನವಾದ ಮೇಲೆ ಷೇಕ್ ಮೊಹದಿನ್ ಹೇಳಿದ ವರ್ತಮಾನವನ್ನು ಅವರಿಗೆ ಹೇಳಿ, ಅವನನ್ನು ಮೊಖಾಬಿಲೆ ಮಾಡಿಸಿದೆ. ಆಮೇಲೆ ಮುಂದೆ ಮಾಡಬೇಕಾದ ಕಾರ್ಯವನ್ನು ಆಲೋಚನೆ ಮಾಡಿದೆವು.

ಲಚುಮ ಅಥವ ಲಕ್ಷ್ಮೀಗೌಡ ಪಟೇಲ ದೇವರಸೇಗೌಡನ ಅಣ್ಣನ ಮಗ. ಪಟಾಕಿ—ಆ ಗುಂಪಿಗೆ ಸೇರಿದ 'ಗೂಂಡ'; ಲಟ್ಠಿಯಾಳು. ದೇವರಸೇಗೌಡ ಈ ಮೊಕದ್ದಮೆಯಲ್ಲಿ ಭಾಗವಹಿಸಿದರೆ ನಮ್ಮ ಕೆಲಸ ಬಹಳ ಕಷ್ಟಸಾಧ್ಯವಾಗುತ್ತೆ. ಈ ರಾತ್ರಿಯೇ ಪೂಜಾರಿ ಮಲ್ಲಯ್ಯ ತಂದ್ರೆಗೆ ಮಾಲು ತರಲು ಹೋಗುತ್ತಾನಾದ್ದರಿಂದ ನಾವು ಮಾಡುವುದನ್ನು ಕೂಡಲೆ ನಿರ್ಧರಿಸಬೇಕು. ಮಾಡುವುದು ಸ್ಪಷ್ಟವಾಗೇ ಇದೆ. ಪೂಜಾರಿ ಅರ್ಧರಾತ್ರಿಗೆ ಅಲ್ಲಿಗೆ ಹೋಗುತ್ತಾನೆ. ನಾವು ಅದಕ್ಕೆ ಒಂದೆರಡು ತಾಸು ಮುಂಚಿತವಾಗೇ ಅಲ್ಲಿಗೆ ಹೋಗಿ, ಲಿಂಗನ ಹೆಂಡತಿ ವಾಸವಾಗಿರುವ ಮನೆಯ ಹತ್ತಿರದಲ್ಲೇ ಮರೆಯಾದ ಸ್ಥಳದಲ್ಲಿ ಗೋಪ್ಯವಾಗಿರುವುದು. ಅವಳು ಮಾಲನ್ನು ತಂದುಕೊಡುವ ಸಂಚು ಕಾದು ಕೂಡಲೆ ಮಾಲು ಸಹಿತ ಅವಳನ್ನೂ ಪೂಜಾರಿಯನ್ನೂ ಹಿಡಿಯುವುದು. ಇದರಲ್ಲಿನ ಅಪಾಯಗಳು ಅನೇಕ. ನಾವು ಕತ್ತಲಿನಲ್ಲಿ ರಹಸ್ಯವಾಗಿ ನಾಲ್ಕೈದು ಜನ ಮಾತ್ರ ಜನಗಳು ಸಾಮಾನ್ಯವಾಗಿ ತಿರುಗಾಡದ ಹಳ್ಳಕೊಳ್ಳದ ದಾರಿಯಲ್ಲದ ದಾರಿಯಲ್ಲಿ ಏಳೆಂಟು ಮೈಲಿಗಳ ದೂರದಲ್ಲಿರುವ ತಂದ್ರೆಗೆ ಹೋಗಬೇಕು. ಪಟೇಲ ದೇವರಸೇಗೌಡ ಕಳ್ಳನ ಕಡೆ ಷಾಮೀಲಾಗಿದ್ದರೆ, ಅದು ಉಪೇಕ್ಷಿಸಬಹುದಾದ ವಿಷಯವಲ್ಲ. ಅವನಿಗೆ ಬಾತ್ಮಿ ಕೊಡತಕ್ಕವರು ಅನೇಕರಿದ್ದಾರೆ. ನಮ್ಮ ಪೋಲೀಸ್ ಸಿಬ್ಬಂದಿ ಪೈಕಿಯೇ ಯಾರಾದರೂ ಇರಬಹುದು. ಅಥವ ನಾವು ಖೈದಿಯನ್ನು ನನ್ನ ಆರ್ಡರ್ಲಿ ಮೂಲಕ ಕರೆಕಳಿಸಿದ್ದು, ಲಚುಮನ ಖೈದಿಯ ಮಾತುಕತ್ತು ಒಪ್ಪಂದವಾದಾಗ ನನ್ನ ಆರ್ಡರ್ಲಿಯು ಎದುರಿಗೇ ಇದ್ದದ್ದು,

ಇವೆರಡೂ ಸಂದೇಹವನ್ನುಂಟುಮಾಡಬಹುದು. ದೇವರಸೇಗೌಡ ಆ ಪಾಳಿಯದಲ್ಲಿದ್ದರೆ, ಅವನು ತಂದ್ರೆಗೆ ಪೂಜಾರಿ ಸುರಕ್ಷಿತ ಹೋಗುವುದಕ್ಕೂ, ಬಂಗಲೆಯ ಹತ್ತಿರ ನಮ್ಮ ಓಡಾಟದ ವರ್ತಮಾನ ತರಿಸಿಕೊಳ್ಳುವುದಕ್ಕೂ, ಬಂದೋಬಸ್ತು ಮಾಡೇ ಮಾಡುತ್ತಾನೆ ನಾವು ಕತ್ತಲಿನಲ್ಲಿ ತಂದ್ರೆಗೆ ಮಾಡುವ ಪ್ರಯಾಣವನ್ನು ದಾರಿ ಕಾದು ತಡೆದರೂ ಆಯಿತು. ಅಂಥ ಸಂಭವದಲ್ಲಿ ನಮ್ಮನ್ನು ಹೊಡೆದರೆತಾನೆ ಕೇಳುವರು ಯಾರು? ಅಥವ ಪೂಜಾರಿಗೆ ಅವೊತ್ತು ಹೋಗಬೇಡ. ಇನ್ನೊಂದು ದಿನ ಹೋಗುವಂತೆ ಹೇಳಿದರೂ ಆಯಿತು

ನನಗೆ ಒಂದು ಯೋಚನೆ ತೋರಿತು. ದೇವರಸೇಗೌಡನನ್ನು ನಮ್ಮ ಸಂಗಡಲೇ ಕರೆದುಕೊಂಡು ಹೋದರೆ ಉತ್ತಮ. ಕೂಡಲೆ ಅವನನ್ನು ಕರೆಸಿದರೆ, ಲಚುಮನಿಗೆ ತಂದ್ರೆ ಯಾತ್ರೆಯ ವಿಷಯ ಅವನಿಗೆ ಸುದ್ದಿ ಹೇಳಲು ಅವಕಾಶವೂ ಇರುವುದಿಲ್ಲ. ಪಟೇಲನ ಸಹಾಯ ಈ ಪತ್ತೇ ಸಾಹಸದಲ್ಲಿ ನಮಗೆ ಬೇಕೆಂದು ಹೇಳಿದರೆ, ಅವನಿಗೆ ಒಳ್ಳೆಯ ಹೆಸರು ಬರುತ್ತೆಂಬ ಆಸೆಯೂ ಉತ್ಸಾಹವೂ ಉಂಟಾಗಬಹುದು. ಅವನು ನಮ್ಮ ಸಂಗಡಲೇ ಇದ್ದರೆ ಅವನು ನಮ್ಮ ಸುರಕ್ಷತೆಗೆ ಹೊಣೆಯಾಗಿರುತ್ತಾನೆ. ಅವನ ಕಕ್ಷಿಯವರು ದಾರಿ ಕಾದು ನಮ್ಮ ಮೇಲೆ ಕೈ ಮಾಡಲಾರರು, ಹಾಗೆ ಮಾಡಿದರೆ ಅವನಮೇಲೆ ಪ್ರತಿಕ್ರಿಯೆ ಮಾಡಿಯೇವೆಂಬ ಭಯದಿಂದ. ಇನ್‌ಸ್ಪೆಕ್ಟರು ಇದಕ್ಕೆ ಒಪ್ಪಿದರು. ಕೂಡಲೆ ಪಟೇಲ ದೇವರಸೇಗೌಡನನ್ನು ಬರಮಾಡಿಕೊಂಡು ಅವನಿಗೆ ಲಚುಮ, ಸಟಾಕಿ ಇವರುಗಳ ಹೆಸರನ್ನು ಮಾತ್ರ ಬಿಟ್ಟು ಬಾಕಿ ಸಂಗತಿಗಳನ್ನೆಲ್ಲಾ ಹೇಳಿ ಅವನು ನಮ್ಮ ಜೊತೆಗೆ ತಂದ್ರೆಗೆ ಬರಬೇಕೆಂದು ತಾಕೀದು ಮಾಡಿದೆ. ಬಹಳ ಉತ್ಸಾಹದಿಂದ ಒಪ್ಪಿದ. ಅವನಿಗೆ ನನ ಬಿಡಾರದಲ್ಲೇ ಊಟಮಾಡಿಸಿದೆ. ನನ್ನ ಕುದುರೆಯನ್ನು ಬಳಗ್ಗೆ ತಂದ್ರೆಗೆ ತರುವಂತೆ ಹೇಳಿ, ರಾತ್ರಿ ಎಂಟು ಘಂಟೆಗೆ ಬಂಗಲೆಯಿಂದ ಹೊರಟೆವು. ನಮ್ಮ ಪಾರ್ಟಿ—ನಾನು, ಇನ್‌ಸ್ಪೆಕ್ಟರು (ನಮ್ಮಿಬ್ಬರ ಹತ್ತಿರವೂ ರಿವಾಲ್ವರುಗಳಿದ್ದವು), ಇಬ್ಬರು ಕಾನ್ಸ್ಟೇಬಲ್‌ಗಳು (ಷೇಕ್ ಮೊಹದಿನ್ ದೇಖೀಲು), ಪಟೇಲ ದೇವರಸೇಗೌಡ, ಇಷ್ಟುಜನ. ಪಟೇಲ ಮತ್ತು ಕಾನ್‌ಸ್ಟೇಬಲ್‌ಗಳು

ಲಾಠೀ ಹಿಡಿದಿದ್ದರು. ಕತ್ತಲಲ್ಲಿ ಒಂದು ಸಣ್ಣ ಕೈದೀಪ (Lantern) ಸಹಾಯದಿಂದ ದಾರಿ ನಡೆಯುವುದು ಬಹಳ ಪ್ರಯಾಸವಾಯಿತು. ಕಲ್ಲು ಮುಳ್ಳು, ಕೊರಕಲು ಇವುಗಳ ದೆಸೆಯಿಂದ ಹೆಜ್ಜೆ ಹೆಜ್ಜೆಗೂ ಎಡವುತ್ತ, ಅಂತೂ ನನ್ನ ಕೈಗಡಿಯಾರದಲ್ಲಿ ಹನ್ನೊಂದು ಘಂಟೆ ಹೊತ್ತಿಗೆ ತಂದ್ರೆಗೆ ತಲಪಿದೆವು. ಕೃಷ್ಣಪಕ್ಷದ ಕತ್ತಲು; ಅದರ ಮೇಲೆ ಕಾರ್ಮೋಡ ನಾವು ಸೇರುವ ವೇಳೆಗೆ ಗ್ರಾಮದಲ್ಲಿ ಒಂದು ದೀಪವಿಲ್ಲ, ಪ್ರಾಣಿ ಸುಳಿವಿಲ್ಲ; ನಾವು ಒಳಗೆ ಕಾಲಿಟ್ಟ ಕೂಡಲೆ ಕೆಲವು ನಾಯಿಗಳು ಮಾತ್ರ ಬೊಗಳಲಿಕ್ಕಿಟ್ಟವು— ಅಂದರೆ ಅದೃಷ್ಟಕ್ಕೆ ಯಾರೂ ಎದ್ದು ಏಕೆ ಬೊಗಳುತ್ತವೆಂದು ನೋಡಲಿಕ್ಕೆ ಬರಲಿಲ್ಲ.

ತಂದ್ರೆಲಿಂಗನ ಮನೆ ಹಳ್ಳಿಯ ಒಂದು ಬೀದಿಯ ತುದಿಯಲ್ಲಿದೆ. ಅದರ ಆಚೆಗೆ ಯಾವ ಮನೆಗಳೂ ಇಲ್ಲ. ಮನೆಯ ಮಗ್ಗಲುಗಳಲ್ಲಿ ಓಣಿಗಳು. ಹಿಂದೆ ಸುಮಾರು ಹತ್ತುಮಾರು ಹಿತ್ತಲು. ಹಿತ್ತಲಿಗೆ ಮುಳ್ಳು ಬೇಲಿ— ಮನೆಯ ಎರಡು ಪಕ್ಕಗಳಲ್ಲೂ ಯಾರಾದರೂ ಬಂದರೆ ಕಾಣುವುದಕ್ಕೆ ಅನುಕೂಲವಿರುವ ಸ್ಥಾನಗಳಲ್ಲಿ ಬೇಲಿಯ ಮರೆಯಲ್ಲಿ ಆಳುಗಳನ್ನು ಕಾವಲಿಟ್ಟು. ನಾನೂ ಇನ್‌ಸ್ಪೆಕ್ಟರೂ ದೇವರಸೇಗೌಡನೂ ಹಿತ್ತಲಿನಲ್ಲಿ ಬೇಲಿಯ ಹಿಂದೆ ಪೋಲೀಸು ಕಂಬಳಿಗಳನ್ನು ಹಾಕಿಕೊಂಡು ಕುಳಿತೆವು ಒಂದು ತಾಸಾಯಿತು, ಎರಡು ತಾಸಾಯಿತು, ಭರೋ ಅಂತ ಗಾಳಿ ಬೀಸಿ, ಮಳೆ ಬೀಳುವುದಕ್ಕೆ ಪ್ರಾರಂಭವಾಯಿತು ಕಾದು ಕಾದು ಬೇಜಾರಾಯಿತು. ಬಟ್ಟೆಗಳೆಲ್ಲ ತೊಯ್ದು ಗಾಳಿಯಲ್ಲಿ ಮೈ ಮುಳ್ಳು ಬಂದಿತು. ನಾವು ಈ ಪ್ರಯತ್ನ ಮಾಡೇವೆಂದು ಊಹಿಸಿ ಈ ಕಳ್ಳ—ಮಕ್ಕಳು ನಮಗೆ ಚಳ್ಳೇಕಾಯಿ ತಿನ್ನಿಸುತ್ತಿರಬಹುದೆ? ನಾವು ಈ ಗಲೀಜು ಹಿತ್ತಲಲ್ಲಿ ಗೊಬ್ಬರದ ಕೆಸರಿನಲ್ಲಿ ನಡುಗುತ್ತ ಇರುವಾಗ ಲಚುಮ ವಗೈರೇರು ಬೆಚ್ಚಗೆ ಮನೆಯಲ್ಲಿ ಕುಳಿತು ನಮ್ಮ ಕತೆಯನ್ನು ಒಬ್ಬರಿಗೊಬ್ಬರು ಹೇಳಿಕೊಂಡು ಹೊಟ್ಟೆ ಹಿಡಿದು ನಗುತ್ತಿರಬಹುದೆ? ಅಥವ, ನಾವು ಬರುವುದಕ್ಕೆ ಮೊದಲೇ ಬಂದು ತಮ್ಮ ಕೆಲಸಮಾಡಿಕೊಂಡು ಹೊರಟು ಹೋದರೋ? ಈ ಹಾಳು ಮಳೆ ಬೇರೆ (ಆ ದೇವದತ್ತವಾದ ಮಳೆಯಿಂದ ಮುಂದೆ ನಮಗೆ ಎಷ್ಟು ಸಹಾಯವಾಯಿತೆಂಬುದು

(ಆ ಅವಸ್ಥೆಯಲ್ಲಿದ್ದ ನಮಗೇನು ಗೊತ್ತು, ಆಗ.) ಏನಾದರೂ ಆಗಲಿ, ಮೊದಲು ಕೋಳಿಕೂಗುವವರೆಗಿದ್ದು, ಗ್ರಾಮಸ್ಥರು ಎದ್ದು ಬಂದು ನಮ್ಮನ್ನು ನೋಡಿ ನಗುವುದಕ್ಕೆ ಮುಂಚೆಯೇ ವಾಪಸು ಬಂದುಬಿಡೋಣ ವೆಂದು ಗೊತ್ತುಮಾಡಿದೆ. ದೇವರಸೇಗೌಡ ಕಂಬಳಿ ಗುಬರು ಹಾಕಿ ಕೊಂಡು ಮೆಲ್ಲಗೆ ಗೊರಿಕೆ ಹಾಕುತ್ತಿದ್ದ. ಸಾಬರು ಮುಖಕ್ಕೆ ಶಾಲು ಮುಚ್ಚಿಕೊಂಡು ಕೆಮ್ಮನ್ನು ತಡೆಯಲು ಸಾಹಸಮಾಡುತ್ತಿದ್ದರು.

ಏಕಾಏಕಿ ನಾಯಿಗಳು ಬೊಗಳ ಹತ್ತಿದವು. ನಾವು ಕಾವಲು ನೇಮಿಸಿದ್ದ ಒಬ್ಬ ಪೋಲೀಸಿನವನು ಅಂಬೆಗಾಲು ಹಾಕಿಕೊಂಡು ಬಂದು ಯಾರೋ ಬರುತ್ತಿದ್ದಾರೆಂದ. ನಾವು ಬಹಳ ಹುಷಾರಾಗಿ, ಬೇಲಿ ಯೊಳಗಿನ ಕಂಡಿಯಿಂದ ಈಚೆಗೆ ನುಸಿದುಬಂದು ಮನೆಯಗೋಡೆಗೆ ಒತ್ತರಿಸಿಕೊಂಡು ನಿಂತೆವು. ಯಾರೋ ಮೂವರು ಬರುತ್ತಿದ್ದಂತೆ ಕಂಡಿತು. ಇಬ್ಬರು ಸುಮಾರು ಇಪ್ಪತ್ತು ಮಾರು ದೂರದಲ್ಲೇ ನಿಂತು ಬಿಟ್ಟರು. ಒಬ್ಬನು ಲಿಂಗನ ಮನೆ ಬಾಗಿಲಿಗೆ ಬಂದು ಕದದ ಮೇಲೆ ಒಂದು ಕಲ್ಲಿನಿಂದಲೋ ಹೆಂಚಿನ ಬೋಕಿಯಿಂದಲೋ. ಮೂರು ನಾಲ್ಕು ಸಲ ಕೆರೆದ ಒಳಗಿನಿಂದ 'ಯಾರು ಅದು?' ಎಂದು ಹೆಂಗಸಿನ ಧ್ವನಿ ಯಲ್ಲಿ ಕೇಳಿಸಿತು

'ನಾನು, ಮಲ್ಲಯ್ಯ'

'ತಮ್ಮಡೀನೆ' ಯಾನಪ್ಪ ಬಂದಿರಿ?'

'ಯಜಮಾನ ಕಳಿಸವನೆ'

'ಯಾಕೆ?'

'ನಿಂಗೊತ್ತಿಲ್ಲವಾ'

'ಏನಾದರೂ ಹೇಳಿಕಳಿಸವರೇನಪ್ಪ?'

'ದಾಸೋಗ' ಇಷ್ಟು ಹೇಳಿದರೆ ಸಾಕು. ನಿನಗೆ ಎಲ್ಲಾ ಗೊತ್ತಿದೆ ಎಂದು ಹೇಳಿದರು.'

ಈ ಸಂಭಾಷಣೆ ನಡೆಯುವಾಗ ಒಬ್ಬರು ಮನೆ ಹೊರಗೆ ಒಬ್ಬರು ಒಳಗೆ ಇದ್ದುದ್ದರಿಂದ ಸ್ವಲ್ಪ ಗಟ್ಟಿಯಾಗೇ ಮಾತನಾಡಬೇಕಾಯಿತೆಂದು ಕಾಣುತ್ತದೆ; ಇಲ್ಲವಾದರೆ ನಮಗೆ ಕೇಳಿಸುತ್ತಿರಲಿಲ್ಲ.

'ದಾಸೋಗ' ಎಂಬ ಸಂಕೇತದ ಮಾತು ಕೇಳಿದ ಕೂಡಲೆ ಬಾಗಿಲ ತಾಪಾಳ ತೆಗೆದ ಸಪ್ಪಳ ಕೇಳಿಸಿತು. ಒಬ್ಬ ಹೆಂಗಸು — ತಂದ್ರೆಲಿಂಗನ ಹೆಂಡತಿಯೆಂದು ನಂತರ ಗೊತ್ತಾಯಿತು— ಈಚೆಗೆ ಬಂದು,

'ಹಂಗಾದರೆ ಇಲ್ಲೇ ಇರು. ನಾನು ಬರುತ್ತೀನಿ. ಇಲ್ಲಿಂದ ಕದಲಿಗಿದಲೀಯ ನನ್ನ ಹಿಂದೇನಾದರೂ ನೀನು ಬರೋಕೆ ನೋಡಿದರೆ ನಾನು ಹಿಂತಿರುಗಿಬಿಡುತೀನಿ. ಆಮೇಲೆ ಏನೂ ಇಲ್ಲ ನೋಡಿಕೋ. ನಾನು ಹಿಂತಿರುಗಿ ಹಿಂತಿರುಗಿ ನೋಡ್ತಾನೆ ಹೋಗತೀನಿ' ಎಂದಳು.

ಆ ಮನುಷ್ಯ,

'ನಾನ್ಯಾಕವ್ವ ನಿನ್ನ ಬೆನ್ನ ಹತ್ತಲಿ. ನಿನ್ನ ಯಜಮಾನ ಹೇಳಿದ್ದು ತಿಳಿಸಿವ್ನಿ. ಹೋಗು ಅಂದರೆ ಹೋಗತೀನಿ' ಎಂದ.

'ಕ್ವಾಸ ಮಾಡಿಕೋಬ್ಯಾಡ ತಮ್ಮಡಯ್ಯ. ಬಾಳ ಹೊತ್ತು ಇರೊಲ್ಲ, ಬಂದು ಬಿಡುತೀನಿ' ಎಂದು ಹೆಂಗಸು ಮನೆಯಿಂದ ಹೊರಟು ಬೇಗಬೇಗ ಹೆಜ್ಜೆಯಿಟ್ಟುಕೊಂಡು ಪಕ್ಕದಲ್ಲಿದ್ದ ಜೋಳದ ಹೊಲದಲ್ಲಿ ಮರೆಯಾದಳು, ತಮ್ಮಡಿ ಅಲ್ಲೇ ನಿಂತ, ಸುಮಾರು ಅರ್ಧಘಂಟೆ ಕಳೆಯಿತು. ನಾವು ಸ್ವಲ್ಪವೂ ಸದ್ದು ಮಾಡದೆ ನಿಂತಿದ್ದೆವು. ಮಳೆಯ ಸದ್ದಿನಲ್ಲಿ ನಾವು ಏನಾದರೂ ಮಾಡಿರಬಹುದಾದ ಸದ್ದು ಕೂಡ ಮರೆಯಾಯಿತೆಂದು ಕಾಣುತ್ತದೆ. ಕೊನೆಗೆ ಆ ಹೆಂಗಸು ತಾನು ಹೋದ ದಾರಿಯಲ್ಲಲ್ಲದೆ ನಾವು ಬಚ್ಚಿಟ್ಟುಕೊಂಡಿದ್ದ ಕಡೆಯ ದಾರಿಯಲ್ಲಿ ಓಡುತ್ತಾ ವಾಪಸು ಬಂದಳು.

'ತಂದಿಯಾ' ಅಂದ.

'ಹೂ' ಅನ್ನುವಷ್ಟರಲ್ಲಿ ಏನು ಸದ್ದಾಯಿತೊ ಏನೊ, ಇನ್‌ಸ್ಪೆಕ್ಟರು ಕೆಮ್ಮನ್ನು ತಡೆಯಲಾರದೆ ಹೋದರೊ—ದೇವರಸೇಗೌಡ ಕಂಬಳಿ ಸರಬರ ಮಾಡಿದನೊ—ಆ ಹೆಂಗಸು ಥಟಕ್ಕಂತ ಮನೆಯೊಳಕ್ಕೆ ಹೋಗಿ ದಡಾರ್ರಂತ ಕದ ಹಾಕಿ ತಾಪಾಳ ಹಾಕಿಕೊಂಡು ಬಿಟ್ಟಳು, ಆ ಮನುಷ್ಯ ಅಲ್ಲಿಂದ ತಿರುಗಿ ಸತ್ತನೊ ಕೆಟ್ಟನೊ ಅಂತ ಓಡಿದ. ಮಾಲು ಕೈಗೆ ಸೇರಿದ ಮೇಲೆ ಓಡಿದನೋ ಅದಕ್ಕೆ ಮೊದಲೇನೋ ನನಗೆ ಗೊತ್ತಾಗಲಿಲ್ಲ. ಅವನ ಕೈಗೆ ಸೇರದಿದ್ದರೆ ಮಾಲು ಲಿಂಗನ ಹೆಂಡತಿ ಹತ್ತಿರ ಅಥವ

ಆ ಮನೆಯಲ್ಲೇ ಇರಬೇಕು. ನಾನು ಇಬ್ಬರು ಕಾನ್ಸ್ಟೇಬಲ್‌ಗಳನ್ನು ಹರತರದೂದು ಮಾಡಿ ಅವನನ್ನು ಹಿಡಿಯುಬೇಕೆಂದು ಓಡಿಸಿದೆ.

ಆಮೇಲೆ ಪೋಲೀಸು ಸೀಟಿ ಊದಿಸಿ, ರಿವಾಲ್ವರನ್ನು ಹಾರಿಸಿ ಊರಿನ ಪಟೇಲನನ್ನೂ ಮುಖಂಡರನ್ನೂ ಕರೆಸಿದೆ. ತಂದ್ರೆಲಿಂಗನ ಹೆಂಡತಿಗೆ ಬಾಗಿಲು ತೆಗೆ, ಮನೆ ಝುಡ್ತಿ ಮಾಡಬೇಕೆಂದೂ ಅಪ್ಪಣೆ ಮಾಡಿದೆ. ಅವಳ ಸದ್ದು ಇಲ್ಲ. ಅವಳು ನೇಣುಗೀಣು ಹಾಕಿಕೊಂಡಳೋ ಎಂದು ಸಂದೇಹ ತೋರಿ ಬಾಗಿಲನ್ನು ಬಲಾತ್ಕಾರದಿಂದ ತೆಗೆಸಿದೆ. ಅವಳು ದೊಡ್ಡದಾಗಿ ಅಳಹತ್ತಿ 'ಇದೇನು ಬುದ್ಧಿ, ಮಾನವಾಗಿ ಇರೋಕಾಗದೆ ನಿಮ್ಮ ಆಳ್ವಿಕೆಯಲ್ಲಿ? ಗಂಡುಳ್ಳ ಗರತಿ ಹರಾದ ಹುಡುಗಿಯ ಮನೆಗೆ ರಾತ್ರಿ ಸರ್ರಾತ್ರೀಲಿ ನುಗ್ಗಬಹುದೇ? ವಗ್ಯೆರೆ ಆವಟ ತೆಗೆದಳು.

ದೇವರಸೇಗೌಡ 'ಸುಮ್ಮಗಿರಮ್ಮ, ಸಕ್ಕಾರು! ಸುಬೇದಾರ್ರು ನಿನ್ನ ಚೆಂದಕ್ಕೆ ಮೆಚ್ಚಿ ಕಲ್ಲು ಮುಳ್ಳು ಗೋರ‍್ಯಾಗ ಈಟುದೂರ ಬಂದವರೆ ಅಂತೀಯಲ್ಲ ಬೇಕಾದರೆ ನಿನ್ನೇ ಕರೆಸಿಕೊಳ್ಳಲಾರದೆ ಹೋದರೆ?' ಅಂದ.

ಈ ಆಭಾಸಕ್ಕೆ ಏನು ಮಾಡೋದು ನಾನು 'ಸಾಕು, ಸುಮ್ಮನಿರು, ಗೌಡ,' ಎಂದು ಹೇಳಿ, ಮನೆಯನ್ನು ಶೋಧಿಸುವುದಕ್ಕೆ ಕ್ರಮಪ್ರಕಾರ ಒಬ್ಬ ಕಾನ್ಸ್ಟೇಬಲ್ಲನ್ನೂ ತಂದ್ರೆ ಪಟೇಲನನ್ನೂ ಬಿಟ್ಟು, ಲಿಂಗನ ಹೆಂಡತಿಯನ್ನು ಶೋಧಿಸಲಿಕ್ಕೆ ಪಟೇಲನ ಹೆಂಡತಿಯನ್ನೂ ಅಲ್ಲಿಯವರ ಭಾರಿ ರೈತನೊಬ್ಬನ ಮನೆಯಾಕೆಯನ್ನೂ ಬಿಟ್ಟೆ. ಮನೆ ಸಣ್ಣದು. ಸೂರು, ಚಾವಣಿ ಮೊದಲುಗೊಂಡು ಮಡಕೆ ಮಟ್ಟು ಎಲ್ಲವನ್ನೂ ಹುಡುಕಿದ್ದಾಯಿತು. ಲಿಂಗನ ಹೆಂಡತಿಯನ್ನು ನಿರ್ದಾಕ್ಷಿಣ್ಯವಾಗಿ ಹೆಂಗಸರು ಪಾದದಿಂದ ತಲೆಯವರೆಗೂ ಚೆನ್ನಾಗಿ ಶೋಧಿಸಿದರು. ಮಾಲು ಯಾವುದೂ ಸಿಕ್ಕಲಿಲ್ಲ. ಬೆಳಗಿನ ಜಾವ. ಅಷ್ಟು ಹೊತ್ತಿಗೆ ಪೂಜಾರಿ ಮಲ್ಲನನ್ನೂ ಹಿಡಿದುಕೊಂಡು ಬಂದರು. ಅವನ ಹತ್ತಿರವೂ ಏನೂ ಮಾಲಿರಲಿಲ್ಲ. ಒಂದುವೇಳೆ ಇದ್ದಿದ್ದರೂ ಪಲಾಯನ ಮಾಡುವಾಗ ಬಿಸುಟರಲಾರನೇ? ಅವನು ಹೇಳಿದ್ದು, 'ತನಗೇನೂ ತಿಳಿಯದು; ಲಿಂಗಯ್ಯ ಮನೆಗೆ ಹೋಗಿ 'ದಾಸೋಗ'ವೆಂದರೆ ಲಿಂಗಯ್ಯನ ಹೆಂಡತಿ ಏನೋ ಮಾಲನ್ನು ಕೊಡುತ್ತಾಳೆ; ಅದನ್ನು ಲಚುಮಯ್ಯನಿಗೆ ಕೊಡೆಂದು

ಹೇಳಿದ್ದ; ಮಾಲು ಕೈಗೆ ಬರುವುದರೊಳಗಾಗಿ ಪೋಲೀಸಿನವರ ಸಪ್ಪುಳ ವಾಗಿ ಆಕೆ ಮನೆಯೊಳಗೆ ಹೊಕ್ಕು ಕದ ಮುಚ್ಚಿಕೊಂಡಳು; ತಾನು ಓಡಿದೆನೆಂದು ಹೇಳಿದ. ಇನ್ನೇನು ಝಡ್ತಿಯಿಂದ ಏನೂ ದೊರೆಯಲಿಲ್ಲ ವೆಂದು ಮಹಜರು ಬರೆಯಬೇಕು. ಬರೆಯುವುದಕ್ಕೆ ಮುನ್ನ ನಾನು ಒಂದು ಸಲ ಮನೆಯೊಳಕ್ಕೆ ಹೋಗಿ ನೋಡೋಣವೆಂದು ಒಳಗೆ ಹೋದೆ; ತಂದ್ರೆ ಪಟೇಲನೂ ಇನ್‌ಸ್ಪೆಕ್ಟರೂ ಜೊತೆಗೆ ಬಂದರು. ಒಂದು ಸಲ ಸುತ್ತಲೂ ನೋಡಿದೆ. ಏನೂ ವಿಶೇಷ ಕಾಣಲಿಲ್ಲ. ಇನ್ನೊಂದು ಸಲ ಅಡಿಗೆ ಒಲೆ, ಅದರ ಹತ್ತಿರ ಇದ್ದ ಬಚ್ಚಲು ಇವುಗಳ ಕಡೆ ನನ್ನ ದೃಷ್ಟಿ ಬಿತ್ತು. ಬಚ್ಚಲು ಚಿಕ್ಕದು. ಅದರಲ್ಲಿ ನೀರು ಕಟ್ಟಿಕೊಂಡು ನಾತವಿತ್ತು. ಕೆಸರಿನ ಮೇಲೆ ಕಲ್ಲಿನ ಬದಲು ಎರಡು ಮಾವಿನ ಹಲಗೆಗಳು ಹಾಸಿದ್ದವು. ಆ ಮಾವಿನ ಹಲಗೆಗಳು ಒಣಗಿ ಬೆಳ್ಳಗಿದ್ದವು. ಆದರೆ ಎರಡು ಹಲಗೆಯ ನಡುವಿನ ಸಂದಿನಲ್ಲಿ ಕೊಚ್ಚೆ ಮೇಲೆ ಹಾರಿ ಒಂದು ಹಲಗೆಯ ಅಂಚಿನ ಮೇಲೆ ಸಿಡಿದಿತ್ತು. ನಾನು ಅದನ್ನು ಪಟೇಲನಿಗೆ ತೋರಿಸಿ ಆ ಹಲಗೆ ಗಳನ್ನು ಎತ್ತಿ ಕೆಳಗಿನ ಬದಿಯನ್ನು ಶೋಧಿಸಿ ನೋಡೆಂದು ಹೇಳಿದೆ. ಶೋಧಿಸಬೇಕಾದ ಆವಶ್ಯಕತೆ ಏನೂ ಇರಲಿಲ್ಲ ಹಲಗೆ ಎತ್ತಿದ ಕೂಡಲೆ ಕೆದರಿದ ಕೊಚ್ಚೆ ಅದರಲ್ಲಿ ಮುಸಕು ಮುಸಕಾಗಿ ಮಿನುಗುತ್ತಿದ್ದ ಒಂದು ಚಿನ್ನದ ಗಟ್ಟಿ ಕಂಡುಬಂದುವು. ಆ ಚಿನ್ನದ ಗಟ್ಟಿ ಅಪ್ಪಾಜಿ ಹೇಳಿದ ಎರಡು ಗಟ್ಟಿಗಳ ಪೈಕಿ ಒಂದಾಗಿರಬೇಕು. ಕೂಡಲೆ ಮಹಜರಾಯಿತು. ಆ ಹೆಂಗಸು, ಆ ಗಟ್ಟಿಯನ್ನು ಪಟೇಲನೋ ಇನ್‌ಸ್ಪೆಕ್ಟರೋ ಹಾಕಿರ ಬೇಕು, ತಾನು ಯಾವುದೂ ಕಾಣೆನೆಂದು ಅತ್ತೂಕರೆದೂ ಆವುಟಾ ಮಾಡಿದಳು. ತೂಕಮಾಡಲಾಗಿ ಆ ಗಟ್ಟಿ ಎಂಟು ತೊಲೆ ಇತ್ತು.

ಅಷ್ಟು ಹೊತ್ತಿಗೆ ಚೆನ್ನಾಗಿ ಬೆಳಕು ಹರಿದಿತ್ತು. ಉಳಿದ ಒಡವೆಗಳು ಎಲ್ಲಿವೆ, ಅವುಗಳನ್ನು ಪಡೆಯುವುದು ಹೇಗೆ? ಎಂಬುದೇ ಮುಂದಿನ ಸಮಸ್ಯೆ. ಇದುವರೆಗೆ ಸಿಕ್ಕಿರುವ ಮಾಲುಗಳಲ್ಲಿ ಗುರ್ತಿಸಬಹುದಾದ್ದು ಪಟ್ಟೆಸೀರೆಯೊಂದೆ. ಉಳಿದ ಮಾಲುಗಳು, ಚಂದ್ರಮುರು, ಪದಕಗಳು, ಪೋಲೆ, ಜುಂಕಿ ಇವುಗಳೆಲ್ಲ ಗುರ್ತಿಸಬಹುದಾದ ವಸ್ತುಗಳು. ಹಣದ ಬೆಲೆಯಲ್ಲೂ ಹೆಚ್ಚಾದವುಗಳು. ಹಣದ ಬೆಲೆಗಿಂತಲೂ ಅಧಿಕವಾದ

ಕುಜವಾತ್ತು ಬೆಲೆಯುಳ್ಳವುಗಳು. ಲಿಂಗನ ಹೆಂಡತಿ– ಅವಳ ಹೆಸರು ನಂಜಮ್ಮನೆಂದು ಜ್ಞಾಪಕ— ಎಷ್ಟು ಪುಸಲಾಯಿಸಿ ಕೇಳಿದರೂ ತನಗೊಂದೂ ಗೊತ್ತಿಲ್ಲ; 'ಭಂಗಾರದ ಗಟ್ಟಿಯನ್ನು ತನ್ನ ಮನೆಯಲ್ಲಿ ಯಾರೋ ಗೌಡನೋ ಪೋಲೀಸಿನವರೋ ಹಾಕಿರಬೇಕು, ಅಥವಾ ಸುಬೇದಾರ್ರೇ ಯಾಕೆ ಹಾಕಿರಬಾರದು ?— ಹೀಗೆ ಹೇಳುವಳು. ಅವಳ ಜಾತಿಯವರ ಬಾಯಲ್ಲಿ ಹೇಳಿಸಿಯಾಯಿತು. ಅವಳ ಹಿತಚಿಂತಕರ ಮೂಲಕ ಬೋಧಿಸಿಯಾಯಿತು. ಊಹೂ, ಎಲ್ಲರಿಗೂ ಇದೇ ಉತ್ತರವೇ. ಪೋಲೀಸಿನವರು ಆಗ ಸಾಮಾನ್ಯವಾಗಿ ಮಾಡಿಕೆಯಲ್ಲಿದ್ದ ಮಂತ್ರಪ್ರಯೋಗ ಮಾಡಲು ಆತುರರಾಗಿದ್ದರು. ನಾನು ಒಪ್ಪಲಿಲ್ಲ.

ಹೀಗಿರುವಲ್ಲಿ ನನಗೆ ಮೊದಲೇ ಹತ್ತಬೇಕಾಗಿದ್ದ ಯೋಚನೆ ಥಟಕ್ಕೆಂದು ಹೊಳೆಯಿತಲ್ಲ. ಈ ಹೆಂಗಸು ರಾತ್ರಿ ಚಿನ್ನದ ಗಟ್ಟಿಯನ್ನು ಎಲ್ಲಿಂದ ತಂದಳು? ಅದನ್ನು ಪತ್ತೆಮಾಡುವುದು ಅವಳ ಹೇಳಿಕೆಯಿಲ್ಲದೆ ಸಾಧ್ಯವಿಲ್ಲವೆ? ರಾತ್ರಿ ಬಂದ ಮಳೆ ನೆಲವನ್ನು ಹೆಜ್ಜೆ ಹಿಡಿಯುವಷ್ಟು ಮೆದವು ಮಾಡಿದ್ದಿಯೇ ಹೊರತು ಗುರುತುಗಳನ್ನು ಅಳಿಸಿ ಕೊಚ್ಚಿಕೊಂಡು ಹೋಗುವಷ್ಟು ಜೋರಾಗಿ ಹುಯ್ದಿಲ್ಲ. ಆಕೆ ಸುಮಾರು ಅರ್ಧಘಂಟೆಯ ಕಾಲ ಮನೆಯಿಂದ ಗೈರುಹಾಜರಾಗಿದ್ದಳು. ಮಾಲಿದ್ದ ಸ್ಥಳ ಸುಮಾರು ಕಾಲು ಮೈಲಿ ಫಾಸಲೆಯಲ್ಲೇ ಇರಬೇಕು. ನೋಡೋಣವೆಂದು ನಾನು ಒಬ್ಬನೇ ಹೊರಟೆ. ನಂಜಮ್ಮ ಹೋದದಾರಿಯಲ್ಲೇ ಹಿಂದಿರುಗಿ ಬರಲಿಲ್ಲ ವೆಂದು ಹೇಳಿದೇನೆ. ಅವಳು ಹೋದ ದಾರಿಯಲ್ಲಿ ಸ್ವಲ್ಪ ದೂರ ಅವಳ ಹೆಜ್ಜೆಯನ್ನು ಗುರುತಿಸಿ ಅನುಸರಿಸಲಾಯಿತು. ಆಮೇಲೆ ಅವಳು ಜೋಳದ ಹೊಲಕ್ಕೆ ತಿರುಗಿದ್ದರಿಂದ ಹೆಜ್ಜೆ ಸಾಲು ಅಳಿಸಿಹೋಯಿತು. ಅಲ್ಲಿಗೆ ಅದನ್ನು ಬಿಟ್ಟು, ಅವಳು ವಾಪಸು ಬಂದ ಹೆಜ್ಜೆ ಸಾಲನ್ನು ಅನುಸರಿಸಿ ಹೋದೆ. ಅದು ಜನ ತಿರುಗಾಡದ ಓಣಿಯಾದ್ದರಿಂದ, ಸ್ಪಷ್ಟವಾಗಿ ಕಾಣುತ್ತಿತ್ತು. ಸುಮಾರು ಒಂದು ಫರ್ಲಾಂಗಿನಷ್ಟು ದೂರ ದಲ್ಲಿ ಆ ಹೆಜ್ಜೆ ಸಾಲು ಜೋಳದ ಹೊಲದಿಂದ ಹೊರಗೆ ಮೂಡಿದ್ದು ಕಂಡಿತು. ನಾನು ಅಲ್ಲಿಂದ ಹೊಲವನ್ನು ಹೊಕ್ಕು ಜೋಳದ ಕಡ್ಡಿ ಅತ್ತ ಇತ್ತ ಸ್ವಲ್ಪ ಬಾಗಿ ಬೈತಲೆಯಂತೆ ಕಾಣುತ್ತಿದ್ದ ಜಾಡನ್ನು ಹಿಡಿದು

ಹೋದೆ. ಹೊಲದಲ್ಲಿ ಒಳಗೆ ಒಂದು ಕಡೆ ಹೊಸದಾಗಿ ಕೆದರಿದ ಮಣ್ಣು ಕೆಂಪಗೆ ಕಂಡಿತು. ಅಲ್ಲಿ ಚೆನ್ನಾಗಿ ಗಮನಿಸಿ ನೋಡಲಾಗಿ ಅದೇ ಹೆಜ್ಜೆ ತುಳಿದ ಗುರುತು, ಸ್ವಲ್ಪ ದೂರದಲ್ಲೇ ಹೊಸದಾಗಿ ತೋಡಿ ಮುಚ್ಚಿದ ನಿಶಾನು, ತೋಡಲು ಉಪಯೋಗಿಸಿದ ದಶಿ ಸಹ ಕಂಡುಬಂದವು. ನಾನು ಅಲ್ಲೇ ನಿಂತು ಸ್ವಲ್ಪ ದೂರದಲ್ಲಿ ಮಗ್ಗುಲ ಹೊಲದಲ್ಲಿ ಕೆಲಸ ಮಾಡುತ್ತಿದ್ದ ರೈತನನ್ನು ಕೂಗಿ ಕರೆದು, ಪೋಲೀಸು ಇನ್‌ಸ್ಪೆಕ್ಟರನ್ನು ಬರಮಾಡಿಕೊಂಡು, ಪಟೇಲನನ್ನೂ, ಪಂಚಾಯಿತಿದಾರರನ್ನೂ, ನಂಜಮ್ಮನನ್ನೂ ಕರತರುವಂತೆಯೂ, ನಂಜಮ್ಮನ ಹೆಜ್ಜೆ ಗುರುತುಗಳ ಮೇಲೆ ತುಳಿದು ಅಳಿಸದಂತೆ ಕಾವಲಿಟ್ಟು ಹುಷಾರಾಗಿ ಬರಬೇಕೆಂತಲೂ ತಾಕೀದು ಮಾಡಿದೆ ಪಂಚಾಯಿತರ ರೂಬರೂಬು ನಂಜಮ್ಮನನ್ನು 'ಇದೇ ಜಾಗದಲ್ಲಲ್ಲವೇನಮ್ಮ ಒಡವೇ ಗಂಟಿಟ್ಟಿರೋದು?' ಎಂದು ಕೇಳಲಾಗಿ, ಅವಳಿಗೆ ಸುಳ್ಳು ಹೇಳುವುದಕ್ಕೂ ಕೂಡ ಬುದ್ಧಿ ತೋರದೆ—'ಹೌದು ಬುದ್ದಿ' ಅಂತ ಅಳತೊಡಗಿದಳು. "ಎಲ್ಲಾ ಹೇಳಿಬಿಡುತೀನಿ ಬುದ್ಧಿ, ನನ್ನ ಕಾಪಾಡಿ, ಪೋಲೀಸಿನವರ ಕೈಗೆ ಕೊಡಬೇಡಿ. ಕಳ್ಳನ ಹೆಂಡತಿ ಎಂದಿಗಿದ್ದರೂ ಮುಂಡೆ" ಎಂದು ನನ್ನ ಕಾಲುಗಳನ್ನು ಹಿಡಿದುಕೊಂಡಳು.

ಪಂಚಾಯಿತರ ಎದುರಿನಲ್ಲಿ ನಂಜಮ್ಮನೆ ಅಲ್ಲಿದ್ದ ದಶಿಯಿಂದಲೆ ನೆಲವನ್ನು ಕೆದಕಿ, ಸುಮಾರು ಅರ್ಧ ಅಡಿ ಕೆಳಗೆ ಮುಚ್ಚಿಟ್ಟಿದ್ದ ಬಹಳ ಮಣ್ಣು ಕೊಳೆಯಾದ ಒಂದು ಬಟ್ಟೆಯಲ್ಲಿ ಕಟ್ಟಿದ್ದ ಗಂಟನ್ನು ತೆಗೆದು ಕೊಟ್ಟಳು. ಅದರಲ್ಲಿ ಚಿನ್ನ, ವಜ್ರ, ಕೆಂಪು, ಇತರ ಬೆಲೆಬಾಳುವ ಕಲ್ಲುಗಳಿಂದ ಕಟ್ಟಿದ್ದ ಒಡವೆಗಳಿದ್ದವು. ಆ ಒಡವೆಗಳನ್ನು ತನ್ನಲ್ಲಿ ತನ್ನ ಗಂಡ ಲಿಂಗಯ್ಯ ನಿಕ್ಷೇಪಿಸಿದ್ದಾಗಿಯೂ, ತಾನು ಅದನ್ನು ಮನೆಯಲ್ಲಿಟ್ಟಿದ್ದರೆ ಅಪಾಯವೆಂದು ತಿಳಿದು ಹೊಲದಲ್ಲಿ ಹೂಳಿಟ್ಟಿದ್ದಾಗಿಯೂ ಹೇಳಿದಳು. ಪೂಜಾರಿ ಮಲ್ಲಯ್ಯನ ಕತೆಯೇನೆಂದು ಕೇಳಿದ್ದಕ್ಕೆ,

"ನನ್ನ ಯಜಮಾನ ನನಗೆ ಹೇಳಿದ್ದ. ಯಾವಾಗಲಾದರೂ ಖರ್ಚಿಗೆ ದುಡ್ಡು ಬೇಕಾದರೆ, ಏನಾದರೂ ಸಂದರ್ಭ ಬಿದ್ದರೆ ಪೂಜಾರಿ ಮಲ್ಲನ್ನ ಕಳಿಸುತ್ತೀನಿ—'ದಾಸೋಗ' ಅಂತ ಅವನು ಅಂದರೆ ದೊಡ್ಡ ಚಿನ್ನದ ಗಟ್ಟಿ ಕೊಡು, ಮನೇಲಿ ಮಾತ್ರ ಮಾಲು ಇಡಬೇಡ, ಮಾಲಿದೆ ಅಂತ

ತಿಳಿದರೆ ದ್ಯಾವರಸೇಗೌಡನ ಕಡೆಯವರು ಒಂದು ಗುಂಜಿ ತೂಕ ಬಿಡದೆ ಎಲ್ಲ ಸೂರೆಮಾಡುತ್ತಾರೆ— ಎಂದ.'' ಎಂದು ಹೇಳಿದಳು.

ಎಲ್ಲದಕ್ಕೂ ಕ್ರಮವಾಗಿ ಮಹಜರಾಯಿತು. ಅಷ್ಟುಹೊತ್ತಿಗೆ ನನ್ನ ಮತ್ತು ಇನ್‌ಸ್ಪೆಕ್ಟರ ಕುದುರೆಗಳೂ ಬಂದವು ನಾನು ಮಾಲನ್ನ ನನ್ನ ಸುಪರ್ದಿಗೆ ತೆಗೆದುಕೊಂಡು ಇನ್‌ಸ್ಪೆಕ್ಟರು ಸಹಿತ ಸಾಲಿಗ್ರಾಮಕ್ಕೆ ವಾಪಸು ಬಂದೆ. ಮಾಲನ್ನು ನಾನಿದ್ದ ಕೊಠಡಿಯಲ್ಲಿ ಮೇಜಿನಮೇಲಿಟ್ಟು ಅದನ್ನು ಒಂದು ವಸ್ತ್ರದಿಂದ ಮರೆಮಾಡಿ ತಂದ್ರೆಲಿಂಗನನ್ನು ಲಾಕಪ್ಪಿನಿಂದ ಕರೆಸಿದೆ. ಅವನು ಬಂದಾಗ ಇನ್‌ಸ್ಪೆಕ್ಟರೂ ನಾನೂ ಕೊಠಡಿಯಲ್ಲಿದ್ದೆವು. ಇನ್‌ಸ್ಪೆಕ್ಟರು,

''ಈಗಲಾದರೂ ಬಾಯಿಬಿಡೋ,—ಮಗನೆ, ಮಾಲು ಎಲ್ಲಿಟ್ಟಿದ್ದಿ? ನಿನಗೆ ಅದನ್ನ ಮನೆಯಿಂದ ತೆಗೆದುಕೊಟ್ಟವರು ಯಾರು, ಅಂತ'' ಎಂದರು.

''ನಿಮ್ಮ ಮೆದಡೆಲ್ಲಿ ಗಡ್ಡಕ್ಕಿಳದಿದೆ ಸಾಬರೆ ಎಷ್ಟು ಸಲ ಹೇಳಬೇಕು ನಾನು ಕಾಣೆ ಅಂತ.''

''ನೋಡೋ, ಮಾದರ್—'' ಎಂದು ಒಡವೆಗಳಮೇಲೆ ಮುಚ್ಚಿದ್ದ ವಸ್ತ್ರವನ್ನು ಸೆಳೆದು ಹಾಕಿದರು.

ಲಿಂಗ ಮಂಕು ಮುಚ್ಚಿದವನಂತೆ ಸ್ವಲ್ಪ ಹೊತ್ತು ಕಣ್ಣು ಬಾಯಿ ತೆರೆದುಕೊಂಡು ಸುಮ್ಮನಿದ್ದ. ಆಮೇಲೆ ''ಕೊಟ್ಟುಬಿಟ್ಟಳು ಮುಂಡೆ! ಇನ್ನು ಬರಕೊಳ್ಳಿ ಸ್ವಾಮಿ, ಹೇಳಿಬಿಡ್ತೀನಿ. ಕಿಟ್ಟಪ್ಪನವರ ನಂಟ ಗಂಗಾಧರಪ್ಪನಿಗೂ ನನಗೂ ಜೈಲಿನಲ್ಲಿದ್ದಾಗ ಗುರುತು. ಅವನು ಮದುವೆ ಮನೆಗೆ ಬಂದಿದ್ದ. ನಾನು ಹೊಳಿಗೆ ಬುತ್ತಿ ತಿನ್ನೋಕೆ ಹೋದಾಗ ನೀರಿಗಾಗಿ ಬಂದಿದ್ದ. 'ಏನಪ್ಪ ಬಂದಿದ್ದೀ' ಅಂದೆ. 'ಹೀಂಗ್ಲಿಂಗಪ್ಪ, ಮದುವೆ ಮನೆಗೆ ಬಂದಿದ್ದೆ. ಅವರು ನಮ್ಮ ಸ್ವಂತ. ಏನಾದರೂ ಕೆಲಸಗಿಲಸ ಇರುತ್ತಲ್ಲ. ಮಾಡಿಕೊಡೋಣ ಅಂತ ಬಂದೆ' ಅಂದ. 'ನಾನೂ ನಿನ್ನ ಸ್ವಂತ ಅಲ್ಲವ? ನನಗೂ ಏನಾದರೂ ಕೆಲಸ ಗಿಲಸ ಮಾಡಿಕೊಟ್ಟೆಯಾ' ಅಂದೆ. ಕಣ್ಣು ಮಿಟುಕಿಸಿ, ಮೊದಲು ಧರ್ಮ ಕರ್ಮ ಹಿಂಗೆ ಹಾರವರ ಮಾತದಲ್ಲ, ಅದನ್ನೆಲ್ಲಾ ಹೇಳಿ, ಆಮೇಲೆ, ''ಆಗಲಿ ಹಿತ್ತಲು ಒಬ್ಬೇತಾವ ಕಾದಿರು; ಏನಾದರೂ

ಸಿಕ್ಕರೆ ತಂದುಕೊಡ್ತೀನಿ; ಅರ್ಧ ನಿನಗೆ ಅರ್ಧ ನನಗೆ'' ಅಂದ. ತಂದು ಕೊಟ್ಟೆ. ಇನ್ನೆಲ್ಲಾ ನಿಮಗೇ ಗೊತ್ತಿದೆ,'' ಅಂದ.

ದೊರೆತ ಮಾಲುಗಳೆಲ್ಲ ಕಳವು ನಡೆದ ಕೂಡಲೆ ತಯಾರಿಸಿದ ಪಟ್ಟಿಯಲ್ಲಿ ಸೇರಿದವುಗಳಾಗಿದ್ದವು. ಆ ಪಟ್ಟಿಯಲ್ಲಿದ್ದ ಇತರ ಮಾಲುಗಳು ಮುಕ್ಕಾಲು ಮೂರು ವೀಸ ಪಾಲು ಚಿಕ್ಕನಾಯಕನಹಳ್ಳಿ ಅಪ್ಪಾಜಿ ಕರಗಿಸಿ ಗಟ್ಟಿ ಹುಯಿದ ತೂಕಕ್ಕೆ ತಾಳೆಬಂದವು. ಸುಮಾರು ೨೦೦–೩೦೦ ರೂಪಾಯಿನ ಒಡವೆಗಳು ಮಾತ್ರ ಪತ್ತೆ ಹತ್ತಲಿಲ್ಲ.

ಮಾಲುಗಳನ್ನೂ ಖೈದಿಯನ್ನೂ ಯಡತೊರೆಗೆ ತಗೆದುಕೊಂಡು ಬಂದೆವು. ದೇವರ ದಯದಿಂದ ದೊರಕಿದ ಮಾಲುಗಳನ್ನೂ, ನಿವಾರಣೆಯಾದ ಅಪವಾದ ನಷ್ಟಗಳನ್ನೂ, ನೋಡಿದ ಆ ಬ್ರಾಹ್ಮಣ ದಂಪತಿಗಳ ಸಂತೋಷವನ್ನು ನೆನೆದು ನನಗೆ ಈಗಲೂ ಕಣ್ಣು ತೇವವಾಗುತ್ತೆ. ಗಂಗಾಧರನ ಮೇಲೆ, ಹುಟ್ಟು ಕಳ್ಳ ತಂದ್ರೆಲಿಂಗನ ಮಾತು ಹೊರತು ರುಜುವಾತು ಯಾವುದೂ ಸಿಕ್ಕಲಿಲ್ಲ. ಅವನಿಗೆ ಹಿಂದೆ ಒಂದು ಸಲ ಕಳವಿಗಾಗಿ ಸಜವಾಗಿದ್ದ ದಾಖಲೆ ಇದ್ದರೂ ತದನಂತರ ಅವನು ಒಳ್ಳೆಯ ನಡತೆಯವನಾಗಿ ನಂಬಿಕಸ್ತನಾಗಿದ್ದಾನೆಂದು ಎಲ್ಲರೂ ಹೇಳಿದರು. ಅವನ ಮೇಲೆ ರುಜವಾತು ಏನೂ ಸಿಕ್ಕಲಿಲ್ಲ.

ಈ ಮೊಕದ್ದಮೆಯ ಮುಂದಿನ ಕತೆ ಸ್ವಲ್ಪ ವಿಚಿತ್ರವಾಗಿದೆ. ಮೊದಲು ಅದು ಸಬ್‌ಡಿವಿಜನ್ ಫಸ್ಟ್ ಕ್ಲಾಸ್ ಮೇಜಿಸ್ಟ್ರೇಟ್ (ಮೊದಲನೆಯ ದರ್ಜೆಯ ಕ್ರಿಮಿನಲ್ ಕೋರ್ಟಿನಲ್ಲಿ) ಅವರ ಮುಂದೆ ಹೂಡಲ್ಪಟ್ಟಿತು. ಆ ಕೋರ್ಟಿನಲ್ಲಿ ಯಾವ ಕಾರಣದಿಂದಲೋ — ಆ ಮ್ಯಾಜಿಸ್ಟ್ರೇಟರಿಗೇ ಗೊತ್ತು — ಅಪರಾಧಿಯ ತಪ್ಪು ಸಾಬೀತಾಗಲಿಲ್ಲವೆಂತಲೂ, ಆದರೆ ಮಾಲುಗಳೇನೋ ಕೃಷ್ಣಪ್ಪನವರ ಮನೆಯಲ್ಲಿ ಕಳುವಾದವುಗಳೆಂತಲೂ ತೀರ್ಮಾನವಾಯಿತು. ಖುಲಾಸೆಯಾದ ಅಪರಾಧಿ ಪರಾರಿಯಾಗುವುದರೊಳಗಾಗಿ, ಅವನು ತನಗೆ ವಿರೋಧವಾಗಿ ಸಾಕ್ಷ್ಯ ಕೊಟ್ಟವರ ಮೇಲೆ ಸೇಡು ತೀರಿಸಿಕೊಳ್ಳುವುದರೊಳಗಾಗಿ, ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರಲ್ಲಿ ಪುನರ್ವಿಮರ್ಶೆಗೆ ಅರ್ಜಿಹಾಕಿ, ವಾರೆಂಟು ಪಡೆದು ಅವನನ್ನು ದಸ್ತಗಿರಿ ಮಾಡಿ ಇನ್ನೊಂದು ಕೋರ್ಟಿನಲ್ಲಿ ಪುನರ್ವಿಚಾರಣೆಗೆ

ತಂದದ್ದಾಯಿತು. ಅದರಲ್ಲಿ ಅವನ ಮೇಲೆ ಛಾರ್ಜು (ಎಂದರೆ, ಇದು ವರೆಗಿನ ಸಾಕ್ಷ್ಯದ ಪ್ರಕಾರ ಅವನು ತಪ್ಪಿತಸ್ಥನೆಂದು ಹೇಳಬಹು ದಾಗಿದೆ. ಅವನ ಕಡೆಯವರು ಏನು ಹೇಳುತ್ತಾರೋ ಅದನ್ನೂ ಕೇಳಲಿಕ್ಕೆ ಸಾಕಾದಷ್ಟು ವಿಷಯವಿದೆ, ಎಂಬ ಅಭಿಪ್ರಾಯ) ಆಗಿ, ಅವನು ಹಿಂದೆ ಎರಡು ಮೂರು ಸಲ ಸಜ ಅನುಭವಿಸಿದ ಹಳೆಯ ಕಳ್ಳನಾದ್ದರಿಂದ ಮ್ಯಾಜಿಸ್ಟ್ರೇಟರ ಅಧಿಕಾರಕ್ಕೆ ಮೀರಿದ ಹೆಚ್ಚು ಶಿಕ್ಷೆಗೆ ಅರ್ಹನೆಂದು ಭಾವಿಸಿ ಕೇಸು ಸೆಷನ್ನಿಗೆ ವಿಚಾರಣೆಗೆ ಹಾಕಲ್ಪಟ್ಟಿತು. ಸೆಷನ್ ಜಡ್ಜಿ ಯವರಿಗೆ ಪೋಲೀಸು ಕೇಸುಗಳೆಂದರೆ ಬಹಳ ಅವನಂಬಿಕೆ. ನನ್ನನ್ನು ಎಲ್ಲ ಕೋರ್ಟುಗಳಲ್ಲೂ ದರ್ಯಾಫ್ತಿ ಮಾಡಿದರು. ಅಪರಾಧಿಯ ಪರ ಲಾಯರು ಸೆಷನ್ ಕೋರ್ಟಿನಲ್ಲಿ ನನ್ನನ್ನು,

"ನೀವು ಅಪರಾಧಿ ಕಳುವು ಮಾಡಿದ್ದನ್ನು ನೋಡಿದಿರ?" ಎಂದು ಕೇಳಿದರು. 'ಇಲ್ಲ'ವೆಂದೆ. "ಅಪರಾಧಿ ಮಾಲನ್ನು ತೆಗೆದುಕೊಟ್ಟನೆ," 'ಇಲ್ಲ'. "ಅವನ ಹೆಂಡತಿಯಲ್ಲವೆ ತೆಗೆದುಕೊಟ್ಟದ್ದು?" "ಈ ವಿಚಾರ ದಲ್ಲಿ ತಪಶೀಲಾಗಿ ನಾನು ಮೊದಲೇ ಹೇಳಿದ್ದೇನೆ; ಸಾಕ್ಷಿಗಳು ನುಡಿದಿ ದ್ದಾರೆ; ಒಂದೇ ಮಾತಿನಲ್ಲಿ ಜವಾಬು ಕೊಡಲಿಕ್ಕೆ ಆಗುವುದಿಲ್ಲ. ಆ ಕತೆಯನ್ನೆಲ್ಲಾ ಪುನಃ ಹೇಳಬೇಕೆ?" ಎಂದು ಕೋರ್ಟನ್ನು ಕೇಳಿದೆ, ಕೋರ್ಟಿನವರು "ಆ ಕತೆಯೆಲ್ಲ ನಿಮಗೆ ಏತಕ್ಕೆ? ಅವರ ಪ್ರಶ್ನೆಗೆ ಉಂಟೋ ಇಲ್ಲವೋ ಹೇಳಿಬಿಡಿ ಸಾಕು" ಎಂದು ಬಹು ದರ್ಪದಿಂದ ಅಪ್ಪಣೆಕೊಟ್ಟರು. ನಾನು "ಮೊಗುಂ ಆಗಿ ಉಂಟು ಎಂದಾಗಲಿ, ಇಲ್ಲವೆಂದಾಗಲಿ ಹೇಳಲಿಕ್ಕಾಗುವುದಿಲ್ಲ. ನಾನು ಹಿಂದೆ ಹೇಳಿರುವುದ ನ್ನೆಲ್ಲಾ ಜವಾಬೆಂದು ಭಾವಿಸಬೇಕು," ಎಂದು ಹೇಳಿದೆ. ಜಡ್ಜಿಯವರಿಗೆ ನನ್ನಮೇಲೆ ಅಸಮಾಧಾನವೆಂದು ಕಂಡುಬಂತು. ಮುಂದಿನ ಪ್ರಶ್ನೆ: "ಅಪರಾಧಿಯ ಹೆಂಡತಿಗೆ ಈ ಮಾಲುಗಳನ್ನು ಇನ್ಯಾರಾದರೂ ಯಾಕೆ ಕೊಟ್ಟಿರಬಾರದು?" ಆಗ ನಾನು ಕೋರ್ಟಿಗೆ ಕೇಳಿದೆ. "ಇದಕ್ಕೆ ಏನು ಜವಾಬು ಕೊಡಲಿ? ತಮ್ಮ ಅಪ್ಪಣೆಯಂತೆ ಉಂಟು ಅಥವ ಇಲ್ಲ ಎಂದು ಹೇಳುವುದು ಸಾಧ್ಯವೆ?" ಎಂದು ಕೇಳಿಕೊಂಡೆ. ಅವರು ನನ್ನ ಮೇಲಿದ್ದ ಕೋಪವನ್ನು ಲಾಯರ ಮೇಲೆ ತಿರುಗಿಸಿ "ಇಂಥ ಅವಿವೇಕವಾದ

(absurd) ಪ್ರಶ್ನೆಗಳನ್ನು ಕೇಳಿ ನಮ್ಮ ಕಾಲವನ್ನು ಯಾಕೆ ಕಳೆಯು ತ್ತೀರಿ?'' ಎಂದು ಗದರಿಸಿದರು.

ಆದರೂ ಪರಿಣಾಮದಲ್ಲಿ ಅಪರಾಧಿಯನ್ನು ಖುಲಾಸೆ ಮಾಡಿದ ರೆಂದು ಕೇಳಿದೆ. ಅಷ್ಟುಹೊತ್ತಿಗೆ ನನಗೆ ಬೇರೆ ತಾಲ್ಲೂಕಿಗೆ ವರ್ಗ ವಾಗಿತ್ತು. ಕೊನೆಗೆ ಸರ್ಕಾರದ ಅಪೀಲಿನ ಮೇಲೆ ಛೀಫ್ ಕೋರ್ಟಿನಲ್ಲಿ ಲಿಂಗನಿಗೆ ಐದು ವರ್ಷ ಸಜಾ ಆಯಿತೆಂದು ಕೇಳಿದೆ. ಮಾಲುಗಳೇನೋ ಕೃಷ್ಣಪ್ಪನವರಿಗೆ ಸಂದಾಯವಾಗಿ ಅದರ ಮೂಲಕ ಅವುಗಳ ಮಾಲೀಕರು ಗಳಿಗೆ ವಾಪಸು ತಲುಪಿದವು. ಇನ್‌ಸ್ಪೆಕ್ಟರಿಗೆ ಬಹಳ ಒಳ್ಳೆಯ ಹೆಸರು ಬಂತು. ನನಗೂ ಶಹಭಾಷ್‌ಗಿರಿ ಬಂತು. ಈ ಮೊಕದ್ದಮೆ ಪತ್ತೆಗಾಗಿ ಸಾರಲ್ಪಟ್ಟಿದ್ದ ನೂರು ರೂಪಾಯಿನ ಬಹುಮಾನವನ್ನು ಷೇಕ್ ಮೊಹದಿನ್‌ಗೂ ನಮ್ಮ ಸಂಗಡ ತಂದ್ರೆಗೆ ಬಂದಿದ್ದ ಇನ್ನೊಬ್ಬ ಕಾನ್ಸ್ಟೇಬಲ್‌ಗೂ ಹಂಚಿಸಿಕೊಟ್ಟೆ. ಪಟೇಲ ದೇವರಸೇಗೌಡ ನಮಗೆ ಮಾಡಿದ ಕುಮ್ಮಕ್ಕನ್ನು ಕುರಿತು ಡೆಪ್ಯುಟಿ ಕಮಿಷನರಿಗೂ, ಐ.ಜಿ.ಪಿ. ಯವರಿಗೂ ಬರೆದು ಅವನಿಗೆ ಬಹುಮಾನ ಪತ್ರಿಕೆಯನ್ನು ತರಿಸಿಕೊಟ್ಟೆ. ಷೇಕ್ ಮೊಹದಿನ್ ಶೀಘ್ರದಲ್ಲೇ ದಫೇದಾರ್ ಆದ.

## ೧೧

ನಾನು ಯಡತೊರೆ ತಾಲ್ಲೂಕಿನ ಛಾರ್ಜನ್ನು ತೆಗದುಕೊಂಡ ಒಂದೆರಡು ದಿನಗಳಲ್ಲೇ ಚುಂಚನಕಟ್ಟೆ ಜಾತ್ರೆಯ ಉಸ್ತುವಾರಿಗೆ ಹೋಗ ಬೇಕಾಯಿತೆಂಬುದನ್ನು ಮೊದಲೇ ಹೇಳಿದ್ದೇನಲ್ಲವೆ? ನಮ್ಮ ಡೆಪ್ಯುಟಿ ಕಮಿಷನರ್ ಸ್ಪಾರ್ಕ್ಸ್ ಸಾಹೇಬರ ಪರಿಚಯವನ್ನೂ ತಕ್ಕಮಟ್ಟಿಗೆ ಮಾಡಿಕೊಟ್ಟಿದ್ದೇನೆ. ಚುಂಚನಕಟ್ಟೆ ಜಾತ್ರೆಯಿಂದ ಕಸಬೆಗೆ ವಾಪಸು ಬಂದ ಮರುದಿನವೇ ನಮ್ಮ ಡೆಪ್ಯುಟಿ ಕಮಿಷನರ್ ಸ್ಪಾರ್ಕ್ಸ್ (Sparkes) ದೊರೆಗಳ ಪ್ರಥಮ ಭೇಟಿ ನನಗೆ ಲಭಿಸಿತು. ನಾನು ಯಡತೊರೆಗೆ ವಾಪಸು ಬಂದ ದಿನವೇ ಡೆಪ್ಯುಟಿ ಕಮಿಷನರ್‌ರವರ ಆಫೀಸಿನ ಇಬ್ಬರು ರೈಟರುಗಳು ಯಡತೊರೆಗೆ ತಲಪಿ ನಮ್ಮ ಕಚೇರಿಯವರನ್ನು ಸಂಪರ್ಕ ಮಾಡಿ, ಖಾಬರಿ ಪಡಿಸಿ, ನಾಳೆ ಸಾಯಂಕಾಲದ ಚಹದ ವೇಳೆಗೆ ಸಾಹೇಬರು ಬರುತ್ತಾರೆಂದು ತಿಳಿಸಿದ್ದರು. ನನ್ನನ್ನೂ ಕಂಡು ಸಾಹೇಬರ ಪ್ರತಾಪ, ಪ್ರಭಾವಗಳನ್ನು ವರ್ಣಿಸಿ 'ನೋಡಿ, Sir, ಸ್ವಲ್ಪ careful

ಆಗಿರಿ. ಕಾಂತರಾಜೇ ಅರಸಿನವರಿಗೆ ತಮ್ಮಲ್ಲಿ ಅಭಿಮಾನ; ಎಷ್ಟಾ ದರು ಅವರು ನಮ್ಮವರು. ಈ ಸಾಹೇಬರು ಬಹಳ ದುಡುಕು, ಯಾರನ್ನೂ 'care' ಮಾಡತಕ್ಕವರಲ್ಲ – 'ಡ್ಯಾಮ್, ಬ್ಲಡಿ' ಇಲ್ಲದೆ ಮಾತೇ ಇಲ್ಲ – ಆದರೆ ಹೃದಯ ಬಹಳ ಒಳ್ಳೆಯದು' ವಗೈರೆ ವಗೈರೆ.

ಮಾರನೆಯ ದಿನ ನಾನು ಮಾಮೂಲಿನಂತೆ ಮುನಿಸಿಪಲ್ ಕೆಲಸ ಗಳನ್ನು ನೋಡಲು ಸವಾರನಾಗಿ ಊರಗಸ್ತು ಪೂರೈಸಿ, ಕಚೇರಿಗೆ ಜಮಾಬಂದಿ ಲೆಕ್ಕಗಳ ಮೊಖಾಬಿಲಿಗೆ ಮಾಡಿದ್ದ ಏರ್ಪಾಡನ್ನು ನೋಡಲು ಬಂದೆ. ಆಗಿನ ತಾಲ್ಲೂಕು ಕಚೇರಿ ಮತ್ತು ಟ್ರಾವೆಲರ್ಸ್ ಬಂಗಲೆ ಎರಡೂ ಒಂದೇ ಆವರಣದಲ್ಲಿ ಹೊಳೆಯ ಅಂಚಿನಲ್ಲಿದ್ದವು. ರಾಜರಸ್ತೆಯಿಂದ ಎರಡು ಕಟ್ಟಡಗಳಿಗೂ ಒಂದೇ ದಾರಿ. ಟ್ರಾವೆಲರ್ಸ್ ಬಂಗಲೆಯಲ್ಲಿ ಸಾಹೇಬರ ಬಟ್ಲರು ಸಾಮಾನನ್ನು ಜೋಡಿಸುತ್ತಿದ್ದ. ನಾನು ಕಚೇರಿಯ ಹತ್ತಿರ ಕುದುರೆಯಿಂದ ಇಳಿದು ಯಾರ ಸಂಗಡಲೋ ಮಾತನಾಡುತ್ತಿರುವಷ್ಟರಲ್ಲಿ ಬೈಸಿಕಲ್ ಬೆಲ್ಲಿನ ಸದ್ದು ಕೇಳಿಸಿತು. ತಿರುಗಿ ನೋಡುವಲ್ಲಿ ಒಬ್ಬ ಯೂರೋಪಿಯನ್ ಸೈಕಲ್ ಮಾಡಿಕೊಂಡು ಬರುತ್ತಿದ್ದುದನ್ನು ಕಂಡೆ. ಬಿಸಿಲಿನಿಂದ ಅವನ ಮುಖ ಕೆಂಪಾಗಿ, ಅವನು ಏನೋ ಕೋಪಗೊಂಡಿರುವಂತೆ ಕಾಣುತ್ತಿತ್ತು. ನಾನಿರುವ ಹತ್ತಿರ ಬೈಸಿಕಲ್ಲಿನಿಂದ ಇಳಿದ. ನಾನು Good Morning ಎಂದೆ. ಆತನೇ ಡೆಪ್ಯುಟಿ ಕಮಿಷನರ್ ಇರಬಹುದೆಂಬ ಸಂಭವವೂ ಹೊಳೆ ಯಿತು. ಆದರೂ ಡೆಪ್ಯುಟಿ ಕಮಿಷನರ್ ಮಧ್ಯಾಹ್ನದ ಮೇಲೆ ಬರು ತ್ತಾರೆಂದು ಅವರ ಸಿಬ್ಬಂದಿ ಹೇಳಿದ್ದರಲ್ಲ!

'Good morning. Who are you?'

'ನಮಸ್ಕಾರ, ನೀವ್ಯಾರು?'

'I am the Amildar May I know if I am speaking to the Deputy Commissioner?'

'ನಾನು ಅಮಲ್ದಾರ, ನಾನು ಮಾತನಾಡುತ್ತಿರುವುದು ಡೆಪ್ಯುಟಿ ಕಮಿಷನರ್ ಸಂಗಡವೇ?'

'You jolly well are, damn you! what the hell do you think you are doing here? What sort of a bloody Amildar are you not to meet me at your taluk frontier?'

'ಹೌದಯ್ಯ ಹೌದು. ಡ್ಯಾಮ್ ಯು. ನೀನು ಇಲ್ಲಿ ಏನು ಮಾಡ್ತಾ ಇದ್ದೀ ಅಂತ ತಿಳಿದುಕೊಂಡಿದ್ದಿ? ಎಂಥ ಬ್ಲಡಿ ಅಮಲ್ದಾರನಯ್ಯ ನೀನು, ನಿನ್ನ ತಾಲ್ಲೂಕಿನ ಗಡಿಯ ಬಳಿ ಸ್ವಾಗತಿಸದವನು?

ಹೀಗೆ ಮಾತನಾಡುತ್ತಾ ಅವರ ಮಾತಿಗೆ ಅವರೇ ರೇಗುತ್ತಾ ನನ್ನ ಮೇಲೆ ಬೀಳುತ್ತಾರೆಯೋ ಎನ್ನುವ ಹಾಗೆ ಮುಂದುವರೆದು ಬಂದರು.

ನಾನು 'There is no need to swear at me. I did not know you were arriving so early Your clerks told me you would not be coming till evening" ಎಂದೆ.

'ನನ್ನನ್ನು ಕಂಡು ಆಣೆಗಳನ್ನಿಡುವ ಆವಶ್ಯಕತೆ ಯಿಲ್ಲ. ತಾವು ಇಷ್ಟು ಬೇಗ ಬರುತ್ತೀರಿ ಎಂದು ತಿಳಿದಿರಲಿಲ್ಲ ಸಾಯಂಕಾಲದ ವರೆಗೆ ಬರೋದಿಲ್ಲ ಎಂದು ನಿಮ್ಮ ಗುಮಾಸ್ತರು ಹೇಳಿದರು!'

ಸಾಹೇಬರು 'That is a damned lie' (ಅದು ಅಪ್ಪಟ ಶುದ್ಧ ಸುಳ್ಳು!) ಎಂದು ಹೇಳಿ ಬಂಗಲೆಯ ಒಳಕ್ಕೆ ಹೋದರು. ಅಷ್ಟುಹೊತ್ತಿಗೆ ಅವರ ರೈಟರುಗಳು, ಇನ್ನೂ ಇತರರು, ಅಲ್ಲಿ ಸೇರಿ, ಬಂಗಲೆಯ ಎದುರಿಗೆ ಒಂದು ಪರಿಸೆ ಸೇರಿತು. ನನಗೆ ಬಹಳ ಕೋಪ. ಕೋಪಕ್ಕಿಂತಲೂ ಅಸಹ್ಯ ಜ್ವರದಂತೆ ತಪಿಸುತ್ತಿತ್ತು. ನಾನು ನೌಕರಿಗೆ ಸೇರಿ ಒಂದು ವರ್ಷವಾಗಿತ್ತು. ಅದುವರೆಗೆ ಕಾಂತರಾಜೇ ಅರಸಿನವರು, ವೆಂಕಟವರದಯ್ಯಂಗಾರರು ಇಂಥ ದೊಡ್ಡ ಮನುಷ್ಯರ ಸಂಪರ್ಕವಿದ್ದಿತೇ ಹೊರತು ಈ ತರಹದ ಕಾಡು ವ್ಯಕ್ತಿಯದಲ್ಲ. ಇದು ಸಹಿಸಲಸಾಧ್ಯವಾದ ಅಪಮಾನ. ಒಂದು ವರ್ಷದ ಸರ್ವಿಸು ಹೋದರೆ ಹೋಗಲಿ— ನನ್ನ ಲಾಯರಿ ಕಸಬು ನನಗೆ ಇದ್ದೇ ಇದೆ. ಈ ಧೂರ್ತನಿಗೆ ಬುದ್ಧಿ ಕಲಿಸಿ ಆವಶ್ಯಕವಿದ್ದರೆ ಅತನಿಗೆ ನನ್ನ ಭುಜಬಲದ ಅನುಭವವನ್ನೂ ಕೊಟ್ಟು, ನಂತರ ದಿವಾನ ಸಾಹೇಬರಿಗೆ ನಡೆದ ವೃತ್ತಾಂತವನ್ನೂ ತಿಳಿಸಿ, ಕೆಲಸಕ್ಕೆ ರಾಜೀನಾಮೆ ಕೊಡೋಣವೆಂದು ನಿಶ್ಚಯಿಸಿದೆ. ನನ್ನ ಹೊಟ್ಟೆಯಲ್ಲಿ

ಕುದಿಯುತ್ತಿದ್ದ ಕೋಪವನ್ನು ಅಡಗಿಸಿಕೊಂಡು, ಅಲ್ಲಿ ನನ್ನ ಕರೆಯಂತೆ ಬಂದಿದ್ದ ಶಾನು ಭೋಗರುಗಳ ಲೆಕ್ಕವನ್ನು ತನಿಖೆ ಮಾಡುತ್ತಾ ಸಾಹೇಬರು ಈಚೆಗೆ ಬರುವುದನ್ನು ಕಾಯುತ್ತಿದ್ದೆ.

ಹೀಗಿರುವಲ್ಲಿ ಸಾಹೇಬರ ಒಬ್ಬ ರೈಟರು– failed M.A., ಶ್ರೀನಿವಾಸಮೂರ್ತಿಯೆಂದು ಜ್ಞಾಪಕ– ಬಂದು,

'The Sahab has had his tea. He wishes to know what you are doing' ಎಂದರು.

'ಸಾಹೇಬರ ಟೀ ಆಯಿತು. ನೀವು ಏನು ಮಾಡುತ್ತಿದ್ದೀರಿ ಎಂಬುದನ್ನು ತಿಳಿಯಲಪೇಕ್ಷಿಸುತ್ತಾರೆ.'

"You can see it for yourself. I am rather busy'.

'ನೀವೇ ನೋಡಬಹುದಲ್ಲ; ನಾನು ಕೆಲಸದಲ್ಲಿದ್ದೇನೆ.'

'Shall I tell him so?'

'ಅವರಿಗೆ ಹಾಗೇ ಹೇಳಲೇ?'

ಶ್ರೀನಿವಾಸಮೂರ್ತಿಗಳಿಗೆ ನನಗೆ ಆಗಲೇ ಆಗಿದ್ದ ಅನಿಷ್ಟ ಪೂಜೆ ಗೊತ್ತಿತ್ತು. ನಾನು ಸ್ವಲ್ಪ ಆತ್ಮಪ್ರತಿಷ್ಠೆ ಮನುಷ್ಯ; ಹುಜೂರು ಕಚೇರಿ ಗುಮಾಸ್ತರುಗಳ ಗೌರವವನ್ನು ತಿಳಿದವನಲ್ಲ; ನನ್ನನ್ನು ಇನ್ನೂ ಸ್ವಲ್ಪ ತಗ್ಗಿಸಿದರೂ ಒಳ್ಳೆಯದೇ ಎಂದು ಅಭಿಪ್ರಾಯ.

'Yes, unless you wish to give him incorrect information about me, as you did to me about him'

'ಬೇಷಕ್, ಹೇಳಿ ನೀವು ನನಗೆ ಅವರ ವಿಷಯ ಸುಳ್ಳುಸುದ್ದಿ ಕೊಟ್ಟಹಾಗೇ ಅವರಿಗೂ ಸುಳ್ಳು ಸಮಾಚಾರ ತಿಳಿಸುವ ಅಪೇಕ್ಷೆ ಇಲ್ಲದಿದ್ದರೆ ಹೇಳಿ!'

ಅಷ್ಟು ಹೊತ್ತಿಗೆ ಸಾಹೇಬರೇ ಅಲ್ಲಿಗೆ ಬಂದರು. ಎಲ್ಲರೂ ಎದ್ದು ನಿಂತೆವು. ನನ್ನ ಹತ್ತಿರಕ್ಕೆ ಬಂದರು.

"How long have you been Amildar here? You are too young to be an Amildar!'

'ಎಷ್ಟು ಕಾಲದಿಂದ ನೀನು ಇಲ್ಲಿ ಅಮಲ್ದಾರನಾಗಿದ್ದೀಯೆ? ಅಮಲ್ದಾರನಾಗುವುದಕ್ಕೆ ನೀನು ಇನ್ನೂ ಚಿಕ್ಕವನು.

ನಾನು ಅವರನ್ನು ದೃಷ್ಟಿಸಿ ನೋಡಿ,

"If you want me to answer your questions, you must express regret for what you said a little while ago. You swore at me for no reason at all, and called me a damned liar. I am a gentleman, and claim to be treated like one. I refuse to take any notice of you, unless you apologise"

'ತಮ್ಮ ಪ್ರಶ್ನೆಗಳಿಗೆ ನಾನು ಉತ್ತರ ಕೊಡಬೇಕೆಂದು ನಿಮ್ಮ ಇಷ್ಟವಿದ್ದರೆ, ತಾವು ಮುಂಚೆ ಹೇಳಿದ್ದಕ್ಕೆ ಕ್ಷಮಾಪಣೆ ಸೂಚಿಸಬೇಕು ಯಾವ ತಪ್ಪೂ ಇಲ್ಲದ ನನ್ನ ಮೇಲೆ ಏನೇನೋ ರೇಗಾಡಿದಿರಿ ನನ್ನನ್ನು ಸುಳ್ಳ ಎಂದು ಕರೆದಿರಿ. ನಾನು ಸಾಭ್ಯಸ್ಥ. ಹಾಗೇ ಕಾಣಬೇಕೆಂಬುದು ನನ್ನ ಹಕ್ಕು. ಕ್ಷಮಾಪಣೆ ಕೇಳಿಕೊಂಡ ಹೊರತು ತಮ್ಮನ್ನು ಗಣನೆಗೇ ತಂದುಕೊಳ್ಳುವುದಿಲ್ಲ.'

ಈಗ ಇವರು ನನ್ನ ಮೇಲೆ ಕೈಮಾಡುತ್ತಾರೆ – ಇವರಿಗೆ ಒಂದೆರಡು ಕುಸ್ತಿ ಕಮಾಲುಗಳನ್ನು ತೋರಿಸೋಣವೆಂದು ಸಿದ್ಧವಾಗಿ ದೃಢವಾಗಿ ಕಾಲೂರಿ ನಿಂತಿದ್ದೆ.

ಅವರ ಮುಖ ಕೆಂಪೇರಿತು. ನನ್ನನ್ನು ತಾಗುವಷ್ಟು ಸಮೀಪಕ್ಕೆ ಬಂದರು

"What is biting you now! Oh that? couldn't you see I was damn tired, my dear fellow? Funny sort of Amildar you, who want an apology from your Deputy Commissioner for a hasty word! That's what comes of College and University learning, I suppose! Well, I never! But since you want it, yes, I am sorry, I didn't mean it, not a word!"

'ಏನು ಚುಚ್ಚುತಾ ಇದೆ ನಿನಗೆ ಈಗ! ಓ, ಅದೋ? ಅಯ್ಯ ಮನುಷ್ಯ, ನಾನು ತುಂಬ ಆಯಾಸಗೊಂಡಿದ್ದೆ ಎನ್ನುವುದನ್ನು ನೋಡಲಿಲ್ಲವೇನಯ್ಯ! ಒಂದು ದುಡುಕಿನ ಪದಕ್ಕೆ ಡೆಪ್ಯುಟಿ ಕಮೀಷನರಿಂದ ಕ್ಷಮಾಪಣೆ ಕೇಳುವವನು ಎಂಥ ವಿಚಿತ್ರವಾದ ಅಮಲ್ದಾರನಯ್ಯ ನೀನು. ಅದು ಕಾಲೇಜಿನ ವಿಶ್ವವಿದ್ಯಾಲಯದ ಕಲ್ಕೆಯ ಪ್ರಭಾವಾಂತ

ಕಾಣಿಸುತ್ತೆ. ಸರಿ, ಚನ್ನಾಯಿತಪ್ಪ. ಆದರೆ ನಿನಗೆ ಬೇಕಾದ್ದರಿಂದ, ಹೂ! ತಪ್ಪಾಯಿತಪ್ಪ. ನಾನು ಅದರ ಒಂದು ಅರ್ಥವನ್ನೂ ಉದ್ದೇಶಿಸಿರಲಿಲ್ಲ' ಎಂದು ಕೈಚಾಚಿ ನನಗೆ 'Shake hand' ಕೊಟ್ಟರು. ಇದು ಎಷ್ಟು ಅನಿರೀಕ್ಷಿತವಾಗಿತ್ತೆಂದರೆ, ನನ್ನ ಕಣ್ಣಿನಲ್ಲಿ ಪಳಪಳನೆ ನೀರು ಬಂತು.

"Come on, don't be silly" ಎಂದು ನನ್ನ ಭುಜದ ಮೇಲೆ ಕೈ ಹಾಕಿಕೊಂಡು ಬಂಗಲೆಗೆ ಕರೆದುಕೊಂಡುಹೋಗಿ, ಅಲ್ಲಿ ಬಹಳ ಅಭಿಮಾನದಿಂದ ನನ್ನ ಪೂರ್ವ ಕಥೆ, ನಾನು ಚಾಕರಿ ಸೇರಿದ್ದು, "ಏಕೆ ಸೇರಿದೆ? ನನಗಿನ್ನೂ ಗೊತ್ತಾಗಲಿಲ್ಲ. ನಿನ್ನಂಥ ಹುಡುಗ ಅಮಲ್ದಾರಿ ಪಾಳಿನಲ್ಲಿ ಸಮಾಧಿಯಾಗುವುದುಂಟೆ"– ಹೀಗೆಂದು ಎಲ್ಲವನ್ನೂ ವಿಚಾರಿಸಿದರು, ನನ್ನ ಮೂಲ ವಿದ್ಯಾಭ್ಯಾಸ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಎಂದು ತಿಳಿದ ಮೇಲೆ

"ಓ ಹಾಗಾದರೆ, ನೀನು ಟೇಟ್ ಸಾಹೇಬರನ್ನು ಬಲ್ಲೆ?' ಎಂದರು.

ನಾನು 'ಅವರು ನನ್ನ ಗುರುಗಳು, ಈ ಲೋಕದಲ್ಲಿನಮ್ಮ ತಂದೆಯವರನ್ನು ಬಿಟ್ಟರೆ ಅವರಲ್ಲೇ ನಾನುಹೆಚ್ಚು ಋಣಿ' ಎಂದು ಹೇಳಿದೆ.

ನೋಡಿ, ನಾನು ಇನ್ನೂ ಹುಡುಗ, ಎಲ್ಲರೂ ಹೆದರುತ್ತಿದ್ದ ಈ ಒರಟು ಮನುಷ್ಯ ಇಷ್ಟು ಸರಳವಾಗಿ ನಿರ್ವ್ಯಾಜ ಮಮತೆಯಿಂದ ನನ್ನನ್ನು ಮಾತನಾಡಿಸುತ್ತಲೇ ನನ್ನ ಮನಸ್ಸು ಅವನದಾಯಿತು.

"ಓಹೋ, ಟೇಟ್ ಸಾಹೇಬರ ಶಿಷ್ಯನೋ? ಈಗಗೊತ್ತಾಯಿತು. Scotch ಕಬ್ಬಿಣದ ಸಲಾಕಿ ಪೆಡಸುತನ" ಎಂದು ನಗುತ್ತಾ ಹೇಳಿದರು.

Sparkes ಸಾಹೇಬರು 'lunch' (ಮಾಧ್ಯಾಹ್ನದ ಊಟ) ಮಾಡುತ್ತಿದ್ದರು; ನಾನು ಅವರ ಸಂಗಡ ಮಾತನಾಡುತ್ತ ಕುಳಿತಿದ್ದೆ. ಊಟ ತೀರಿಸಿಕೊಂಡು ಈಚೆಗೆ ಬಂದು

'ಬೆಳಗ್ಗಿನಿಂದ ಇಲ್ಲೇ ಇದ್ದೀರಲ್ಲ; ಇದು ಊಟದ ಖರ್ಚು ಉಳಿಸಿಕೊಳ್ಳುವ ಉಪಾಯ! ಯಾರ ಹತ್ತಿರ ಪಾಠ? ಮನೆಗೆ ಹೋಗಿ, ಸಾಯಂಕಾಲ ಐದು ಘಂಟೆಗೆ ಬನ್ನಿ. ಊರು ತಿರುಗಾಡಿಕೊಂಡು

ಬರೋಣ. ನಾಳಿನ 'ಪ್ರೋಗ್ರಾಮ'ನ್ನು ಗೊತ್ತು ಮಾಡೋಣ' ಎಂದರು.

ನಾನು ಈಚೆಗೆ ಬಂದ ಕೂಡಲೆ ಶ್ರೀನಿವಾಸಮೂರ್ತಿಗಳು, 'ಏನು ಸಾರ್, ಸಾಹೇಬರನ್ನು ಪಾಕೆಟ್ಟಿಗೆ ಹಾಕಿಬಿಟ್ಟಿರೊ?' ಅಂದರು.

'ಅವರು ದೊಡ್ಡವರು; ಅವರಿಂದ ಪಾಠ ಕಲಿತ ಮಾತಿನ ಸರಣಿಯನ್ನ ನಿಮಗೆ ಒಪ್ಪಿಸುತ್ತೇನೆ. Now don't be a bloody fool, but mind your own business' (ನೋಡು, ಈಗ ಬ್ಲಡಿ ಫೂಲ್ ಆಗಬೇಡ. ನಿನ್ನ ಕೆಲಸ ನೀನು ನೋಡು) ಎಂದು, ಆಫೀಸಿನಲ್ಲಿ ಮಧ್ಯಾಹ್ನದ ಕೆಲಸಕ್ಕೆ ಏರ್ಪಾಡು ಮಾಡಿ ಮನೆಗೆ ಹೋದೆ.

ಸಾಯಂಕಾಲ ಸಾಹೇಬರು– ತಮ್ಮ ಕುದುರೆ ಇನ್ನೂ ತಲಪಿಲ್ಲ. ಬೈಸಿಕಲ್ಲಿನ ಮೇಲೆ ಕುಳಿತು ಇನ್‌ಸ್ಪೆಕ್ಷನ್ ಹೋಗೋಣವೇ? ನಿನಗೆ ಬೈಸಿಕಲ್ಲಿನ ಮೇಲೆ ಕೂಡುವುದಕ್ಕೆ ಅದರಲ್ಲೂ ನಿದಾನವಾಗಿ ಬಿಡುವುದಕ್ಕೆ ಬರುತ್ತೆಯೇ? ಎಂದು ಕೇಳಿದರು. ಆಗಬಹುದೆಂದೆ. ನಮ್ಮ ಮೆರವಣಿಗೆ ಹೊರಟಿತು. ಪ್ರತಿಯೊಂದು ಬೀದಿಯೂ ಜನಗಳಿಂದ ತುಂಬಿ, ಮಹಡಿ, ಬೈಲು ಮಾಳಿಗೆಗಳ ಮೇಲೂ ಹೆಂಗಸರೂ ಮಕ್ಕಳು ಸಾಹೇಬರನ್ನು ನೋಡಲಿಕ್ಕಾಗಿ ನಿಂತಿದ್ದರು. ಆಗಿನ ಕಾಲದಲ್ಲಿ ತಾಲ್ಲೂಕು ಕಸಬೆ ಮತ್ತು ಗ್ರಾಮಗಳಲ್ಲಿ ಕೆಂಪು ಜನವೆಂದರೆ ಬಹಳ ಅಪೂರ್ವ. ಅವರ ವಿಚಾರದಲ್ಲಿ ವಿಚಿತ್ರವಾದ ಕಥೆಗಳು, ನಂಬಿಕೆಗಳು ಇದ್ದವು. ಇವರಿಗೆ ದೌಲತ್ತು ಬರುವುದಕ್ಕೆ ಕಾರಣ ಶ್ರೀರಾಮನ ವರ; ಇವರು ಕಿಷ್ಕಿಂಧೆಯ ವಾನರರ ವಂಶದವರು; ಇವರ ಮುಖದ ಬಣ್ಣ ನೋಡಿ; ಇವರು ಕೋಪ ಬಂದಾಗ ಮಾಡುವ ಚೇಷ್ಟೆಗಳನ್ನು ನೋಡಿ; ತೇಟು ಪರಂಗಿಯವನಿಗೆ ಒಂದು ಚೋಟುದ್ದ ವಂಶಪಾರಂಪರ್ಯವಾದ ಬಾಲದ ಮೊಟಕು ಇದ್ದೇ ಇರುತ್ತೆ. ಇನ್ನು ಕೆಲವರು ಪಂಡಿತರು, ಐತಿಹಾಸಿಕರು— ಈ ಇಂಗ್ಲಿಷಿನವರೆ ಅರ್ಜುನನ ಸಂಗಡ ಯುದ್ಧ ಮಾಡಿದ ನಿವಾತ ಕವಚರು; ಅವನು ಅವರ ಶೌರ್ಯಕ್ಕೆ ಮೆಚ್ಚಿ ಕೆಲವರನ್ನು ತನ್ನ ಪರಿವಾರಕ್ಕೆ ಸೇರಿಸಿಕೊಂಡು ಆಮೇಲೆ ಅವರನ್ನು ಗಾಂಧಾರ– ಅಫ್ಘಾನಿಸ್ತಾನ್–ನಲ್ಲಿ ನೆಲಸಿದ. ನೋಡಿ

ಆಫ್ಗನ್ನರಿಗೂ ಕೆಂಪುಮುಖ, ಬೆಕ್ಕುಕಣ್ಣು, ಕೆಂಚು ಕೂದಲು – ಎಂದು ಹೇಳುವರು. ಅದೂ ಅಲ್ಲದೆ ಈ ಕೆಂಪು ಮನುಷ್ಯ ಡೆಪ್ಯುಟಿ ಕಮಿಷನರ್ ಬೇರೆ. ಆಗ ಬೈಸಿಕಲ್ಲುಗಳು ಈಗ ಏರೋಪ್ಲೇನಿನಷ್ಟು ಅಪೂರ್ವ ದರ್ಶನದ ವಸ್ತು. ರಾಜಬೀದಿಯಲ್ಲಿ ಹೋಗುತ್ತಿದ್ದಾಗ ಅಕಸ್ಮಾತ್ತಾಗಿ ಸಾಹೇಬರು ಎಂದೂ ನೋಡಿರಲಾರದಂಥ ಒಂದು ದೃಶ್ಯ ಎದುರಿಗೆ ಬಂತು. ಅದನ್ನು ನಾನು ಅವರಿಗೆ ತೋರಿಸಬೇಕೆಂದು ಏರ್ಪಾಡು ಮಾಡಿದವನಲ್ಲ. ಆದರೂ ಅದು ವಿನೋದವಾದ ಕಥೆ. ಅದರ ಪರಿಣಾಮವೂ ಒಳ್ಳೆಯದೇ ಆಯಿತಾದ್ದರಿಂದ ಹೇಳುತ್ತೇನೆ.

ಆಗಿನ ಎಡತೊರೆಯಲ್ಲಿ ಕತ್ತೆಗಳ ಅವಾಂತರ ಬಹಳ. ಅವುಗಳ ಪ್ರಣಯ ಕಲಹ, ಪ್ರಹಸನ, ಭೋಜನ, ಲೋಲಾಪ್ತಿ, ಮಂತ್ರಾಲೋಚನೆ, ಮೊದಲಾದ ವ್ಯವಹಾರಗಳೆಲ್ಲ ಅಹೋರಾತ್ರಿ ಪ್ರತಿಬೀದಿಯಲ್ಲೂ, ಪಾಳು ನಿವೇಶನಗಳಲ್ಲೂ ನಡೆಯುತ್ತಿರುವುದು ವಾಡಿಕೆ. ಕಚೇರಿ 'Traveller's Bungalow' ಸುತ್ತಲ ಮೈದಾನದಲ್ಲಿ ಈ ನಾಗಾಲಿಗಳ ಹಾವಳಿಯೋ ಹಾವಳಿ. ಕಚೇರಿಯಲ್ಲಿ ದ್ವಿಪಾದಗಳ ಸಭೆಯೂ ಆವರಣದಲ್ಲಿ ಚತುಷ್ಪಾದಗಳ ಪರಿಷದೂ ಏಕಕಾಲದಲ್ಲಿ ಸಂಭವಿಸುವುದೂ ಉಂಟು.

ಕತ್ತೆಗಳ ಅವಾಂತರದಿಂದ ಹೊಳೆಕರೆಯಲ್ಲಿ ತರಕಾರಿ ವಗೈರೆಗಳನ್ನು ಬೆಳೆಯುವುದಕ್ಕೂ ಆಗುತ್ತಿರಲಿಲ್ಲವೆಂದು ಕಾಣುತ್ತದೆ. ಈ ಕತ್ತೆಗಳನ್ನು ದೊಡ್ಡಿಗೆ ಕೂಡಿದ್ದರಿಂದ ಪ್ರಯೋಜನವೇನೂ ಇಲ್ಲ. ಯಾರೂ ಬಿಡಿಸಿಕೊಳ್ಳುವುದಕ್ಕೆ ವಾರಸುದಾರರಾಗಿ ಬರುವವರಿಲ್ಲ. ಹರಾಜು ಹಾಕಿದರೆ ಕೊಂಡುಕೊಳ್ಳುವವರಂತೂ ಇಲ್ಲವೇ ಇಲ್ಲ. ಹೀಗೆ ಇರುವಲ್ಲಿ, ನನಗೆ ಈ ಸಮಸ್ಯೆಯ ಪರಿಹಾರ ಏಕಾಏಕಿ ಹೊಳೆಯಿತು. ಮ್ಯುನಿಸಿಪಾಲಿಟಿಗೆ ಬೇಕಾಗುವ ಸಾಮಗ್ರಿಗಳ ಕ್ಯಾಟಲಾಗ್- (catalogue- ಕ್ರಯಪಟ್ಟಿ) T. A. Ponnu & Co., ದು ಎಂದು ಜ್ಞಾಪಕ- ನೋಡುತ್ತಿರುವಲ್ಲಿ ಗ್ರಾಮದ ಕಸ, ಕಚಡ ಮೊದಲಾದವುಗಳನ್ನೂ ಸಾಗಿಸುವುದಕ್ಕಾಗಿ ನಿರ್ಮಾಣವಾದ ಎರಡು ಚಕ್ರದ ಹಗುರವಾದ ಗಾಡಿಗಳ ಚಿತ್ರ ಮತ್ತು ವರ್ಣನೆ ಕಣ್ಣಿಗೆ ಬಿದ್ದವು. ನನಗೆ ತೋರಿತಲ್ಲ– ಈ

ಗಾಡಿಗಳಿಗೆ ಕತ್ತೆಗಳನ್ನೂ ಕಟ್ಟುವ ಏರ್ಪಾಡು ಮಾಡಿದರೆ, ಇದೊಂದು ಹೊಸ ವಿಧಾನ; ನಮ್ಮ ಕೆಲಸವೂ ಆಗುತ್ತದೆ; ಈಗ ನಮ್ಮದಲ್ಲ ತಮ್ಮದಲ್ಲವೆಂದು ಮರೆಮಾಚಿಕೊಳ್ಳುತ್ತಿರುವ ಕತ್ತೆಗಳ ಮಾಲೀಕರು ಮುಂದೆ ಬರಬೇಕಾಗುತ್ತದೆ. ಈ ಕತ್ತೆಗಳಿಂದ ದುಡಿಸಿಕೊಂಡರೆ, ಅವುಗಳಿಗೆ ಸರಿಯಾದ ರಾತೀಬು ಹಾಕಿ ಅವುಗಳನ್ನು ಚೆನ್ನಾಗಿ ಪೋಷಿಸಲೂ ಬಹುದು-ಎಂದು. ಹಾಗೇ ಮಾಡಿದೆ. ಕತ್ತೆಗಳ ಪೈಕಿ ಲಕ್ಷಣವಾಗಿ ಗಟ್ಟಿಮುಟ್ಟಾಗಿದ್ದ ೮-೧೦ ಕತ್ತೆಗಳನ್ನೂ ದೊಡ್ಡಿಗೆ ಕೂಡಿ ಹರಾಜು ಹಾಕಿಸಲಾಗಿ ಮಾಮೂಲಿನಂತೆ ಯಾರೂ ಕೇಳಲಿಲ್ಲ. ಮ್ಯುನಿಸಿಪಾಲಿಟಿಯಿಂದ ಸವಾಲು ಮಾಡಿಸಿ ಕೊಂಡುಕೊಂಡೆ. ಅವುಗಳಿಗೆ ಒಳ್ಳೆಯ ತೊಗಲಿನಿಂದ ನೂಲುಹಗ್ಗದಿಂದ 'harness', ಲಗಾಮು, ಎಲ್ಲಾ ಮಾಡಿಸಿ ಗಾಡಿಗೆ ತರಪೇತು ಮಾಡಿಸಿದೆ. ಅವುಗಳ ರೂಪು ಅವಸ್ಥೆಗಳೇ ಪರಿವರ್ತನೆಯಾದವು. ಆ ಕತ್ತೆಗಳಿಗೂ, ಉಳಿದ ಕತ್ತೆಗಳಿಗೂ, ಪೋಲೀಸು ಚಾಕರಿಗೆ ಸೇರಿ ಯೂನಿಫಾರಂ ಹಾಕಿದ ಮನುಷ್ಯನಿಗೂ, ಸಾಮಾನ್ಯವಾದ ಬೀದಿಹೋಕನಿಗೂ ಇರುವಷ್ಟು ವ್ಯತ್ಯಾಸ ಕಾಣುತ್ತಿತ್ತು. ಈ ಏರ್ಪಾಡೂ ಚನ್ನಾಗಿ ನಡೆಯಿತು. ಬೇವಾರ್ಸಿ ಕಡಮೆಯಾಯಿತು. ನಾಲ್ಕು ಗಾರ್ದಭ ರಥಗಳನ್ನು ಏರ್ಪಡಿಸಿದೆವು. ಇವು ಚೆನ್ನಾಗಿ ಕೆಲಸ ಮಾಡುತ್ತಿದ್ದವು. ನಾವು ಅವೊತ್ತು ಸಾಯಂಕಾಲ ಗ್ರಾಮ ಅಜಮಾಯಿಷಿಗೆ ಹೊರಟಾಗ ಇವುಗಳ ಪೈಕಿ ಎರಡು ಗಾಡಿಗಳು ಕಚಡ ಭರ್ತಿಯಾಗಿ ಎದುರಿನಲ್ಲಿ ಬರುತ್ತಿದ್ದುವು.

ಸ್ಪಾರ್ಕ್ಸ್ ಸಾಹೇಬರು ಇವುಗಳನ್ನು ನೋಡಿ, ವಿಸ್ಮಯಪಟ್ಟರು. ಈ ಕಥೆಯನ್ನು ಕೇಳಿದರು. ಇದರಲ್ಲಿನ ಯಾವುದೋ ಅಂಶ ಅವರ ಹಾಸ್ಯದ ರಸಿಕತೆಗೆ ಹ್ಯಾಗೋ ಗಾಢವಾಗಿ ತಟ್ಟಿತೆಂದು ಕಾಣುತ್ತದೆ. "Splendid, splendid" ಎಂದು ಎರಡು ಕೈಯಿಂದಲೂ ಪಕ್ಕೆಯನ್ನು ಹಿಡಿದುಕೊಂಡು ಗಟ್ಟಿಯಾಗಿ ನಕ್ಕರು.

ಊರಿನಲ್ಲಿ ಶ್ರೀ ಅರ್ಕೇಶ್ವರ ಸ್ವಾಮಿ ದೇವಸ್ಥಾನದ ಮುಂಭಾಗದಲ್ಲಿ, ಆ ಆವರಣದಲ್ಲೂ ಅಗ್ರಹಾರದಲ್ಲೂ ವಾಸವಾಗಿದ್ದ ವೈದಿಕ ಮಂಡಲಿಯವರು ಫಲಮಂತ್ರಾಕ್ಷತೆಗಳನ್ನು ತಂದು ಒಪ್ಪಿಸಿದರು.

ಹಿಂದೂಗಳಲ್ಲದಿದ್ದ ಅಧಿಕಾರಿಗಳಿಗಾಗಲೀ ರಾಜ ಅತಿಥಿಗಳಿಗಾಗಲೀ ಮರ್ಯಾದೆ ಮಾಡಬೇಕಾದರೆ ವೇದಘೋಷವಿಲ್ಲ; ಪುರಾಣದ್ದೋ ಕಾವ್ಯದ್ದೋ ಆಶೀರ್ವಚನವನ್ನು ಮಾತ್ರ ಹೇಳಿ ಫಲಪುಷ್ಪ ಮಂತ್ರಾಕ್ಷತೆಗಳನ್ನು ಕೊಡುತ್ತಿದ್ದರು.

ಸಾಹೇಬರು ಒಪ್ಪಿಸಿದ ಮರ್ಯಾದೆಯನ್ನು ಆದರದಿಂದ ಸ್ವೀಕರಿಸಿ ಎಲ್ಲರ ಕಡೆಯೂ ಹಸನ್ಮುಖರಾಗಿ ತಿರುಗಿ 'ನೀನು ಚನ್ನಾಗಿದ್ದೀಯಾ? ಸಂತೋಷ ಸಂತೋಷ' ಎಂದು ಮಾತನಾಡುತ್ತಿದ್ದರು. ಆಗ ಅಲ್ಲಿದ್ದ ಹಿರಿಯರೊಬ್ಬರು ಕೈಮುಗಿಯುತ್ತಾ ಹಲ್ಲುಗಳು ಕಾಣುವ ರೀತಿ ಸ್ವಾಗತ ನಗು ನಗುತ್ತಾ, ಮಾತುಮಾತಿಗೂ ಈ ಈಕಡೆ ಆಕಡೆ ತಲೆಯನ್ನು ತೂಗುತ್ತಾ – ಪಾಪ, ನಮ್ಮವರು ತಮ್ಮ ಒಳ್ಳೆಯತನದಲ್ಲಿ, ಅದರಲ್ಲೂ ಬಡವರೂ ಆಗಿದ್ದರೆ – ಹೀಗೆ ಮಾಡುವುದುಂಟು.

'ಸಾಹೇಬರು ಕುಶಲವೇ? ಬೆಳಗ್ಗೆ ಬಿಸಲಿನಲ್ಲಿ ಸವಾರಿ ಬಂತು ಎಂದು ಕೇಳಿದೆ. ಆಳುವ ಮಹಾಶಯರು ಆರೋಗ್ಯವನ್ನು ಚೆನ್ನಾಗಿ ನೋಡಿಕೊಳ್ಳಬೇಕು. ನಮ್ಮ ಹಿಂದಿನ ದೊರೆಗಳ ವಿಚಾರದಲ್ಲಿ ಕಾಳಿದಾಸ ಹೇಳುತ್ತಾನೆ 'ಜುಗೋಪಾತ್ಮಾನ ಮತ್ರಸ್ತಃ'—'

ಇದೆಲ್ಲಾ ಸಾಹೇಬರಿಗೆ ಕೇವಲ ಗಂಗಾಘೋಷವೇ. ಮುಖದ ಆಕಾರಭಾವಗಳ ವಿಕಾರಗಳು ಮಾತ್ರ ಗೊತ್ತಾದವು, ರುಚಿಸಲಿಲ್ಲ. ಅವರು ನನ್ನಕಡೆ ತಿರುಗಿ,

"Look at the b-, how he grins! One would think he was having fits! What is it he is trying to get off his chest now?"

'ಆ ಬ್ರಾಹ್ಮಣನನ್ನು ನೋಡು ಹೇಗೆ ಹಲ್ಕಿರೀತಾನೆ; ಅವನಿಗೆ ಮೂರ್ಛೆರೋಗ ಬರ್‍ತಾ ಇದೆಯೋ ಅನ್ನುವ ಹಾಗೆ ಆಡುತ್ತಾನೆ. ಅವನು ಎದೆಯಿಂದ ಈಚೆಗೆ ಕಿತ್ತುಹಾಕಲು ಪ್ರಯತ್ನಿಸುತ್ತಿರುವುದೇನನ್ನೊ?'

ನಾನು ಹೇಳುವುದರೊಳಗಾಗಿ ಶಾಸ್ತ್ರಿಗಳು,

"ಸಾಹೇಬರು ಏನು ಅಪ್ಪಣೆ ಕೊಡಿಸುತ್ತಾರೆ?" ಎಂದು ನನ್ನ ಕಡೆ ಬಾಗಿದರು.

ನನಗೆ ಶಾಸ್ತ್ರಿಗಳ ನಡತೆಗಿಂತ ಸಾಹೇಬರ ಟಿಪ್ಪಣಿ ಅಸಹ್ಯವಾಗಿತ್ತು. ನಾನು "ನಾವು ಸುಖವಾಗಿದ್ದೇವೆ ನೀವೆಲ್ಲರೂ ಸುಕ್ಷೇಮವೇ? ಇದು ಬಹಳ ಸುಂದರವಾದ ಊರು" ಎಂದು ಸಾಹೇಬರು ಹೇಳುತ್ತಾರೆ ಎಂದೆ.

ಸಾಹೇಬರು ನನ್ನ ಕಿವಿಯಲ್ಲಿ,

'What is that now?' ಎಂದರು.

'ಈಗ ಮತ್ತೆ ಅದೇನು?'

'He made a civil enquiry about your health, and I gave him the conventional reply' (ಅವರು ತಮ್ಮ ಕ್ಷೇಮಸಮಾಚಾರವನ್ನು ವಿಚಾರಿಸಿದರು. ನಾನು ಸಂಪ್ರದಾಯದ ಉತ್ತರವನ್ನು ಕೊಟ್ಟೆ) ಎಂದೆ

"I thought you were translating what I said.' (ನಾನ್ಹೇಳಿದ್ದನ್ನು ಅನುವಾದಿಸುತ್ತಿದ್ದೀಯೆ ಎಂದುಕೊಂಡೆ) ಎಂದು ಸೊಟ್ಟನಗೆಯಿಂದ ಅಂದರು. 'Not very literally' (ಅಕ್ಷರಶಃ ಅಲ್ಲ) ಎಂದೆ, ನಕ್ಕು.

'You are a sensible young fellow but don't ask me for a translator's job'

'ನೀನು ಜಾಣನಪ್ಪ, ಆದರೆ ಭಾಷಾಂತಕಾರನ ಕೆಲಸ ಮಾತ್ರ ಕೇಳಬೇಡ' ಎಂದರು.

ಮಾರನೆಯ ದಿವಸ ಸವಾರೀ ಮಾಡಿಕೊಂಡು ತಾಲ್ಲೂಕಿನ ಅನೇಕ ಮುಖ್ಯ ಗ್ರಾಮಗಳನ್ನೂ ನೋಡಿದೆವು. ಕುದುರೆಯ ಭಯಕ್ಕೆ ನಾನು ಹರಳೆಣ್ಣೆ ಕುಡಿಯುವನಲ್ಲವೆಂದು ಸಾಹೇಬರಿಗೆ ಚೆನ್ನಾಗಿ ಗೊತ್ತಾಯಿತು ಸಾಯಂಕಾಲದನಂತರ ಬಂಗಲೆಯ ಮುಂದೆ ಕುಳಿತು ವಿರಾಮವಾಗಿ ಮಾತನಾಡುವಾಗ, ನಾನು ಕ್ರಿಕೆಟ್ಟು, ಫುಟ್‌ಬಾಲ್, ಇವುಗಳನ್ನು ನನ್ನ ಕಾಲೇಜ ಪ್ರತಿನಿಧಿಯಾಗಿ ಆಡಿದ್ದೇನೆಂತಲೂ,

ಟೆನ್ನಿಸನ್ನೂ ಸುಮಾರಾಗಿ ಆಡಬಲ್ಲೆ; ಒಂದೆರಡು ಕಿರುಬಗಳನ್ನೂ ಶಿಕಾರಿ ಸಹ ಮಾಡಿದ್ದೇನೆಂತಲೂ, ಸಾಹೇಬರಿಗೆ ಹರಟೆಯ ಸರಣಿಯಲ್ಲೋ, ಅಥವಾ ನನ್ನ ಹುಡುಗತನದ ಡಂಭದಿಂದಲೋ ತಿಳಿಯಿತು. ಅವರಿಗೆ ನನ್ನಲ್ಲಿ ಬಹಳ ಒಳ್ಳೆಯ ಅಭಿಪ್ರಾಯ ನೆಲೆಗೊಂಡಿತು.

ಆದಕ್ಕೆ ಮುಂದಿನ ದಿನ ಅವರು ನನ್ನ ತಾಲ್ಲೂಕಿನಿಂದ ಸಾಗಿ ಹೋಗುವಾಗ ತಾಲ್ಲೂಕಿನ ಗಡಿ ಬಳಿ 'I am charmed with you and wish you all the best. I sometimes do speak to the Maharaja Saheb you know – and be sure I shall remember you'

'ನಿನ್ನನ್ನು ಕಂಡು ಮಾರುಹೋದೆ. ನಿನಗೆ ಎಲ್ಲ ಒಳ್ಳೆಯದನ್ನು ಬಯಸುತ್ತೇನೆ. ನಿನಗೆ ಗೊತ್ತಿರಬಹುದು. ನಾನು ಆಗಾಗ ಮಹಾರಾಜರನ್ನು ಕಂಡು ಮಾತಾಡುತ್ತಿರುವುದು. ಆಗ ಖಂಡಿತವಾಗಿಯೂ ನಿನ್ನನ್ನು ಮರೆಯುವುದಿಲ್ಲ'

"Thank you sir, ಆದರೆ ನಾನು ಇಲವಾಲ ರೆಸಿಡೆನ್ಸಿಯಲ್ಲಿ ಕಿರಬಹೊಡೆದದ್ದನ್ನು ಮಾತ್ರ ಹೇಳಬೇಡಿ. ಅದು ಅವರ ಖಾಸಾಕ್ಷೇತ್ರ. ಅಕಸ್ಮಾತ್ತಾಗಿ ಆಜ್ಞೆ ಇಲ್ಲದೆ ಹೊಡೆದೆ' ಎಂದೆ. ನಕ್ಕರು :

'Quite all right. We shall say it died of "other causes". But now let us be serious for a moment, You have got a difficult taluk — turbulent people, dishonest village servants, heavy arrears, and that sort of a thing you know. Do your best. I believe you, and will back you up. I will also speak to your S.D.O. Devaraj to give you all the support he can, and not to meddle with you. I should like to see you an Assistant Commissioner soon, working with me–Ta, ta, Mention meto Tait when you write to him'

'ಸರಿಯೋ, ಅದು 'ಇತರ ಕಾರಣಗಳಿಂದ' ಸತ್ತಿತುಎಂದು ಹೇಳೋಣ. ಕೆಲವು ನಿಮಿಷ ಸ್ವಲ್ಪ ಸೀರಿಯಸ್ ಆಗಿ ಮಾತನಾಡೋಣ. ನಿಮಗೆ ತೊಂದರೆ ತಾಲ್ಲೂಕು ಸಿಕ್ಕಿದೆ. ಬಿರುಸಾದ ಜನ, ಅಯೋಗ್ಯ

ಗ್ರಾಮ ಸೇವಕರು, ಹೆಚ್ಚಿನ ಬಾಕಿ, ಅಂಥ ವಿಚಾರಗಳು ಅನ್ನು. ನಿನ್ನ ಶಕ್ತಿಯನ್ನೆಲ್ಲಾ ತೋರಿಸು. ನಿನ್ನಲ್ಲಿ ನಂಬಿಕೆ ಇದೆ ನನಗೆ. ನಿನಗೆ ಬೆಂಬಲ ಕೊಡುತ್ತೇನೆ ನಿನ್ನ S. D. O.ಗೆ ನಿನಗೆ ತಮ್ಮ ಕೈಲಾದ ಎಲ್ಲ ರೀತಿಯ ಕುಮ್ಮಕ್ಕು ಕೊಡುವಂತೆಯೂ ನಿನ್ನ ವ್ಯವಹಾರದಲ್ಲಿ ಕೈಹಾಕದಂತೆಯೂ ಹೇಳುತ್ತೇನೆ. ನೀನು ಅಸಿಸ್ಟೆಂಟ್ ಕಮಿಷನರ್ ಆಗಿ ನನ್ನ ಜೊತೆಯಲ್ಲಿ ಕೆಲಸ ಮಾಡುತ್ತಿರುವುದನ್ನು ನೋಡಬೇಕೆಂದು ಆಸೆಯಿದೆ. ಟ ಟ ಟಾ - ನೀನು ಟೇಟ್‌ರವರಿಗೆ ಕಾಗದ ಬರೆಯುವಾಗ ನನ್ನ ವಿಷಯ ತಿಳಿಸಿ '

ಕೈ ಚಾಚಿ ನನ್ನ ಕೈಯನ್ನು ಹಿಸುಕಿ, ಕುದುರೆಗೆ ಚಮ್ಮಟಿಜು ಹೊಡೆದು ಕಣ್ಮರೆಯಾದರು. ಸ್ವಲ್ಪಹೊತ್ತು ಅವರು ಹೋದ ಮಾರ್ಗ ವನ್ನು ನೋಡುತ್ತಿದ್ದು ಅನಂತರ ಇದು ನಮ್ಮ ಗುರುಗಳು ಟೇಟ್ ಸಾಹೇಬರವರ ಆಶೀರ್ವಾದದ ಫಲ. ಅವರ ಅಭಯ ಹಸ್ತ ನನ್ನನ್ನು ಎಲ್ಲೆಡೆಗಳಲ್ಲೂ ಕಾಯುತ್ತಿದೆಯೆಂದುಕೊಂಡು ಮನೆಯ ಕಡೆಗೆ ಹಿಂದಿ ರುಗಿದೆ.

ನಾನು ಮರೆಯುವುದರೊಳಗಾಗಿ ಆಗಿನ ಸಾಮಾಜಿಕ ಸ್ಥಿತಿಯನ್ನು ತೋರಿಸುವ ಒಂದು ಸಣ್ಣ ಕಥೆಯನ್ನುಹೇಳಬೇಕು ಸ್ಪಾರ್ಕ್ಸ್ ಸಾಹೇ ಬರನ್ನು ಕಳಿಸಿಕೊಟ್ಟ ಮೇಲೆ ವಾಪಸು ಬರುವ ದಾರಿಯಲ್ಲಿ ಸಾತಿ ಗ್ರಾಮವೆಂಬ ಗ್ರಾಮವಿದೆ; ಅಲ್ಲಿಯ ಶಾನುಭೋಗರೂ, ಮುಖ್ಯ ಜಮೀನುದಾರರೂ, ಸಂಗಪ್ಪನವರೆಂಬ ಹಳೆಯಕರ್ಣಾಟಕ ಬ್ರಾಹ್ಮಣರು. ನಾನು ಅಲ್ಲಿಗೆ ಮುಟ್ಟುವಾಗ ಹೊತ್ತು ಆಗಲೇ ಮಾಲಿತ್ತು; ನನಗೆ ಬಹಳ ಆಯಾಸವೂ ದಾಹವೂ ಆಗಿದ್ದವು ನಾನು ಶಾನುಭೋಗರ ಮನೆಯ ಮುಂದೆ ಅಶ್ವತ್ಥಕಟ್ಟೆಯ ಬಳಿ ನಿಂತು ಒಂದು ಕಪ್ಪು ಟೀ ಅಥವಾ ಕಾಫಿ ಬೇಕೆಂದು ಕೇಳಿದೆ. ಅಲ್ಲಿದ್ದವರು ಒಬ್ಬರ ಮುಖವನ್ನು ಒಬ್ಬರು ನೋಡಿ ಕೊಂಡರು. ಸಂಗಪ್ಪನವರು ಒಳಕ್ಕೆ ಹೋಗಿ ಒಂದು ಬೆಳ್ಳಿ ಚೊಂಬಿನಲ್ಲಿ ಹಾಲನ್ನೂ, ಒಂದು ಲೋಟವನ್ನೂ ಸ್ವಲ್ಪ ಸಕ್ಕರೆ ಯನ್ನೂ ತಂದರು.

'ಹಾಲು ಬೇಡ ಕಾಣಿರಿ, ಈಗ ಮನೆಗೆ ಹೋದ ಕೂಡಲೆ ಊಟ ಮಾಡುತ್ತೇನೆ' ಎಂದೆ. ಎಳನೀರಾಗಲಿ ನೀರಾಗಲಿ ಕೊಡಿ ಸಾಕು ಎಂದೆ. ಕಾಫಿ ಪುಡಿ ಟೀಸೊಪ್ಪು ಇವೆಯೋ ಇಲ್ಲವೋ ಎಂಬ ಸಂದೇಹದ ಮೇಲೆ ಹೀಗೆ ಹೇಳಿದೆ.

ನನ್ನ ಶೇಕದಾರರು ನನ್ನ ಕಿವಿಯಲ್ಲಿ 'ಮಹಾಸ್ವಾಮಿ, ಅವರು ಮಾರಕರು; ಬ್ರಾಹ್ಮಣರು ಅವರ ಮನೆಯಲ್ಲಿ ಮಧ್ಯಾಹ್ನವಾದ ಮೇಲೆ ಹಾಲನ್ನು ಕೂಡ ಮುಟ್ಟುವುದಿಲ್ಲ'ವೆಂದು ಹೇಳಿದರು.

ನಾನು ಯೂರೋಪಿಯನ್‌ರ ಸಂಗಡ ಉಪಾಹಾರ ತೆಗೆದುಕೊಂಡಿದ್ದೇನೆ. ನಮ್ಮವನು ಮಧ್ಯಾಹ್ನದ ವೇಳೆಯಲ್ಲಿ ನನ್ನ ಕೇಳಿಕೆಯ ಮೇಲೆ ಪ್ರೀತಿಯಿಂದ ಭಕ್ತಿಯಿಂದ ಕೊಟ್ಟದ್ದನ್ನು ವಲ್ಲೆನೆಂಬುದು ಶುದ್ಧ ತಪ್ಪು, ಹೇಡಿತನ, ಎಂದು ತೋರಿತು.

ನಾನು ಕುದುರೆಯಿಂದ ಇಳಿದು ಹಟಾತ್ತಾಗಿ ಕಾಫಿ ಮಾಡಿಸಿಕೊಂಡು ಕುಡಿದೇ ಯಡತೊರೆಗೆ ಬಂದೆ.

ನಲವತ್ತಾರು ವರ್ಷಗಳ ಹಿಂದಿನ ಯಡತೊರೆ ತಾಲ್ಲೂಕನ್ನು ಚಿತ್ರಿಸಬೇಕಾದರೆ ಈಗಿನ ಕೃಷ್ಣರಾಜನಗರದ ತಾಲ್ಲೂಕನ್ನು ಪಟದಿಂದ ಅಳಿಸಿಬಿಡಬೇಕು ಯಡತೊರೆ ತಾಲ್ಲೂಕನ್ನು ಚೆನ್ನಾಗಿ ಬಲ್ಲೆ. ಅದರಲ್ಲಿನ ಪ್ರತಿಯೊಂದು ಗ್ರಾಮವನ್ನೂ ಅನೇಕ ಸಲ ನೋಡಿದ್ದೆ. ಬಹು ಗ್ರಾಮಗಳಲ್ಲಿ ಅನೇಕ ಸಲ ಬಿಸಿಲಿನ ಬೇಗೆಯಲ್ಲಿ, ಮಳೆಯ ರೊಚ್ಚಿನಲ್ಲಿ, ಹಬ್ಬದ ಸಂತುಷ್ಟಿಯಲ್ಲಿ, ವ್ಯಾಧಿಯ ಕಷ್ಟದಲ್ಲಿ, ಪ್ರಪಂಚಜೀವನದ ಬಗೆಬಗೆಯ ಸನ್ನಿವೇಶಗಳಲ್ಲಿ, ಮೊಕ್ಕಾಂ ಮಾಡಿದ್ದೆ. ಆಗಿನ ಜನಗಳ ಜೀವನ ರೀತಿಯನ್ನೂ ಜೀವನದ ಸಮಸ್ಯೆಗಳನ್ನೂ ಚೆನ್ನಾಗಿ ನೋಡಿ, ವಿವೇಚಿಸಿ, ಅರಿತಿದ್ದೆ. ತಾಲ್ಲೂಕಿನಲ್ಲಿ ನನಗೆ ಪರಿಚಯವಿಲ್ಲದ ಗೃಹಸ್ಥರು ಬಹಳ ವಿರಳ; ನನ್ನನ್ನು ಕಾಣದ ಜನಗಳ ಸಂಖ್ಯೆ ಇನ್ನೂ ಕಡಮೆ. ಆಗಿನ ಸರಕಾರದ ವಹಿವಾಟಿನಲ್ಲಿ, ಜನಾಂಗದ ರಚನೆಯಲ್ಲಿ ಅಮಲ್ದಾರರೆಂದರೆ ನಿಜವಾಗಿಯೂ 'ತಳದ ತಾಯಿ'. ಅಮಲ್ದಾರರಲ್ಲಿ ಗುಣ, ಯೋಗ್ಯತೆಗಳಿದ್ದರೆ 'ಅಕ್ಕರೆಯ ಅಮ್ಮ'. ಒಂದು ತುಂಬಿದ ತಾಲ್ಲೂಕೆಂದರೆ ನಾನಾ ಬಗೆಯ ಜನಗಳಿರುತ್ತಾರೆ; ಸಾಮಾನ್ಯ ಒಳ್ಳೆಯ

ಮನುಷ್ಯನೂ ಯಾವಾಗಲೂ ಎಲ್ಲದರಲ್ಲಿಯೂ ಒಳ್ಳೆಯನಾಗಿರುವುದಿಲ್ಲ, ಆದರೂ ಈಗಲೂ, ಪುರುಷಾಯುಸ್ಸಿನ ಬಹುಭಾಗದ ಅನುಭವದ ಬೆಳಕಿನಲ್ಲೂ, ಯಡತೊರೆಯ ಜನಗಳ ಮೇಲೆ ನನಗೆ ಸ್ವಜನಗಳ ಮೇಲಿನಂತೆ ಮಮತೆ. ನಾನು ಆ ತಾಲ್ಲೂಕನ್ನು ಬಿಟ್ಟು ಸುಮಾರು ಇಪ್ಪತ್ತು ವರುಷಗಳನಂತರ ಹಾಸನದಿಂದ ಮೈಸೂರಿಗೆ ಹೊಳೆನರಸೀಪುರದ ಮಾರ್ಗವಾಗಿ ಕಾರಿನಲ್ಲಿ ಬರುತ್ತಿದ್ದೆ. ದಾರಿಯಲ್ಲಿ–ಗೇರದಡವೆಂಬ ಗ್ರಾಮದ ಬಳಿ ಎಂದು ಜ್ಞಾಪಕ–ಒಂದು ಸರ್ಕಾರಿ ಬಾವಿಯ ಹತ್ತಿರ ನನ್ನ ಕಾರಿನ ರೇಡಿಯೇಟರಿಗೆ ನೀರು ತುಂಬಿಕೊಳ್ಳಲು ನಿಂತೆ. ಮಧ್ಯಾಹ್ನದ ಸಮಯ. ಬಾವಿಯ ಹತ್ತಿರ ಅನೇಕರು ಹೆಣ್ಣುಮಕ್ಕಳು ಬಂದು ನೀರು ಸೇದುತ್ತಲೂ, ಸೇದುವುದಕ್ಕೆ ಕಾಯುತ್ತಲೂ ನಿಂತಿದ್ದರು. ನಾನು ಒಬ್ಬ ಮಗಳನ್ನು ನೀರು ಸೇದಿಕೊಳ್ಳುವುದಕ್ಕೆ ಚವುರಿಗೆ ಬೇಡಿದೆ. "ಕೊನ್ನಿ ಬುದ್ಧಿ" ಎಂದು ಆಗ ತಾನೆ ಸೇದಿದ ಚವುರಿಗೆ ನೀರನ್ನೂ ಕೊಟ್ಟಳು. ನಾನು ಥ್ಯಾಂಕ್ಸ್ ಹೇಳುವುದು ಹೇಗೆ? ಜೇಬಿನಿಂದ ಒಂದು ನಾಣ್ಯವನ್ನು ತೆಗೆದುಕೊಡಲು ಹೋದೆ. ಆಕೆ ಕೋಪದಿಂದ ಕೂಡಿದ ನಗುವಿನಿಂದ,

"ನಾವೇನು ಪೇಟೇ ಸ್ಥಳದೋರೇ ಬುದ್ಧಿ, ನೀರು ಮಾರಿಕೊಳ್ಳೋಕೆ? ನೋಡಕ್ಕ, ಇವರು ಕಾಸು ಕಂಡೋರು, ನಾವು ಬಡವರು" ಎಂದಳು.

ನನಗೆ ನಾಚಿಕೆಯಾಯಿತು! "ಕೋಪಮಾಡಬೇಡ ಕಾಣವ್ವ. ಆಳವಾದ ಬಾವಿ. ಕಷ್ಟದಿಂದ ಸೇದಿದ ನೀರು ಕೊಟ್ಟೆ ಅಂತ ನನ್ನ ಹತ್ತಿರ ಇನ್ನೇನೂ ಇಲ್ಲದೆ ದುಡ್ಡು ಕೊಡೋಕೆ ಬಂದೆ" ಎಂದೆ.

ಆಗ ಅಲ್ಲಿದ್ದ ಇನ್ನೊಬ್ಬ ಆಕೆ, ಸುಮಾರು ನನ್ನ ವಯಸ್ಸಿನ ತಾಯಿ, 'ಇದೇನು ಕಷ್ಟ ಅಂತ ಕಾಣ್ತೀರಿ? ಹದಿನೈದು ಇಪ್ಪತ್ತು ವರುಷದ ಹಿಂದೆ ಏಳೆಂಟು ಮೈಲಿಗಳಿಂದ, ಗುಳುವಿನಅತ್ತಿಕುಪ್ಪೆಯಿಂದ ನೀರು ತರಬೇಕಾಗಿತ್ತು. ಆಗ ಮಕ್ಕಳು ಅತ್ತರೆ, ಅಳಬೇಡ ಕಂದ, ಕುಡಿಯೋಕೆ ನೀರು ಕೊಡ್ತೀನಿ, ಸುಮ್ಮನಿರು–ಅಂದರೆ ಸುಮ್ಮನಾಗುತ್ತಿದ್ದುವು. ಈ ಬಾವಿಯನ್ನ ಇಲ್ಲಿದ್ದ ಒಬ್ಬ ಹುಡುಗ ಸುಬೇದಾರರು, ನವರತ್ನ ರಾಮ

ರಾಯರು ಅನ್ನೋ ಮಹರಾಯರು, ತೋಡಿಸಿಕೊಟ್ಟರು : ಅವರ ಹೊಟ್ಟೆ ತಣ್ಣಗಿರಲಿ" ಎಂದಳು.

ನನಗೆ ನೀರುಕೊಟ್ಟ ಹುಡಗಿ ನಗುತ್ತ "ಅವರೆಲ್ಲಿದಾರೋ ಈಗ? ನೀವು ತೆಗಿದಿರಲ್ಲ ಆ ದುಡ್ಡು ಅವರಿಗೆ ಕೊಡಿ" ಎಂದು ನೀರು ಸೇದಲಿಕ್ಕೆ ಹೋದಳು. ಅಲ್ಲಿದ್ದವರ ನಗು ಸಲ್ಲಾಪಗಳು – ನಾನೇ ಆ ಹಾಸ್ಯದ ಲಕ್ಷ್ಯವೆಂದು ತೋರಿತು – ಕೇಳುತ್ತಿದ್ದ ಹಾಗೇ ಮುಂದುವರಿದೆ

ನನಗೆ ಆಗ ದೀನಭಾವದಲ್ಲಿ ತೋರಿತಲ್ಲ – ಆ ಬಾವಿ ನಮ್ಮನ್ನಾಳುವ ಮಹಾಸ್ವಾಮಿಗಳ ಧರ್ಮ – ಅದೂ ಕೆರೆಯ ನೀರನು ಕೆರೆಗೆ ಚೆಲ್ಲಿದ ಕಾರ್ಯವೇ. ನಾನು ಅವರ ಸೇವಕನಾಗಿ ನೀರೆರೆದವನು. ನನ್ನ ಅಮಲ್ದಾರಿ ನಾನು ನ್ಯಾಯವಾಗಿ ಮಾಡಿದ್ದರೆ ಕೈಂಕರ್ಯವೇ ಸರಿ. ನನ್ನ ಸೇವೆಗೆ ಅದರ ಬೆಲೆಗೆ ಮೀರಿದ ಪ್ರತಿಫಲ ನನಗೆ ಬಂತು. ಸರಕಾರದವರು ಆಗ ಕೊಡುತ್ತಿದ್ದ ೧೭೫ ರೂ. ವೇತನ ಕೇವಲ ಭಕ್ಷೀಸೇ, ಎಂದು. ನಾನು ಈಚೆಗೆತಲೆಯೆಲ್ಲ ನರೆತಮೇಲೆ ಯೋಚನೆ ಮಾಡಿದರೆ, ನಮಗೆ ಬರುವ ಆರ್ಥಿಕ ವರಮಾನವೆಲ್ಲ ಭಕ್ಷೀಸೇ; ನಮ್ಮ ಕರ್ತವ್ಯ ನಮ್ಮ ಕೈಂಕರ್ಯ ಇವುಗಳನ್ನು ಮಾಡಿದ ತೃಪ್ತಿಯೇ ನಿಜವಾದ ವಸ್ತುವೆಂದು ಕಾಣುತ್ತೆ.

ನೋಡಿ, ಏನು ಹೇಳಲಿಕ್ಕೆ ಪ್ರಾರಂಭ ಮಾಡಿದೆ. ನನ್ನ ಪೆನ ಎಲ್ಲಿಗೆ ನನ್ನನ್ನು ತಂದುಬಿಟ್ಟಿತು! ಅಂದರೆ ಇದೇ ಅಲ್ಲವೆ ನೆನಪುಗಳ ಸ್ವಭಾವ?

ಯಡತೊರೆಗೆ ಈಗ ಕೃಷ್ಣರಾಜನಗರ ಎಂದು ಹೆಸರು. ಕಸಬೆಯ ಸ್ಥಾನ, ರೂಪು, ಆವರಣ, ಭೂಗುಣ ಎಲ್ಲವೂ ಬದಲಾಯಿಸಿ ಹೋಗಿವೆ. ಯಡತೊರೆ ಹೊಳೆಯಅಂಚಿನಲ್ಲಿತ್ತು. ರಾಜಬೀದಿಯ ಉಭಯ ಪಾರ್ಶ್ವದಲ್ಲೂ ಮನೆಗಳು; ಬಲಗಡೆಯ ಮನೆಸಾಲಿನ ಹಿಂದೇ ನದಿ; ರಾಜಬೀದಿಯ ಪಡವಲ ತುದಿಯಲ್ಲಿ ಶ್ರೀ ಅರ್ಕೇಶ್ವರ ದೇವಸ್ಥಾನ, ತೀರ್ಥಘಟ್ಟ ಸೋಪಾನ. ಈ ದೇವಸ್ಥಾನವೇ ಊರಿನ ಹೃದಯವೆಂದರೆ ತಪ್ಪಲ್ಲ, ಮೂಡಲ ತುದಿಯಲ್ಲಿ ತಾಲ್ಲೂಕು ಕಚೇರಿ, Traveller's Bungalow' ಸ್ಕೂಲು, ಆಸ್ಪತ್ರೆ. ಯಡತೊರೆಯನ್ನು ನಾನು ಮೊದಲು

ನೋಡಿದಾಗ, ಒಂದಾನೊಂದು ಕಾಲದಲ್ಲಿ ಚೆನ್ನಾಗಿ ಬಾಳಿ, ಈಗ ವಾರ್ಧಕ್ಯದಲ್ಲಿ ಐಶ್ವರ್ಯ ಆರೋಗ್ಯಗಳು ಗಳಿತವಾದ ಮನುಷ್ಯನ ಸಾದೃಶ್ಯ ನನಗೆ ಹೊಳೆಯಿತು. ಆ ಪೂರಾ ತಾಲ್ಲೂಕಿಗೇ 'malarial' (ಮಲೆನಾಡು ಜ್ವರ) ಎಂಬ ಹೆಸರಿತ್ತು. ನನ್ನ ಹಿಂದಿನ ಅಮಲ್ದಾರರು ಯಡತೊರೆಯಲ್ಲಿ ಖಾಯಿಲೆ ಬಿದ್ದು ನಂತರ ಹೊಳೆಯ ಆಚೆ ಕೆರೆಯಲ್ಲಿ ಒಂದು ಒಂದೂವರೆ ಮೈಲಿ ದೂರದಲ್ಲಿರುವ ಹಂಪಾಪುರವೆಂಬ ಗ್ರಾಮ ದಲ್ಲಿ ವಾಸವಾಗಿದ್ದರು. ನಾನೂ ಹಂಪಾಪುರದಲ್ಲೇ ಬಹುಕಾಲ ವಾಸವಿದ್ದೆ.

ಈಗ ಯಡತೊರೆಯ ನಾಮಧೇಯವಲ್ಲದೆ ನಿವೇಶನವೇ ಬೇರೆ ಯಾಗಿದೆ. ಹೊಳೆಯ ಎಡತೀರದಲ್ಲಿದ್ದ ಯಡತೊರೆಗೆ ಮೈಸೂರಿನಿಂದ ತಿರುಗು ಗಾಡಿಗಳಲ್ಲಿ ರಾತ್ರಿ ಪ್ರಯಾಣ. ಹೊಳೆಯಿಂದ ಒಂದೂವರೆ ಮೈಲಿ ತೆಂಕಲಿನಲ್ಲಿ ಈಗ ಕೃಷ್ಣರಾಜನಗರ ಮೈಸೂರು–ಅರಸೀಕೆರೆ ಲೈನಿನಲ್ಲಿ ಒಂದು ಮುಖ್ಯವಾದ ಸ್ಟೇಷನ್ನು. ಯಡತೊರೆಯಲ್ಲಿ ತೇವ, ಜೌಗು, ಕೊಳೆ. ಕೃಷ್ಣರಾಜನಗರದಲ್ಲಿ ಇವು ಯಾವುವೂ ಇಲ್ಲ. ಯಡತೊರೆ ಅನಾರೋಗ್ಯವಾಧ ಊರು. ಕೃಷ್ಣರಾಜನಗರ ಆರೋಗ್ಯ ವಾದ ಪಟ್ಟಣವಂತೆ. ಆಗಿನ ಯಡತೊರೆ ತಾಲ್ಲೂಕಿನಲ್ಲಿ ಅಮಲ್ದಾರರು ಮಹಾರಾಜರ ಸರ್ಕಾರದ ನಿತ್ಯಪ್ರತಿನಿಧಿ; ಈಗ ಅಮಲ್ದಾರರು ಪುಕ್ಕ ತರಿದ ಹುಂಜದಂತೆ ಅಧಿಕಾರವನ್ನೆಲ್ಲಾ ತೊರೆದು ಆಕ್ಷೇಪಣೆಗೆ ಮಾತ್ರ ಗುರಿಯಾದ ಕರುಣಾಮೂರ್ತಿ. ಪ್ರತಿಯೊಂದು ಗ್ರಾಮದಲ್ಲೂ ಮೈಸೂರು, ಬೆಂಗಳೂರು, ಅರಾರಾ ಕಚೇರಿ, ಮಂತ್ರಿ ಮಂಡಲಗಳನ್ನು ಬಲ್ಲ ಮುಖಂಡರುಗಳಿದ್ದಾರೆ. ಮೊದಲು ಅಮಲ್ದಾರರು ಡೆಪ್ಯುಟಿ ಕಮಿಷ ನರ್ ಸಾಹೇಬರನ್ನು ಒಬ್ಬರನ್ನು ಮೆಚ್ಚಿಸಿ ತಮ್ಮ ಕೆಲಸವನ್ನು ದಕ್ಷತೆ ಯಿಂದ ಮಾಡಿಕೊಂಡು ಹೋದರೆ ಸಾಕಾಗಿತ್ತು. ಈಗ ಗ್ರಾಮ ಮುಖಂ ಡರುಗಳ, ಕೋಮು ಮುಖಂಡರುಗಳ, ಪಾರ್ಟಿ ಮುಖಂಡರುಗಳ ಸಿಫಾರ್ಸಿಲ್ಲದಿದ್ದರೆ ಅಮಲ್ದಾರಿ ಮಾಡುವುದೇ ಕಷ್ಟವೆಂದು ನನ್ನ ಅಭಿ ಪ್ರಾಯ. ಉಡುಪು ಎಲ್ಲಿ ಹಿಡಿಯುತ್ತದೆಂಬುದನ್ನು ಧರಿಸಿದವನೇ ಹೇಳಬೇಕು. ನೋಡುವವರಿಗೆ ಸರಾಗವಾದ ಚಲನೆಯಿಲ್ಲದಿರುವುದು

ಮಾತ್ರ ಕಾಣುತ್ತದೆ. ಹಿಂದಿನ ತಳತಾಯಿ ಈಗ ಬಲಸೊಸೆ ಸ್ಥಾನಕ್ಕೆ ಇಳಿದಿರುವಂತೆ ಕಾಣುತ್ತದೆ. ಯಡತೊರೆ ಕಸಬ ಆಗಿನ ತಾಲ್ಲೂಕು ಕಸಬೆಗಳ ಮಾದರಿಯಾಗಿತ್ತೆಂದು ಭಾವಿಸುತ್ತೇನೆ ನಾನು ಅನೇಕ ಕಸಬೆಗಳನ್ನು ನೋಡಿದ್ದೆ. ಕೃಷ್ಣರಾಜಪೇಟೆ, ಗುಂಡ್ಲಪೇಟೆ, ತಿರುಮ ಕೂಡಲು ನರಸೀಪುರ, ಹೊಳೇನರಸೀಪುರ, ಹುಣಸೂರು ಇವುಗಳೆಲ್ಲ, ಹುಣಸೂರು ಒಂದು ಬಿಟ್ಟು, ಜನಜೀವನದಲ್ಲಿ ಸಮಾಜರಚನೆಯಲ್ಲಿ ಯಡತೊರೆಯನ್ನೇ ಹೋಲುತ್ತಿದ್ದವು. ಆಗಿನ ಕಾಲದಲ್ಲಿ ಬ್ರಾಹ್ಮಣರ ಗೌರವ ಕಳೆಗುಂದಿರಲಿಲ್ಲ. ಲಿಂಗಾಯತರು ಕಮ್ಮಿ ಎಲ್ಲಾ ಕೋಮು ಗಳವರೂ ಬ್ರಾಹ್ಮಣರ ಸಮಾಜ ನೇತೃತ್ವವನ್ನು ಅನುಮೋದಿಸುತ್ತಿದ್ದರು. ಬ್ರಾಹ್ಮಣರು, ಸರಕಾರಿ ನೌಕರಿಗಳಲ್ಲಿ ಇರುವವರನ್ನು ಬಿಟ್ಟರೆ, ತಮ್ಮ ಜಾತಿಗೆ ಉಚಿತವಾದ ವೈದಿಕವೃತ್ತಿಯಲ್ಲೇ ಇರುತ್ತಿದ್ದರು. ಬೇಕಾದ ಹಾಗೆ ಭೂಮಿ ಕಾಣಿ ಇರುವವರೂ ಕೂಡ ವೇದಾಧ್ಯಯನ ಪುರಾಣ ದೇವತಾರ್ಚನೆ ಇವುಗಳಲ್ಲಿ ಅತಂದ್ರಿತರಾಗುತ್ತಿದ್ದರು. ಕೆಲವರು ಸೋಮಯಾಜಿಗಳೂ ಇದ್ದರು. ಆ ಊರಿನ ಬಂಡವಾಳಸ್ಥರು, ವ್ಯಾಪಾರಸ್ಥರು, ವೈಶ್ಯರು. ಇವರು ಬ್ರಾಹ್ಮಣರ ಶಿಷ್ಯವರ್ಗಕ್ಕೆ ಸೇರಿ ದವರು. ವ್ಯಾವಹಾರಿಕ ವಿಚಾರಗಳಲ್ಲಿಯೂ ತಮ್ಮ ಆಪ್ತರಾದ ಬ್ರಾಹ್ಮ ಣರ ಸಲಹೆಯನ್ನು ಕೇಳಿ ಮನ್ನಿಸುವವರು. ಬ್ರಾಹ್ಮಣರಲ್ಲಿ ಕೆಲವರು– ಸ್ವಲ್ಪ ಮಂದಿ – ಕೋರ್ಟು ಕಚೇರಿಗಳಲ್ಲಿನ ವ್ಯವಹಾರಗಳಲ್ಲಿ ತಮ್ಮ ಬುದ್ಧಿವಂತಿಕೆಯನ್ನು ದುರ್ವಿನಿಯೋಗ ಮಾಡಿ ದುರ್ವ್ಯಾಜ್ಯಗಳನ್ನು ಹೂಡಿ ಹೊಟ್ಟೆ ಹೊರೆದುಕೊಳ್ಳುತ್ತಿದ್ದರು. ನನಗೆ ಒಬ್ಬರ ಜ್ಞಾಪಕ ವಿದೆ. ಅವರು ಸ್ಟಾಂಪ್ ವೆಂಡರು. ಅವರಲ್ಲಿ ಯಾವ ವರ್ಷದ ಸ್ಟಾಂಪು ಕಾಗದವಾದರೂ ದೊರೆಯುತ್ತಿತ್ತಂತೆ. ಅವರು ದಸ್ತೇವೇಜುಗಳನ್ನು ಬರೆದರೆ ಅದರಲ್ಲಿ ಕಾಲಾನುಗುಣವಾಗಿ ಬರೆದುಕೊಟ್ಟವನಿಗಾಗಲಿ ಬರೆಸಿ ಕೊಂಡವನಿಗಾಗಲಿ ಲಾಗ ಹೊಡೆಸಲು ಅವಕಾಶವಿಟ್ಟು ಬರೆಯುತ್ತಿದ್ದ ರಂತೆ. ತಾಲ್ಲೂಕಿನ ಸಮಾಜಕ್ಕೆ ಅಮಲ್ದಾರರು ನಿರಂಕುಶ ನಾಯಕರು. ತಾಲ್ಲೂಕಿನಲ್ಲಿ ಡಾಕ್ಟರೂ, ಸ್ಕೂಲುಮಾಸ್ತರರೂ, ಸಬ್ ರಿಜಿಷ್ಟ್ರಾರರೂ, ಪೋಸ್ಟ್ ಮಾಸ್ಟರೂ ಸಿವಾಯಿ ಎಲ್ಲಾ ನೌಕರರೂ ಅವರ ತಾಪೇ

ದಾರರು. ಮೇಲೆ ವಿವರಿಸಿರುವ ಹುದ್ದೇದಾರರು ಕೂಡ ಅಮಲ್ದಾರ್ ತಾರಾಮಂಡಲಕ್ಕೆ ಸೇರಿದ ಸಣ್ಣ ಚಕ್ಕೆಗಳು. ಮರಹಮತ್ತು ಇಲಾಖೆ (D.P W ) ಸಬ್ ಡಿವಿಷನ್ ಆಫೀಸರು ಇದ್ದರೆ, ಅವರಿಗೂ ಅಮಲ್ದಾರರಿಗೂ ಸ್ನೇಹವಿದ್ದರೆ, ಅಣ್ಣ ತಮ್ಮಂದಿರಂತೆ ಅನ್ಯೋನ್ಯ ಭಾವ. (ಅಮಲ್ದಾರರೇ ಅಣ್ಣ) ಇಲ್ಲವಾದರೆ ಅವರದು ನ್ಯೂಟ್ರಾಲಿಟಿಯ ಜುಜುಬಿ ಪಾಳೇಪಟ್ಟು. ಖಾಸಗೀ ಸಮಾಜದಲ್ಲಿ ಅನೇಕ ಗಣ್ಯವ್ಯಕ್ತಿಗಳಿದ್ದರು. ಅವರುಗಳು ಅಮಲ್ದಾರರಲ್ಲಿ ಸ್ನೇಹವನ್ನು ಬೆಳೆಯಿಸಿ ಅವರಿಗೆ ಗೌರವ ಕೊಟ್ಟು ಅವರಿಂದ ಗೌರವವನ್ನು ಪಡೆಯುತ್ತಿದ್ದರು. ನಾನು ಯಡತೊರೆಗೆ ಹೋದಾಗ ಖಾಸಗೀ ಜನಗಳಲ್ಲಿ ಬಹಳ ಮಾನ್ಯರಾದವರು ಶಿವೋಜಿರಾಯರೆಂಬ ಮರಾಠೆ ಜಮೀನ್ದಾರರು. ಅವರು ನಮ್ಮ ತೀರ್ಥರೂಪರ ಮತ್ತು ನನ್ನ ತೀರ್ಥರೂಪ ಸಮಾನರಾದ ಪೂಜ್ಯ ಮಾವನವರ ಸ್ನೇಹಿತರು. ಅವರಿಗೆ ನೂರಾರು ಎಕರೆ ನಾಲಾ ಕೆಳಗಿನ ಜಮೀನು ಇದ್ದು, ಸಾವಿರಾರು ಖಂಡಗ ಬತ್ತ ಬೆಳೆಯುತ್ತಿದ್ದರು; ಲಕ್ಷಾಂತರ ರೂಪಾಯಿ ಲೇವಾದೇವಿಯನ್ನು ಮಾಡುತ್ತಿದ್ದರು. ಬಹಳ ವೃದ್ಧ ಮತ್ತು ಉದಾರಸ್ವಭಾವದವರಾದರೂ ಜನಗಳಲ್ಲಿ ಸುಲಭವಾಗಿ ಸೇರತಕ್ಕವರಲ್ಲ ಇವರ ಮಕ್ಕಳು ದೇವೋಜಿರಾಯರು ನನ್ನ ಆಪ್ತ ಮಿತ್ರರು. ಅವರ ಮನೆತನದ ಚರಿತ್ರೆ ಆಗಿನ ಕಾಲದ ಆಡಳಿತ ರೀತಿಯನ್ನು, ಆಗಿನ ಕಾಲದ ಪರಂಗಿ ಮತ್ತು ಹಿಂದೂಗಳಿಗೆ ಅಕಸ್ಮಾತ್ತಾಗಿ ಬೆಳೆಯಬಹುದಾದ ಸ್ನೇಹದ ಪರಿಣಾಮವನ್ನು, ತೋರಿಸುತ್ತದೆ. ಶಿವೋಜಿರಾಯರ ಪೂರ್ವಿಕರಿಬ್ಬರು ಮಂಗಮಾರಿ (Montgomery) ಎಂಬ ಒಬ್ಬ ಬ್ರಿಟಿಷ್ ಅಧಿಕಾರಿಯ ಹತ್ತಿರ ಮುಂಬಯಿ ಪ್ರಾಂತದಲ್ಲಿ ಕೆಲಸ ಮಾಡುತ್ತಿದ್ದರಂತೆ ಅವರ ದಕ್ಷತೆಯನ್ನೂ ನಿಯತ್ತನ್ನೂ ನೋಡಿ ಮೆಚ್ಚಿದ್ದ ಆ ಸರದಾರನು ತಾನು ಕಮಿಷನ್ ಕಾಲದಲ್ಲಿ ಮೈಸೂರು ಸಂಸ್ಥಾನಕ್ಕೆ ದೊಡ್ಡ ಪದವೀಧರನಾಗಿ ಬಂದಾಗ ಅವರನ್ನು ತನ್ನ ಸಂಗಡ ಕರೆದುಕೊಂಡು ಬಂದು, ಕೆಲವು ದಿನಗಳಲ್ಲಿಯೇ ಸುಬೇದಾರಿ ಕೆಲಸಕ್ಕೆ ಏರಿಸಿದನಂತೆ. ಆ ಕೆಲಸದಲ್ಲಿ ಕೆಲವು ದಿನಗಳಿದ್ದು ನಿವೃತ್ತರಾದ ಅವರಿಗೆ ಆ ಸರದಾರ ಅವರು ಕೇಳಿದಕಡೆ ಕೇಳಿದಷ್ಟು ಜಮೀನು ಕೊಟ್ಟನಂತೆ.

ಆ ಸರದಾರನ ಭಾವಚಿತ್ರವನ್ನು ನಾನು ಶಿವ್ರೋಜಿರಾಯರ ಮನೆಯಲ್ಲಿ ಉಚ್ಚಸ್ಥಾನದಲ್ಲಿ ನೋಡಿದ್ದೇನೆ. ನೂರಾರು ಎಕರೆ ಜಮೀನನ್ನೂ ಭಾರಿ ಅಧಿಕಾರಗಳನ್ನೂ ಯಥೇಚ್ಛವಾಗಿ ಕೊಡಬಲ್ಲ, ಇತರರ ಸ್ವತ್ತಿನ ಮೇಲೆ ನಿರವಗ್ರಹವಾದ ಸ್ವಾತಂತ್ರ್ಯವಿದ್ದ, ಹಿಂದಿನ ಬ್ರಿಟಿಷ್ ಸಾಹೇಬರುಗಳ ದರ್ಪ, ಗೌರವ, ಕೀರ್ತಿಗಳನ್ನೂ ಈಚಿನ ಅಲ್ಪಾಧಿಕಾರವುಳ್ಳ ಇತರರು ಪಡೆಯಲು ಸಾಧ್ಯವೇ ?

ಹಳ್ಳಿಗಳಿಗೆ ಆಗ ಪ್ರತ್ಯೇಕ ಸಾಮಾಜಿಕ ಜೀವ ಮತ್ತು ಚೈತನ್ಯವಿದ್ದವು. ಹಿಂದಿನ ಗ್ರಾಮಸಮಾಜದ ರಚನೆಯು ಆಗ ಸ್ವಲ್ಪ ಸಡಿಲವಾಗಿದ್ದಿರಬಹುದು. ಆದರೆ ನಿರ್ಜೀವವಾಗಿರಲಿಲ್ಲ. ಇದು ಒಳ್ಳೆಯ ಗ್ರಾಮ, ಇದು ಪುಂಡಗ್ರಾಮ ಎಂದರೆ ಅರ್ಥವಿತ್ತು. ಗ್ರಾಮಗಳಲ್ಲಿ ನಿಜವಾದ ನಿವಾಸಿಗಳ ಪ್ರೀತಿಗೂ ನಂಬಿಕೆಗೂ ಅರ್ಹರಾದ ಮುಖಂಡರುಗಳಿರುತ್ತಿದ್ದರು. ಸಾಮಾನ್ಯವಾಗಿ ಗ್ರಾಮಗಳಲ್ಲಿನ ವ್ಯವಹಾರಗಳೆಲ್ಲ ಅಲ್ಲೇ ಈ ಹಿರಿಯರುಗಳ ಮುಂದೆ ತೀರ್ಮಾನವಾಗುತ್ತಿದ್ದುವು. ಗ್ರಾಮ ಗ್ರಾಮಕ್ಕೆ ಇರಬಹುದಾದ ವ್ಯತ್ಯಾಸಗಳು ಅಮಲ್ದಾರರಲ್ಲೇ ಫೈಸಲಿಗೆ ಬರುತ್ತಿದ್ದುವು. ಅಮಲ್ದಾರರು ಮೊಕ್ಕಾಂ ಮಾಡಿದ ಗ್ರಾಮಗಳ ಆಸುಪಾಸಿನ ಗಂಡಹೆಂಡಿರ ಅಸಮಾಧಾನಗಳೂ, ತಂದೆಮಕ್ಕಳ ಅಣ್ಣತಮ್ಮಂದಿರ ಸಮಸ್ಯೆಗಳೂ, ಪರಿಹಾರಕ್ಕೆ ಬರುತ್ತಿದ್ದುವು.

ಕೆಲವು ಗ್ರಾಮಗಳಲ್ಲಿ–ಅದರಲ್ಲೂ ಒಂದೇ ಕೋಮಿನವರ ಪ್ರಾಬಲ್ಯವಿದ್ದ ಗ್ರಾಮಗಳಲ್ಲಿ– ಸ್ಥಳಸರ್ಕಾರ ಬಹಳ ಬಿಗಿಯಾಗಿ ಬಲವಾಗಿ ಇತ್ತು. ಇದಕ್ಕೆ ಗ್ರಾಮದ ಮತ್ತು ತಾಲ್ಲೂಕಿನ ಹೆಸರು ಹೇಳದೆ ಒಂದು ಕತೆ:

ಒಂದು ದೊಡ್ಡ ನದಿ. ಅದು ನಮ್ಮ ಸಂಸ್ಥಾನಕ್ಕೂ ಬ್ರಿಟಿಷ್ ಪ್ರಾಂತ್ಯಕ್ಕೂ ಎಲ್ಲೆ. ನಮ್ಮ ಕಡೆ ಹೊಳೆ ಕಿನಾರೆಯಲ್ಲೇ ಕೆಲವು ಒಂದೇ ಕೋಮಿನವರೂ ಅವರ ಜೀತದ ಆಳುಗಳೂ, ಆಶ್ರಿತರೂ, ವಾಸವಾಗಿರುವ ಗ್ರಾಮಗಳು. ಒಂದಾನೊಂದು ವೇಳೆ ಅಮಲ್ದಾರರು ಆ ಗ್ರಾಮಗಳೊಂದರಲ್ಲಿ ಮೊಕ್ಕಾಂ ಮಾಡಿದಾಗ, ಅವರಲ್ಲಿ ಕೆಲವರು ಬಹಳ ಪರಿತಾಪದಿಂದ ತಮಗೆಲ್ಲರಿಗೆ ವಕ್ಕರಿಸಿದ್ದ ಒಂದು ಅಸಹ್ಯವಾದ

ಯಾತನೆಯನ್ನು ಹೇಳಿಕೊಂಡರು. ಹೊಳೆಯ ಆಚೆಯ ಕೆರೆಯಿಂದ ಯಾವನೋ ಒಬ್ಬ ದುಷ್ಟ, ಅನುಕೂಲವಾದ ಸಮಯ ಕಾದು, ಹೊಳೆ ದಾಟಿಬಂದು ಹೊಲಗಳಲ್ಲಿ ಅಥವಾ ಗದ್ದೆಗಳಲ್ಲಿ ಏಕಾಕಿಯಾಗಿ ಕೆಲಸ ಮಾಡುತ್ತಿದ್ದ ಹೆಣ್ಣುಮಕ್ಕಳನ್ನು ಕೆಣಕುತ್ತಿದ್ದನಂತೆ. ಇದನ್ನು ಕೇಳಿ ಅಮಲ್ದಾರರಿಗೆ ಬಹಳ ಸಂಕಟವಾಯಿತು. ಅವರು ಗ್ರಾಮಸ್ಥರಿಗೆ ಸಲಹೆ ಕೊಟ್ಟರು: ಹೊಂಚುಕಾದು ಆ ದುಷ್ಟನನ್ನು ಹಿಡಿದುಕೊಂಡು ಬನ್ನಿ, ಅವನಿಗೆ ಸರಿಯಾದ ಶಿಕ್ಷೆ ಮಾಡೋಣವೆಂದು. ಆಯಿತು; ಅಮಲ್ದಾರರಲ್ಲಿ ಈ ವಿಚಾರದ ದೂರೇ ಮತ್ತೆ ಬರಲಿಲ್ಲ. ಸುಮಾರು ಒಂದು ವರುಷದನಂತರ ಅಮಲ್ದಾರರು ಅದೇ ಗ್ರಾಮದಲ್ಲಿ ಮೊಕ್ಕಾಂ ಮಾಡಿದಾಗ, ಹಿಂದೆ ಕೇಳಿದ್ದನ್ನು ಜ್ಞಾಪಿಸಿಕೊಂಡು, ಪುನಃ ಆ ಪುಂಡ ಮನುಷ್ಯ ಬರಲಿಲ್ಲವೇ ಎಂದು ವಿಚಾರಿಸಲಾಗಿ ಆ ಗ್ರಾಮಗಳ ಮುಖಂಡರು ಅಚ್ಚರಿಗೊಂಡವರಂತೆ,

'ಓ! ಅದೋ? ಎಲ್ಲೋ ಹುಡುಗರ ಪೊಳ್ಳುಮಾತು ಬುದ್ಧಿ, ಯಾರೋ ಮೀನು ಹಿಡಿಯುತ್ತಿದ್ದವನನ್ನು ನೋಡಿ ಚಿಕ್ಕಹುಡುಗಿ ಹೆದರಿಕೊಂಡು ಓಡಿಬಂತಂತೆ; ಅದು ಬಾಯಿಯಿಂದ ಬಾಯಿಗೆ ಬೀಳುತ್ತಾ ಬೆಳೆದು ದೊಡ್ಡದೊಂದು ಪಂಚಾಂಗ ಆಗಿಹೋಯ್ತು. ಆ ಸುದ್ದೀನೇ ಕಾಣೆವು–ಅಂದರು.

ಆಮೇಲೆ ವಿಚಾರಿಸಲಾಗಿ ಗುಟ್ಟಾಗಿ ವರ್ತಮಾನ ಬಂತು. ಆ ಪುಂಡನಿಗೆ ಹೊಂಚುಕಾದು ಅವನನ್ನು ಅಕೃತ್ಯದ ಯತ್ನದಲ್ಲೇ ಹಿಡಿದು, ಗ್ರಾಮ ಕೋರ್ಟಿನಲ್ಲೇ ರಹಸ್ಯವಾಗಿ ವಿಚಾರಣೆ ಮಾಡಿ, ತಪ್ಪು ಸಾಬೀತಾಗಲು ಮರಣದಂಡನೆಯನ್ನು ವಿಧಿಸಿ, ಜಾರಿ ಮಾಡಿಸಿ, ಆಗ ಪ್ರವಾಹದಲ್ಲಿದ್ದ ಹೊಳೆಗೆ ಹೆಣವನ್ನು ಚಾಚಿಬಿಟ್ಟರೆಂದು ತಿಳಿದುಬಂತು. ಹೆಣವೂ ಜಲಚರಗಳಲ್ಲಿ ಜೀರ್ಣವಾಗಿಹೋಗಿ ಬಹುದಿನಗಳಾಗಿದ್ದುವು; ಸಾಕ್ಷ್ಯ ದುರ್ಲಭ ಮಾತ್ರವಲ್ಲ, ಅಲಭ್ಯವಾಗಿತ್ತು. ಇಷ್ಟಾಗಿ ಆ ಪೋಕರಿಯನ್ನು ಹಿಡಿದು ಕ್ರಮವಾದ ನ್ಯಾಯಾಸ್ಥಾನಕ್ಕೆ ತಂದಿದ್ದರೆ ಅನೇಕ ಮರ್ಯಾದಸ್ಥ ಮನೆಯ ಮುಗ್ಧ ಹೆಣ್ಣುಮಕ್ಕಳ ಮಾತು ಬಯಲಿಗೆ ಬರುತ್ತಿತ್ತು; ಅಪರಾಧಿಗೆ ಜುಜುಬಿ ಶಿಕ್ಷೆಯಾಗುತ್ತಿತ್ತು. ಗ್ರಾಮಸ್ಥರು ಮಾಡಿದ್ದು

ಕಾನೂನಿಗೆ ವಿರುದ್ಧ. ಆದರೆ ನ್ಯಾಯಕ್ಕೆ ವಿರುದ್ಧವೆಂದು ಹೇಳಲಿಕ್ಕೆ ನನಗೆ ಧೈರ್ಯ ಸಾಲದು.

ಯಡತೊರೆ ತಾಲ್ಲೂಕನ್ನು ಕಾವೇರೀನದಿಯು ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತಾ ಉತ್ತರ ದಕ್ಷಿಣ ಹೋಳುಗಳನ್ನಾಗಿ ವಿಭಾಗ ಮಾಡುತ್ತದೆ ನದಿಯ ಉತ್ತರ ಭಾಗದಲ್ಲಿ ಮಿರ್ಲೆ, ಸಾಲಿಗ್ರಾಮ, ಭೇರ್ಯ ಮೊದಲಾದ ತುಂಬಿದ ರಸವತ್ತಾದ ಗ್ರಾಮಗಳಿವೆ. ಈ ಗ್ರಾಮಗಳಲ್ಲಿ ಹೆಸರುವಾಸಿಯಾದ ರೈತರುಗಳಿದ್ದರು ಸಾಮಾನ್ಯವಾಗಿ ಇಲ್ಲಿನ ಮುಖಂಡರೆಲ್ಲ ಒಕ್ಕಲಿಗರೇ ಹೇಮಾವತಿ ಕಾವೇರಿಗಳ ಸಂಗಮದ ಮೂಲೆಯಲ್ಲಿ ಹೇಮಾವತಿ ತೀರದಲ್ಲಿ ಬ್ರಾಹ್ಮಣರಿಗೆ ಸೇರಿದ ಇನಾಂ ಗ್ರಾಮಗಳೂ ಪ್ರಬಲರಾದ ಬ್ರಾಹ್ಮಣರು ವಾಸಿಸುತ್ತಿರುವ ಸರ್ಕಾರಿ ಗ್ರಾಮಗಳೂ ಇವೆ ಸಾಲಿಗ್ರಾಮದಲ್ಲಿ ಒಳ್ಳೆಯ ಹೆಸರುವಾಸಿಯಾದ ರುಸ್ತುಂ ಪಟೇಲರು–ದೇವರಸೇಗೌಡರೆಂಬುವರಿದ್ದರು ಇವರು ಹೆಚ್ಚು ಹಣವಂತರಲ್ಲ, ಗರೀಬರೂ ಅಲ್ಲ ಇವರಿಗಿಂತಲೂ ಹತ್ತು ಪಾಲು ಹೆಚ್ಚು ದ್ರವ್ಯವುಳ್ಳ ರೈತರೂ ವರ್ತಕರೂ ಸಾಹುಕಾರರೂ ಅನೇಕರು ಸಾಲಿಗ್ರಾಮ, ಮಿರ್ಲೆ ಗ್ರಾಮಗಳಲ್ಲಿದ್ದರು. ಆದರೆ ಈಶ್ವರ ಭಾವ, ಹುಕುಮತ್ತು ಶಕ್ತಿ–ಐಶ್ವರ್ಯವಾದರೆ, ದೇವರಸೇಗೌಡರ ಸಮಾನರಾದ ಐಶ್ವರ್ಯವಂತರು ಅತಿ ವಿರಳ. ನನ್ನ ಜೀವಮಾನದಲ್ಲಿ ನಾನು ನಾಲ್ಕೈದು ಜನಗಳನ್ನು ನೋಡಿರಬಹುದಷ್ಟೆ. ಅವರು ನೂರೈವತ್ತು ವರುಷಗಳ ಹಿಂದೆ ಹುಟ್ಟಿದ್ದರೆ ಪಾಳೆಯಪಟ್ಟನ್ನೋ ರಾಜ್ಯವನ್ನೋ ಕಟ್ಟಿ ಐತಿಹಾಸಿಕ ಮನೆತನದ ಮೂಲಪುರುಷರಾಗುತ್ತಿದ್ದರೆಂದು ನನ್ನ ಭಾವನೆ. ಪೂರ್ತಾ ಆರು ಅಡಿಗಳ ಮನುಷ್ಯ. ಅಚ್ಚಕಪ್ಪು ಬಣ್ಣ, ಬಲವಾದ, ನಡುವಯಸ್ಸಿಗೆ ಮೀರಿದ ಅವರ ವಯಸ್ಸಿನಲ್ಲಿ ಸ್ವಲ್ಪ ಸ್ಥೂಲವಾದ ಮೈಕಟ್ಟು, ವಿಶಾಲವಾದ ಹಣೆ, ಸಂಕೋಚವಿಲ್ಲದ ತೆರೆಗಣ್ಣುಗಳು, ಸೀಳಾದ ಮೂಗು, ದಟ್ಟವಾದ ಬಿಳೀ ಮೀಸೆಗಳು, ಗಂಭೀರವಾದ ಧೀರಧ್ವನಿ, ಅವರು ಯಾವಾಗಲೂ ಹಚ್ಚಡವನ್ನೋ ಕಂಬಳಿಯನ್ನೋ ಹೊದ್ದು ತಲೆಗೆ ದೊಡ್ಡ ಬಿಳಿಯ ಪೇಟ ಧರಿಸುತ್ತಿದ್ದರು. ಇದೇ ಅವರ ವ್ಯಕ್ತಿತ್ವದ ಹೊರಭಾಸ. ನಾನು ತಾಲ್ಲೂಕಿನ ಛಾರ್ಜನ್ನು

ತೆಗೆದುಕೊಂಡಾಗ ದೇವರಸೇಗೌಡ ಬಹಳ ತುಂಟ ಪಾಳೆಯಗಾರ, ಯಾವುದಕ್ಕೂ ಹೆದರುವವನಲ್ಲ, ಹೇಸುವವನಲ್ಲ. ಅವನ ವಿಚಾರದಲ್ಲಿ ಹುಷಾರಾಗಿರಬೇಕೆಂದು ನನಗೆ ಹಿಂದೆ ಅಲ್ಲಿ ಅಧಿಕಾರಿಗಳಾಗಿದ್ದವರು ಎಚ್ಚರಿಸಿದ್ದರು. ನನಗೆ ದೇವರಸೇಗೌಡರನ್ನು ನೋಡಬೇಕೆಂಬ ಕುತೂಹಲವಿತ್ತು. ನಾನು ಛಾರ್ಜು ವಹಿಸಿದ ಮಾರನೆಯ ದಿವಸವೆ ಅವರು ನನ್ನನ್ನು ನೋಡಲು ಯಡತೊರೆಗೆ ಬಂದರು. ನನಗೆ ಅವರ ವಿಚಾರದಲ್ಲಿ ಬಹಳ ಒಳ್ಳೆಯ ಪ್ರಥಮ ಭಾವನೆಯುಂಟಾಯಿತು. ದೈನ್ಯವಿಲ್ಲದ ಮರ್ಯಾದೆ, ವಿಧೇಯತ್ವ, ಪರಸ್ಪರ ಸ್ಥಾನೋಚಿತವಾದ ನಡತೆ, ಸರಳವಾದ ಮಾತು.

ಸಾಲಿಗ್ರಾಮದ ಒಂದು ಸಮಸ್ಯೆಯಿತ್ತು. ಆ ಊರಿನಲ್ಲಿ ಬೇಸಿಗೆಯಲ್ಲಿ ಕುಡಿಯುವ ನೀರಿಗೆ ಬಹಳ ಕಷ್ಟ. ದೊಡ್ಡದೊಂದು ಕುನ್ನೀರು ಕೊಳ ಕಟ್ಟಿ, ಅದಕ್ಕೆ ಹೊಳೆಯ ನಾಲೆಯಿಂದ ನೀರು ಬಿಟ್ಟುಕೊಳ್ಳಬೇಕೆಂಬುದು ಒಂದು ಯೋಚನೆ. ಅದರ ಅಂದಾಜು ಖರ್ಚು ಆರೊ ಏಳೊ ಸಾವಿರ ರೂಪಾಯಿ. ಅದರ ಪೈಕಿ ಅರ್ಧಭಾಗ ಮಟ್ಟಿ ಕಾಮಗಾರಿಗೆ ತಗಲತಕ್ಕದ್ದು; ಉಳಿದ ಅರ್ಧ ಫತ್ತರ್‌ಗಚ್ಚಿ ಕಾಮಗಾರಿಯದು. ಸರ್ಕಾರದವರು ಮಟ್ಟಿ ಕಾಮಗಾರಿ ಅಂದಾಜು ಹಿಸ್ಸೆಯನ್ನು ಗ್ರಾಮಸ್ಥರು ಕೊಟ್ಟು ಮೊಬಲಗು ಡಿಪಾಜಿಯಲ್ಲಿ ಬಂದರೆ, ಉಳಿದ ಹಿಸ್ಸೆಯನ್ನು ತಾವು ಕೊಡುವುದಾಗಿ ಭರವಸೆ ಕೊಟ್ಟಿದ್ದರು. ಈ ಮಾತಿಗೆ ೪-೫ ವರುಷಗಳಾಗಿದ್ದವು. ಗ್ರಾಮದಲ್ಲಿ ಹಿಂದಿನ ಅಧಿಕಾರಿಗಳು ಹಣ ಚಂದ ಎತ್ತಲು ಮಾಡಿದ ಯತ್ನ ನಿಷ್ಫಲವಾಗಿತ್ತು. ಸರ್ಕಾರದಿಂದ ಪುನಃ ತಗಾದೆ ಬಂದಿತ್ತು. "ಸಾಲಿಗ್ರಾಮಕ್ಕೆ ಕುನ್ನೀರು ಕಟ್ಟೆ ಬೇಕೇ ಬೇಡವೆ? ಆ ಕೆಲಸಕ್ಕಾಗಿ ಸರ್ಕಾರಿ ಬಡ್ಜೆಟ್ಟಿನಲ್ಲಿ ಒದಗಿಸಿದ ಅರ್ಧ ಖರ್ಚಿನ ಹಣ ವರ್ಷೇ ವರ್ಷೇ ನಿರರ್ಥಕವಾಗಿ ಲ್ಯಾಪ್ಸ್ (lapse) ಆಗುತ್ತಿದೆ. ಈ ವರ್ಷ ಊರಿನವರು ಅವರ ಹಿಸ್ಸೆಯನ್ನು ಕೊಡದಿದ್ದಲ್ಲಿ ಸರ್ಕಾರದವರು ಕೊಡಬೇಕೆಂದು ಮೀಸಲಿಟ್ಟಿದ್ದ ಮೊಬಲಗನ್ನು ಇನ್ನಾವುದಾದರೂ ಉಪಯುಕ್ತವಾದ ಕೆಲಸಕ್ಕೆ ವರ್ಗಾಯಿಸಬೇಕಾಗು

ತ್ತದೆ”ಂದು. ನಾನು ದೇವರಸೇ ಗೌಡರನ್ನು ನೋಡಿದಾಗ ಈ ಪ್ರಸ್ತಾಪ ಮಾಡಿದೆ. ಅವರು ಸ್ವಲ್ಪ ಯೋಚನೆ ಮಾಡಿ

'ದಯಮಾಡಿ ಮಾಸ್ವಾಮಿ, ನೋಡೋಣ' ಎಂದರು.

'ಹಿಂದಿನವರು ನೋಡಿದಂತೆಯೇ ನಾನೂ ನೋಡುವುದರಿಂದ ಪ್ರಯೋಜನವೇನು ಗೌಡರೇ? ಬಂದು, ಉದ್ದೇಶ ಖಾಲಿ ಮಾಡಿ ಕೊಂಡು ವಾಪಸು ಬರುವುದಕ್ಕೆ, ನನಗೆ ಇಷ್ಟವಿಲ್ಲ. ನೀವು ಕೆಲಸ ಮಾಡುವುದಾದರೆ ಬರುತ್ತೇನೆ' ಎಂದೆ.

'ಸ್ವಾಮಿ, ನಮ್ಮೂರಲ್ಲಿ ಭಾರಿ ಜೈನ ಸೆಟ್ಟಿಗಳು, ಬ್ರಾಂಬ್ರು, ಸಾಹುಕಾರ್ರು, ದೊಡ್ಡ ಜಮೀನ್‌ದಾರ್ರೂ ಇದ್ದಾರೆ. ನಾನು ತಿಪ್ಪೆ ಗುಡಿಸಿ ಜೀವನ ಮಾಡೋ ರೈತನಾದರೂ ತಮ್ಮ ತಾಬೇದಾರ ಪಟೇಲ. ತಾವು–ಮಾಡೋ ಮಗನೆ–ಎಂದರೆ ಯಾಕಾಗವಲ್ಲದು? ಬನ್ನಿ ಬುದ್ಧಿ, ಜಾತ್ರೆ ಮುಗಿಸಿಕೊಂಡು' ಎಂದು ಹೇಳಿದರು.

ಚುಂಚನಕಟ್ಟೆ ಜಾತ್ರೆ, ಸ್ಪಾರ್ಕ್ಸ್ ಸಾಹೇಬರ ಆಗಮನ, ಕಸಬ ಹೋಬಳಿ ದಿಟ್ಟಂ ಜಮಾಬಂದಿ, ಇವುಗಳೆಲ್ಲ ಮುಗಿದ ಮೇಲೆ ನಾನು ಸಾಲಿಗ್ರಾಮಕ್ಕೆ ಹೋದೆ. ಅಲ್ಲಿಯೂ ಜಮಾಬಂದಿ ಕೆಲಸವಿತ್ತು. ನಾನು ಸಾಲಿಗ್ರಾಮಕ್ಕೆ ಅದೇ ಮೊದಲು ಹೋದದ್ದಾದ್ದರಿಂದ ಆ ಊರಿನ ಮತ್ತು ಹೋಬಳಿ ಗ್ರಾಮಗಳಿಂದ ನೂರಾರು, ಯಾಕೆ ಸಾವಿರಾರು, ಜನ ನನ್ನನ್ನು ನೋಡಲಿಕ್ಕೆ Traveller's Bungalowಗೆ ಬಂದಿದ್ದರು. ಲೆಕ್ಕ ತನಿಖೆಗಾಗಿ ಹೋಬಳಿಯ ಗ್ರಾಮ ನೌಕರರೆಲ್ಲರೂ ಬಂದಿದ್ದರು. ನನ್ನ ಕಹಳೆ ಸದ್ದಾದ ಕೂಡಲೆ ಜನಗಳ ಗುಂಪು ನನ್ನನ್ನು ಎದುರುಗೊಳ್ಳಲು ಬಂದಿತು. ಮೆರವಣಿಗೆಯಲ್ಲಿ ಮದುವಣಿಗನ ಹಾಗೆ ಕುದುರೆಯ ಮೇಲೆ ಕುಳಿತವನು ಬಂಗಲೆಗೆ ತಲುಪಿ, ಜಗುಲಿಯ ಮೇಲೆ ಹಾಕಿದ್ದ ಕುರ್ಚಿಯ ಮೇಲೆ ಕುಳಿತೆ. ಆಗ ಆ ಊರ ಗಣ್ಯರ ಪೈಕಿ ಒಬ್ಬರಾದ ಚನ್ನಪ್ಪಯನ ಕೃಷ್ಣಪ್ಪನೆಂಬುವರೂ, ವರ್ತಕರ ಮುಖಂಡರಾದ ಜೈನ ಕುಬೇರಸೆಟ್ಟರೆಂಬುವರೂ, ಒಕ್ಕಲಿಗರ ಸಾಹುಕಾರ ಹನುಮಗೌಡರೆಂಬುವರೂ, ಸಾಲಿಗ್ರಾಮದ ಪ್ರತಿನಿಧಿಗಳಾಗಿ ಊರಿನ ಸುಮಾರು ನೂರು ಜನಗಳು ರುಜುವುಳ್ಳ ಅರ್ಜಿಯನ್ನು ಕೊಟ್ಟರು. ಅದರಲ್ಲಿ

ಬೇಸಗೆಯಲ್ಲಿ ಕುಡಿಯುವ ನೀರಿನ ಅಭಾವವನ್ನು, ಸಂಸ್ಕೃತದಿಂದ ಭಾರ ವಾದ ಉತ್ಪ್ರೇಕ್ಷಾದ್ಯಲಂಕಾರಗಳಿಂದ ಕಾವ್ಯದ ಅಂತಸ್ತಿಗೆ ಏರಿದ, ಭಾಷೆಯಲ್ಲಿ ವರ್ಣಿಸಿ, ನಾನು ಈ ಸಂಕಟವನ್ನು ನಿವಾರಣೆ ಮಾಡಿ ಊರನ್ನು ಉದ್ಧಾರ ಮಾಡಬೇಕೆಂದು ಬರೆದಿತ್ತು. ಅಲ್ಲಿದ್ದ ಶಾಸ್ತ್ರಿಗಳು ನನ್ನನ್ನು ಭಗೀರಥನಿಗೆ ಹೋಲಿಸಿ ಒಂದು ಶ್ಲೋಕವನ್ನು ಓದಿದರು. ನಾನು ಎಲ್ಲರನ್ನೂ ಸಾಧ್ಯವಾದ ಮಟ್ಟಿಗೆ 'ಮುಖ ನೋಡಿ ಮಣೆ ಹಾಕಿ' ಕೂಡಿಸಿ ಸಾಲಿಗ್ರಾಮದ ಕುಡಿಯುವ ನೀರಿನ ಕಟ್ಟೆಯ ಪ್ರಸಂಗ ವನ್ನು ಹೇಳಿದೆ.

ಇಂಥ ತಿಳಿವಳಿಕಸ್ಥರೂ ಸಾಹುಕಾರರೂ ಗ್ರಾಮದ ಮೇಲೂ ಗ್ರಾಮಸ್ಥರ ಮೇಲೂ ಅನುರಾಗವುಳ್ಳವರೂ ಕೂಡಲೆ ಚಂದಾಪಟ್ಟಿಯನ್ನು ಹಾಕಿ ಗ್ರಾಮಸ್ಥರ ಹಿಸ್ಸೆಯೆಂದು ಗೊತ್ತಾದ ಮೊಬಲಗನ್ನು ಎತ್ತಿದರೆ ಕುಡಿಯುವ ನೀರಿನ ಅಭಾವ ಜಾಗ್ರತೆಯಲ್ಲೇ ನಿವಾರಣೆಯಾಗುತ್ತ ದೆಂದು ಹೇಳಿದೆ ಕೂಡಲೆ ದೇವರಸೇ ಗೌಡರು ಮುಂದೆ ನಿಂತು ಕೈ ಮುಗಿದು, "ಮಹಾಸ್ವಾಮಿ, ನಾನು ರೈತ, ದೊಡ್ಡ ಸಂಸಾರಿ, ಹೊತ್ತಿಗೆ ಇಪ್ಪತ್ತು ಸೇರು ಹಸಿ ಹಿಟ್ಟು ಬೇಯುತ್ತೆ ನಮ್ಮ ಹಟ್ಟೀಲಿ. ದೇವರು ಇದುವರೆಗೆ ಮಾನವಾಗಿ ಕಾಪಾಡಿದ್ದಾನೆ. ನನ್ನ ಕಾಣಿಕೆ ಐನೂರ ರೂಪಾಯಿ ಬರೀರಿ, ಕೃಷ್ಣಸ್ವಾಮಿಗಳೇ" ಎಂದು ಚನ್ನಪ್ಪಯ್ಯನ ಕೃಷ್ಣಪ್ಪನವರಿಗೆ ಹೇಳಿದರು.

ಕೂಡಲೆ ಒಂದು ಚಂದಾಪಟ್ಟಿ ತಯಾರಾಯಿತು ದೇವರಸೇ ಗೌಡರು, 'ನನ್ನ ಹೆಸರು ಮೊದಲು ಬರೆಯಬೇಡಿ. ನೀವು ನನ್ನ ಗುರು ಗಳು. ಬ್ರಾಂಬರು, ನಿಮ್ಮ ಹೆಸರು ಮೊದಲು ಬರೆಯರಿ. ನೀವು ಸಾನ ಮಾಡೋರು, ಪೂಜೇ ಮಾಡೋರು. ಮುಖ್ಯವಾಗಿ ನಿಮಗೆ ನೀರು ಬೇಕು. ಕುಬೇರ ಸೆಟ್ಟರು, ನಾಗರಾಜಯ್ಯನವರು, ಆದಿರಾಜ ಯ್ಯನವರು ಎಲ್ಲರೂ ಇದಾರೆ. ಎಲ್ಲರದೂ ಆಗಲಿ. ಆಮೇಲೆ ನಮ್ಮ ಹನುಮೇ ಗೌಡರು. ನಮ್ಮ ವಕ್ಕಲಿಗರ ಗುಂಪಿನ ಗೊಬ್ಬರ ಬಾಚೋ ಗೌಡರೂ ಬರೆಸುತ್ತೇವೆ. ನನ್ನ ಚಂದಾ ಅಂತೂ ಮೊದಲೇ ಬಿನ್ನ ಮಾಡಿದೇನೆ. ನಮ್ಮ ಹನುಮೇ ಗೌಡರು ಅನುಕೂಲಸ್ಥರು. ಅವರು

ಸಾವಿರ ರೂಪಾಯಿಯನ್ನಾದರೂ ಕೊಡುತ್ತಾರೆ. ಅಲ್ವ, ಹನುಮಯ್ಯ?”

“ಊರು ಗೌಡರು ನೀವೇ ಐನೂರು ರೂಪಾಯಿ ಹಾಕಿರುವಾಗ ನಾನು ಸಾವಿರ ಹಾಕುವುದುಂಟೇ! ನಂದೂ ಐನೂರೇ ಇರಲಿ” ಅಂದರು ಹನುಮೇಗೌಡರು. ಅವರು ಅಷ್ಟು ಹಣ ತ್ಯಾಗ ಮಾಡಿದ್ದು ಬಹುಶಃ ಅದೇ ಮೊದಲು ಎಂದು ಅವರ ಮುಖದ ಭಾವದಿಂದ ತೋರುತ್ತಿತ್ತು.

ಕೃಷ್ಣಪ್ಪನವರು ಸಾವಿರ ರೂಪಾಯಿ ಹಾಕಿದರು. ಜೈನ ವರ್ತಕರ ಪೈಕಿ ಕೆಲವರು ಐನೂರು ಐನೂರು ರೂಪಾಯಿಗಳನ್ನು ಹಾಕಿದರು. ಆ ಸಭೆಯಲ್ಲೇ ಹತ್ತಿರ ಹತ್ತಿರ ಆವಶ್ಯಕವಾದಷ್ಟು ಮೊಬಲಗು ಚಂದಾ ಪಟ್ಟಿಗೆ ಬಿತ್ತು

ನನಗೆ ಜೈನ ಸಾಹುಕಾರುಗಳ ಔದಾರ್ಯ ಸ್ವಲ್ಪ ಆಶ್ಚರ್ಯವನ್ನುಂಟು ಮಾಡಿತು. ಅವರು ಜಮೀನುದಾರರುಗಳಾಗಿದ್ದರೂ ವ್ಯಾಪಾರ ಮತ್ತು ಲೇವಾದೇವಿಯನ್ನೇ ಮುಖ್ಯ ಕಸುಬನ್ನಾಗಿಟ್ಟುಕೊಂಡಿರುವವರು. ಜಮೀನುಗಳನ್ನು ಕೂಡ ಚಕ್ರಬಡ್ಡಿ ಲೇವಾದೇವಿ ಮೂಲಕವೇ ತಾಪತ್ರಯದ ಬ್ರಾಹ್ಮಣ ಮತ್ತು ಒಕ್ಕಲಿಗ ಮಾಲೀಕರುಗಳಿಂದ ಸಂಪಾದಿಸಿದವರೆಂದು ಪ್ರತೀತಿ.

ಇವರುಗಳು ಧಾರಾಳವಾಗಿ ಹಣ ಕೊಟ್ಟದ್ದರ ಗುಟ್ಟು ನನಗೆ ಆಮೇಲೆ ಗೊತ್ತಾಯಿತು. ಅದು ಸ್ವಾರಸ್ಯವಾದ ಕಥೆ

ಸಾಲಿಗ್ರಾಮದ ತರೀ ಜಮಾನುಗಳಿಗೆ ಕಾವೇರಿನಾಲೆಯಿಂದ ನೀರು ಬರುತ್ತದೆ. ಈ ಪ್ರದೇಶದಲ್ಲಿ ನೂರಾರು ಎಕರೆ ಜಮಾನುಗಳು ಜೈನರದು. ಅವರು ಸ್ವತಃ ಬೇಸಾಯ ಮಾಡುವ ಜನವಲ್ಲದ್ದರಿಂದ ಹಿಂದಿನ ಮಾಲೀಕರುಗಳಾಗಿಯೋ ಹ್ಯಾಗೋ, ಲಾಗಾಯಿತಿನಿಂದಲೂ ಸಾಗುವಳಿ ಮಾಡುತ್ತಿದ್ದ ಒಕ್ಕಲಿಗರಿಗೆ ಗುತ್ತಿಗೆಗೆ ಕೊಟ್ಟು ಮಾಡಿಸುತ್ತಾರೆ.

ನಾನು ಅಲ್ಲಿಗೆ ಹೋಗುವುದಕ್ಕೆ ಎರಡು ಮೂರು ವರ್ಷಗಳ ಹಿಂದೆ ಹೊಳೆಯಲ್ಲಿ ನೀರು ಕಡಮೆಯಾದ್ದರಿಂದಲೋ ನಾಲಾ ದುರಸ್ತು ಇಲ್ಲದ್ದರಿಂದಲೋ ಆ ಗದ್ದೇ ಬೈಲಿಗೆ ನೀರಿನ ಸರಬರಾಜು ಸಾಲದೆ ಪೈರೆಲ್ಲಾ

ಕೆಡುವ ಸ್ಥಿತಿಗೆ ಬಂತು. ಆಗ ಜೈನ ಜಮೀನುದಾರರ ಸಾಗುವಳೀದಾರರುಗಳು ಗುತ್ತಿಗೆ ಪೂರ್ತ ಕೊಡಲು ಶಕ್ತಿಯಿಲ್ಲದೆ ಕೆಲವು ಭಾಗವನ್ನು ಸೋಡಿ ಕೇಳಿದರು. ಈ ರೈತರುಗಳ ಪರವಾಗಿ ದೇವರಸೇಗೌಡರು ಜೈನ ಸಾಹುಕಾರರುಗಳ ಹತ್ತಿರ ಹೋಗಿ ಬಹಳವಾಗಿ ಕೇಳಿಕೊಂಡರಂತೆ. ಆದರೂ ಸಾಹುಕಾರರುಗಳು ಒಂದು ಕಾಳನ್ನೂ ಬಿಡಲಿಲ್ಲ. ಅನೇಕ ರೈತರುಗಳು ತಾವು ಬೆಳೆದದ್ದನ್ನೆಲ್ಲ ಗುತ್ತಿಗೆಯಾಗಿ ತೆತ್ತರೂ ಬಾಕಿದಾರರಾಗಿ ಕಂಗಾಲಾದರು. ದೇವರಸೇಗೌಡರು ಆ ಕೋಮಿನ ಮುಖಂಡರಾದ್ದರಿಂದ ಅವರನ್ನು ಮರೆಹೊಕ್ಕರು. ಗೌಡರು ಪುನಃ ಜೈನ ಸಾಹುಕಾರರಲ್ಲಿ ಹೋಗಿ ಈ ವರ್ಷ ರೈತರುಗಳಿಗೆ ಜೀವನಕ್ಕೆ ಆವಶ್ಯಕವಾದ ದವಸ ತಾವೇ ಮುಂಗಡವಾಗಿ ಕೊಡುವುದಾಗಿಯೂ ಮುಂದೆ ನಾಲ್ಕು ವರ್ಷಗಳ ಕಾಲ ಗುತ್ತಿಗೆಯನ್ನು ಎಕರೆಯೊಂದಕ್ಕೆ ಒಂದು ಖಂಡುಗದ ಮಟ್ಟಿಗೆ ಇಳಿಸಬೇಕೆಂತಲೂ ಕೇಳಿದರಂತೆ. ಆದಕ್ಕೂ ಆ ವರ್ತಕರು ಒಪ್ಪಲಿಲ್ಲವಂತೆ. ಗೌಡರು ರೈತರಿಗೆ ವರ್ತಕರ ಜಮೀನನ್ನು ಮಾಡಬೇಡಿರೆಂದು ಕಟ್ಟು ಮಾಡಿ, ತಮ್ಮ ಸ್ವಂತ ಜಮೀನುಗಳನ್ನೂ ತಮಗೆ ಬೇಕಾದ ಇತರ ರೈತರ ಮತ್ತು ಬ್ರಾಹ್ಮಣರುಗಳ ಜಮೀನನ್ನೂ ಅವರಿಗೆ ಕೊಡಿಸಿ, ವರ್ತಕರ ಜಮೀನುಗಳನ್ನೆಲ್ಲಾ ಒಂದು ವರ್ಷ ಪಾಳು ಬೀಳಿಸಿದ್ದಲ್ಲದೆ ಮುಂದೂ ಅದೇರೀತಿ ಪಾಳುಗೆಡಿಸುವ ಭಯವನ್ನು ಹುಟ್ಟಿಸಿದರಂತೆ ಆ ಸುತ್ತುಮುತ್ತಿನ ರೋಡು, ನಾಲೆ ಮೊದಲಾದ ಮರಹಮತ್ತು ಕೆಲಸಗಳ ಕಂಟ್ರಾಕ್ಟನ್ನು ಹಿಡಿದು, ವರ್ತಕರ ಆಡಳಿತದಿಂದ ಬಿಡುಗಡೆಯಾದ ರೈತರುಗಳಿಗೆ ಉದ್ಯೋಗವನ್ನೂ ಜೀವನೋಪಾಯವನ್ನೂ ಕಲ್ಪಿಸಿಕೊಟ್ಟರಂತೆ. ಕೊನೆಗೆ ವರ್ತಕರೇ ಗೌಡರಲ್ಲಿ ಹೋಗಿ, ತಮ್ಮ ಜಮೀನುಗಳನ್ನು ಪಾಳುಗೆಡವಿಸಬೇಡಿರೆಂದು ಕೇಳಿಕೊಳ್ಳಬೇಕಾಯಿತಂತೆ. ಮೊದಲು ಎಕರೆಗೆ ಒಂದು ಖಂಡುಗ ಗುತ್ತಿಗೆಯನ್ನು ಬಿಡವಲ್ಲರಾದವರೇ ಎಕರೆಗೆ ಒಂದೂವರೆ ಖಂಡುಗವನ್ನು ಬಿಟ್ಟು, ನಾಲ್ಕು ವರ್ಷಗಳ ಕರಾರನ್ನು ಮಾಡಿಕೊಳ್ಳಬೇಕಾಯಿತಂತೆ. ಈ ಅನುಭವ ಇನ್ನೂ ಹೊಸದಾಗಿತ್ತು. ಅದ್ದರಿಂದ ದೇವರಸೇಗೌಡರು ಹಿಡಿದ ಮತ್ತು ಬೋಧಿಸಿದ ಧರ್ಮಮಾರ್ಗವನ್ನು ವರ್ತಕರು

ಅನುಸರಿಸಿದರು. ಈ ಕೊಳದ ಪರಿಣಾಮವೇನಾಯಿತೆಂಬುದು ನನಗೆ ಚೆನ್ನಾಗಿ ಜ್ಞಾಪಕವಿಲ್ಲ. ಸಾಲಿಗ್ರಾಮದವರಂತೂ ಅವರ ಮೇಲೆ ಹೊರಿಸಿದ ಹಿಸ್ಸೆ ಹಣವನ್ನು ಸರಕಾರಕ್ಕೆ ಒಪ್ಪಿಸಿದರು. ನಂತರ ಈ ವಿಷಯವನ್ನು ಹೊತ್ತಿದ್ದ ರಥದ ಧುರ್ಯುಗಳು ಕಣಿಹಾಕಿಕೊಂಡು ವಾಹನ ಮುಂದೆ ಸಾಗದೆ ನಿಂತಿತ್ತು. ನಾನು ಆ ತಾಲ್ಲೂಕಿನಲ್ಲಿರುವ ವರೆಗೂ ಯಾವ ಕಾಮಗಾರಿಯೂ ಮಂಜೂರಾದ ನೆನಪಿಲ್ಲ. ಈಗ ಸಾಲಿಗ್ರಾಮದಲ್ಲಿ ನೀರಿನ ಸರಬರಾಯಿ ಚನ್ನಾಗಿದೆ ಎಂದು ಕೇಳುತ್ತೇನೆ.

ನಾನು ಛಾರ್ಜು ತೆಗೆದುಕೊಂಡ ಕೂಡ್ಲೆ ತಾಲ್ಲೂಕು ಅಥವ "ದಿಟ್ಟಂ" ಜಮಾಬಂದಿ ಕೆಲಸ ನನಗೆ ಕಾದಿತ್ತೆಂದು ಹೇಳಿದೇನಷ್ಟೆ. ಸ್ವಲ್ಪಕಾಲದಲ್ಲೇ 'ಹುಜೂರು' ಜಮಾಬಂದಿ ಕೆಲಸವೂ ವದಗಿತು. "ಜಮಾಬಂದಿ" ಎಂದರೆ ಆ ವರ್ಷದಲ್ಲಿ ಜಮೀನು ಕಂದಾಯಕ್ಕೆ ಸಂಬಂದಪಟ್ಟ ಬಾಬುಗಳಲ್ಲಿ ಎಷ್ಟು ಹಣ ಯಾರ್ಯಾರಿಂದ ವಸೂಲಾಗಬೇಕೆಂದು ನಿರ್ಧರಿಸುವ ಕಾರ್‍ಯ. ಹೀಗೆ ನಿರ್ಧರಿಸಬೇಕಾದರೆ ಪ್ರತಿಯೊಂದು ಗ್ರಾಮದ ಎಲ್ಲಾ ಬಾಬಿನ ಲೆಖ್ಖವನ್ನೂ ತಪಸೀಲಾಗಿ ನೋಡಿ, ಕಳೆದ ವರುಷಕ್ಕೂ ಚಾಲ್ತಿ ವರುಷಕ್ಕೂ ಇರತಕ್ಕ ವ್ಯತ್ಯಾಸಗಳನ್ನು ಠರಾಯಿಸಿ, ಏಕಸಾಲು ಕಂದಾಯದ ಬಾಬುಗಳು – ಅಂದರೆ ಸರ್ಕಾರದ ಮರಗಳ ಫಲ (ಅಮರಾಯಿ) ಸರ್ಕಾರದ ಜಮೀನು ಮೇಲೆ ದನ ಮೇಯಿಸುವ ಹಕ್ಕು (ಹುಲ್ಲುಬನ್ನಿ) ಏಲೀವಾರಿ, ಸರ್ಕಾರದ ಜಮೀನನ್ನು ಅಥವ ನೀರನ್ನು ಬಗರ್ ಹುಕ್ಕುಂ ಉಪಯೋಗಿಸಿದ್ದಕ್ಕೆ, ಮತ್ತು ರೆವಿನ್ಯೂ ಕೋಡಿನ ನಿಯಮಗಳನ್ನು ಉಲ್ಲಂಘಿಸಿದ್ದಕ್ಕೆ, ವಿಧಿಸುವ ಜುಲ್ಮಾನೆ (ತಕರಾರು ತಃಖ್ತೆ) ಇವುಗಳನ್ನು ತೀರ್ಮಾನಿಸಬೇಕು ಇದೇ ಕಾಲದಲ್ಲಿ ಫವತಿಯಾದ (ಅಂದರೆ ಗತಿಸಿ ಹೋದ) ಖಾತೆದಾರ್ರ ಸ್ಥಾನದಲ್ಲಿ, ಅವರ ವಾರಸುದಾರ ಹೆಸರನ್ನು ಲೆಖ್ಖಕ್ಕೆ ಅಮಲು ಮಾಡಬೇಕು (ನಾಂ ತಬ್ದೀಲ್). ಮೊದಲು ಈ ಕೆಲಸವನ್ನೆಲ್ಲಾ ಅಮಲ್ದಾರ್ರು ತಪಸೀಲಾಗಿ ಮಾಡುತ್ತಾರೆ. ಇದೇ ದಿಟ್ಟಂ ಜಮಾಬಂದಿ. ನಂತರ ಡೆಪ್ಯುಟಿ ಕಮಿಷನ್ನರೋ, ಸಬ್‌ಡಿವಿಜನ್ ಆಫೀಸರೋ ತಾಲ್ಲೂಕಿನಲ್ಲಿ ತಯಾರಿಸಿ

ತಹಲಿಗೆ ತರಲ್ಪಟ್ಟ ಲೆಖ್ಖಗಳನ್ನು, ಅವುಗಳ ವಿಚಾರವಾಗಿ ಬರಬಹುದಾದ ತಕರಾರು ಅಹವಾಲುಗಳ ವಿಚಾರಣೆ ಮಾಡಿ, ಖಾಯಂ ಮಾಡುತ್ತಾರೆ. ಇದೇ ಹುಜೂರು ಜಮಾಬಂದಿ.

ತಾಲ್ಲೂಕು ಜಮಾಬಂದಿ ಎಂದರೆ ತಾಲ್ಲೂಕು ಲೆಖ್ಖದ ಹುಟ್ಟಿದ ಹಬ್ಬ; ಹುಜೂರು ಜಮಾಬಂದಿ ಅದರ ನಾಮಕರಣ ಅಂತೂ ಎರಡೂ ದೊಡ್ಡಕಾರ್ಯಗಳು. ಒಂದೊಂದು ಮೊಕ್ಕಾಂನಲ್ಲೂ ನೂರು ಇನ್ನೂರು ಜನ ಗ್ರಾಮ ನೌಕರರು, ರೈತರೂ ಪಟ್ಟುಸೇರಿ, ಸರ್ಕಾರದ ಪ್ರತಿನಿಧಿಗಳನ್ನು ನಿಕಟವಾಗಿ ಸಂಬಂಧಿಸಿ ಕಷ್ಟಸುಖಗಳನ್ನು ಹೇಳಿಕೊಳ್ಳುವುದು. ಸಾಮಾನ್ಯವಾದ ಸುಭಿಕ್ಷ ಕಾಲದಲ್ಲಿ ಇದೂ ಒಂದು ಹಬ್ಬ. ಪ್ರತಿಯೊಂದು ಮೊಕ್ಕಾಂಗೂ ಆಸುಪಾಸು ಗ್ರಾಮಗಳಿಂದ ಎಲ್ಲ ವಿಧವಾದ ಸರಬರಾಯಿ ಬರುವ ಮಾಮೂಲು ಇತ್ತು. ಬಂದ ಕಕ್ಷಿಗಾರರೂ, ಗ್ರಾಮ ನೌಕರರೂ, ಒಂದೇ ಪಾಳಿಯದಲ್ಲಿ ಸೇರಿ ಊಟ ಮಾಡುತ್ತಿದ್ದರು. ತಾಲ್ಲುಕು ಜಮಾಬಂದಿ ಸರಿಯಾಗಿ ಮಾಡುವುದಕ್ಕೆ ಹದಿನೈದು ಇಪ್ಪತ್ತು ದಿನಗಳು ಹಿಡಿಯುತ್ತಿದ್ದವು. ಆ ಸಂಧರ್ಭದಲ್ಲಿ ನಾನು ಗ್ರಾಮದ ಲೆಖ್ಖ ತನಿಖೆ ಮಾಡುವುದಲ್ಲದೆ ಪ್ರತಿಯೊಂದು ಗ್ರಾಮಕ್ಕೆ ಸಂಬಂಧಪಟ್ಟ ಬಾಕಿ ಇರುವ ಕಾಗದಗಳನ್ನೆಲ್ಲಾ ಸ್ಥಳ ತನಿಖೆ ಸಹಾಯದಿಂದ ವ್ಯವಸ್ಥೆಗೆ ತರುತ್ತಿದ್ದೆ. ಪ್ರತಿಯೊಂದು ಗ್ರಾಮದಲ್ಲೂ ಮುಖಂಡರನ್ನು ಬರಮಾಡಿಕೊಂಡು ಅವರ ಪರಿಚಯವನ್ನು ಮಾಡಿಕೊಂಡು, ಅವರ ಗ್ರಾಮಗಳ ಒಳ ಜೀವನದ ವಿದ್ಯಾಮಾನಗಳನ್ನು ತಿಳಿದುಕೊಳ್ಳುತ್ತಿದ್ದೆ. ನನಗೆ ಜಮಾಬಂದಿ ತನಿಖೆ ಕ್ರಮದಲ್ಲಿ ಇತರರ ನಿದರ್ಶನವಿರಲಿಲ್ಲವಾದ್ದರಿಂದ, ಜಮಾಬಂದಿ ಉದ್ದೇಶವೇನೆಂದು ಯೋಚಿಸಿ, ಅದನ್ನು ಲಕ್ಷ್ಯದಲ್ಲಿಟ್ಟು, ಅದನ್ನು ಸಾಧಿಸುವುದಕ್ಕೆ ಏನೇನನ್ನು ಮಾಡಬೇಕೆಂಬ ಸಮಸ್ಯೆಯನ್ನು ನಾನೇ ಪರಿಹಾರ ಮಾಡಿಕೊಂಡೆ. ನಾನು ಸ್ವತಂತ್ರವಾಗಿ ನಿರ್ಮಾಣ ಮಾಡಿಕೊಂಡ ಮಾರ್ಗ ಜನಗಳ ಮೆಚ್ಚುಗೆಯನ್ನು ಪಡೆದದ್ದಲ್ಲದೆ, ಮೇಲಿನ ಆಫಿಸರುಗಳ ಅನುಮೋದನೆಯನ್ನೂ ಹೊಂದಿತು. "ದಿಟ್ಟಂ"ನಲ್ಲಿ ನನ್ನ ಕಾರ್ಯಕ್ರಮ:

ಬೆಳಿಗ್ಗೆ ಏಳು ಘಂಟೆಗೆ ಸವಾರನಾಗೋ ಪಾದಚಾರಿಯಾಗೋ

ಹೊರಟು ಆವತ್ತು ಜಮಾಬಂದಿಗಿಟ್ಟುಕೊಂಡಿರುವ ಗ್ರಾಮಗಳನ್ನೂ ಅವಕ್ಕೆ ಸಂಬಂಧಪಟ್ಟ ತಕರಾರು ಸ್ಥಳಗಳನ್ನೂ ರೈತರುಗಳ ರೂಬರೂಬು ಅಜಮಾಯಿಸಿಗೆ ಮಾಡುವುದು. ಗ್ರಾಮದ ಮುಖಂಡರುಗಳ ಪರಿಚಯ ಮಾಡಿಕೊಂಡು, ಗ್ರಾಮಗಳ ಸುಖದುಃಖಗಳನ್ನು ವಿಚಾರಿಸುವುದು; ಸುಮಾರು ಹನ್ನೆರಡುವರೆ ಅಥವ ಒಂದು ಘಂಟೆಗೆ ಪಾಳ್ಯಕ್ಕೆ ಬಂದು ಊಟ ಮಾಡುವುದು. ಅದುವರೆಗೆ ಪಾಪ, ಉಪವಾಸವಿರುತ್ತಿದ್ದಿರ? ಅಂತ ಕನಿಕರಪಡಬೇಕಾದ್ದಿಲ್ಲ. ಬೆಳಿಗ್ಗೆ ದಾರಿಯುದ್ದಕ್ಕೂ ಹಾಲು, ಹಣ್ಣು, ಎಳನೀರು, ಇವುಗಳ ಸಮರ್ಪಣೆಯಾಗುತ್ತಿತ್ತು. ಇವುಗಳನ್ನು ಸಾಧ್ಯವಾದಷ್ಟು ಸ್ವೀಕಾರ ಮಾಡುತ್ತಿದ್ದೆ. ಒಂದು ಘಂಟೆಗೆ ಮೊದಲನೆಯ ಪಂಜ್ತಿಯೂಟ. ನಿಧಾನವಾಗಿ ಭೋಜನಮಾಡಿ, ಎರಡು, ಎರಡೂವರೆ ಘಂಟೆಯುವರಿಗೂ ವಿಶ್ರಾಂತಿ. ಮೂರು ಘಂಟೆಗೆ ಜಮಾಬಂದಿ ಪ್ರಾರಂಭ ಮಾಡಿದರೆ ರಾತ್ರೆ ಒಂಭತ್ತು ಘಂಟೆಯುವರಿಗೂ ಒಂದು ಘಳಿಗೆ ಪುರಸೊತ್ತಿಲ್ಲದೆ ಕೆಲಸವಿರುತ್ತಿತ್ತು.

ಹುಜೂರು ಜಮಾಬಂದಿ ಎಂದರೆ ಡೆಪ್ಯೂಟಿ ಕಮಿಷನರೋ, ಸಬ್‌ಡಿವಿಜನ್ ಅಸಿಸ್ಟೆಂಟ್ ಕಮಿಷನರೋ ಬಂದು ಲೆಖ್ಖಗಳನ್ನು ಚಕ್‌ಮಾಡಿ, ರೈತರುಗಳಿಂದ ಬರಬಹುದಾದ ಅರ್ಜಿಗಳನ್ನು ಪರಿಶೀಲಿಸಿ, ಹುಜೂರ್ ಆಖೈರು ತೀರ್ಮಾನಕ್ಕಾಗಿ ಸಿದ್ಧವಾದ ಕೇಸುಗಳಲ್ಲಿ ಆರ್ಡರು ಮಾಡಿ ಲೆಖ್ಖಗಳಿಗೆ ರುಜು ಮಾಡುವುದು. ದಿಟ್ಟಂ ಜಮಾಬಂದಿ ಚನ್ನಾಗಿ ನಡೆದಿದ್ದರೆ ಹುಜೂರು ಜಮಾಬಂದಿ ಮೂರುನಾಲ್ಕು ದಿನಗಳಲ್ಲಿ, ಅಥವ ಮೀರಿದರೆ ಒಂದು ವಾರದಲ್ಲಿ, ಮುಗಿದುಹೋಗುತ್ತಿತ್ತು. ತಾಲ್ಲೂಕು ಸಿಬ್ಬಂದಿ, ಮತ್ತು ಗ್ರಾಮನೌಕರರ ಹೊರ್ತು ಹೆಚ್ಚಾಗಿ ಜನಗಳೂ ಬರುತ್ತಿರಲಿಲ್ಲ. ಅಮಲ್ದಾರರು ಹಾಜರಿದ್ದು ವಿವಾದವಿದ್ದ ಕೇಸುಗಳನ್ನು ಹುಜೂರು ಜಮಾಬಂದಿ ಆಫೀಸರಿಗೆ ಬಿಡಿಸಿ ಹೇಳಿ ಆರ್ಡರು ಪಡೆಯುತ್ತಿದ್ದರು. ಹುಜೂರು ಕಚೇರಿ ಗುಮಾಸ್ತರುಗಳು ತಾಲ್ಲೂಕು ಗುಮಾಸ್ತರುಗಳ ಸಹಾಯದಿಂದ ತಮಗೆ ಸಲ್ಲಬೇಕಾದ ಮಾಮೂಲು ಮರ್ಯಾದೆಗಳನ್ನು ಹೊಂದುತ್ತಿದ್ದರು. ಅಮಲ್ದಾರರು ಇದನ್ನು ತಿಳಿದೂ ತಿಳಿಯದವರ ಹಾಗೆ ಇರುತ್ತಿದ್ದರು. ಎಲ್ಲರಿಗೂ ಪ್ರತಿ

ಮೊಕ್ಕಾಂನಲ್ಲೂ ಸೊಗಸಾದ ಭೋಜನ ಅಮಲ್ದಾರ್ರ ದಿಟ್ಟಂ ಜಮಾ ಬಂದಿ ಕ್ಯಾಂಪುಗಳಲ್ಲಿ ನಿತ್ಯಕಟ್ಲೆ ಅನ್ನ, ಸಾರು, ಹುಳಿ, ಪಲ್ಯ, ಮಜ್ಜಿಗೆ. ಹುಜೂರು ಜಮಾಬಂದಿ ಕ್ಯಾಂಪುಗಳಲ್ಲಿ, ಮೇಲಿನವು ಗಳಲ್ಲದೆ ಏನಾದರೂ ಒಂದೆರಡು ಸಿಹಿಭಕ್ಷ್ಯಗಳು, ಕೀರು. ಇದರಿಂದ ರೈತರಿಗೆ ಹಿಂಸೆಯಾಗುತ್ತಿತ್ತೆಂದು ಭಾವಿಸಲಾಗದು. ಇದು ತಲೆತಲಾಂ ತರದಿಂದ ಬಂದ ಮಾಮೂಲು ಆಗಿನ ಕಾಲದಲ್ಲಿ ಮಧ್ಯಾಹ್ನದ ಹೊತ್ತಿಗೆ ಗ್ರಾಮಕ್ಕೆ ಯಾರೇ ಆಗಲಿ ಪರಸ್ಥಳದವರು ಬಂದರೆ, ಅವರನ್ನು ಉಪ ಚಾರಮಾಡಿ ಊಟಕ್ಕೆ ನಿಲ್ಲಿಸಿಕೊಳ್ಳುವುದು ಗ್ರಾಮದ ಮರ್ಯಾದೆ. ಜಾತಿಭೇದದಿಂದ ಯಾರ ಮನೆಯಲ್ಲೂ ಊಟಮಾಡದ ಆಗಂತುಕರಿಗೆ ಲವಾಜಮೆಕೊಟ್ಟು, ಅಡಿಗೆಮಾಡಿಕೊಂಡು ಊಟಮಾಡುವುದಕ್ಕೆ ಬೇಕಾದ ಅನುಕೂಲತೆಗಳನ್ನು ಮಾಡುತ್ತಿದ್ದರು. ಹಾಗೆ ಮಾಡದಿದ್ದರೆ – ಅಂದರೆ ಊಟದಹೊತ್ತಿಗೆ ಬಂದ ಪರಸ್ಥಳದವರನ್ನು ಉಪವಾಸ ಹೋಗಲು ಬಿಟ್ಟರೆ – ಗ್ರಾಮಕ್ಕೆ ಅಮರ್ಯಾದೆ, ಅಮಂಗಳ. ಈಗಲೂ ಅನೇಕ ಕಡೆ ಈ ಪದ್ಧತಿಯಿದೆ. ಈ ಸನಾತನಧರ್ಮದ ಒಂದು ವಿಶಿಷ್ಟ ನಿದರ್ಶನವೇ ಈ ಜಮಾಬಂದಿ ಸಪ್ಲೈ ಪದ್ಧತಿ ಇರಬೇಕೆಂದು ನನಗೆ ತೋರುತ್ತೆ. ಪ್ರತಿಯೊಂದು ಗ್ರಾಮದಿಂದಲೂ, ಆಯಾ ಗ್ರಾಮದ ಯೋಗ್ಯತೆಯ ಪ್ರಮಾಣದ ಮೇಲೆ ಸಾಮಗ್ರಿಗಳು – ಹಾಲು, ಮೊಸರು, ಬೆಣ್ಣೆ. ಲವಾಜಮ ಸಾಮಾನುಗಳು – ಬರುತ್ತಿದ್ದುವು. ನನಗೆ ತಿಳಿದ ಮಟ್ಟಿಗೆ ಗ್ರಾಮಸ್ಥರು ಇದನ್ನು ಅತಿಥಿಸತ್ಕಾರವೆಂದು ಸಂತೋಷದಿಂದ ಮಾಡುತ್ತಿದ್ದರು. ಈ ಸತ್ಕಾರದಲ್ಲಿ ಹೋಬಳಿಗಳಿಗೆ ನಾನು ಮುಂದು ತಾನು ಮುಂದು ಎಂದು ಸ್ಪರ್ಧೆ ಇರುತ್ತಿತ್ತು.

ನಾನು ಜಮಾಬಂದಿ ಕೆಲಸವನ್ನು ನಿಯಮದಂತೆ ಖರಾರು ವಾಕ್ಕಾಗಿ ಮಾಡಬೇಕೆಂದು ಎಷ್ಟು ಪ್ರಯತ್ನಪಟ್ಟರೂ ಒಂದು ಬಾಬಿ ನಲ್ಲಿ ನನ್ನಿಂದ ಸಾಧ್ಯವಾಗದೇ ಹೋಯಿತು. ಆ ಬಾಬು ಬಾಂದುಗಳ ತನಿಖೆ. ಪಹಣಿಯನ್ನು ಚಕ್ಕು ಮಾಡಬೇಕಾದರೆ ಬಾಂದುಗಳಲ್ಲಿ ಒಂದು ನಿರ್ದಿಷ್ಟವಾದ ಭಾಗವನ್ನಾದರೂ ಅಮಲ್ದಾರ್ರು ಅಜಮಾಯಿಷಿ ಮಾಡ ಬೇಕೆಂದು ರೂಲು. ನನ್ನ ಅನುಭವದಲ್ಲಿ ಇದು ಅಸಾಧ್ಯವಾದ ಕೆಲಸ

ವಾಗಿ ಕಂಡಿತು. ತರಿ ಜಮೀನುಗಳು, ಅಂದರೆ ನೀರಾವರಿಯಾದ್ದ ರಿಂದ ಭತ್ತ, ಕಬ್ಬು ಇವುಗಳನ್ನು ಬೆಳೆಯಬಹುದಾದ ಗದ್ದೆಗಳು, ಬಹುಶಃ ಬಹಳ ಬೆಲೆ ಬಾಳತಕ್ಕವುಗಳಾದ್ದರಿಂದ ರೈತರ ಹಿಡುವಳಿಯಲ್ಲೇ ಇರುತ್ತವೆ. ರೈತರು ಒಬ್ಬರ ಜಮೀನನ್ನೊಬ್ಬರು ಒತ್ತುವರಿ ಮಾಡುವುದು ಅಸಂಭವ. ಅವರವರ ಸಾಗುವಳಿಯ ಅನುಭವವೇ ಹದ್ದುಬಸ್ತು; ಬಾಂದುಗಳು ಅನವಶ್ಯಕ; ಅವುಗಳನ್ನು ಹಾಕುವುದು ವೃಥಾ ಶ್ರಮ; ಅದೂ ಅಲ್ಲದೆ ಅವು ಮಣ್ಣಿನವಾದರೆ ಬಹುಬೇಗ ನೀರಿನಲ್ಲಿ ಕರಗಿ ಹೋಗುತ್ತವೆ. ಖುಷ್ಕಿ ಜಮೀನುಗಳು, ಅಂದರೆ ಮಳೆಯ ನೀರಲ್ಲದೆ ಬೇರೇ ಆಸರೆ ಇಲ್ಲದ ಹೊಲಗಳೂ ಕೂಡ ಮೇಲೆ ಹೇಳಿದಂತೆ ಸಾಗುವಳಿ ಅನುಭವದ ಹದ್ದುಳ್ಳವು. ಅಲ್ಲದೆ, ಅಷ್ಟು ಬೆಲೆ ಬಾಳತಕ್ಕವುಗಳಲ್ಲ–ಏನೇ ಕಾರಣವಾಗಲಿ, ಬಾಂದುಗಳ ಸಾಮಾನ್ಯಸ್ಥಿತಿ ರಕ್ಷಣೆಯಲ್ಲ, ಲಯವೇ.

ಬಾಂದುಗಳು ನಾಶವಾಗಿದ್ದರೆ ಅವುಗಳನ್ನು ಹಾಕಿಸುವುದು; "ಶಿಖಸ್ತು" ಆಗಿದ್ದರೆ "ದುರಸ್ತು" ಮಾಡಿಸುವುದು, ತಾಲ್ಲೂಕು ಅಧಿಕಾರಿಗಳ ಕರ್ತವ್ಯ. ಆದರೆ ನಾಶವಾದ ಬಾಂದು ಎಲ್ಲಿತ್ತೆಂಬುದು ಪತ್ತೆ ಮಾಡಬೇಕಾದರೆ ಸರ್ವೆಯಾದ ಕಾಲದಲ್ಲಿ ತಯಾರ್ಮಾಡಿದ ಟಿಪ್ಪಣಿಯನ್ನಿಟ್ಟುಕೊಂಡು, ಪುನಃ "ಮೋಜಣಿ" (ಅಳತೆ) ಮಾಡಿ ನಿರ್ಧರಿಸಬೇಕು. ಬಾಂದು ಶಿಖಸ್ತೇ ದುರಸ್ತೇ ಎಂಬುದನ್ನು ಪತ್ತೆ ಮಾಡುವುದಕ್ಕೆ ಮೊದಲು ಬಾಂದನ್ನು ನೋಡಬೇಕಲ್ಲವೇ? ಒಂದು ಸಾಮಾನ ಗ್ರಾಮದಲ್ಲಿ ಐನೂರು ಸರ್ವೇ ನಂಬರುಗಳಿರುತ್ತವೆಂದು ಇಟ್ಟುಕೊಳ್ಳಿ; ಸರ್ವೆ ನಂಬರು ಒಂದಕ್ಕೆ ನಾಲ್ಕು ಮೂಲೇ ಬಾಂದುಗಳು, ಆರು ಕಲ್ಲುಗಳು, ಇದ್ದರೆ ಐದು ಸಾವಿರ ಬಾಂದುಗಳು ಪಹಣಿ ಕಾಲದಲ್ಲಿ ಅಜಮಾಯಿಷಿಯಾಗಬೇಕು. ಅವುಗಳಲ್ಲಿ ಶೇಕಡ ಹತ್ತರಷ್ಟಾದರೂ, ದಿಟ್ಟಂ ಜಮಾಬಂದಿ ಕಾಲದಲ್ಲಿ ಚಕ್ಕು ಮಾಡಬೇಕಾದರೆ ಗ್ರಾಮವೊಂದಕ್ಕೆ ಐನೂರು ಬಾಂದುಗಳಂತೆ, ತಾಲ್ಲೂಕು ಸರಾಸರಿ ಇನ್ನೂರು ಗ್ರಾಮಗಳಲ್ಲಿ ನೋಡಬೇಕು.

ನಾನು ರೂಲ್ಸಿನಂತೆ ಮಾಡೋಣವೆಂದು ಬಹಳ ಸಾಹಸಮಾಡಿದೆ.

ಬೆಳಿಗ್ಗೆ ಏಳು ಘಂಟೆಯಿಂದ ಮಧ್ಯಾಹ್ನ ಹನ್ನೆರಡರವರೆಗೆ ಎಂಟು ಸರ್ವೇ ನಂಬರುಗಳ ತನಿಖೆಯಾಯಿತು. ಆ ತನಿಖೆಯ ಫಲಿತಾಂಶ– ಅಯ್ಯೋ, ಬಾಂದುಗಳೇ ಇಲ್ಲ!– ಅಂತ. ಅನೇಕವೇಳೆ ಸಾಗುವಳೀ ದಾರನಿಗೇ ಬಾಂದು ಎಲ್ಲಿರಬೇಕೆಂಬುದು ಗೊತ್ತಿಲ್ಲ.

ಹುಜೂರು ಜಮಾಬಂದಿ ಆಫೀಸರು ನಮ್ಮ ಹಿರಿಯ ಸ್ನೇಹಿತರು, ಅಂಬಳೆ ಸುಬ್ರಹ್ಮಣ್ಯ ಅಯ್ಯರು; ರೆವಿನ್ಯೂ ಕಾನೂನನ್ನು ಚನ್ನಾಗಿ ಬಲ್ಲ ವರು; ನಿಸ್ಪೃಹರು; ಮನಸ್ಸಾಕ್ಷಿಯಾಗಿ ತಮ್ಮ ಕರ್ತವ್ಯವನ್ನು ಮಾಡ ತಕ್ಕವರು. ಏನೋ ಮಾತಿನ ಮೇಲೆ ನಾನು ಬಾಂದುಗಳ ಅಜಮಾಯಿ ಷಿಯ ದುಸ್ಸಾಧ್ಯತೆಯನ್ನು ಪ್ರಸ್ತಾಪ ಮಾಡಿದೆ, ಅವರು ಬಹಳ ತಿಳುವಳಿ ಕೆಯ ಅನುಭವದ ನಗುವು ನಕ್ಕು—

"ಅದು ಮಾಡೋ ಕ್ರಮ ಬೇರೆ ಇದೆ ರಾಮರಾಯರೆ, ಹಾಗೆ ಮಾಡಿದರೆ ಸಾಧ್ಯ. ನಾನು ಅದನ್ನು ಸರ್ವೇಟ್ರೈನಿಂಗಿನಲ್ಲಿದ್ದಾಗ ಕಲಿತೆ. ನಾಳೆ ಬೆಳಿಗ್ಗೆ ನಿಮಗೆ ತೋರಿಸಿಕೊಡುತ್ತೇನೆ" ಎಂದರು.

ಅಂಥ ಮಂತ್ರಗಳನ್ನು ಎಷ್ಟೋ ನಾನು ಹಾಕಿದ್ದೆ, ಮಾವಿನಕಾಯಿ ಬಿದ್ದಿರಲಿಲ್ಲ. ಇನ್ನೊಂದು ಮಂತ್ರದ ಉಪದೇಶವೂ ಆಗಲಿ, ಅಂದು ಕೊಂಡು—

"ಸರಿ, ಸ್ವಾಮಿ, ನಾಳೆ ಬೆಳಿಗ್ಗೆ ಹೋಗೋಣ. ಬಾಂದುಗಳ ಅಜಮಾಯಿಷಿ ಮಾಡುವ ರೀತಿಯನ್ನು ತೋರಿಸಿ ಕೊಡಿ" – ಎಂದೆ.

"ಬೆಳಿಗ್ಗೆ ಏಳು ಘಂಟೆಗೇ ಹದಿನೈದು ಇಪ್ಪತ್ತು ಜನ ರೈತರು ಬಾವುಟ– ಫಾಬರಿ ಬೀಳಬೇಡಿ, ಬಾವುಟವೆಂದರೆ ಗಳು, ಅದರ ತಲೆಗೆ ಯಾವದೋ ಒಂದು ಚಿಂದಿ ಬಟ್ಟೆ—ಬಾವುಟಗಳನ್ನು ಇಟ್ಟುಕೊಂಡು ಸಿದ್ಧವಾಗಿರಲಿ"—ಎಂದರು.

ಸರಿ, ಬೆಳಿಗ್ಗೆ ಹೊರಟೆವು. ಮಿರ್ಲೆ ಗ್ರಾಮ; ಅವತ್ತಿನ ಮಧ್ಯಾಹ್ನದ ಊಟ ಮತ್ತು ಮೊಕ್ಕಾಂ ಹೊಳೆಯಾಚೆ ಚುಂಚನಕಟ್ಟೆ ಯಲ್ಲಿ– ಊರಿನವರು ಸುಮಾರು ಐವತ್ತು ಆಳು "ಬಾವುಟ" ಪಾಣಿ ಗಳು ಸಿದ್ಧವಾಗಿದ್ದರು. ಹಿಂದೆ—ಅಂದರೆ ವೀರಗಲ್ಲುಗಳ ವೀರರ ಕಾಲದಲ್ಲಿ– ಬಾಜೂ ಗ್ರಾಮದ ದನಗಳನ್ನು ದರೋಡೆ ಮಾಡಿ ತರ

ಬೇಕಾದರೆ ಊರಿನ ವೀರ ಶೂರರೆಲ್ಲಾ ಹೀಗೇ ಜಮಾಯಿಸುತ್ತಿದ್ದಿರ ಬೇಕೆಂದು ತೋರಿತು.

ಬಾಂದುಗಳ ಅಜಮಾಯಿಷಿ— ನಮ್ಮ ಸಾಬ ಸ್ನೇಹಿತರೊಬ್ಬರು ಹೇಳಿದರು, ಬಾಂದುಗಳೇ ಇಲ್ಲದಾಗ ಬಾಂದುಗಳ ಅಜಮಾಯಿಷಿ ಎಲ್ಲಿ ಬಂತು? "ಬಾಂದುಗಳಿಲ್ಲ"ದ ಅಜಮಾಯಿಷಿ — ಪ್ರಾರಂಭವಾಯಿತು. ಕೂಡಲೆ ನಮ್ಮ ಬಾವುಟಗಳ ಸೇನೆ ದಿಕ್ಪಾಲಾಗಿ ಚದುರಿತು.

ಅಲ್ಲಿ ಬಾಂದುಕಲ್ಲು ಇರಬೇಕು, ನೋಡೋ, ಶಿದ್ದೇಗೌಡ" – ಎಂದು ಸಾಹೇಬರು,

"ನೋಡೋ" ಅಂತ ಅಮಲ್ದಾರರು. "ನೋಡೋ" ಅಂತ ಶೇಕದಾರರು, "ದೇಖ್ರೇ" ಅಂತ ದಫೇದಾರ್ ರಜಾ ಹುಸ್ಸೇನ್ ಸಾಬರು.

"ಇಲ್ಲ, ಬುದ್ಧಿ" ಅಂತ ಶಿದ್ದೇಗೌಡರು.

ಇದೇ ನಾಟಕ ಹತ್ತು ಹನ್ನೊಂದು ಘಂಟೆಯವರೆಗೂ. ನಾಲ್ಕು ಘಂಟೆ ಕಾಲ ಬಾವುಟಗಳೆಲ್ಲ ಅಂಡಲೆದವು; ನಾಲ್ಕೈದು ಸರ್ವೆ ನಂಬರುಗಳು ಮಾತ್ರ ಆದವು – ಅಂದರೆ, ಅವುಗಳಲ್ಲಿ ಬಾಂದುಗಳು ಗೈರ್ ಹಾಜರೆಂದು ಅಧಿಕಾರಯುಕ್ತವಾಗಿ ಗೊತ್ತಾಯಿತು. ಆಮೇಲೆ– ಸ್ಥಳ ದೇವತೆ ಮಿರ್ಲೆಯಮ್ಮನ ಮಹಿಮೆಯಿಂದ ನಮ್ಮ ಶ್ರಮವು ಲಘುವಾಗುತ್ತಾ ಬಂತು. "ಅಲ್ಲಿ ಕಲ್ಲಿದೆಯೇನೋ, ಮಾದೇಗೌಡ?" ಎಂದು ಸಾಹೇಬರು ಮರದ ನೆರಳಿನಲ್ಲಿ ನಿಂತೋ, ಕೊಡೇ ಕೆಳಗಿನಿಂದಲೋ ಕೇಳುವರು.

"ಅದೇ ಬುದ್ಧಿ!"

"ದೇಖೋ, ರಜಾ ಹುಸ್ಸೇನ್" ಎಂದು ಅಮಲ್ದಾರರು.

"ಹೈ, ಖಾವಿಂದ್" ಎಂದು ಸಾಬರು.

ತರುಣದಲ್ಲಿ ಕಷ್ಟವಾಗಿದ್ದ ಕೆಲಸ, ಬಿಸಿಲು ಏರುತ್ತಾ, ಏರುತ್ತಾ ಸುಲಭವಾಗುತ್ತಿದ್ದದ್ದು ನೋಡಿ– ಆಹಾ, ಇದೇ ಸಾತ್ವಿಕ ವ್ಯವಹಾರ, ನೋಡಿದಿರಾ? "ಯತ್ತದಗ್ರೇ ವಿಷಮಿವ, ಪರಿಣಾಮೆ ಅಮೃತೋಪಮಂ" ಎಂದುಕೊಂಡೆ. ಆದರೂ, ಇಂತಹ ಸುಖವು ನಿಜವಾಗಿಯೂ ನಮ್ಮದೇ ಎಂದು ಸಂದೇಹ ತೋರಿ, "ಫತ್ತರ್ ಹೈ ಕ್ಯಾಜಿ?" ಎಂದೆ.

"ಹೈ ಖಾವಿಂದ್" ಎಂದ.

ಇನ್ನೊಂದು ಸಲ ವರದಿಯಾದಾಗ, ನಾನು ಅಲ್ಲಿಗೆ ಹೋಗಿ ನೋಡಿ, "ಕಃ ಜೀ, ಫತ್ತರ್?" ಎಂದೆ.

ಅವನು ಮುಗುಳು ನಗೆ ಕೂಡ ಇಲ್ಲದೆ, "ಯಃ ಸಬ್ ಫತ್ತರೇಚ್ ನಾ ಹುಜೂರ್ ಅವರ್ ಕ್ಯಾ ಹೈ ಏ ಉಜಾಡ್ ಖೇತ್‌ಮೇ?" ಅಂದ.

"ಠೀಕ್ – ತುಂ ಬಹುತ್ ಅಃಖಲ್ವಾನ್" ಎಂದು ಹೇಳಿ ನನ್ನ ಮರದ ನೆರಳಿಗೆ ವಾಪಸು ಬಂದೆ.

ಹೀಗೆ ಬಾಂದುದೇವತೆಗಳು ಭಕ್ತರಿಗೆ ಪ್ರತ್ಯಕ್ಷವಾದ ಬಳಿಕ ನಮ್ಮ ಕೆಲಸಗಳು ಸಲೀಸಾಗಿ ನೆರವೇರಿ, ನಾವುಗಳು ಮಧ್ಯಾಹ್ನಕ್ಕೆ ಸರಿಯಾಗಿ ಚುಂಚನಕಟ್ಟೆ ಮೊಕ್ಕಾಮಿಗೆ ಸಿದ್ಧವಾಗಿದ್ದ ಭೋಜನಕ್ಕೆ ಶ್ರದ್ಧೆಯಿಂದ ಕುಳಿತು, ಆ ಕಾರ್ಯವನ್ನು ಸ್ವಲ್ಪ ಕಾಲ ಏಕಾಗ್ರಚಿತ್ತದಿಂದ ನಿರ್ವಹಿಸಿದೆವು. ನಂತರ–

"ನೋಡಿದಿರ, ರಾಮರಾಯರೆ, systematic (ಕ್ರಮಬದ್ಧವಾದ) ಮಾರ್ಗದಿಂದ ಕಷ್ಟವಾದ ಕೆಲಸ ಕೂಡ ಹ್ಯಾಗೆ ನಾಗುತ್ತೆ? ಬೆಳಿಗ್ಗೆ ಸುಮಾರು ಸಾವಿರ ಬಾಂದುಗಳನ್ನು ಅಜಮಾಯಿಷೆ ಮಾಡಿದೆವಲ್ಲವೆ?" ಎಂದರು ಸಾಹೇಬರು ('ಸಾಹೇಬರು' ಎಂದರೆ ಅಸಿಸ್ಟೆಂಟ್ ಕಮಿಷನ್ನರು; ಅದಕ್ಕೆ ಮೇಲ್ಪಟ್ಟ ಆಫೀಸರರು ಅಮಲ್ದಾರರು 'ಯಜಮಾನರು')

"ಹೌದು ಸರ್. ಆದರೆ ಬಾಂದುಗಳ ಇನ್‌ಸ್ಪೆಕ್ಷನ್‌ನಲ್ಲಿ system (ಕ್ರಮದ) ಗಿಂತ ಅನುಭವ ಮುಖ್ಯವಾದ್ದು" ಎಂದೆ.

ರಜಾ ಹುಸ್ಸೇನ್ ದಫೇದಾರ್ರು ಬಹಳ ಅನಭವಸ್ಥರು.

ಯಡತೊರೆ ಬಹಳ ಪುಂಡ ತಾಲ್ಲೂಕೆಂದು ನನ್ನನ್ನು ಜನರು ಹೆದರಿಸಿದ್ದರು. Difficult Taluk, turbulent people, dishonest village servants, heavy arrears — ಎಂದು Sparkes ಸಾಹೇಬರು ನನಗೆ ಎಚ್ಚರಿಸಿದ್ದರು.

ನನಗೆ ಮೊದಲು ಅರ್ಥವಾಗಲಿಲ್ಲ. ಜಮಾಬಂದಿಯಾದಮೇಲೆ, ಹಿಂದಿನ ಕಂದಾಯ ಬಾಕಿಯಾಗಿದ್ದ ಒಂದು ಗ್ರಾಮಕ್ಕೆ ಹೋಗಿ ವಸೂಲಿ

ಗಾಗಿ ಒಂದು ವಾರ ಮೊಕ್ಕಾಂ ಮಾಡಿದೆ. ಬರಾವರ್ದುದಾರ ಶ್ಯಾನು ಭೋಗ ವಸೂಲಾದ ಕಂದಾಯದ ಹಣವನ್ನು ದಸ್ತು (ದುರಪಯೋಗ) ಮಾಡಿದ್ದಾನೆಂದು, ಅವನನ್ನು ಸಸ್ಪೆಂಡ್ ಮಾಡಿ ನಂಜಪ್ಪನೆಂಬುವನನ್ನು ಗುಮಾಸ್ತೆಯಾಗಿ ನಾನು ಹೋಗುವುದಕ್ಕೆ ಮೊದಲೇ ನೇಮಿಸಿದ್ದರು. ನಂಜಪ್ಪ ಬಹಳ ಬುದ್ಧಿವಂತ. ಸಸ್ಪೆಂಡ್ ಆಗಿದ್ದ ಶ್ಯಾನುಭೋಗನ ಹೆಸರು ಸುಬ್ಬಯ್ಯನೆಂದು ಜ್ಞಾಪಕ. ಅವನು ಬುದ್ಧಿವಂತನಲ್ಲ, ಆದರೆ ಸ್ಥಳವಂದಿಗ; ಗ್ರಾಮದ ಶ್ಯಾನುಭೋಗರ ವಂಶದವನು. ಸ್ವಾಭಾವಿಕ ವಾಗಿ ನಂಜಪ್ಪನಿಗೂ, ಸುಬ್ಬಯ್ಯನಿಗೂ ಬದ್ಧದ್ವೇಷ. ಈ ದ್ವೇಷದ ಮೂಲವಾಗಿ ಊರಿನ ಕುಳಗಳಲ್ಲಿ ಎರಡು ಕಕ್ಷಿ.

ನಾನು ಬಾಕಿ ಪಟ್ಟಿ ತಯಾರ್ಮಾಡಿಸಿ ಕುಳಗಳನ್ನು ಹೇಳಿಕಳಿ ಸಿದೆ. ಬರಲಿಲ್ಲ ಹಿಡಿತರಲು ಜನಗಳನ್ನು ಬಿಟ್ಟೆ, ತಲೆತಪ್ಪಿಸಿಕೊಂ ಡರು. ಆಮೇಲೆ ಯತ್ನವಿಲ್ಲದೆ ಬಾಕಿಯನ್ನಿಟ್ಟುಕೊಂಡಿರುವ ರೈತರಿಗೆ ನಾಲೆಯಿಂದ ನೀರು ಕೊಡಬೇಡಿರೆಂದು ನಾಲಾ ಮಣೇಗಾರುರಗಳಿಗೆ ತಾಕೀದ್ ಮಾಡಿದೆ. ಸೌಡಿಗಳನ್ನು ಕಾವಲು ಹಾಕಿದೆ. ರಾತ್ರಿಯ ಹೊತ್ತು ಸೌಡಿಗಳನ್ನು ದಬಾಯಿಸಿಯೋ, ಸರಿಮಾಡಿಕೊಂಡೋ, ನೀರನ್ನು ಬಿಟ್ಟುಕೊಂಡರು. ಅಂಥ ಕೆಲವರಿಗೆ ನಾಲಾ ತಕ್ಸೀರುಗಳಿಗಾಗಿ ಜುಲ್ಮಾನೆ ಹಾಕಿದೆ. ಕೊನೆಗೆ ತಾಲ್ಲೂಕಿನಲ್ಲಿದ್ದ ಸಿಬ್ಬಂದಿಯನ್ನೆಲ್ಲಾ ಮಿರ್ಲೆ ಗ್ರಾಮಕ್ಕೆ ಕರಸಿಕೊಂಡು, ಒಬ್ಬೊಬ್ಬರಿಗೆ ಇಷ್ಟು ಕುಳಗಳೆಂದು ಹಂಚಿಹಾಕಿ, ಹರತರದೂದು ಮಾಡಿ ಬಾಕೀ ವಸೂಲ್ಮಾಡಬೇಕು, ಇಲ್ಲವಾದರೆ, ಕುಳವನ್ನು ಹಾಜರ್ಮಾಡಬೇಕೆಂದು ಉಗ್ರವಾಗಿ ಆಜ್ಞಾಪಿ ಸಿದೆ. ಅವರುಗಳ ಸಹಾಯಕ್ಕಾಗಿ ಬೇರೆ ಗ್ರಾಮಗಳಿಂದ ಆಳುಗಳನ್ನು ಕರೆಯಿಸಿ ಕೊಟ್ಟೆ. ಆಮೇಲೆ ಕುಳಗಳು ಹಾಜರಾಗುವುದಕ್ಕೆ ಪ್ರಾರಂಭ ಮಾಡಿದರು.

ಕೆಲವು ಬಾಕೀದಾರರು ಹಣ ಪಾವತಿ ಮಾಡಿದರು.

ಮತ್ತೆ ಕೆಲವರು ವಾಯಿದೆ ಮಾಡಿಕೊಂಡರು. ಅನೇಕರು ತಾವು ಹಣ ಪೂರ್ತ ಹಿಂದಿನ ಶ್ಯಾನುಭೋಗರಿಗೆ ಕೊಟ್ಟು ರಸೀತಿ ಪಡೆದಿರು ತ್ತೇವೆ, ಬಾಕಿ ಏನೂ ಕೊಡಬೇಕಾಗಿಲ್ಲವೆಂದು ರಸೀತಿಗಳನ್ನು ಹಾಜ

ಮಾಡಿದರು. ಸರಿ, ಪ್ರತಿಯೊಂದು ರಸೀತಿಯಮೇಲೂ ತನಿಖೆ ನಡೆಯ ಬೇಕು. ಮಾಜಿ ಶ್ಯಾನುಭೋಗ ಸುಬ್ಬಯ್ಯ, ಗುಮಾಸ್ತೆ ಶ್ಯಾನುಭೋಗ ನಂಜಪ್ಪ, ಗ್ರಾಮನೌಕರರು– ಇವರುಗಳ ಎದುರಿಗೆ ವಿಚಾರಣೆ ನಡಸಿದೆ ವಿಚಾರಣೆ ಮಾದರಿಯೊಂದನ್ನು ಕೊಟ್ಟರೆ ಸಾಕು; ಅಮಲ್ದಾರರ ಕೋರ್ಟು–

ಕೆಂಪೇಗೌಡ ಬಿನ್ ಪರಶುರಾಮೇಗೌಡನ ಪ್ರವೇಶ.

ಆರ್ಡರ್ಲಿ: ಕಟ್ಟ್ಯನಡ.

(ಕೆಂಪೇಗೌಡ, ಕಟ್ಟ್ಯವನು)

ಅಮಲ್ದಾರರು: ನಂಜಪ್ಪ, ಈ ಕುಳದಿಂದ ಎಷ್ಟು ಬಾಕೀ ಬರ ಬೇಕು?

ಶ್ಯಾನುಭೋಗ ನಂಜಪ್ಪ: ೧೧೭ ರೂಪಾಯಿ. ಚಾಲ್ತೀದು ೩೯ ರೂಪಾಯಿ ದೇಖೀಲು.

ಕೆಂಪೇಗೌಡ: ಚಾಲ್ತೀದು ಉಂಟು ಸೋಮಿ, ಕೊಡೋದಿಲ್ಲ ಅಂತೀನ? ಹಿಂದಿಂದು ಯಾವುದು ಶ್ಯಾನುಭೋಗ್ರೆ?

ಶ್ಯಾನುಭೋಗ ನಂಜಪ್ಪ: ಗುದಸ್ತ ಸಾಲಿನದು, ಅದರ ಹಿಂದಣ ಸಾಲಿಂದು.

ಕೆಂಪೇಗೌಡ: ನಾನು ಕೊಟ್ಟವಿನಿ ಈ ರಶೀದಿಗಳ ನೋಡಿ.

ಶ್ಯಾನುಭೋಗ ನಂಜಪ್ಪ: (ರಶೀದಿಗಳನ್ನು ಇಸುಕೊಂಡು ಅಮಲ್ದಾರರ ಮುಂದಿಟ್ಟು) ರಶೀದಿಗಳೇನೋ ಸರಿಯಾಗಿವೆ ಮಹಾಸ್ವಾಮಿ, ಅಂದರೆ ಖಾತೆಗೆ ಖಿರ್ದಿಗೆ ಜಮಾ ಬಂದಿಲ್ಲ; ಹಣ ಸರ್ಕಾರಕ್ಕೆ ಬಂದಿಲ್ಲ.

ಅಮಲ್ದಾರರು: ಶ್ಯಾನುಭೋಗ ಸುಬ್ಬಯ್ಯ ಎಂದು ರುಜು ಇದೆ. ನೀನು ಯಾರತಾವ ಹಣ ಕೊಟ್ಟೆ ಗೌಡ?

ಕೆಂಪೇಗೌಡ: ಯಾರತಾವಲೆ? ಮತ್ಯಾರತಾವ ಬುದ್ದಿ? ಸರ್ಕಾರಿ ಶ್ಯಾನುಭೋಗ ಸುಬ್ಬಯ್ಯನೋರ ತಾವ.

ಅಮಲ್ದಾರರು: ಏನಯ್ಯ, ಸುಬ್ಬಯ್ಯ? ಇದು ನೀನು ಕೊಟ್ಟ ರಶೀದಿಯೋ?

ಸುಬ್ಬಯ್ಯ : ನೋಡದೆ ಹ್ಯಾಗೆ ಹೇಳಲಿ ಸ್ವಾಮಿ? (ರಸೀದಿಯನ್ನು ಕೈಲಿ ತೆಗೆದುಕೊಂಡು) ಸತ್ಯವಾಗೂ ನಾನುಕೊಟ್ಟ ರಸೀದಿಯಲ್ಲ ಮಹಾ ಸ್ವಾಮಿ, ನನ್ನ ರುಜುವಿನಂತೆಯೇ ಯಾರೋ ರುಜು ಮಾಡಿದ್ದಾರೆ. ಅಪ್ಪಣೆಯಾದರೆ ಎರಡು ಮಾತು ಕೇಳುತ್ತೇನೆ ಕುಳಾನ.

ಅಮಲ್ದಾರರು: ಕೇಳಿ.

ಸುಬ್ಬಯ್ಯ: ನೋಡು ಕೆಂಪೇಗೌಡ, ನೀನು ಒಳ್ಳೇ ಮನೆ ಯೋನು, ಪರಶುರಾಮೇಗೌಡ ಧರ್ಮರಾಯನಂತ ಮನುಷ್ಯ–ನಿಜವಾಗಿ ಹಣವನ್ನು ಕೈಗೆ ಕೊಟ್ಯಾ, ಹೇಳು?

ಕೆಂಪೇಗೌಡ: ಕೊಡಲಿಲ್ಲವ, ಶ್ಯಾನುಭೋಗರೆ?

ಸುಬ್ಬಯ್ಯ: ನಿಜವಾಗಿ ಹೇಳು, ನಂಜಪ್ಪನವರು ನನ್ನ ರುಜು ಹಾಕಿ, ನಿನಗೆ ಶಿಖಾವಟ್ಟು ಮಾಡಲಿಲ್ಲವೇ? ಕಂದಾಯ ಮಾಫು ಮಾಡಿ ಸುತ್ತೇನೆ, ಸುಬ್ಬಯ್ಯನಿಗೆ ಹಣ ಕೊಟ್ಟೆ ಅಂತ ಹೇಳಿದರೆ ಅಂತ ಹೇಳಲಿ ಲ್ಲವೇ?

ಶ್ಯಾನುಭೋಗ ನಂಜಪ್ಪ: ನೋಡಿ, ಮಹಾಸ್ವಾಮಿ, ಅವನು ಜೊಗಳೋದು?

ಅಮಲ್ದಾರರು: ನಂಜಪ್ಪ ಜೋಕೆ, ನಮ್ಮ ಎದುರಿಗೆ ಹಾಗೆಲ್ಲಾ ಮಾತನಾಡಬಾರದು. ಮರ್ಯಾದೆಯಾಗಿ ಹೇಳೋದನ್ನು ಹೇಳಬೇಕು–ವಗೈರೆ.

ಕೊನೆಗೆ–

ಕಂದಾಯವನ್ನು ಪಟೇಲನ ಕೈಗೆ ಕೊಡಬೇಕು; ಶ್ಯಾನುಭೋಗನ ಕೈಗಲ್ಲ. ಶ್ಯಾನುಭೋಗ ಸುಬ್ಬಯ್ಯ ನಿನ್ನಿಂದ ಹಣ ವಸೂಲ್ಮಾಡಿ ಕೊಂಡು ನಿನಗೆ ಮೋಸ ಮಾಡಿದ್ದರೆ, ಅದನ್ನು ರುಜುವಾತು ಮಾಡಲು ನಿನಗೆ ಶಕ್ತಿ ಇದ್ದರೆ ಅವನನ್ನು ಪ್ರಾಸಿಕ್ಯೂಟು ಮಾಡು. ಪಟೇಲ ಶ್ಯಾನುಭೋಗರಿಬ್ಬರ ರುಜುವುಳ್ಳ ಕ್ರಮವಾದ ರಸೀದಿ ಇದ್ದರೆ ಅದನ್ನು ಗಣನೆಗೆ ತಂದು ವಿಚಾರಿಸುತ್ತೇವೆ. ಇಲ್ಲವಾದರೆ ನಿನ್ನನ್ನು ಬಾಕೀದಾರ ನೆಂದೇ ಭಾವಿಸಿ ಕಾನೂನಿನಂತೆ ಕ್ರಮ ಜರುಗಿಸುತ್ತೇವೆಂದು ಹೇಳಿದೆ.

ಅನೇಕ ಗ್ರಾಮಗಳಲ್ಲಿ ಕೆಲಸಕ್ಕೆ ಬಾರದ ಲಿಖಾವಟ್ಟುದಾರರಲ್ಲದ ಪಟೇಲರುಗಳಿದ್ದರು. ಇದು ವಂಶ ಪಾರಂಪರ್ಯವಾದ (hereditary) ಪಟೇಲಿ ಹಕ್ಕಿನ ಫಲ. ಅಂಥ ಕಡೆಗಳಲ್ಲಿ ಶ್ಯಾನುಭೋಗರೇ ಕಂದಾಯ ವನ್ನು ವಸೂಲ್ಮಾಡಿ, ರಸೀದಿಗಳನ್ನು ಕೊಟ್ಟದ್ದನ್ನು ಸರ್ಕಾರವೂ ಒಪ್ಪು ತ್ತಿತ್ತು ಮಿರ್ಲೆಯಲ್ಲೂ ಇದೇ ಆಚರಣೆ ಬಹು ಕಾಲದಿಂದಲೂ ಇತ್ತು. ಆದ್ದರಿಂದ ನನ್ನ ತೀರ್ಪು ನನಗೆ ಅಷ್ಟು ನ್ಯಾಯವಾಗಿ ತೋರಲಿಲ್ಲ. ಆದರೂ ಅಲ್ಲಿನ ಸಮಸ್ಯೆಗೆ ಬೇರೇ ಉಪಾಯ ಕಾಣದೆ ರೆವೆನ್ಯೂ ಕಾನೂ ನಿನ ಮಾತಿನ ಸರಣಿಯನ್ನೇ ಕಠಿಣವಾಗಿ ಪ್ರಯೋಗ ಮಾಡಬೇಕಾ ಯಿತು. ಇದರ ಫಲವಾಗಿ ಮಾಜಿ ಶ್ಯಾನುಭೋಗ ಸುಬ್ಬಯ್ಯನ ಮೇಲೆ ಕುಳಗಳು ದಾಖಲ್ಮಾಡಿದ ಮೂರು ನಾಲ್ಕು ನಂಬಿಕೆ ದ್ರೋಹ, ಮೋಸದ ಮೊಕದ್ದಮೆಯಲ್ಲಿ ರುಜುವಾತ್ತು ಸಾಲದೆ ಬಿದ್ದುಹೋದವು

ನಾನು ಯಡತೊರೆ ತಾಲ್ಲೂಕಿಗೆ ಹೋಗುವುದಕ್ಕೆ ಕೆಲವು ದಿನಗಳ ಹಿಂದೆ ಅಬ್ಬೂರು ಗ್ರಾಮದಲ್ಲಿ ನಡೆದ ಭಯಂಕರ ಕೊಲೆಗಳ ವಿಚಾರ ಮೊದಲೇ ಹೇಳಿದ್ದೇನಷ್ಟೆ. ಆ ಕೊಲೆಪಾತಕರು ದೊಡ್ಡ ಹೈದ, ಪುಟ್ಟ ಸ್ವಾಮಿ ಎಂಬ ಅಣ್ಣ ತಮ್ಮಂದಿರು, ಸೆಷನ್‌ನಲ್ಲಿ ತಕ್ಸೀರು ಸಾಬೀತಾಗಿ ಮರಣದಂಡನೆ ವಿಧಿಸಲ್ಪಟ್ಟರು. ಅವರು ಮಾಡಿದ ಅಪ್ಪೀಲು ಛೀಫ್ ಕೋರ್ಟಿನಲ್ಲಿ ವಜಾ ಆಗಿ, ವಿಧಿಸಿದ ಶಿಕ್ಷೆ ಜಾರಿಯಾಗುವುದನ್ನು ಕಾದು ಅವರು ಮೈಸೂರು ಜೈಲಿನಲ್ಲಿದ್ದರು. ಫಾಸೆ ಸಜ ಜಾರಿಯಾಗುವುದಕ್ಕೆ ಎರಡು ಮೂರು ದಿನ ಮಾತ್ರ ಉಳಿದಿರುವಾಗ ಇವರು ರಾತ್ರೆಯ ಕತ್ತಲಲ್ಲಿ ತಮ್ಮ ಸಾಹಸದಿಂದಲೋ ಇತರರ ಕುಮ್ಮಕ್ಕಿನಿಂದಲೋ ತಮ್ಮ ಮೇಲೆ ಕಾವಲಿದ್ದ ವಾರ್ಡರನ್ನು (ಕಾವಲುಗಾರನನ್ನು) ಖೂನ್ ಮಾಡಿ, ಅವನ ಕಾಲಿಗೆ ಕಟ್ಟಿದ್ದ ಪಟ್ಟಿಗಳ ಸಹಾಯದಿಂದ ಜೈಲು ಕಾಂಪೌಂಡ್ ಗೋಡೆ ಯನ್ನು ಏರಿ ದಾಟಿ ಪರಾರಿಯಾದರು. ಇವರು ತಪ್ಪಿಸಿಕೊಂಡ ಸಂಗತಿ ಮಾರನೆಯ ಬೆಳಗ್ಗಿನವರಿವಿಗೂ ಪತ್ತೆಯಾಗಲಿಲ್ಲ. ತಿಳಿದಮೇಲೆ ಬಹಳ ಕೋಲಾಹಲವಾಯಿತು. ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರು Sparkes ಸಾಹೇ ಬರು ದೊಡ್ಡ ಶೌರ್ಯದಿಂದ ರಿಜರ್ವ್ ಪೋಲೀಸಿನವರನ್ನು ಕರೆದು ಕೊಂಡು ಹೋಗಿ, ಜೈಲಿನ ಎರಡು ಮೂರು ಮೈಲಿಗಳ ಫಾಸಲೆಯಲ್ಲಿನ

ಕಬ್ಬಿನ ಗದ್ದೆಗಳನ್ನೆಲ್ಲಾ ಹೊಕ್ಕು, ಬಂದೂಕು ಹಾರಿಸಿ, ಬಹಳ ಸಾಹಸ ಮಾಡಿದರೆಂದು ಕೇಳಿದೆ. ಸರ್ಕಾರದ ಮದ್ದು ಗುಂಡು ಪೋಲೀಸಿನವರ ಬೂಟ್ಸು ಇವುಗಳಿಂದ ಕಬ್ಬಿಗೆ ನೋವಾಯಿತೇ ಹೊರತು ಮತ್ತೇನೂ ಪ್ರಯೋಜನವಾಗಲಿಲ್ಲ ಆಮೇಲೆ ಈ ಜೀವಗಳ್ಳ ಪಾತಕಿಗಳು ತಮ್ಮ ಜನ್ಮಸ್ಥಳಕ್ಕೇ ಸೇರಿ, ಅಲ್ಲಿನ ತಮ್ಮ ಸ್ವಂತ ಜನಗಳ ಸಹಾಯದಿಂದ ಎಲ್ಲಿಯೋ ಅಡಗಿಕೊಂಡಿದ್ದಾರೆ ; ಇವರು ಹಗಲೆಲ್ಲಾ ಹೊಳೆಯೊಳಗಿನ ತಿಟ್ಟುಗಳಲ್ಲೋ, ಜಂಗಲಿಗಳಲ್ಲೋ ಮರೆಯಾಗಿದ್ದು, ರಾತ್ರಿ ಹೊತ್ತಿನಲ್ಲಿ ಒಂದೊಂದು ವೇಳೆ ಊರಿಗೆ ಆಹಾರಕ್ಕೆ ಬರುವುದುಂಟು ; ಒಂದೊಂದು ವೇಳೆ ಊರಿನವರೆ ಅವರಿಗೆ ತಿಂಡಿ ತೆಗೆದುಕೊಂಡುಹೋಗುವುದೂ ಉಂಟು, ಎಂದು ಬಾತ್ಮಿ ಬಂತು. Sparkes ಸಾಹೇಬರು ಈ ಬಾತ್ಮೀ ಮೇಲೆ ಯಡತೊರೆಗೆ ಬಂದು ಅಬ್ಬೂರಿನ ಆಸುಪಾಸಿನಲ್ಲಿ ಎರಡು ಮೂರು ದಿನ ಕುದುರೆಯನ್ನು ಓಡಿಸಾಡಿದರು. ನಾನೂ ಅವರ ಸಂಗಡ ಒಂದು ಬಂದೂಕನ್ನು ಹಿಡಿದು ಸವಾರಿ ಮಾಡಿದೆ ಆಮೇಲೆ ಹೇಳಿದೆ ಸಾಹೇಬರಿಗೆ ಬಹಳ ವಿನಯವಾಗಿ— ಈ ಥಾಳಿಗೆ ಸಿಕ್ಕಬೇಕಾಗಿದ್ದರೆ ಅವರು ಪಾತಕಿಗಳು ಮಾತ್ರವಲ್ಲ, ಹುಚ್ಚರೂ ಆಗಿರಬೇಕು. ಅವರನ್ನು ಹಿಡಿಯಬೇಕಾದರೆ ನಮಗೆ ನಂಬಿಕಸ್ಥರಾದ ಬಾತ್ಮಿದಾರರು ಬೇಕು ; ಬಾತ್ಮಿದಾರರು ಖಾತರಿ ಬಾತ್ಮಿ ಕೊಡಬೇಕಾದರೆ ಪರಾರಿಯಾಗಿರುವವರ ಕಡೆಯವರ ಸಂಪರ್ಕವನ್ನು ಮಾಡಿ, ಅವರ ನಂಬಿಕೆಯನ್ನೂ ಸಂಪಾದಿಸಬೇಕಾಗುತ್ತದೆ. ಇದಕ್ಕೆ ಕಾಲ ಬೇಕು ; ಹಣವೂ ಬೇಕು. ಜೀವದ ಆಸೆಯನ್ನು ತೊರೆದು ಧೂರ್ತರಾಗಿರುವ ಕೊಲೆಪಾತಕರನ್ನು ಬೇಟೆಯಾಡುವುದು ಹುಲಿ ಷಿಕಾರಿಗಿಂತ ಅಪಾಯವಾದ ಕೆಲಸ. ಪಾತಕಿಗಳಿಗೆ ಅನ್ನವನ್ನು ಕೊಡುವ ಸ್ನೇಹಿತರು ಆಯುಧಗಳನ್ನು ಕೊಟ್ಟಿರದೇ ಇರಲಾರದು, ಎಂದು.

ಕೊನೆಗೆ ಸಾಹೇಬರು ನನ್ನ ವಾದಕ್ಕೆ ಒಪ್ಪಿ, ಪಾತಕಿಗಳನ್ನು ಹಿಡಿದುಕೊಟ್ಟವರಿಗೆ 1000 ರೂಪಾಯಿಗಳಬಹುಮಾನವನ್ನೂ, ಹಿಡಿಯಲು ಸಹಾಯ ಮಾಡಿದವರಿಗೆ ಅವರ ಕುಮ್ಮಕ್ಕಿನ ಯೋಗ್ಯತೆಗೆ ತಕ್ಕಂತೆ

ಇನಾಮುಗಳನ್ನೂ, ಕೊಡುವುದಾಗಿ ಸರ್ಕಾರದಿಂದ ಮಂಜೂರಾತಿ ಪಡೆದು ಜಾಹಿರಾತುಗಳನ್ನು ಪ್ರಕಟಿಸಿದರು.

ನನಗೆ ನಗದು ಬಹುಮಾನದ ಅಪೇಕ್ಷೆ ಈಷತ್ತೂ ಇಲ್ಲದಿದ್ದರೂ, ಹುಲಿ ಶಿಕಾರಿಗೆ ಮೀರಿದ ಸಾಹಸವನ್ನಪೇಕ್ಷಿಸುವ ಈ ಕೊಲೆಪಾತಕರ ಶಿಕಾರಿ ಮಾಡಬೇಕೆಂದು ಬಹಳ ಉತ್ಸಾಹ ಉಂಟಾಯಿತು. ಇದರಿಂದ ನನಗೆ ಸರ್ಕಾರದಲ್ಲಿ ಒಳ್ಳೆಯ ಹೆಸರು – ಅದಕ್ಕಿಂತಲೂ ಹೆಚ್ಚಾಗಿ ಜನಗಳಲ್ಲಿ ಖ್ಯಾತಿ-ಬರುತ್ತೆಂಬ ನಂಬಿಕೆ ಬೇರೆ. ಈ ಹವ್ಯಾಸದಲ್ಲಿ ನಾನು ಸಂಪೂರ್ಣ ಮುತುವರ್ಜಿಯನ್ನು ವಹಿಸಿ, ನನ್ನ ಬುದ್ಧಿವಂತಿಕೆಯನ್ನೆಲ್ಲಾ ಉಪಯೋಗಿಸಿದೆ ಈ "ಶಿಕಾರಿ"ಯಲ್ಲಿ ನನಗೆ ಒಂದೆರಡು ಅಪೂರ್ವ ಅನುಭವಗಳೂ, ಒಂದು ಬಹಳ ನ್ಯಾಯವಾದ, ಹೃದಯಭೇದಕವಾದ, ಧರ್ಮಬೋಧೆಯೂ ಒದಗಿದವು.

ನಮ್ಮ ಇನ್‌ಸ್ಪೆಕ್ಟರು ಮೊದಲು ನನ್ನ ಹತ್ತಿರ ಲಕ್ಷ್ಮೀಪತಯ್ಯ ಎಂಬ ಪೋಲೀಸು ಬಾತ್ಮೀದಾರನನ್ನು ಕರೆದುಕೊಂಡು ಬಂದರು. ಇವನು ಸಂತೆಗಳಲ್ಲಿ ವ್ಯಾಪಾರ ಮಾಡುವ ಸಣ್ಣ ವರ್ತಕ. ಇವನ ಕಸಬಿನ ಕ್ರಮ, ಗ್ರಾಮುಗಳಲ್ಲಿ ಸಂಚಾರ ಮಾಡಿ, ರೈತರಲ್ಲಿ ಸ್ನೇಹವನ್ನೂ ನಂಬಿಕೆಯನ್ನೂ ಬೆಳೆಸಿ, ಅವರಿಂದ ದಿನಿಸಿಗಳನ್ನು ನೇರವಾಗಿ ಕೊಂಡು, ಸಂತೆಗಳಲ್ಲಿ ಮಾರುವುದು. ಈ ವರ್ತನೆಯಲ್ಲಿ ಇವನಿಗೆ ಬಹು ಜನಗಳ ಪರಿಚಯ, ಬಹು ವಿಚಾರಗಳ ಒಳ ಸಂಚಿನ ತಿಳಿವು. ಅಬ್ಬೂರು, ಹಾಡ್ಯ, ಹನಸೋಗೆ, ಇವೆಲ್ಲ ಇವನ ಸರ್ಕೀಟಿಗೆ ಸೇರಿದ ಗ್ರಾಮುಗಳು. ಅಬ್ಬೂರಲ್ಲಿ ಖೂನ್ ಮಾಡಲ್ಪಟ್ಟವರ ಮನೆಗಳವರೂ, ಖೂನ್ ಮಾಡಿದವರೂ ಇವನ ಗಿರಾಕಿಗಳಾಗಿದ್ದರು; ಪಟೇಲ ಶ್ಯಾನುಭೋಗರು ಇವನ ಆಪ್ತ ಮಿತ್ರರು; ಊರ ಹರಟೆ ಇವನ ಎದುರಿಗೆ ನಿರರ್ಗಳವಾಗಿ ಜರುಗುತ್ತಿತ್ತು; ಜನಗಳ ಚಾಲು, ವ್ಯವಹಾರ, ಪರಸ್ಪರ ಅನುಬಂಧ ಎಲ್ಲವೂ ಇವನಿಗೆ ಚೆನ್ನಾಗಿ ಗೊತ್ತು. ಇವನು ಪರಾರಿಯಾದ ಪಾತಕಿಗಳ ಸಮಾಚಾರವನ್ನು ಉಪಾಯವಾಗಿ ಅರಿತು ತಿಳಿಸುವುದಾಗಿ ಒಪ್ಪಿಕೊಂಡ.

ಅವನು ಸಾಮಾನ್ಯವಾಗಿ ಇನ್‌ಸ್ಪೆಕ್ಟರ ಮನೆಗೆ ರಾತ್ರಿವೇಳೆ ಬಂದು ಬಾತ್ಮಿ ಕೊಡುತ್ತಿದ್ದ. ನನ್ನ ಮೊಕಾಬಿಲೆಯಾದಮೇಲೆ ಒಂದು ಸಲ

ನನ್ನ ಮನೆಗೂ ಹಾಗೇ ಬಂದ. ನಾನು ಅವನಿಗೆ– ಏನು ಖಾತ್ರಿಯಿದ್ದರೂ ಇನ್‌ಸ್ಪೆಕ್ಟರಲ್ಲೇ ಕೊಡು, ಅವರು ನನಗೆ ವರದಿ ಮಾಡುತ್ತಾರೆಂದು ಹೇಳಿದೆ. ನನಗೆ ಅವನನ್ನು ಕಂಡರೆ ಏನೋ ಒಂದು ರೀತಿ ಅಸಹ್ಯ ತೋರಿತು. ಮೊದಮೊದಲು ನನ್ನನ್ನು ನೋಡಿದಾಗಲೆಲ್ಲ ನನಗೂ ಅವನಿಗೂ ಏನೋ ಬಹಳ ರಹಸ್ಯವಾದ ಸಂಬಂಧವಿರುವಂತೆ ಮುಖಭಾವ ತೋರಿಸುತ್ತಿದ್ದ. ಅವನಿಗೆ ಹಾಗೆ ಮಾಡಬಾರದೆಂದು ದಯವಿಟ್ಟು ಎಚ್ಚರಿಸಿ, ಜನಗಳು ಅವನನ್ನು ತಲೆಹಿಡುಕನೆಂತಲೂ, ನಾನು ಅವನ ಕಸಬಿನ ಚಾತುರ್ಯದ ರಸಿಕನೆಂತಲೂ, ಭಾವಿಸ್ಯಾರು ಎಂದು ಇನ್‌ಸ್ಪೆಕ್ಟರಿಗೆ ಹೇಳಿದೆ. ಅವರು ಚೆನ್ನಾಗಿ ಎಚ್ಚರಿಸಿರಬೇಕು.

ಕೆಲವು ದಿನಗಳತರುವಾಯ ಇನ್‌ಸ್ಪೆಕ್ಟರು– ಅಬ್ಕಾರು ಪಾತಕಿಗಳ ವಿಚಾರ ನೇಟಾದ ಖಬರ್‌ಬಂದಿದೆ, ಲಕ್ಷ್ಮೀಪತಿ ತಮ್ಮ (ಇನ್‌ಸ್ಪೆಕ್ಟರ) ಆಫೀಸಿನಲ್ಲಿ ಅದನ್ನು ನನಗೆ ತಿಳಿಸಲು ಕಾದಿದ್ದಾನೆಂದು ವರದಿ ಮಾಡಿದರು. ನಾನು ಅಲ್ಲಿಗೆ ಹೋದೆ.

ಅವನು ಕೊಟ್ಟ ವರ್ತಮಾನ:

ದೊಡ್ಡಹೈದ, ಪುಟ್ಟಸಾಮಿ ಈಗ ಅಬ್ಕಾರು ಆಸುಪಾಸಿನಲ್ಲಿಲ್ಲ. ದೊಡ್ಡಹೈದ ಅಬ್ಕಾರಿನಲ್ಲಿ ಒಬ್ಬ ಅಗಸಗಿತ್ತಿಯನ್ನು ರಖಾವು ಮಾಡಿಕೊಂಡಿದ್ದ. ಅದರಿಂದ ಅವನ ಹೆಂಡತಿಗೆ ಅವನ ಮೇಲೆ ದ್ವೇಷ. ಅಲ್ಲದೆ ಅಗಸಗಿತ್ತಿ ಗಂಡ ಅವನನ್ನು ಹೇಗಾದರೂ ಹಿಡಿದು ಸರ್ಕಾರಕ್ಕೆ ಕೊಡಬೇಕೆಂದು ನಿಶ್ಚಯಿಸಿದ್ದ. ಅದಕ್ಕೋಸ್ಕರ ಅವರಿಬ್ಬರೂ ಅಲ್ಲಿಂದ ರಾತ್ರೋರಾತ್ರಿ ಸಾಲಿಗ್ರಾಮಕ್ಕೆ ಹೋಗಿ ಪಟೇಲ ದೇವರಸೇಗೌಡನನ್ನು ಮೊರೆಹೊಕ್ಕರು. ಗೌಡ– ಈ ಕೆಲಸಕ್ಕೆ ನಾನು ಈಡಾಗುವುದಕ್ಕಾಗುವುದಿಲ್ಲ; ನೀವು ತಂದ್ರೆಗೆ ಹೋಗಿ ಲಿಂಗನನ್ನು ಹಿಡಿಯಿರಿ. ಅವನು ಏನಾದರೂ ಮಾರ್ಗವನ್ನು ತೋರಿಸಿಯಾನು– ಎಂದು ಹೇಳಿ, ಅವರಿಗೆ ಎರಡು ಹಳೆಯ ಕಂಬಳಿಗಳನ್ನೂ ಹಚ್ಚಡಗಳನ್ನೂ ಕೊಟ್ಟು, ನಾಲ್ಕೈದು ದಿನಗಳಿಗಾಗುವಷ್ಟು ರಾಗಿ ರೊಟ್ಟಿಯನ್ನು ಕೊಟ್ಟು, ಕಳುಹಿಸಿದ. ಆಮೇಲೆ ತಂದ್ರೆ ಲಿಂಗ ಅವರನ್ನು ಕೆಲವು ದಿನ ಒಂದು ಹಳ್ಳದ ಕೊರಕಲಿನಲ್ಲಿ ಬಚ್ಚಿಟ್ಟಿದ್ದು ನಂತರ ಹೊಳೆನರಸೀಪುರಕ್ಕೆ ಸಾಹುಕಾರರ

(ಅವರ ಸಂಬಂಧೀಕರು ಇದ್ದಾರೆ, ಅವರ ಮನಸ್ಸು ನೋಯಬಾರದು; ಅದಕ್ಕೋಸ್ಕರ, ಹೆಸರನ್ನು ಮುಚ್ಚಿದ್ದೇನೆ) ಬಳಿಗೆ ಕರೆದುಕೊಂಡು ಹೋದ; ಸಾಹುಕಾರರಿಗೆ ಗ್ರಹಚಾರವಶಾತ್– ಬಲವದ್ವೈರದ ದೆಸೆಯಿಂದೆಂದು ಕೆಲವರು ಹೇಳುತ್ತಾರೆ– ಫೋರ್ಜರಿಗಾಗಿ ಎರಡು ವರ್ಷಗಳ ಸಜ ಆಗಿತ್ತು. ಜೈಲಿನಲ್ಲಿ ಏಕಕಾಲದಲ್ಲಿದ್ದದ್ದರಿಂದ ತಂದ್ರೆ ಲಿಂಗಸಿಗೂ ಅವರಿಗೂ ಪರಿಚಯ; ಪೋಲೀಸಿನವರ ಕೈಗೆ ಸಿಲುಕಿ ಕಾನೂನಿನಿಂದ ಕಷ್ಟಕ್ಕೆ ಬಿದ್ದಿರುವ ಜನಗಳನ್ನು ಕಂಡರೆ ಅವರಿಗೆ ಕನಿಕರ; ಅವರು ಈ ಜೀವಗಳ್ಳರನ್ನು ಯಾವುದೋ ಹತ್ತಿರದ ಹಳ್ಳಿಯಲ್ಲಿ ತಮ್ಮ ಜಮೀನಿನಲ್ಲಿರುವ ಒಂದು ಗುಡಲಲ್ಲಿಟ್ಟಿದ್ದಾರೆ; ಪುಟ್ಟಸ್ವಾಮಿಗೆ ಖಾಯಿಲೆ, ಅವನಿಗೆ ವಾಸಿಯಾಗುತ್ತಲೇ ಇನ್ನೆಲ್ಲಿಗಾದರೂ ಸಾಗಿಸುತ್ತಾರೆ, ಈಗಂತೂ ಹೊಳೆನರಸೀಪುರದ ಆಸುಪಾಸಿನಲ್ಲಿ ಸಾಹುಕಾರರ ರಕ್ಷಣೆಯಲ್ಲಿದ್ದಾರೆ— ಹೀಗೆಂದು

ಬಳಿಕ ಇನ್ಸ್ಪೆಕ್ಟರು ಹೇಳಿದರು– ತಮಗೂ ಆ ಸಾಹುಕಾರರಿಗೂ ಗುರತು. ಸಾಹುಕಾರರಿಗೆ ಸಜವಾದ ಕೇಸಿನ ತನಿಖೆಯಲ್ಲಿ ತಾವು ಪಾತ್ರ ವಹಿಸಿದ್ದರಿಂದ, ತಮಗೂ ಅವರಿಗೂ ಮನಸ್ತಾಪ; ನಾನೇ ಅವರನ್ನು ಬರಮಾಡಿಕೊಂಡು ಮಾತನಾಡಿದರೆ ಉತ್ತಮ. ಅವರು ಬಹಳ ಅಹಂಕಾರಿಗಳು– ಎಂದು ಅವರನ್ನು ಕಂಡರೆ ಇನ್ಸ್ಪೆಕ್ಟರಿಗೆ ಸ್ವಲ್ಪ ಸಂಕೋಚ ಭಾವ (inferiority complex) ಇದ್ದಂತೆ ತೋರಿತು.

ನಾನು ಅವರಿಗೆ ಅವರ ಕಡೆಯವರು ಒಬ್ಬರ ಮೂಲಕ, ಅನುಕೂಲವಿದ್ದಷ್ಟು ಶೀಘ್ರದಲ್ಲಿ ಯಡತೊರೆಗೆ ಬಂದು ನನಗೆ ಭೇಟಿಕೊಡಬೇಕೆಂದು ಹೇಳಿಕಳುಹಿಸಿದೆ. ಅವರು ನಾಲ್ಕೈದು ದಿನಗಳಲ್ಲೇ ಮೈಸೂರಿಗೆ ಹೋಗುವ ಪ್ರಮೇಯವಿದೆ, ಯಡತೊರೆ ದಾರಿಯಲ್ಲೇ ಇರುವುದರಿಂದ ನನ್ನನ್ನು ಬಂದು ನೋಡುವುದಾಗಿ ಜವಾಬು ಕೊಟ್ಟರು.

ಅದೇ ರೀತಿ ಬಂದರು ನಾನು ಆಗ ಕೋರ್ಟಿನಲ್ಲಿದ್ದೆ. ಅವರನ್ನು ನನ್ನ ಛೇಂಬರಿಗೆ ಬರಮಾಡಿಕೊಂಡು, ನಾನೂ ಅಲ್ಲಿಗೆ ಹೋಗಿ ಅವರ ಸಂಗಡ ಮಾತನಾಡಿದೆ. ಗಂಭೀರವಾದ ಮನುಷ್ಯ, ಅವರ ಚರಿತ್ರೆ ಏನೇ ಇರಲಿ, ತುಚ್ಛರಾಗಿ ಕಾಣಲಿಲ್ಲ. ಅವರ ನಡತೆ ನೋಡಿ ನನಗೆ–

ಈ ವಿಷಯ ಇವರನ್ನು ಹೇಗೆ ಕೇಳುವುದು ? – ಎಂದು ಸಂಕೋಚ ವಾಯಿತು. ನನ್ನಲ್ಲಿ ಬಹಳ ಆದರ ಮರ್ಯಾದೆಗಳಿದ್ದಂತೆ ವರ್ತಿಸಿದರು.

"ತಮ್ಮಲ್ಲಿ ಒಂದು ವಿಚಾರ ಮಾತನಾಡಬೇಕಾಗಿದೆ. ಅದಕ್ಕೋಸ್ಕರ ತಮಗೆ ತೊಂದರೆ ಕೊಟ್ಟೆ" ಎಂದು ಪ್ರಾರಂಭ ಮಾಡಿ, ನನಗೆ ಅವರ, ಅಬ್ಬೂರು ಪಾತಕಿಗಳ, ವಿಚಾರವಾಗಿ ಬಂದಿದ್ದ ಬಾತ್ಮಿಯನ್ನು ವಿವರಿಸಿ, ಪರಾರಿಯಾದವರ ಪತ್ತೆಗಾಗಿ ನನಗೆ ಏನಾದರೂ ಸಹಕಾರ ಅವರಿಂದ ದೊರೆತೀತೆ ? ಎಂದು ಕೇಳಿದೆ.

ನಾನು ಅವರಿಗೆ ಮನಸ್ಸು ನೋಯಿಸಬಾರದೆಂದು ಎಷ್ಟೋ ಗೌರವದಿಂದ ಮಾತನಾಡಿದೆ. ಆದರೆ ಎಲ್ಲೋ ಅವರ ಪೂರ್ತಿ ಮಾಗದಿದ್ದ ಘಾಯಕ್ಕೆ ತಗುಲಿರಬೇಕೆಂದು ಕಾಣುತ್ತದೆ. ಅವರು ನನ್ನ ಮಾತು ಪೂರೈಸುವುದರೊಳಗಾಗಿ ಉಗ್ರಾವೇಶದಿಂದ,

"ಇದೇನು ಸ್ವಾಮಿ, ಉನ್ಮತ್ತ ಪ್ರಲಾಪ ? ನನಗೇ ಅವರಿಗೇ ಏನು ಸಂಬಂಧವಿದ್ದೀತು ? ಯಾರೋ ಸಣ್ಣ ಜನ ನನ್ನ ಮೇಲೆ ತಮಗೆ ಸುಳ್ಳು ಹೇಳಿದರೆ ತಮಗೆ ವಿವೇಕ ಬೇಡವೆ ? ವಿದ್ಯೆ ಹಾಗೂ ಅಧಿಕಾರ ಮದದಿಂದ ಜನಗಳ ಯೋಗ್ಯತೆ ನೋಡದೆ ತಾವು ಹೀಗೆ ನನಗೆ ಅಪಮಾನ ಮಾಡಬಹುದೆ ? ತಾವು ಹುಡುಗರು, ಪ್ರಪಂಚ ಜ್ಞಾನವಿಲ್ಲದವರು, ತಮ್ಮ ಇನ್‌ಸ್ಪೆಕ್ಟರಂಥವರ ಕೈಗೊಂಬೆಯಾಗಬಾರದು" ಎಂದು ಎದ್ದರು

ನನಗೆ ಬಹಳ ಕೋಪವೂ, ಅದರೊಂದಿಗೆ, ಅವರು ಹೇಳಿದ ಮಾತಿನಲ್ಲಿ ನ್ಯಾಯದ ಭಾಗವೂ ಇದೆಯೋ ಎಂಬ ಶಂಕೆಯೂ, ಏಕಕಾಲದಲ್ಲಿ ಬಂದವು. ನಾನು ಅವರಿಗೆ,

"ಕೂತುಕೊಳ್ಳಿ. ಹಾಗೆ ಧೂರ್ತತನದಿಂದ ಎದ್ದು ಹೋಗಲಿಕ್ಕಾಗದು. ಅಧಿಕಾರ ಮದವೆಂದು ಹೇಳಿದಿರಲ್ಲ, ಆ ಅಧಿಕಾರವನ್ನು ಅವಶ್ಯಕವಿದ್ದರೆ ಕೂಡಲೆ ಉಪಯೋಗಿಸಲು ಸಿದ್ಧವಾಗಿದ್ದೇನೆ. ಇನ್‌ಸ್ಪೆಕ್ಟರು ನನಗೆ ಹೊಸಬರಾದರೂ, ತಮ್ಮ ಹಳೆಯ ಪಂಚಿತಸ್ಥರೆಂದು ಕಾಣುತ್ತೆ. ತಮ್ಮ ಯೋಗ್ಯತೆ ನೋಡದೆ ಮಾತನಾಡಿದಿರೆಂದು ಹೇಳಿ

ದಿರಿ; ಇರಬಹುದು; ತಾವು (ಅವರ ಹೆಸರು ಹೇಳಿ) ಎಂದು ಭಾವಿಸಿ ಮಾತನಾಡಿದೆ. ತಾವು ಅವರಲ್ಲದಿದ್ದರೆ ನಾನು ಮಾತನಾಡಿದ್ದು ತಪ್ಪು. ತಮ್ಮ ಕ್ಷಮಾಪಣೆಯನ್ನು ಬೇಡಲಿಕ್ಕೆ ಸಿದ್ಧವಾಗಿದ್ದೇನೆ" ಎಂದೆ.

— — ರು ದರ್ಪದ ಅಂತಸ್ತಿನಿಂದ ಕೂಡಲೆ ಜಾರಿಬಿಟ್ಟರು. ಕೊನೆಗೆ ಹೇಳಿದರು:

"ನನ್ನ ದುರವಸ್ಥೆಯಲ್ಲಿ ನಾನು ಲಿಂಗನನ್ನು ನೋಡಿದ್ದೆ ಅವನ ಪರಿಚಯವೂ ಉಂಟು ಆದರೆ ನನಗೆ ಅವನ ಸ್ನೇಹವೆಂಥದ್ದು? ಅವನು ಕೆಲವು ದಿವಸಗಳ ಹಿಂದೆ ನನ್ನಲ್ಲಿ ಬಂದು, ಈ ಅಬ್ಬೂರವರ ಕಥೆ ಹೇಳಿ, ಅವರಿಗೆ ಸಹಾಯ ಬೇಕೆಂದು ಹೇಳಿದ "ನನಗೆ ಆ ಸುದ್ದಿ ಸಂಪರ್ಕಗಳು ಬೇಡ. ಯಾವ ಬಡಪಾಪಿಗಾಗಲಿ ಹಿಟ್ಟು ಬಟ್ಟೆಗೆ ಸಹಾಯ ಬೇಕಾದರೆ, ಇಕ್ಕೋ ಹಿಡಿ" ಎಂದು ಸ್ವಲ್ಪ ದುಡ್ಡು ಕೊಟ್ಟೆ. "ನೀನು ಏನಾದರೂ ಮಾಡಿಕೊ ತಿರುಗ ನನ್ನ ಹತ್ತಿರ ಬರಬೇಡ"ವೆಂದು ಹೇಳಿದೆ. ನನಗೆ ಸತ್ಯವಾಗೂ ಇನ್ನೇನು ತಿಳಿಯದು ಸ್ವಾಮಿ."

ಆ ಮೇಲೆ ವರ್ತಮಾನ ಬಂದದ್ದು ತಂದ್ರೆ ಲಿಂಗನು ಪಾತಕಿ ಅಣ್ಣ ತಮ್ಮಂದಿರನ್ನು ಕೊಣನೂರು ರಾಮಸ್ವಾಮಿ ಕಣಿವೆ ಮಾರ್ಗವಾಗಿ ಕೊಡಗಿಗೆ ಸಾಗಿಸಿ ಅಲ್ಲಿ ಫ್ರೇಜರುಪೇಟೆಯಲ್ಲಿನ ಒಂದು ಲಿಂಗಾಯತರ ಮಠದಲ್ಲಿ ಜಂಗಮ ವೇಷಧಾರಿಗಳಾಗಿರಲು ಅನುಕೂಲಪಡಿಸಿಕೊಟ್ಟಿದ್ದಾನೆಂದು. ಫ್ರೇಜರುಪೇಟೆಗೆ ಹೋಗಿ, ಅವಶ್ಯಕವಿದ್ದರೆ ಅಲ್ಲಿನ ಸ್ಥಳ ಅಧಿಕಾರಿಗಳ ಸಹಾಯ ಪಡೆದು, ಪರಾರಿಯವರನ್ನು ಹಿಡಿಯುವ ಪ್ರಯತ್ನ ಮಾಡಲು ನಿಶ್ಚಯಿಸಿದೆ. ಆ ಪಾತಕಿಗಳ ಮುಖದ ಪರಿಚಯ ನನಗೂ ಇಲ್ಲ, ಇನ್‌ಸ್ಪೆಕ್ಟರಿಗೂ ಇಲ್ಲ. ನಾನು ಅವರನ್ನು ಮೈಸೂರಿನಲ್ಲಿ ವಿಚಾರಣೆಗೆ ಪೋಲೀಸಿನವರು ಕೋರ್ಟಿಗೆ ಕರೆದುಕೊಂಡು ಹೋಗುತ್ತಿದ್ದಾಗ ಒಂದು ಸಲ ಮಾತ್ರ ಸಕೃತು ನೋಡಿದ್ದೆ. ಮುಖಚಹರೆ ನೆನಪಿಗೆ ತರಲಾರದೆ ಹೋದೆ. ಆದಕ್ಕೋಸ್ಕರ ನಾವು ಚುಂಚನಕಟ್ಟೆ ಸ್ಟೇಷನ್ ಕಾನ್‌ಸ್ಟೇಬಲ್ ಗುಂಡಪ್ಪನನ್ನು ಸಂಗಡ ಬರಮಾಡಿಕೊಂಡೆವು.

ಫ್ರೇಜರುಪೇಟೆಯಲ್ಲಿ ಭಾರಿ ಫಾರೆಸ್ಟ್ ಡಿಪೊ ಇತ್ತು. ಅದು ತ್ಯಾಗ, ಹೊನ್ನೆ, ರೋಜ್‌ವುಡ್, ಇವುಗಳ ನಾಟಾಗಳಿಗೆ ಪ್ರಸಿದ್ಧವಾದ

ಸ್ಥಳ. ಇನ್ಸ್‌ಪೆಕ್ಟರು ಚೌಬೀನಿ ವ್ಯಾಪಾರದ ಲಬ್ಬೇ ಸಾಹುಕಾರರಾಗಿಯೂ, ನಾನು ಅವರ ಗುಮಾಸ್ತೆಯಾಗಿಯೂ, ಫ್ರೇಜರುಪೇಟೆಗೆ ಹೋಗಿ ಛತ್ರದಲ್ಲಿ ತಂಗಿಕೊಂಡೆವು. ಜೊತೆಗೆ ಗುಂಡಪ್ಪ ನನ್ನ ಅಡಿಗೆಯವನಾಗಿಯೂ, ಷೇಕ್ ಅಬ್ದುಲ್ಲಾ ಲಬ್ಬೇ ಸಾಹುಕಾರರ ಅಡಿಗೆಯವನಾಗಿಯೂ ಇದ್ದರು. ಸ್ಥಳ ಅಧಿಕಾರಿಗಳ ಸಹಾಯ ಬೇಕಾದರೆ ನಾನು ಇಂಥವನೆಂದು ತೋರಿಸುವುದಕ್ಕಾಗಿ ನನ್ನ ಸಂಗಡ ತಾಲ್ಲೂಕು ಮ್ಯಾಜಿಸ್ಟ್ರೇಟ್ ಕೋರ್ಟಿನ ಮೊಹರನ್ನು ತೆಗೆದುಕೊಂಡುಹೋಗಿದ್ದೆ.

ಲಕ್ಷ್ಮೀಪತಯ್ಯ ಏನೋ ವ್ಯಾಪಾರಕ್ಕೆ ಬಂದವನಂತೆ ಹುಣಸೂರು ಪೆರಿಯಾಪಟ್ಟಣ ಮಾರ್ಗವಾಗಿ ಮೊದಲೇ ಫ್ರೇಜರುಪೇಟೆಗೆ ಬಂದಿದ್ದ. ಅವನು – ಆ ಸಾಮಿಗಳು ಇಲ್ಲಿಯೂ ಇರುತ್ತಾರೆ. ಹೊಳೆಯಾಚೆ 'ಜಂಗಲು' (ಕಾಡು)ಗಳ ನಡುವೆ ಅಲ್ಲಲ್ಲಿರುವ ಲಿಂಗಾಯತ ಗ್ರಾಮಗಳಲ್ಲೂ ಇರುತ್ತಾರೆ. ನೇಟಾದ ಸುದ್ದಿ ವಿಚಾರಿಸುವುದಕ್ಕೆ ಒಬ್ಬ ಅವರ ಜನದವನನ್ನೇ ಬಿಟ್ಟಿದ್ದೇನೆ–ಎಂದು ಹೇಳಿದ. ಆ ಮನುಷ್ಯನನ್ನೂ ಹಾಜರ್ಮಾಡಿದ. ಅವನು ಪ್ರಾಣಭಯದಿಂದೆಂಬಂತೆ ನಡುಗುತ್ತ,

"ಶಿವಾಚಾರದವರೆಲ್ಲ ಸರದಿ ಮಾಡಿಕೊಂಡು ಅವರಿಗೆ ಹಿಟ್ಟು ಬುತ್ತಿ ಕೊಡುತ್ತಿದ್ದಾರೆ. ಚಿಕ್ಕವನು ಈಗ ಕೆಲವು ದಿನದ ಹಿಂದೆ ಹಾವು ಕಚ್ಚಿ ಸತ್ತುಹೋದ. ಮಲೆಯೂರಿನವರು ಅವನನ್ನು ಜಂಗಲಿನಲ್ಲೇ ಮಣ್ಣು ಮಾಡಿದರು. ಈಗ ದೊಡ್ಡವನು ಒಬ್ಬನೇ ಇದ್ದಾನೆ. ಅವನು ಹಗಲೆಲ್ಲ ಜಂಗಲಿಯಲ್ಲಿ ಮರೆಯಾಗಿದ್ದು ಒಂದೊಂದು ರಾತ್ರಿ ಒಂದೊಂದು ಹೊಲದ ಅಟ್ಟಣೆಯ ಮೇಲೆ ಮಲಗುತ್ತಾನೆ. ಇಂಥ ದಿನ ಇಂಥ ಕಡೆ ಮಲಗುತ್ತಾನೆಂದು ಗೊತ್ತಾದರೆ ಹೊಂಚು ಕಾದು ಹಿಡಿಯಬಹುದು" ಎಂದು ಹೇಳಿದ.

"ಆ ಸುದ್ದಿ ನೇಟಾಗಿ ತಿಳಿದು ನಮಗೆ ಕೊಟ್ಟರೆ, ಭಾರಿ ಇನಾಮು ಕೊಡುತ್ತೇವೆ. ಸರ್ಟಿಫಿಕೇಟೂ ಕೊಡಲಾಗುತ್ತೆ" ಎಂದು ಹೇಳಿದೆ.

"ಅಯ್ಯೋ! ಬುದ್ಧಿ, ನಿಮ್ಮ ಪಾದ, ಸರ್ಟಿಫಿಕೇಟು ಗಿರ್ಟಿಫಿಕೇಟು ಕೊಟ್ಟರೆ ನನ್ನ ಜೀವ ಉಳಿದಾತ? ಗ್ರಾಮದೋರೆಲ್ಲ ದೊಡ್ಡ ಹೈದಪ್ಪನ್ನ ಸೂರ ಅಂತ ಹೊಗಳ್ತಾರೆ ಅವರೆ! ನಾನು ಸರ್ಕಾರಕ್ಕೆ ಸುದ್ದಿ ಕೊಟ್ಟೆನೆಂದು

ಗೊತ್ತಾದರೆ ಅಂದೇ ನನ್ನ ಇರಿದು ಕೊಂದಾರು" ಎಂದು ನಡುಗುತ್ತ ಹೇಳಿದ. ಇದರಲ್ಲಿ ಯೋಚನೆಗೆ ವಿಷಯ– ಈ ಪಾತಕಿ ಗ್ರಾಮಗಳ ರೈತರ ದೃಷ್ಟಿಯಲ್ಲಿ ಬಡಪಾಯಿ ಜೀವಗಳ್ಳ ಮಾತ್ರವೇ ಅಲ್ಲ; ಶೂರ ಬೇರೆ. ಅವರಿಂದ ನಮಗೆ ಸಹಕಾರ ದೊರೆಯುವುದಿಲ್ಲ. ನಾವು ಅಲ್ಲ ಬೇಹುಷಾರಾಗಿ ಹೋದರೆ ಮುಚ್ಚುಮರೆಯಾಗಿ ಸಾಹಸ ಮಾಡುತ್ತಿರುವ ಅಲ್ಪಸಂಖ್ಯಾತರಾದ ನಮಗೂ ಒಂದು ವೇಳೆ ಅಪಾಯವಾದರೂ ಆಗ ಬಹುದು.

ಹೊಳೆಯಾಚಿನ ಹುಣಸೂರು ತಾಲ್ಲೂಕು ಬಹುಭಾಗ ದಟ್ಟವಾದ ಎತ್ತರವಾದ ಅರಣ್ಯ ಮಧ್ಯದಲ್ಲಿ ವಿರಳವಾಗಿ ಕೆಲವು ಸಣ್ಣಗ್ರಾಮ ಗಳು. ಸುಮಾರು ಹದಿನೈದು ಮೈಲಿಗಳ ಸುತ್ತಿನಲ್ಲಿ ಏಳೆಂಟು ಕೊಂಪೆ ಗಳಿರಬಹುದು. ಈ ಗ್ರಾಮಗಳು ಸುತ್ತುಗಟ್ಟಿರುವ ಮಹತ್ತರ ಕಾಡಿನಲ್ಲಿ ಮರಗಳನ್ನು ಕಡಿದು ಸಾಫ್ ಮಾಡಿದ ಸ್ವಲ್ಪ ಪ್ರದೇಶಗಳಲ್ಲಿ – ಅಂದರೆ ಐವತ್ತು ಅರವತ್ತು ಎಕರೆಯಷ್ಟು 'ಕ್ಲಿಯರಿಂಗು'ಗಳಲ್ಲಿವೆ. ಇಲ್ಲಿನ ರೈತರು ತಮ್ಮತಮ್ಮ ಕುಟುಂಬಕ್ಕೆ ಬೇಕಾದಷ್ಟೇ ಅಥವ ತಮ ತಮಗೆ ಶಕ್ತಿಯಿದ್ದಷ್ಟೇ ಜೋಳದ ವ್ಯವಸಾಯ ಮಾಡುತ್ತಾರೆ. ಕೆಲಸ ಸಿಕ್ಕಾಗ ಫಾರೆಸ್ಟು ಇಲಾಖೆಯ ಹಲವು ಕಾಮಗಾರಿಗಳಿಗೆ – ಕಿಚ್ಚು ತಡೆಯುವ ಓಣಿಗಳನ್ನು ಪಾಕಾಗಿಡುವುದು, ಮರಗಳನ್ನು ಕಡಿಯುವುದು, ಕಾಡು ಜಾಡುಗಳನ್ನು ಮೆಳೆಯಿಂದ ಶುದ್ಧಮಾಡುವುದು – ಇಂಥ ಕೆಲಸಗಳಿಗೆ, ಕೂಲಿಗೆ ಹೋಗುತ್ತಾರೆ. ಇಂಥ ಗ್ರಾಮಗಳಿಂದ ಬಾತಮಿ ತರಿಸಬೇಕು. ನಾನೇ ಆಗಲಿ, ಇನ್‌ಸ್ಪೆಕ್ಟರೇ ಆಗಲಿ ಹೋಗುವ ಹಾಗಿಲ್ಲ. ಕಾನ್ಸ್ಟೇ ಬಲ್‌ಗುಂಡಪ್ಪ ದೊಡ್ಡ ಹೈದನಿಗೆ ತಿಳಿದವನು ಕಾನ್ಸ್ಟೇಬಲ್ ಷೇಕ್ ಅಬ್ದುಲ್ಲ ಮುಸಲ್ಮಾನರವನು – ಹುಡುಗ; ಲಿಂಗಾಯತರಾದ ಆ ಗ್ರಾಮ ಸ್ಥರ ಸಂಗಡ ಬಳಕೆಯಾಗಿ ಬೆರೆತು, ಅವರ ನಂಬಿಕೆಯನ್ನು ಸಂಪಾದಿಸಿ, ಆಂತರ್ಯವನ್ನು ಕಂಡು ಹಿಡಿಯಲು ಶಕ್ತನಲ್ಲ.

ಸ್ವಲ್ಪ ಹೊತ್ತು ಯೋಚನೆ ಮಾಡಿದ ಮೇಲೆ ನನಗೊಂದು ಮಾರ್ಗ ತೋರಿತು. ಅದನ್ನು ಕೂಡಲೆ ಅನುಸರಿಸಿದೆ. ಫಾರೆಸ್ಟ್ ಇಲಾಖೆ ಯಿಂದ ಈ ಗ್ರಾಮಗಳಿಗೆ ಜೀವನ. ಫಾರೆಸ್ಟ್ ಇಲಾಖೆಯ ಸಿಬ್ಬಂದಿಗೆ

ಗ್ರಾಮಸ್ಥರ ಪರಿಚಯ ಮತ್ತು ದಾಕ್ಷಿಣ್ಯವಿರಬೇಕು. ಸುಮಾರು ಹದಿನಾಲ್ಕು ಮೈಲಿಗಳ ದೂರದಲ್ಲಿರುವ ಪೆರಿಯಾಪಟ್ಟಣದಲ್ಲಿದ್ದ ಫಾರೆಸ್ಟ್ ರೇಂಜರನ್ನು ನಾನು ಕರೆಸಿಕೊಂಡು ಅವರಿಗೆ ನನ್ನ ಉದ್ದೇಶವನ್ನು ವಿವರಿಸಿ ಹೇಳಿ ಅವರ ಸಹಾಯವನ್ನು ಬಯಸಿದೆ. ಆ ಪ್ರದೇಶದಲ್ಲಿ ಕೆಲಸಮಾಡುವ ಫಾರೆಸ್ಟ್ ಗಾರ್ಡು ಅವರ ಸಂಗಡಲೇ ಬಂದಿದ್ದ. ನನಗೆ ಅವನನ್ನು ಮುಖಾಬಿಲೆ ಮಾಡಿ, "ಇವನು ಬುದ್ಧಿಶಾಲಿ, ಇವನು ತಮಗೆ ಸಹಾಯ ಮಾಡುತ್ತಾನೆ; ಇವನ ಸಹಾಯಕ್ಕೆ ತಕ್ಕ ಪ್ರತಿಫಲವನ್ನು ಕೊಡಿಸುವುದು ತಮ್ಮ ಭಾರ; ತಮ್ಮಿಂದ ಒಂದು ಮಾತು ಕನ್ಸರ್ವೇಟರಿಗೂ, ಡೆಪ್ಯುಟಿ ಕಮಿಷನರಿಗೂ ಹೋದರೆ, ಅವ ಬದುಕಿದ. ನನ್ನಿಂದ ಏನು ಕುಮ್ಮಕ್ಕು ಬೇಕಾದರೂ ಸಿದ್ಧವಾಗಿದ್ದೇನೆ" ಅಂದರು 'ತಮ್ಮಲ್ಲಿ ಬಂದೂಕಿದೆಯೇ' ಎಂದು ಕೇಳಿದೆ. ಇಲ್ಲವೆಂದರು. ಹಾಗಾದರೆ ಅಪಾಯವಿರಬಹುದಾದ ಕೆಲಸದಲ್ಲಿ ತಮಗೆ ಭಾಗ ಕೊಡುವುದು ಸರಿಯಲ್ಲ. ತಾವು ಐದಾರು ಮೈಲಿ ಫಾಸಲೆಯಲ್ಲಿರುವ ಕೊಪ್ಪದ ಫಾರೆಸ್ಟ್ ಲಾಡ್ಜಿನಲ್ಲಿದ್ದರೆ, ತಮ್ಮ ಸಂಗಡ ಸಂಪರ್ಕವಿಟ್ಟುಕೊಂಡು ಬೇಕಾದ ಸಹಾಯ ಪಡೆಯುತ್ತೇವೆಂದು ಹೇಳಿ ಹಸ್ತಲಾಘವ ಕೊಟ್ಟು ಕಳುಹಿಸಿದೆ.

ಆ ಫಾರೆಸ್ಟು ಗಾರ್ಡಿನ ಹೆಸರು ಈಗ ಜ್ಞಾಪಕವಿಲ್ಲ. ಅವನಿಗೆ ಎಲ್ಲಾ ಸಂಗತಿಗಳನ್ನೂ ಹೇಳಿ, ಆ ಫಾರೆಸ್ಟು ಪ್ರದೇಶಗಳನ್ನೆಲ್ಲಾ ಗಸ್ತು ಮಾಡಿ, ಉಪಾಯವಾಗಿ ಸುದ್ದಿ ವಿಚಾರಿಸಿ, ದೊಡ್ಡ ಹೈದ ಆ ಪ್ರದೇಶದಲ್ಲಿದ್ದಾನೆಯೋ ಇಲ್ಲವೋ, ಅವನಿಗೆ ಆಹಾರವನ್ನು ಯಾರು ಕೊಡುತ್ತಾರೆ, ಎಲ್ಲಿ ಅಡಗಿಕೊಂಡಿರುತ್ತಾನೆ, ಮಲಗುವುದು ಎಲ್ಲಿ, ಎಂಬುದನ್ನು ತಿಳಿದು ವರ್ತಮಾನ ಕೊಡಬೇಕೆಂದು ಹೇಳಿದೆ.

ಒಂದೆರಡು ದಿನಗಳಲ್ಲೇ ಫಾರೆಸ್ಟುಗಾರ್ಡು ವಾಪಸ್ಸು ಬಂದು:

"ಹೊಳೆಯ ಆಚೆಗೆ ಐದಾರು ಮೈಲಿ ದೂರದಲ್ಲಿ ಫಾರೆಸ್ಟಿನಲ್ಲಿ ಮಲೆಯೂರೆಂಬ ಒಂದು ಗ್ರಾಮವಿದೆ. ಅಲ್ಲಿ ಯಾರೋ ಒಬ್ಬ ಹೊರಗಿನ ಮನುಷ್ಯ ಬಂದು ಗ್ರಾಮಸ್ಥರ ಕುಮ್ಮಕ್ಕಿನಿಂದ ತಲೆ ಮರೆಯಾಗಿ ಇರುವಂತೆ ಕಾಣುತ್ತೆ. ಹಗಲೆಲ್ಲಾ ಜಂಗಲಿನಲ್ಲಿ ಕಾಡು ಮೃಗದಂತೆ

ಗಿಡಮೆಳೆ ಮರೆಯಲ್ಲಿ ಕಾಲ ಕಳೆದು, ರಾತ್ರಿ ಹೊಲಗಳಲ್ಲಿ ಕಾವಲಿಗಾಗಿ ಹಾಕಿರುವ ಅಟ್ಟಣೆ ಗುಡಿಸಲುಗಳಲ್ಲಿ ಮಲಗುತ್ತಾನಂತೆ. ಅವನಿಗೆ ಗ್ರಾಮದ ಪಟೇಲನ ಕುಮ್ಮಕ್ಕಂತೆ. ನನಗೆ ಅಲ್ಲಿ ಒಬ್ಬ ಬಾತಮಿದಾರ ನಿದ್ದಾನೆ. ಅವನು ಹೇಳೋದು: "ಈ ಮನುಷ್ಯ ಒಂದೊಂದು ದಿವಸ ಒಂದೊಂದು ಅಟ್ಟಣೆ ಮೇಲೆಮಲಗುತ್ತಾನೆ. ಅವನು ಮಲಗುವ ಅಟ್ಟಣೆ ಗಳ ಸರದಿ ಪಟೇಲ ಗೊತ್ತುಮಾಡಿದ್ದಾನೆ ಅವನು ಬರುವ ದಿವಸ ಆ ಅಟ್ಟಣೆಯ ಮಾಲೀಕ ಅವನಿಗಾಗಿ ರೊಟ್ಟಿ, ಚಟ್ಣಿ, ಹಿಟ್ಟು, ಇವುಗ ಳನ್ನು ಅಟ್ಟಣಿ ಗುಡಲಲ್ಲಿಡಬೇಕೆಂದು ಕಟ್ಟಳೆ. ಸಲಾನೆ ದಿವಸ ಇಂಥದೇ ಅಟ್ಟಣೆಗೆ ಬರುತ್ತಾನೆಂದು ಗೊತ್ತಾದರೆ ಸುದ್ದಿ ಕೊಡುತ್ತೇ ನೆಂದು ಬಾತಮಿದಾರ ಹೇಳಿದಾನೆ. ಅಪ್ಪೊತ್ತು ನಾವು ಮೊದಲೇ ಹೋಗಿ ಸರಿಯಾದ ಸ್ಥಳದಲ್ಲಿ ಮರೆಯಾಗಿದ್ದು ಕೊಂಡು ಕಾದರೆ ಅವ ನನ್ನು ಹಿಡಿಯಬಹುದು" ಹೀಗೆಂದು ಹೇಳಿದ ಅದಾದ ಮೂರು ನಾಲ್ಕು ದಿನದ ತರುವಾಯ ಮತ್ತೆ ಬಂದು:

"ಇವತ್ತು ರಾತ್ರೆ—ಗೌಡನ ಹೊಲದ ಅಟ್ಟಣೆಗೆ ಬರುತ್ತಾನೆ" ಎಂದು ವರ್ತಮಾನ ಕೊಟ್ಟ.

ಫಾರೆಸ್ಟು ಗಾರ್ಡಿನ ಬಾತ್ಮಿದಾರ ಆ ಹೊಲವನ್ನೂ ತನಗೆ ತೋರಿಸಿ ದ್ದಾನೆಂದು ತಿಳಿಸಿದ.

ಸರಿ, ಮಧ್ಯಾಹ್ನ ಮೂರುವರೆ ಘಂಟೆಗೆ ಫ್ರೇಜರುಪೇಟೆಯಿಂದ ಹೊರಟುನಾವು ಹೊತ್ತು ಮುಳುಗುವ ಹೊತ್ತಿಗೆ ಮಲೆಯೂರು ಗ್ರಾಮದ ಬಳಿಯ ಫಾರೆಸ್ಟಿಗೆ ಸೇರಿದೆವು. ನಮ್ಮ ಪಾರ್ಟಿ–ಇನ್‌ಸ್ಪೆಕ್ಟರು, ನಾನು, ಫಾರೆಸ್ಟ್‌ಗಾರ್ಡ್, ಕಾನ್‌ಸ್ಟೇಬಲ್ ಗುಂಡಪ್ಪ. ನಮ್ಮ ಸಂಗಡ ಗುಂಡಪ್ಪನಿದ್ದೇ ಇರಬೇಕು. ಯಾಕೆಂದರೆ ನಮ್ಮ ಯಾರಿಗೂ ದೊಡ್ಡ ಹೈದನ ಅಡಿಯಾಳ ಗೊತ್ತಿಲ್ಲ. ಇನ್‌ಸ್ಪೆಕ್ಟರ್ ಹತ್ತಿರ ಅವರ ರಿವಾಲ್ವರು, ನನ್ನ ಕೈಯಲ್ಲಿ ನನ್ನ 'Winchestor Repeater' ಇದ್ದವು.

ಹೊತ್ತು ಮುಳುಗಿ ಸ್ವಲ್ಪ ಮೊಬ್ಬು ಆಗುವವರಿಗೂ ಫಾರೆಸ್ಟಿನಲ್ಲೇ ನಿಶ್ಶಬ್ದವಾಗಿದ್ದು, ಆಮೇಲೆ ಫಾರೆಸ್ಟ್ ಗಾರ್ಡ್ ಕರೆದುಕೊಂಡು ಹೋದ ಒಂದು ಜೋಳದ ಹೊಲವನ್ನು ಹೊಕ್ಕೆವು. ಆ ಹೊಲ ಆ ಕಾಡಿನ

ಒಂದು ತೆರವಿನಲ್ಲಿ ಒಂದೇ ಆಗಿತ್ತು. ಸುತ್ತಲೂ ಕಾಡು ಕಾಡಿನಲ್ಲಿ ಹೀಗೆಯೇ ಬಿಡಿ ಬಿಡಿಯಾದ ತೆರವುಗಳಲ್ಲಿ ಅಲ್ಲಲ್ಲಿ ಹೊಲಗಳು. ಈ ಹೊಲದಲ್ಲಿ ಸುಮಾರು ಆಳು ಎತ್ತರದ ತೆನೆಯಲ್ಲಿರುವ ಜೋಳದ ಫಸಲಿತ್ತು. ಒಂದು ಮೂಲೆಯಲ್ಲಿ ಆಳು ಎತ್ತುಗೈ ನಿಲವುಗಳ ಮೇಲೆ ಕಟ್ಟಿದ ಅಟ್ಟಣೆ ಮೇಲೆ ಒಂದು ಹುಲ್ಲು ಝೋಪಡಿ. ನಾವು ಅಲ್ಲಿ ಹೋಗುವ ವೇಳೆಗೆ ಸುಮಾರು ಕತ್ತಲಾಗಿತ್ತು. ನಾವುಗಳು ಝೋಪಡಿಯ ಎದುರಿಗೆ ಜೋಳದ ಪೈರಿನಲ್ಲಿ ಮರೆಯಾಗಿ ಮಲಗಿ ಕಾದೆವು. ಸ್ವಲ್ಪ ಹೊತ್ತಿನಲ್ಲೇ ಮೆಳೆಯಲ್ಲಿ ಸರಸರ ಸದ್ದಾಯಿತು. ಆಮೇಲೆ ಒಬ್ಬ ಮನುಷ್ಯ ಕಂಬಳಿ ಗುಬರು ಹಾಕಿಕೊಂಡು, ಕಳ್ಳನಂತೆ ಅತ್ತ ಇತ್ತ ನೋಡುತ್ತಾ, ಕಾಡಿನ ಕಡೆಯಿಂದ ಹೊಲಕ್ಕೆ ಇಳಿದ. ದೊಡ್ಡ ಮೈಕಟ್ಟಿನ ಆಳು; ಕೈಯಲ್ಲಿ ಒಂದು ಬಂದೂಕನ್ನು ಹಿಡಿದಿದ್ದ ಕಂಬಳಿ ಗುಬರಿನಲ್ಲಿ ಮುಖ ಮರೆಯಾಗಿತ್ತು. ಕತ್ತಲೆಯಾದ್ದರಿಂದ ಯಾವುದೂ ಸ್ಪಷ್ಟವಾಗಿ ಕಾಣದು. ಅವನು ಬಂದವನು ಅಟ್ಟಣೆಯ ಪಾದದ ಹತ್ತಿರ ನಿಂತು ಹೊಲದ ಕಡೆ ಸುತ್ತು ಮುತ್ತು ಏನನ್ನೋ ತಡಕುವನಂತೆ ನೋಡಿ, ಆಮೇಲೆ ಅಟ್ಟಣೆ ಕೆಳಗಿದ್ದ ಒಂದು ಸಣ್ಣ ಏಣಿಯನ್ನು ತೆಗೆದು ಅಟ್ಟಣೆಗೆ ಆನಿಸಿ, ಮೇಲೆ ಹತ್ತಿ, ಏಣಿಯನ್ನು ಮೇಲೆ ಸೆಳೆದುಕೊಂಡ. ನಾನು ನನ್ನ ಮಗ್ಗುಲಲ್ಲಿ ಅಡಗಿಕೊಂಡಿದ್ದ ಗುಂಡಪ್ಪನನ್ನು ತಟ್ಟಿ 'ಅವನೇಯೋ ಆಸಾಮಿ?' ಎಂಬ ಅರ್ಥದಲ್ಲಿ ಸನ್ನೆ ಮಾಡಿದೆ. ನನ್ನ ಕದಲೋಣದರಿಂದಲೋ, ಇನ್ನಾವ ಕಾರಣದಿಂದಲೋ, ಗೊತ್ತಿಲ್ಲ; ಅಟ್ಟಣೆಯ ಮೇಲಿದ್ದ ಮನುಷ್ಯ ಬೆದರಿದವನಂತೆ ಸರ್‍ರಂತ ಹೊಲದ ಕಡೆ ತಿರುಗಿ, ಬಂದೂಕನ್ನು ನಮ್ಮ ಕಡೆ ತೋರಿಸಿ ಹಾರಿಸಿದ. ಅರ್ಧ ಎದ್ದಿದ್ದ ನನ್ನ ಕಿವಿಯ ಬಳಿಯಲ್ಲೇ ಗುಂಡು 'ಷಿಷ್' ಅಂತ ಹಾದು ಹೋಯಿತು. ದೈವವಶಾತ್ ಒಂದು ಗುಂಡು ನನ್ನನ್ನು ತಪ್ಪಿತು ಆದರೆ ಆದನ್ನು ಉಗಿದ ಬಂದೂಕು ಜೋಡುನಲ್ಲಿಯುದಾಗಿದ್ದರೆ? ಈ ಶಂಕೆಯಿಂದ ಅರ್ಧ ಕುಳಿತಿದ್ದ ನಾನೂ ಹಾಗೇ ಮುಖಾಡಿಯಾಗಿ ಕೆಳಕ್ಕೆ ಮಲಗಿದೆ. ನಾನು ಏಟು ತಗಲಿ ಕೆಳಕ್ಕೆ ಬಿದ್ದೆನೆಂದು ಇನ್‌ಸ್ಪೆಕ್ಟರು ತಿಳಿದಿರಬೇಕು. ಅವರು "ಅರ್‍ರೇ (ಉರ್ದು ಬೈಗಳು)" ಎಂದು

8

ನೆಗೆದದ್ದೂ, ಆ ಅಟ್ಟಣೆಯ ದಿಕ್ಕಿನಲ್ಲಿ ರಿವಾಲ್ವರನ್ನು ಎತ್ತಿ, ಒಂದೊಂದು ಜೈಗೆ ಒಂದೊಂದು ಗುಂಡಿನಂತೆ ಆರು ಗುಂಡುಗಳನ್ನು ಹಾರಿಸಿದರು. ಆರು ಗುಂಡುಗಳೂ ಅಟ್ಟಣೆಯನ್ನು ಒಂದೆರಡು ಮಾರುಗಳಿಂದ ತಪ್ಪಿ ಕಾನನದ ಗಿಡಗಳನ್ನು ತಾಗಿದವು. (ರಿವಾಲ್ವರಿಂದ ಶಿಸ್ತು ಕಟ್ಟಿ ಹೊಡೆಯುವುದಕ್ಕೆ ಬಹಳ ಅಭ್ಯಾಸ, ಅನೇಕ ತೋಟಾಗಳ ವ್ಯಯ, ಬೇಕು.) ಇನ್‌ಸ್ಪೆಕ್ಟರ ಶಸ್ತ್ರಪ್ರಯೋಗ ಪ್ರಾರಂಭವಾದ ಕೂಡಲೆ ಅಟ್ಟಣೆಯಲ್ಲಿದ್ದ ಮನುಷ್ಯ – "ಅಯ್ಯಯ್ಯೋ" – ಎಂದು ಬೊಬ್ಬೆ ಇಡುತ್ತಾ ಅಟ್ಟಣೆ ಝೋಪಡಿ ಮುಖಕ್ಕೆ ಬಂದು ಕೈನಲ್ಲಿದ್ದ ಕೋವಿಯನ್ನು ನೆಲಕ್ಕೆ ಹಾಕಿಬಿಟ್ಟು, ಬಾಯಿ ಬಡಮುಕೊಳ್ಳಲಿಕ್ಕೆ ಪ್ರಾರಂಭವಾಡಿ. ಅಟ್ಟಣೆಯಿಂದ ಕೆಳಕ್ಕೆ ಧುಮುಕಿದ. ನಾನು ಎದ್ದು ಅವನನ್ನು ನನ್ನ ಬಂದೂಕದಿಂದ ಲಕ್ಷ್ಯಹಿಡಿದು 'ಎರಡು ಕೈಯನ್ನೂ ಮೇಲಕ್ಕೆ ಎತ್ತು ಇಲ್ಲವಾದರೆ ಗೋಲಿಯಿಂದ ಹೊಡೆಯತ್ತೇನೆ' ಎಂದು ಕೂಗಿದೆ. ಅವನು ಅರಚುತ್ತಲೇ ಎರಡು ಕೈಗಳನ್ನೂ ಮುಗಿದು ಮೇಲಕ್ಕೆ ಎತ್ತಿಕೊಂಡ. ಖಾಲಿಯಾದ ತಮ್ಮ ರಿವಾಲ್ವರನ್ನು ಬಾರುಮಾಡುತ್ತಿದ್ದ ಇನ್‌ಸ್ಪೆಕ್ಟರಿಗೆ ದುಡುಕಬೇಡಿ ಎಂದು ಎಚ್ಚರಿಸಿ, ನಾನು ಗುಂಡಪ್ಪನಿಗೆ 'ಇವನೇ ನೋಡು' ಎಂದೆ. ಅವನು ಹತ್ತಿರಕ್ಕೆ ಹೋಗಿ ನೋಡಿ, ರಂಜಕದ ಕಡ್ಡಿ ಹತ್ತಿಸಿ ಪುನಃ ನೋಡಿ 'ಅಲ್ಲ, ಮಹಾಸ್ವಾಮಿ' ಎಂದ.

ಅವನ ಕೋವಿಯನ್ನು ಎತ್ತಿಕೊಳ್ಳುವಂತೆ ಗುಂಡಪ್ಪನಿಗೆ ಹೇಳಿ, ಆಮೇಲೆ ವಿಚಾರಿಸಲಾಗಿ, ಆ ಮನುಷ್ಯ ಆ ಹೊಲದ ಮಾಲೀಕನೆಂದು ಗೊತ್ತಾಯಿತು

"ಯಾಕೋ, ನಮ್ಮನ್ನು ಕೋವಿಯಿಂದ ಹೊಡೆಯೋಕೆ ನೋಡಿದೆ" ಎಂದದ್ದಕ್ಕೆ—

"ಇಲ್ಲಿ ಬಹಳ ಹಂದಿಕಾಟ ಅದಕ್ಕೇ ಕೋವಿಯಿಟ್ಟು ಕೊಂಡು ಕಾವಲು ಮಲಗೋದು. ಹೊಲದಲ್ಲಿ ಸರಸರ ಅಂತು. ಹಂದಿ ಅಂತ ಕೋವಿ ಹಾರಿಸಿದೆ."

ನಗೋಣವೆ, ಅಳೋಣವೆ?

"ನಾವೂ ಹಂದಿ ಷಿಕಾರಿಗೇ ಬಂದಿದ್ದಿವಿ. ಹೋಗಲಿ ಹೋಗು.

ಯಾರಿಗೂ ಏನೂ ನಷ್ಟವಾಗಲಿಲ್ಲ' ಎಂದು ಹೇಳಿದೆ. ನಮ್ಮ ಸಂಗಡ ಫಾರೆಸ್ಟು ಗಾರ್ಡು ಇದ್ದನಾದ್ದರಿಂದ, ನನ್ನ ಮಾತನ್ನು ಆ ರೈತ ನಂಬುತ್ತಾನೆಂದು ತೋರಿತು. ಅಲ್ಲಿಂದ ಫ್ರೇಜರುಪೇಟೆಗೆ ವಾಪಸು ಬಂದು ಬಿಟ್ಟೆವು.

ನಮ್ಮ ಯತ್ನವೇನೋ ನಿರರ್ಥಕವಾಯಿತು. ಆದರೆ ಆ ವಿಷಯ ಅಲ್ಲಿಗೆ ಮುಗಿಯಲಿಲ್ಲ. ಆ ಫಾರೆಸ್ಟು ಗಾರ್ಡನ್ನು ಯಾರೋ ಬಂದೂಕಿನಿಂದ ಹೊಡೆಯಲು ಪ್ರಯತ್ನಪಟ್ಟರು. ಅವನು ಪ್ರಾಣಭಯದಿಂದ ಕೇಳಿಕೊಂಡು ಅಲ್ಲಿಂದ ವರ್ಗ ಮಾಡಿಸಿಕೊಂಡ. ಅವನಿಗೆ ವರ್ತಮಾನ ಕೊಡುತ್ತಿದ್ದ ಮನುಷ್ಯ ಆ ಹಳ್ಳಿಯನ್ನೇ ಬಿಟ್ಟು ಎಲ್ಲಿಯೋ ಕಾಫಿ ಪ್ಲಾನ್‌ಟೇಷನ್ನುಗಳಿಗೆ ಹೊರಟು ಹೋದ.

ಈ ಪಾತಕಿಯನ್ನು ಹಿಡಿಯಲು ನಾನು ಮಾಡಿದ ಯತ್ನಗಳು ಬೇರೆ ಬೇರೆ ಕಾಲದಲ್ಲಿ ನಡೆದವುಗಳಾದರೂ ಆ ಕತೆಯನ್ನು ಕಡಕಿಲ್ಲದೆ ಹೇಳುವುದು ಉಚಿತ.

ಮೇಲೆ ವಿವರಿಸಿರುವ "ಹಂದಿ ಷಿಕಾರಿ"ಯಾದ ಬಹು ದಿನಗಳಾದ ಮೇಲೆ ಮುಂದಿನ ಅಂಕಕ್ಕೆ ಪರದೆ ಎದ್ದಿತು. ಅಷ್ಟರಲ್ಲಿ ಲಕ್ಷ್ಮೀಪತಯ್ಯ ಫಡಪೋಸಿ ಬಾತ್ಮಿದಾರನೆಂದು ತಿಳಿದು ನಿರಾಕರಿಸಲ್ಪಟ್ಟಿದ್ದ. ನಮ್ಮ ಇನ್‌ಸ್ಪೆಕ್ಟರು ಖಾಜಾ ಮಹಮ್ಮದ್ದರು ಬೇರೆ ತಾಲ್ಲೂಕಿಗೆ ವರ್ಗವಾಗಿ ಹೋಗಿದ್ದರು. ಖಾಜಾ ಮಹಮ್ಮದ್ ಸಾಹೇಬರಿಗೆ ನನ್ನ ಮೇಲೆ ಬಹಳ ಪ್ರೇಮ, ಮತ್ತು ಭಕ್ತಿ. ಒಂದು ವಿಧವಾದ ಕನಿಕರ. "ಅಯ್ಯೋ ಪಾಪ, ಹುಡುಗರು; ತಮ್ಮ ಹಾಗೇ ಎಲ್ಲರನ್ನೂ ಒಳ್ಳೆಯವರೆಂದು ತಿಳಿದಿದ್ದಾರೆ. ಕೆಟ್ಟ ಹುಳಕ್ಕೆ ಸಿಕ್ಕಲ್ಲಿ ಹೊಡೀಬೇಕೆಂಬ ತತ್ವ ಗೊತ್ತಿಲ್ಲ. ಧರ್ಮವನ್ನು ಸಾಧಿಸಲಿಕ್ಕೆ ಆವಶ್ಯಕವಾದ ಉಪಾಯಗಳೆಲ್ಲ ಧರ್ಮವೇ ಎಂಬುದು ಇವರಿಗೆ ಇನ್ನೂ ಮನಸ್ಸಿಗೆ ಬಂದಿಲ್ಲ. ಅನುಭವ ಬಂದರೆ ಸರಿಹೋಗುತ್ತೆ" – ಎಂದು. ನನಗೂ ಅವರ ಮೇಲೆ ತುಂಬ ಪ್ರೀತಿ, ನಂಬಿಕೆ. ಅವರು ನಿಸ್ಪೃಹರು, ಧೈರ್ಯಶಾಲಿ. ಸ್ನೇಹದಲ್ಲಿ ಕ್ರಿಯಾವಂತರು. ಕೆಲಸದಲ್ಲಿ ಬಹಳ ಗಟ್ಟಿಗರು. ಮಿತಭಾಷಿ. ಆದರೆ ಒಂದು ಕಟುವಾದ ಹಾಸ್ಯರಸಲಿಪ್ತವಾದ ಭಾಷೆ. ಅದಕ್ಕೆ ಒಂದು

ಕತೆ ಜ್ಞಾಪಕ ಬರುತ್ತದೆ. ಅವರಿಗೆ ತಿಂಗಳ ಮಧ್ಯದಲ್ಲಿ ಏಕಾಏಕಿ ವರ್ಗದ ಹುಕ್ಕುಂ ಬಂದು ಕೂಡಲೆ ಹೊಸ ಸ್ಥಾನಕ್ಕೆ ಹೊರಡಬೇಕಾಯಿತು. ಅವರು ದೊಡ್ಡ ಕುಟುಂಬವುಳ್ಳವರು; ಅವರ ಪೋಷಣೆಯಲ್ಲಿ ಅವರ ವರಮಾನಕ್ಕೆ ಕಷ್ಟಸಾಧ್ಯವಾದಷ್ಟು ಜನಗಳಿದ್ದರು ಅಲ್ಲಿ ಇಲ್ಲಿ ಅಂಗಡಿಗಳಲ್ಲಿ ಸಾಲಗಳಿದ್ದವು. ಇವುಗಳನ್ನು ತೀರಿಸುವುದಕ್ಕಾಗಿ ಒಬ್ಬ ಸೆಟ್ಟರಿಂದ ಇನ್ನೂರು ಮುನ್ನೂರು ರೂಪಾಯಿಗಳ ಸಾಲ ತೆಗೆದುಕೊಂಡರು ಸಾಹೇಬರು ಪಯಣಕ್ಕೆ ಗಾಡಿ ಹತ್ತುವ ಹೊತ್ತಿನಲ್ಲಿ ಸಾಹುಕಾರರು ಅವರನ್ನು ಬೀಳ್ಕೊಡುವುದಕ್ಕೆ ಬಂದವರು ಮಾತನಾಡುವುದಕ್ಕೆ ಇದೇ ಸಮಯವೆಂದು ಸಾಲದ ಮಾತನ್ನೆತ್ತಿದರು

"ಜ್ಞಾಪಕವಿದೆ, ಸಾಹುಕಾರ್ರೇ, ಜ್ಞಾಪಕವಿದೆ. ಸಾಧ್ಯವಾದಷ್ಟು ಜಲ್ದಿ ಕಳಿಸುತ್ತೇನೆ"

"ಅಂದರೆ? ಬರೋ ತಿಂಗಳಲ್ಲಿ ಕಳಿಸುತ್ತೀರ?"

"ಇಲ್ಲ, ಮೂರು ನಾಲ್ಕು ತಿಂಗಳಾಗುತ್ತೆ."

"ಅಷ್ಟು ತಡವೇಕೆ? ಬೇಗನೆ ಕಳಿಸಿ ಸಾಹೇಬರೆ ಬರೋ ತಿಂಗಳಲ್ಲ, ಆಚೆ ತಿಂಗಳಲ್ಲಾದರೂ ಕಳಿಸಿ"

"ಆಗೋದಿಲ್ಲ, ಸೆಟ್ರೆ. ನಾನು ಹೋಗೋದು ಹೊಸ ಜಾಗ. ನಿಮಗೆ ಹಣ ಕಳಿಸೋಕೆ, ನಾನು ಸಾಲ ತೆಗೀಬೇಕು. ಸಾಲಾ ಕೊಡೋಕೆ ನಿಮ್ಮ ಹಾಗೇ ಅಲ್ಲೂ ಒಬ್ಬ ಬೇಕೂಫರು ಸಿಕ್ಕಬೇಕೋ, ಇಲ್ಲವೊ?"

ನೋಡಿ, ನೆನಪುಗಳ ಸ್ವಭಾವ. ಅವು ಅಪ್ರಕೃತಸ್ಥಾನದಲ್ಲಿ ಬರುತ್ತವೆ. ಬಂದಾಗ ಹೇಳಿಬಿಡಬೇಕು.

ಲಕ್ಷ್ಮೀಪತಯ್ಯನ ತರುವಾಯ ಅಬ್ಬೂರು ಗ್ರಾಮದವನೇ ಆದ ಚೌಡನೆಂಬ ಒಬ್ಬ ಅಗಸರವನಿಂದ ಬಾತ್ಮಿ ಬರುತ್ತಿತ್ತು. ಈ ಅಗಸರವನಿಗೆ ದೊಡ್ಡಹೈದನ ಮೇಲೆ ಮರಣಾಂತವಾದ ದ್ವೇಷ. ಯಾಕೆಂದರೆ, ಅಗಸಗಿತ್ತಿಗೂ ದೊಡ್ಡ ಹೈದನಿಗೂ ಅಕ್ರಮವಾದ ಬಳಕೆ ಇತ್ತು–ಈಗಲೂ ಇದೆ– ಎಂದು ಜನದ ಆಡಿಕೆ.

ಹೊಸ ಇನ್‌ಸ್ಪೆಕ್ಟರು– ಅವರ ಹೆಸರು ಮೂಗೂರು ದೇವರಾಜೇ ಅರಸು – ಚೌಡನನ್ನು ಕರೆಸಿಕೊಂಡು, ಅವನ ಹೆಂಡತಿಯ ಸಹಾಯ

ದಿಂದ ದೊಡ್ಡ ಹೈದನನ್ನು ಹಿಡಿಯಲು ಸಾಧ್ಯವೇ ಎಂದು ವಿಚಾರಿಸಿದರು.

ಅವಳಿಗೂ ದೊಡ್ಡ ಹೈದನಿಗೂ ಈಗ ಹಿಂದಿನ ಸಲಿಗೆ ಇಲ್ಲ; ಅಗಸಗಿತ್ತಿಗೆ– ಹಾಗೇ ದೊಡ್ಡ ಹೈದನಿಗೂ ಸಹ – ತನ್ನ ಗಂಡನಿಂದ ಪ್ರಾಣಭಯ. ಅಲ್ಲಿ ಪೋಲೀಸಿನವರು ಬಹು ದಿನ, ಬಹು ಜಾಗರೂಕತೆಯಿಂದ ಹೊಂಚು ನೋಡಿದರು. ಪಾತಕಿ ಅಲ್ಲಿ ಬರುವ ಸುಳಿವೇ ಇಲ್ಲ ಆದರೆ, ದೊಡ್ಡ ಹೈದನಿಗೂ ಅವನ ಹೆಂಡತಿಗೂ ಈಚೆಗೆ ಋಣಾನುಬಂಧ ಬೆಳೆಯುತ್ತಿರುವಂತೆ ಇದೆ. ಅವನು ಬಹಳ ಖಾಯಿಲೆ ಬಿದ್ದಿದ್ದನಂತೆ ಆಗ ಅವಳು ಅವನನ್ನು ರಾತ್ರೋ ರಾತ್ರಿ ಸಾಗಿಸಿಕೊಂಡು ಬಂದು ಹೊಳೆಯ ಮಧ್ಯದಲ್ಲಿನ ದಟ್ಟವಾದ ಮರ ಪೊಳೆಗಳಿಂದ ತುಂಬಿರುವ ತಿಟ್ಟನಲ್ಲಿ ಗೋಪ್ಯವಾಗಿಟ್ಟು, ಮದ್ದು ಮಂತ್ರ ಮಾಡಿ ಉಳಿಸಿಕೊಂಡಳಂತೆ. ಆಗಾಗ ಅವಳ ಮನೆಗೆ ಸರಿರಾತ್ರಿಯಲ್ಲಿ ಬಂದು ತಂಗಿದ್ದು ಕೋಳಿಕೂಗುವುದಕ್ಕೆ ಮುನ್ನ ಕಾಡಿಗೆ ಹೋಗುತ್ತಾನಂತೆ ಹಾಗೆ ಬರುವಸಂಚು ಕಾದು ಸುದ್ದಿ ಕೊಡುತ್ತೇನೆಂದು ಚೌಡ ಭರವಸೆ ಕೊಟ್ಟನಂತೆ.

ಒಂದು ರಾತ್ರಿ ನನಗೆ ಭೇಟಿ ಕೊಡಲು ಯಡತೊರೆಗೆ ಬಂದಿದ್ದ. ನನ್ನ ಪ್ರಿಯಮಿತ್ರರು ರಾಜಾಜಿಯವರೂ ನಾನೂ ಚುಂಚನಕಟ್ಟೆ (Travellor's) ಬಂಗಲೆಯಲ್ಲಿ ಮಲಗಿಕೊಂಡಿದ್ದೆವು ರಾತ್ರಿ ಒಂದೂವರೆ ಘಂಟೆ ಇದ್ದಿರಬಹುದು; ಆದರೆ ನಮಗೆ ಇನ್ನೂ ನಿದ್ರೆ ಹತ್ತಿರಲಿಲ್ಲ–ಯಾಕೆಂದರೆ ನಾನು ಶೇಲಂನ್ನು ಬಿಟ್ಟಮೇಲೆ ರಾಜಾಜಿಯವರು ಇದೇ ನನ್ನನ್ನು ನೋಡುವುದಕ್ಕೆ ಮೊದಲನೆಯ ಸಲ ಬಂದಿದ್ದದ್ದು. ಅವರೂ ನಾನೂ ರಾತ್ರಿ ಮಾತನಾಡುತ್ತಿರುವಾಗ ಅನೇಕ ಸಲ ಮಾತು ಮುಗಿಯದೆ ರಾತ್ರಿಯೇ ಮುಗಿದು ಹೋಗಿದೆ. ಅವಿದಿತ ಗತ ಯಾಮಾ ರಾತ್ರಿರೇವ ವ್ಯರಂಸೀತ್. ಆಗ ಇನ್‌ಸ್ಪೆಕ್ಟರು ಬಂದು,

"ಇವತ್ತು ರಾತ್ರಿ ದೊಡ್ಡ ಹೈದ ಅವನ ಹೆಂಡತಿಯ ಮನೆಯಲ್ಲಿದ್ದಾನಂತೆ" ಎಂದು ವರ್ತಮಾನ ಕೊಟ್ಟರು. ಅಬ್ಬೂರು ಚುಂಚನಕಟ್ಟೆಯಿಂದ ಆರು ಮೈಲಿ ದೂರ. ಅಬ್ಬೂರು ಜನಗಳಿಗೆ ದೊಡ್ಡ ಹೈದನನ್ನು ಹಿಡಿಯಬೇಕೆಂಬ ಉತ್ಸಾಹ ಸ್ವಲ್ಪವಾದರೂ ಇದ್ದಿದ್ದರೆ ಸುಲಭವಾಗಿ

ಹಿಡಿಯಬಹುದಾಗಿತ್ತು. ಸದ್ಯಕ್ಕೆ ಸುದ್ದಿಯಾದರೂ ಕೊಟ್ಟಿರಲ್ಲ. ನಾನು ರಾಜಾಜಿಯವರಿಗೆ ಒದಗಿದ ಸಂದರ್ಭವನ್ನು ತಿಳಿಸಿ, ಅಬ್ಬೂರಿಗೆ ಹೋಗಿಬರುತ್ತೇನೆಂದು ಹೇಳಿದಾಗ ತಾವೂ ಬರುವುದಾಗಿ ಕೋರಿದರು. ಇಬ್ಬರೂ ಹೊರಟೆವು. ಆ ಹಳ್ಳಿಗೆ ರಸ್ತೆಯಿಂದ ಕುರುಚು ಕಾಡಿನಲ್ಲಿರುವ ಕಾಲುದಾರಿಯಲ್ಲಿ ಹೋಗಬೇಕು. ನಾವು ಅಲ್ಲಿಗೆ ತಲಪಬೇಕಾದರೆ ನಾಲ್ಕು ನಾಲ್ಕೂವರೆ ಘಂಟೆಯಾಯಿತು. ನಾವು ದಾರಿ ನಡೆಯುತ್ತಿದ್ದ ಹಾಗೆ ಹಳ್ಳಿಯ ಕಡೆಯಿಂದ ಯಾರೋ ಬಹಳ ಅವಸರದಲ್ಲಿ ಬರುತ್ತಿರುವಂತೆ ಸರಸರ ಶಬ್ದವಾಯಿತು. ನಾವು ದಾರಿಯ ಬಾಜೂದಲ್ಲಿದ್ದ ಒಂದು ಮೆಳೆಯ ಹಿಂದೆ ಮರೆಯಾಗಿ ಕಾದೆವು. ನನ್ನ ಬಂದೂಕನ್ನು ಸಿದ್ಧವಾಗಿಟ್ಟುಕೊಂಡು ನಮ್ಮ ಸಂಗಡ ಕರೆದುಕೊಂಡು ಬಂದಿದ್ದ ಕಾನ್‌ಸ್ಟೇಬಲ್ ಗುಂಡಪ್ಪನಿಗೆ–ಈಗ ಬರುವ ಮನುಷ್ಯ ಅವನೇ ಏನು ನೋಡೆಂದು ಹುಷಾರಿ ಮಾಡಿದೆ. ಹಳ್ಳಿಕಡೆಯಿಂದ ಕಂಬಳಿ ಗುಬರು ಹಾಕಿಕೊಂಡು ಬರುತ್ತಿದ್ದ ಒಬ್ಬ ಮನುಷ್ಯ ನಮ್ಮಿಂದ ಸ್ವಲ್ಪ ದೂರವಿದ್ದ ಹಾಗೇ ದಾರಿ ಬಿಟ್ಟು ಕಾಡಿಗೆ ಬೀಳುವ ಪ್ರಯತ್ನದಲ್ಲಿ ಕಂಡುಬಂದ. ನಾನು ಎದ್ದು ನಿಂತು ಬಂದೂಕನ್ನು ಅವನ ಕಡೆ ತಿರುಗಿಸಿ,–"ನಿಲ್ಲು, ಇಲ್ಲವಾದರೆ ಸುಡುತ್ತೇನೆ"– ಎಂದು ಕೂಗಿದೆ ಆ ಮನುಷ್ಯ ನಿಲ್ಲಲೂ ಇಲ್ಲ, ಮಾತನಾಡಲೂ ಇಲ್ಲ. ಕಾಡಿಗೆ ನುಗ್ಗಿ ಓಡಲು ಪ್ರಾರಂಭಿಸಿದ. ಗುಂಡಪ್ಪ–ಅವನೇ, ಅವನೇ–ಎಂದು ಕೂಗಿದ ಕೂಡಲೆ ನಾನು ಕೋವಿಯನ್ನು ಓಡುವನ ಕಾಲಿನ ಕಡೆಗೆ ತಗ್ಗಿಸಿ– ಅವನನ್ನು ಕೊಲ್ಲುವುದು ನನ್ನ ಇಷ್ಟವಲ್ಲದ್ದರಿಂದ ಹಾಗೆ ಮಾಡಿದೆ—ಎರಡು ಸಲ ಹಾರಿಸಿದೆ. ಅವನಿಗೆ ಪೆಟ್ಟು ಬಿದ್ದಿರಲಾರದು ಬಹಳ ದೂರ, ಕತ್ತಲು, ಗಿಡ ಮರಗಳ ಅಡ್ಡ ಬೇರೆ. ರಾಜಾಜಿಯವರು ನಸುನಕ್ಕು– ಆಯಿತಲ್ಲ, ಇನ್ನು ಬನ್ನಿ ಹೋಗೋಣ; ಕಾಫಿ ಹೊತ್ತಿಗೆ ಬಂಗಲೆಗೆ ಸೇರೋಣ– ಎಂದರು. ಆಮೇಲೆ– ಖೇದಪಡಬೇಡಿ; ನೀವು ಮಾಡೋದೆಲ್ಲ ಮಾಡಿದಿರಿ. ನನಗಾದರೋ ಅವನ ರಕ್ತ ನಿಮ್ಮ ಕೈಯನ್ನು ಹೊಲಸು ಮಾಡಲಿಲ್ಲವೆಂಬುದೇ ಸಂತೋಷ – ಎಂದರು.

ಇದಾದ ಅನೇಕ ದಿನಗಳನಂತರ ಮತ್ತೊಂದು ಸಲ ದೊಡ್ಡ ಹೈದ

ನನ್ನ ಹಿಡಿಯಲಿಕ್ಕೆ ಯತ್ನ ಮಾಡಿದೆ ಅಬ್ಬೂರು ಗ್ರಾಮದ ರೈತನೊಬ್ಬ, "ದೊಡ್ಡ ಹೈದ ಅವನ ಮನೆಗೇ ಧಾರಾಳವಾಗಿ ಬಂದುಹೋಗಿ ಮಾಡುತ್ತಿದ್ದಾನೆ, ಗ್ರಾಮಸ್ಥರೆಲ್ಲರೂ ಅವನಿಗೆ ಷಾಮೀಲಾಗಿದ್ದಾರೆ; ಅವನ ಹೆಂಡತಿಗೆ ಅವನ ರಖಾವುದಾರಳು ಅಗಸಗಿತ್ತಿಯ ದೆಸೆಯಿಂದ ಅವನಲ್ಲಿ ದ್ವೇಷವಿದ್ದರೂ ಪ್ರಾಣಭಯದಿಂದ ಅನಾಥಳಾಗಿದ್ದಾಳೆ, ಹೆಂಡತಿಯ ತಾಯಿ ಮನೆಯವರು ಮದುವೆಯಲ್ಲಿ ಕೊಟ್ಟ ಕೆಲವು ಒಡವೆಗಳನ್ನು ಸುಲಿದುಕೊಂಡು ಪಟೇಲನ ಮೂಲಕ ರಹಸ್ಯವಾಗಿ ಮಾರಿ ತನಗೆ ಬೇಕಾದ ಹಚ್ಚಡ ಕಂಬಳಿ ಮೊದಲಾದವುಗಳನ್ನು ಮಾಡಿಕೊಂಡ. ಇದರಿಂದ ಹೆಂಡತಿಗೆ ಅವನ ಮೇಲೆ ಮತ್ತಷ್ಟು ಅಸಮಾಧಾನ; ಅವಳೂ ಅಷ್ಟೇನೂ ಪತಿವ್ರತೆಯಲ್ಲ. ಈ ಶಂಕೆಯಿಂದ ಅವನು ಅವಳನ್ನು ಹೊಡೆದು ಬಡಿದು, ಹಿಂಸೆ ಮಾಡುವುದೂ, ಕೊಲ್ಲುವುದಾಗಿ ಹೆದರಿಸುವುದೂ ಉಂಟು; ಎಲ್ಲಾ ರೀತಿಯಿಂದಲೂ ಇವನು ಬದುಕಿರುವುದು ಅವಳಿಗೆ ಭಾರವೇ; ಎಂದಿಗಾದರೂ ಅವನಿಂದ ಅವಳಿಗೆ ವಿಪತ್ತೇ" ಎಂದು ಬಾತ್ಮಿ ಕೊಟ್ಟ. ಅವಳು ಮನಸ್ಸು ಮಾಡಿದರೆ ಅವನ ಓಡಾಟದ ಸಂಚನ್ನು ನಮಗೆ ತಿಳಿಸಿ, ಅವನನ್ನು ಸುಲಭವಾಗಿ ಹಿಡಿದುಕೊಡಬಹುದೆಂದು ಹೇಳಿದ. ಇದೇ ಮಾತನ್ನು ಗ್ರಾಮದ ಪಟೇಲನೂ ಪೋಲೀಸು ಇನ್ಸ್‌ಪೆಕ್ಟರಿಗೆ ಸೂಚಿಸಿದನಂತೆ. ನಾನು ಪಟೇಲನನ್ನು ಕರೆಸಿ ಗೋಪ್ಯವಾಗಿ ಕೇಳಲಾಗಿ, ಹೌದೆಂದು ಒಪ್ಪಿಕೊಂಡ. ಹಾಗಾದರೆ ನೀನೇ ಸಾಹಸ ಮಾಡಿ ಪಾತಕಿಯನ್ನು ಹಿಡಿದುಕೊಟ್ಟು, ಒಳ್ಳೆ ಹೆಸರನ್ನೂ, ಸರ್ಕಾರದಿಂದ ಪ್ರಕಟಿಸಿದ ಇನಾಮನ್ನೂ, ಯಾಕೆ ಪಡೆಯಬಾರದೆಂದು ಕೇಳಿದ್ದಕ್ಕೆ, ಬಹಳ ಸಂಕೋಚದಿಂದ, ಬಹಳ ಮಾತು ನುಂಗಿ ನಿಜಸ್ಥಿತಿಯನ್ನು ಹೇಳಿದ. ಪಟೇಲ ಅದೇ ಜಾತಿಯವನು. ಜಾತಿಯವರೆಲ್ಲರೂ ದೊಡ್ಡ ಹೈದನ ಚಲನೆಯನ್ನು ತಿಳಿದವರಾಗಿದ್ದರೂ, ಏನೋ ಹೋಗಲಿ, ಪಾಪ ಎಂದು ಸುಮ್ಮನಿದ್ದಾರೆ. ಅದೂ ಅಲ್ಲದೆ ತನಗೂ ದೊಡ್ಡ ಹೈದನ ಹೆಂಡತಿಗೂ ಅನ್ಯಾಯವಾದ ಸ್ನೇಹವಿರುವುದರಿಂದ ಸುಳ್ಳು ಗುಮಾನೆ ಬೇರೆ ಆಡುತ್ತಾರೆ; ತಾನು ದೊಡ್ಡ ಹೈದನನ್ನು ಹಿಡಿದುಕೊಟ್ಟದ್ದೇ ಆದರೆ ತನ್ನ ಕೋಮಿನವರಲ್ಲಿ ಯಾವಜ್ಜೀವವೂ ಹೊಲೆತನ ಬಂದು ತನ್ನ ಬಾಳೇ

ಅಸಹ್ಯ, ಅಸಾಧ್ಯವಾಗುತ್ತದೆ. ಬಹುಶಃ ಗಂಡನ ಪೀಡೆ ತಡೆಯಲಾರದೆ ಬಳಲಿರುವ ಅವನ ಹೆಂಡತಿಯನ್ನು ನಾನೇ (ಸುಬೇದಾರ್‍ರೇ) ಕರೆಸಿ ಮಾತ ನಾಡಿದರೆ, ಆವನನ್ನು ಹಿಡಿದುಕೊಟ್ಟಾಳು. ಅವಳನ್ನು ನನ್ನ ಭೇಟಿಗೆ ಬರಮಾಡಿಕೊಟ್ಟೇನೆಂದು ಪಟೇಲ ಹೇಳಿದ.

ಆಕೆಯ ಹೆಸರು ನನಗೆ ಚೆನ್ನಾಗಿ ಜ್ಞಾಪಕವಿಲ್ಲ. ಗಿರಿಜಮ್ಮನೆಂದಿ ರಬಹುದು, ಗಿರಿಜಮ್ಮನೆಂದು ಇಟ್ಟುಕೊಳ್ಳೋಣ. ಈ ಮಾತುಕತೆ ನಡೆದಾಗ ನಾನು ಚುಂಚನಕಟ್ಟೆಯಲ್ಲಿದ್ದೆ. ಆಕೆಯನ್ನು ಅಲ್ಲಿಗೆ ಕರೆಸಿ ಕೊಳ್ಳುವುದು ನನಗೆ ಸರಿಯಾಗಿ ಕಾಣಲಿಲ್ಲ. ಬರುತ್ತಾ ಹೋಗುತ್ತಾ ಅರ್ಧ ದಿವಸದ ದಾರಿ; ಅವಳ ಗ್ರಾಮದವರಿಗೆ ತಿಳಿಯದೇ ಆಕೆ ಬರುವ ಹಾಗಿಲ್ಲ. ಜನಗಳಿಗೆ ಗೊತ್ತಾಗದೆ ಬಂಗಲೆಗೆ ಬಂದು ನನ್ನ ಸಂಗಡ ಮಾತನಾಡಿ ಹೋಗುವ ಹಾಗಿಲ್ಲ. ಈ ಯೋಚನೆಯಿಂದ ನಾನು ಪಟೇಲನಿಗೆ —

"ನಾನು ಅಬ್ಬೂರಿನ ಹೊಳೆ ಕಡವಿನ ತೋಪಿನಲ್ಲಿರುತ್ತೇನೆ. ಆಕೆ ಯನ್ನು ಅಲ್ಲಿಗೆ ಕಳುಹಿಸಿಕೊಡು. ಯಾಕೆ ಕರೆಸುತ್ತೇನೆಂದು ಮೊದಲೇ ಹೇಳಬೇಡ. ಹೇಳಿದರೆ ಹೆದರಿ ಬಾರದೇ ಹೋದಾಳು" – ಎಂದು ಹೇಳಿದೆ.

ಮಾರನೆಯ ಬೆಳಿಗ್ಗೆ ಪಟೇಲನನ್ನು ಮೊದಲೇ ಕಳುಹಿಸಿ, ನಾನು ಅಬ್ಬೂರು ಗ್ರಾಮದ ಹೊಳೆಯ ತೀರದ ತೋಪಿಗೆ ಹೋದೆ. ನಾನು ತಲಪಿದ ಸ್ವಲ್ಪ ಹೊತ್ತಿಗೆಲ್ಲ ಪಟೇಲ ಬಂದು ಗಿರಿಜಮ್ಮ ಬರುತ್ತಾ ಳೆಂದು ತಿಳಿಸಿ ಹೋದ. ನಂತರ ಒಂದು ಘಳಿಗೆಯಮೇಲೆ ಆಕೆಯೂ ಕಾಲುಂಗುರ ಸದ್ದು ಮಾಡುತ್ತ ಬಂದಳು. ಸುಮಾರು ಇಪ್ಪತ್ತೈದು ವರುಷದ ದೃಢಕಾಯದ ಹೆಂಗಸು. ಎಣ್ಣೆಗಪ್ಪು ಬಣ್ಣದ ಸುಂದರವಾದ ಮುಖ. ಹಣೆಯ ಮೇಲೆ ಮೂರು ಸಾಲು ವಿಭೂತಿ, ಕುಂಕುಮ. ದೊಡ್ಡವ ರನ್ನು ನೋಡಲಿಕ್ಕೆ ಹೋಗುತ್ತೇನೆಂದು ಮುಖ ತೊಳೆದು, ತನ್ನ ಬಡತ ನದ ಒಳ್ಳೆ ಸೀರೆಯುಟ್ಟು ಶುಚಿಯಾಗಿ ಬಂದಿದ್ದಾಳೆಂದು ನನಗೆ ತೋರಿತು. ಅವಳ ಅವಸ್ಥೆ ತಿಳಿದ ನನಗೆ ಅಯ್ಯೋ ಪಾಪ ಅನ್ನಿಸಿತು. ಆಕೆ ನಾನಿದ್ದೆ ಬಳಿಗೆ ಬಂದು ಬೆಡಗು ಮಿಶ್ರವಾದ ಲಜ್ಜೆಯಿಂದ ಕೈ ಮುಗಿದು,

"ಏನು ಬುದ್ಧಿ, ಬರಹೇಳಿದರಂತಲ್ಲ" ಎಂದಳು.

"ನೀನು ದೊಡ್ಡ ಹೈದನ ಹೆಂಡತಿಯೇ ತಾಯಿ?"

ಅವಳ ನಗೆಮುಖ ಸ್ವಲ್ಪ ಬಿಗಿಯಾಯಿತು.

"ಹೂಂ, ಹೌದೇಳಿ."

"ಅವನು ಖಾಯಿಲೆಯಂತಲ್ಲ, ಹೌದೇನಮ್ಮ?"

ಇದು ಲಾಯರಿತನದ ಪ್ರಶ್ನೆ. "ಹೌದು" ಅಥವಾ "ಇಲ್ಲ" ಎಂದರೆ ಅವನನ್ನು ನೋಡಿದ್ದೇನೆಂದು ಒಪ್ಪಿಕೊಂಡಹಾಗಾಯಿತು. ಆದರೆ ಈ ಸೊಟ್ಟ ಬುದ್ಧಿವಂತಿಕೆ ಅವಳ ಸರಳ ಸ್ವಭಾವವನ್ನು ಭೇದಿಸಲಿಲ್ಲ.

"ನಾನೇನು ಬಲ್ಲೆ, ನನ್ನ ಒಡೆಯ."

"ಆಗಾಗ ಊರಿಗೆ ಬರ್ತಾನಂತಲ್ಲಮ್ಮ?"

ಉತ್ತರವಿಲ್ಲ

"ಯಾರೋ ಆಗಸಗಿತ್ತೀನ ಮಾಡಿಕೊಂಡು ನಿನ್ನ ಹೊಡೆದು ಬಡಿದು ಮಾಡ್ತಾನಂತಲ್ಲ?"

"ತಮಗ್ಯಾಕ ಬುದ್ಧಿ, ಗಂಡ ಹೆಂಡಿರ ಮಾತು? ಗಂಡ ಹೆಂಡರನ್ನ ಹೊಡೀದೇಲೇ ಇರ್ತಾನ? ಅವನು ಆಗಸಗಿತ್ತೀನ ಮಾಡ್ಕೊಂಡವನೋ, ಕುಳವಾಡ್ಗಿತ್ತೀನ ಮಾಡ್ಕೊಂಡವನೋ, ನನಗೇನು? ಗಂಡಸರು ಯಾರನ್ನೂ ಮಾಡ್ಕೊಳ್ಳದೇಲೇ ಇದ್ದಾರ?"

ಸರಿ, ಗಂಡಸರ ಸಾಮಾನ್ಯ ಯೋಗ್ಯತೆಯ ಜಿಜ್ಞಾಸದಲ್ಲಿ ನನಗೂ ಒಂದು ಸರ್ಟಿಫಿಕೇಟ್ ಬಂದ ಹಾಗಾಯಿತು.

"ಕೋಪ ಮಾಡಿಕೋಬೇಡ ತಾಯಿ. ಗಂಡಸರೇನೋ ಹಾಗೇ, ಹೋಗಲಿ ಬಿಡು. ಆದರೆ ನಿನ್ನ ಗಂಡನಿಂದ ನಿನಗೆ ಪ್ರಾಣ ಭಯ. ಯಾವ ಹೊತ್ತಿನಲ್ಲಿ ಏನು ಮಾಡುತ್ತಾನೋ ಹ್ಯಾಗೆ ಹೇಳೋದು? ಕೊಲ್ಲುವುದೆಂದರೆ ಅವನಿಗೆ ನೀರು ಕುಡಿದ ಹಾಗೆ. ಅವನಿಗೆ ಗಲ್ಲಿಗೆತ್ತಬೇಕೆಂದು ಶಿಕ್ಷೆ ವಿಧಿಸಿರುವುದರಿಂದ, ಅವನಿದ್ದರೂ ಸತ್ತಕೂಟವೇ. ಅವನಿಂದ, ಹಸಿದ ಹುಲಿ ತಿರುಗಾಡಿದರೆ ಹ್ಯಾಗೋ ಹಾಗೆ, ಜನಗಳಿಗೆ ಅಪಾಯ. ನಿನ್ನ ಮೇಲೆ ಅವನಿಗೆ ಏನಾದರೂ ಯಾವ ವಿಚಾರದಲ್ಲಾ

ದರೂ ಗುಪ್ತಾಗಿ ಬಂದರೆ, ಇತರರು ಹೆಂಡಿರನ್ನು ಹೊಡಿಯುವ ಹಾಗೆ ಅವನು ನಿನ್ನನ್ನು ಕೊಲ್ಲುತ್ತಾನೆ."

ಹೀಗೆ ಮಾತನಾಡುವ ನನಗೆ ನನ್ನ ಮಾತು ಯುಕ್ತವೇ? ಎಂಬ ನಾಚಿಕೆ ಸೇರಿದ ಸಂಕೋಚ ಆಕೆಯ ನಗೆ ಯಾವಾಗಲೋ ಮಾಯವಾಗಿ ಮುಖ ಕೋಪದಿಂದ ವಿವರ್ಣವಾಗಿತ್ತು. ಚಳಿಗಾಲವಾಗಿದ್ದರೂ ಹಣೆಯಮೇಲೆ ಬೆವರಿತ್ತು. ಆದರೂ ನಾನು ಬಂದ ಕೆಲಸ ಪೂರೈಸಬೇಕೆಂದು ಮನಸ್ಸನ್ನು ಘಟ್ಟಿಮಾಡಿ:

"ನೋಡಿದಾ, ತಾಯಿ ಇವನನ್ನು ಹಿಡಿದುಕೊಟ್ಟರೆ ನಿನಗೂ ನೆಮ್ಮದಿ, ಜನಗಳಿಗೂ ಉಪಕಾರ ಮಾಡಿದಹಾಗಾಗುತ್ತೆ. ನೀನು ಹಿಡಿದುಕೊಟ್ಟೆ ಎಂದು ಯಾರಿಗೂ ತಿಳಿಯಬೇಕಾದ್ದಿಲ್ಲ ದೊಡ್ಡ ಹೈದ ಊರಿಗೆ ಬರುವ ಸಂಚನ್ನು ನೀನು ಗಟ್ಟಾಗಿ ಪಟೇಲನಿಗೆ ತಿಳಿಸಿದರೆ, ನಾವು ಅವನನ್ನು ಹಿಡಿದುಬಿಡುತ್ತೇವೆ. ನಿನ್ನಿಂದ ಸುದ್ದಿ ಬಂತೆಂದು ಯಾವ ಪ್ರಾಣಿಗೂ ಸುಳಿವು ಕೊಡೋದಿಲ್ಲ ಸರ್ಕಾರದವರು ನಿನಗೆ ಗೋಪ್ಯವಾಗಿ ಸಾವಿರ ರೂಪಾಯಿ ಬಹುಮಾನವನ್ನು ಕೊಡುತ್ತಾರೆ. ಸರ್ಕಾರಕ್ಕೆ ಸಹಾಯ ಮಾಡಿದವಳೆಂದು ನೀನು ಹೊಲ, ಗದ್ದೆಗೆ ದರಖಾಸ್ತು ಮಾಡಿದರೆ, ಅವೂ ಸಿಕ್ಕುತ್ತೆ."

ಗಿರಿಜಮ್ಮ ನೆಟ್ಟನೆ ಶ್ರೀ ಚಾಮುಂಡೀ ವಿಗ್ರಹದಂತೆ ಗಂಭೀರವಾಗಿ ನಿಂತು, ನೇರವಾಗಿ ನನ್ನ ಕಣ್ಣುಗಳನ್ನು ತನ್ನ ಕಣ್ಣುಗಳಿಂದ ಹಿಡಿದಂತೆ ಕ್ರೂರವಾಗಿ ನೋಡಿ,

"ಪರಪಂಚದಲ್ಲಿ ದರ್ಮ ಕರ್ಮ ಅನ್ನೋದ್ಯಾವುದೂ ಇಲ್ಲವ ಹಂಗಾದರೆ? ನೀವು ಸರ್ಕಾರದೋರು ಅಂತ ಮಾತಾಡ್ತೀರಿ. ಸರ್ಕಾರದೋರು ಅಲ್ಲ ಅಂತ ಇಟ್ಕೊಳ್ಳಿ. ಬರೀ ನರಮನಸ್ಸರು ಅಂತ ಇಟ್ಕೊಳ್ಳಿ! ಯಾರಾದರೂ ಜೀವಗಳ್ಳನಾಗಿ ಓಡಿ ಬಂದು ನಿಮ್ಮ ಪಾದದ ಮೇಲೆ ಬಿದ್ದು – 'ಅಯ್ಯೋ ಬದುಕಿಸಿಕೊಳ್ಳಿ' ಅಂತ ಗೋಗರದರೆ ಬಿಟ್ಟುಕೊಡ್ತೀರಾ ಬುದ್ಧಿ? ನಾನೂ ಹಂಗೇ ಅಲ್ಲವೇ? ಅವನ ಹೆಂಡರೂ ಅಲ್ಲವೇ? ಅವನ್ನ ಕಟ್ಟಿ ಕೊಂಡು ಅವನ ಸಂಗಡ ಸಂಸಾರ ಮಾಡಲ್ಲವೇ? ಏನ ಮಾತ ಹೇಳ್ತೀರಿ ಹೋಗಿ ಬುದ್ಧೀ, ನೀವು ಹಾರವರು

ಹೇಳಬಹುದೇ? ಅವನು ನನ್ನ ಹೊಡೀಲಿ, ಬಡೀಲಿ, ಕೊನೆಗೆ ಕೊಲ್ಲಲಿ — ಈ ಕೆಲಸ ನನ್ನಿಂದ ಆಗೋಲ್ಲ ಹೋಗಿ" ಎಂದು ಹೇಳಿ ವರ್ಣಿಸಲಸಾಧ್ಯವಾದ ಘನಭಾವದಿಂದ ಹೋಗಲು ತಿರುಗಿದಳು.

"ನೀನು ಹೇಳಿದ ಮಾತು ಸರಿ ತಾಯಿ. ನಿನ್ನಂಥವರು ಇರುವವರಿಗೂ ಲೋಕದಲ್ಲಿ ಧರ್ಮವಿದ್ದೇ ಇರುತ್ತೆ" ಎಂದುಕೊಂಡು, ನಿರ್ವಿಣ್ಣಭಾವದಲ್ಲಿ ವಾಪಸು ಬಂದೆ. ಇದೇ ದೊಡ್ಡ ಹೈದನನ್ನು ಹಿಡಿಯುವುದಕ್ಕೆ ನಾನು ಮಾಡಿದ ಕಡೆಯ ಯತ್ನ.

ನಾನು ತಾಲ್ಲೂಕನ್ನು ಬಿಟ್ಟು ಬಹು ದಿನಗಳಾದ ಮೇಲೆ ಆಗ ಪೋಲೀಸು ಇನ್‌ಸ್ಪೆಕ್ಟರಾದವರು ದೊಡ್ಡ ಹೈದನ ಮನೆಯನ್ನು ಗೇರಾಯಿಸಿ, ಅವನನ್ನು ಹಿಡಿಯಲು ಸಾಹಸ ಮಾಡಿದರಂತೆ. ಅವನು ತಪ್ಪಿಸಿಕೊಂಡದ್ದೂ ಅಲ್ಲದೆ ತನ್ನ ಹೆಂಡತಿ ಪೋಲೀಸಿನವರಿಗೆ ಸಹಾಯಮಾಡಿರಬೇಕೆಂದು ಅವಳನ್ನು ಕೊಂದನಂತೆ. ಕೊನೆಗೆ, ಅಂದರೆ ಮೂರು ನಾಲ್ಕು ವರುಷಗಳ ತರುವಾಯ, ಮೇಲೆ ಹೇಳಿರುವ ಅಗಸ ಅಗಸಗಿತ್ತಿಯ ಸಹಾಯದಿಂದ ಪೋಲೀಸಿನವರು ಅವನನ್ನು ಹಿಡಿದು ಕೋರ್ಟಿಗೆ ಒಪ್ಪಿಸಿದರು. ಕ್ರಮವಾಗಿ ಅವನನ್ನು ಗಲ್ಲಿಗೆ ಏರಿಸಿದರು. ಅವನಿಗೂ ಅಷ್ಟರಲ್ಲಿ ಬಾಳಿನಲ್ಲೇ ಬೇಸರ ಬಂದಿದ್ದಿರಬೇಕು. ನಾನು ಆಗ ಬೆಂಗಳೂರಿನಲ್ಲಿ ಸೆಕ್ರೆಟೇರಿಯಟ್ಟಿನಲ್ಲಿದ್ದೆ. ದೊಡ್ಡ ಹೈದನಿಗೆ ಮರಣದಂಡನೆಯನ್ನು ವಿಧಿಸಿದ ನ್ಯಾಯಾಧೀಶರು,

"Glad to report Dodda Hyda Hanged" ಎಂದು ಸರ್ಕಾರಕ್ಕೆ ತಂತಿ ಕೊಟ್ಟರು.

ಆಗ ನ್ಯಾಯಶಾಖೆಯ ಸಚಿವರಾಗಿದ್ದ ಶ್ರೀ ಎಚ್. ವಿ. ನಂಜುಂಡಯ್ಯನವರು ಮುಖದಲ್ಲಿ ಅಸಹ್ಯವನ್ನು ತೋರಿಸಿ,

"Glad ಅಂತೆ gladಉ! ಪುತ್ರೋತ್ಸವವಾಯಿತು. ಸಕ್ಕರೆ ಹಂಚಲಿ" ಎಂದು ನಕ್ಕರು.

ದಸರಾ ಎಂದರೆ ಸಾಮಾನ್ಯವಾಗಿ ಮೈಸೂರಿನವರಿಗೆ ರಾಜಧಾನಿಯಲ್ಲಿನ ಮಹೋತ್ಸವಗಳು. ಅರಮನೆ ಸಜ್ಜೆಯ ಮೇಲಿನ ದರ್ಬಾರು. ದರ್ಬಾರು ಮಧ್ಯದಲ್ಲಿ ಸಿಂಹಾಸನದ ಮೇಲೆ ಇಂದ್ರಸಭೆಯಲ್ಲಿನ

ದೇವೇಂದ್ರನಂತೆ ಕುಳಿತು ಅರಮನೆಯ ಅಂಗಳದಲ್ಲಿ ನೆರೆದಿರುವ ತಮ್ಮ ಲಕ್ಷಾಂತರ ಪ್ರಜೆಗಳಿಗೆ ದರ್ಶನ ಕೊಟ್ಟು ಅವರ ಜೈ ಘೋಷವನ್ನು ಲಾಲಿಸುವ ನಮ್ಮನ್ನಾಳುವ ಮಹಾಸ್ವಾಮಿಗಳು. ಲಕ್ಷಾಂತರ ಪ್ರಜೆಗಳ ಜಯಘೋಷಗಳ ಮಧ್ಯೆ ಬನ್ನೀಮಂಟಪಕ್ಕೆ ಚತುರಂಗಬಲ ಸಮೇತ ವಾದ ಮೆರವಣಿಗೆ– ಇವುಗಳು ಚೇತನದ ಮುಂದೆ ನಿಲ್ಲುತ್ತವೆ. ವಿಜಯ ನಗರದ ರತ್ನಸಿಂಹಾಸನದ ಸೌಭಾಗ್ಯಲಕ್ಷ್ಮಿ ನವರಾತ್ರಿಯಲ್ಲಿ ನವ ಕರ್ಣಾಟಕದ ಸಂಪತ್ತಿನ ನಿಲಯವಾದ ಮೈಸೂರಿನಲ್ಲಿ ತಂಗಿ ನಲಿದಾ ಡುವುದನ್ನು ಅಖಿಲ ಭಾರತವೇ ನೋಡಿ ಆನಂದಪಡುತ್ತದೆ. ಈ ಕಾಲವಲ್ಲಿ ಮೈಸೂರಿನವರು ಎಲ್ಲಿಯೇ ಇರಲಿ, ರಾಜಧಾನಿಯನ್ನೂ ರಾಜರನ್ನೂ ಸ್ಮರಿಸಿಕೊಂಡು ಪ್ರೀತಿ ಭಕ್ತಿಗಳನ್ನು ಅರ್ಪಿಸುತ್ತಾರೆ. ಕೆಲವು ಕಾಲದ ಹಿಂದೆ ಶ್ರೀಮನ್ ಯುವರಾಜರವರು ಲಂಡನ್ ನಗರ ದಲ್ಲಿನ ಮೈಸೂರಿನವರನ್ನೂ ಭಾರತೀಯರನ್ನೂ ವಿಜಯದಶಮಿಯ ದಿವಸ ಆಹ್ವಾನಿಸಿ, ಸತ್ಕರಿಸಿ, ಮೈಸೂರಿನ ನವರಾತ್ರಿ ಉತ್ಸವಗಳ ನೆನಪನ್ನು ಸಭೆಗೆ ವರ್ಣಿಸಿದ ರಿಕಾರ್ಡನ್ನು ನಾನು ಓದಿದಾಗ – ಅದರಲ್ಲಿ ಬಿಂಬಿಸುವ ದೇಶ ಮತ್ತು ದೇಶಜನದ ಮೇಲಿನ ವಾತ್ಸಲ್ಯ, ಮತ್ತು ಮಾತಿನ ಗಾಂಭೀರ್ಯದಲ್ಲೂ ಹೊರಮೂಡುತ್ತಿರುವ ಹೃದಯದ ಹಂಬಲ, ನನ್ನ ಕಣ್ಣಿನಲ್ಲಿ ನೀರನ್ನು ತಂದವು. ಆ ಸಭೆಯಲ್ಲಿದ್ದವರು ಆ ಮಾತುಗಳು ಗದ್ಗದ ಸ್ವರದಿಂದ ಬಂದುವೆಂದು ನನಗೆ ಆಮೇಲೆ ಹೇಳಿದರು.

ಸರಿ, ಇದು ರಾಜಧಾನಿಯ ಸೊಬಗಿನ ಮಾತು ; ನವರಾತ್ರಿಯ ಮೈಸೂರಿನ ಸೌಂದರ್ಯವನ್ನು ನೋಡದವರಿಗೆ ಅದರ ಚಿತ್ರವನ್ನು ಕೊಡಲು ನನಗೆ ವಾಗ್ವಿಭವ ಸಾಲದು. ನೋಡಿದವರಿಗೆ ಎಂಥ ವರ್ಣ ನೆಯೂ ನಿರಸವೇ.

ನಾನು ಈ ಮಾತನ್ನು ಎತ್ತಿದ್ದು – ಪ್ರತಿಯೊಂದು ತಾಲ್ಲೂಕಿನಲ್ಲೂ ಈ ದೇಶದ ಉತ್ಸವದ ಪ್ರತಿಧ್ವನಿ, ಪ್ರತಿ ಬಿಂಬ, ಇದ್ದೇ ಇರುತ್ತಿತ್ತೆಂಬು ದನ್ನು ಹೇಳುವುದಕ್ಕಾಗಿ ವಿಜಯದಶಮಿಯ ದಿವಸ ತಾಲ್ಲೂಕು ಕಛೇರಿಯ ಮುಂದೆ ದೊಡ್ಡ ಛಪ್ಪರ ಹಾಕಿ, ಕಛೇರಿಯನ್ನು ತೊಳೆದು

ಅಲಂಕರಿಸಿ, ಅಮಲ್ದಾರರ ಕೋರ್ಟು ರೂಮಿನಲ್ಲಿ ಎತ್ತರವಾದ ಪೀಠ ವನ್ನು ಡೈಯಾಸ್ ಮೇಲೆ ನಿರ್ಮಿಸಿ ಅದರ ಮೇಲೆ ಗಂಡಭೇರುಂಡ ಬಾವುಟಗಳ ನಡುವೆ ಶ್ರೀಮನ್ಮಹಾರಾಜರವರ ಭಾವಚಿತ್ರವನ್ನಿಟ್ಟು, ಅಲಂಕರಿಸಿ, ಅಲ್ಲಿ ಊರಿನ ಮುಖಂಡರನ್ನೆಲ್ಲ ಕರೆಸಿಕೊಂಡು ದರ್ಬಾರು ಮಾಡುವ ಪದ್ಧತಿಯಿತ್ತು. ಅಲ್ಲಿಗೆ ಸ್ಕೂಲು ಹುಡುಗರುಗಳ ಆಟ, ಸ್ಥಳ ಸಂಗೀತಗಾರರ ಕಛೇರಿ, ಗರಡಿಗಳವರ ಕುಸ್ತಿ, ಕಾನ್‌ಸ್ಟೇಬಲ್, ಖಜಾನೆ ಸಿಪಾಯಿಗಳ ಕವಾಯಿತು ನಡೆಯುತ್ತಿದ್ದವು. ಆ ಮೇಲೆ ಸಭೆಯವರೆಲ್ಲರೂ ಎದ್ದು ಮುಜುರೆ ಮಾಡಿ, ಜಯಘೋಷಗಳೊಡನೆ ಬನ್ನಿಮಂಟಪಕ್ಕೆ ಮೆರವಣಿಗೆ ಹೋಗುವರು. ಅಲ್ಲಿ ಅಮಲ್ದಾರರು ಶ್ರೀಮನ್ಮಹಾರಾಜರವರ ಪ್ರತಿನಿಧಿಗಳಾಗಿ ಪೂಜೆಮಾಡಿ ಬನ್ನಿ ಕೊನೆ ಯೊಂದನ್ನು ಕಡಿಯುವರು. ಅವೊತ್ತು ದೇವಸ್ಥಾನಗಳಲ್ಲೆಲ್ಲಾ ಪೂಜೆ, ರಾಜಾಶೀರ್ವಾದ ಮತ್ತು ಊರಿನ ಲಾಗೋಡಿನಲ್ಲಿ ಪ್ರಸಾದದ ಹಂಚಿಕೆ.

ನಾನು ಈ ಉತ್ಸವಗಳಲ್ಲೆಲ್ಲಾ ಬಹಳ ಆದರದಿಂದ ಉತ್ಸಾಹ ದಿಂದ ಭಾಗವಹಿಸುತ್ತಿದ್ದೆ. ನನಗೆ ಜನಗಳ ಸಂಗಡ ಅಧಿಕಾರದ ದರ್ಪ ನಿರ್ಬಂಧಗಳಿಲ್ಲದೆ, ವೈಯಕ್ತಿಕ ಸ್ನೇಹದಿಂದ ಬೆರೆಯಬೇಕೆಂದು ಬಹಳ ಆಶೆ. ಮೊದಲು ಮೊದಲು ಜನಗಳಿಗೆ ಇದು ಹೊಸ ತರಹ ವರ್ತನೆಯಾಗಿ ಕಂಡು, ಅವರು ನನ್ನ ಸಂಗಡ ಬಳಕೆಯಾಗಿ ಸೇರು ವುದಕ್ಕೆ ಸ್ವಲ್ಪ ಸಂಕೋಚಪಟ್ಟರು. ಆಮೇಲೆ ಸರಿಹೋಯಿತು. ಸಂಗೀತಗಾರರು ಊರಿಗೆ ಬಂದರೆ, ಜನಗಳನ್ನೆಲ್ಲಾ ಸೇರಿಸಿ ಕಛೇರಿ ಗಳನ್ನು ಮಾಡಿಸುತ್ತಿದ್ದೆ. ಆಗ ತಾನೆ ಪ್ರಖ್ಯಾತಿಗೆ ಬರುತ್ತಿದ್ದ ಶ್ರೀಮಾನ್ ವಾಸುದೇವಾಚಾರ್ಯರಿಗೆ ಯಡತೊರೆ ಜನಗಳೇ ಮೊದಲು ಪ್ರೋತ್ಸಾಹ ಕೊಟ್ಟದ್ದು – ಮೆಚ್ಚಿಗೆಯ ಕಾಣಿಕೆ ಒಪ್ಪಿಸಿದ್ದು. ಅವರು ಚುಂಚನ ಕಟ್ಟೆ ಶ್ರೀರಾಮರ ದೇವಸ್ಥಾನದಲ್ಲಿ ಖರಹರಪ್ರಿಯ ರಾಗವನ್ನು ಆಲಾ ಪನೆ ಮಾಡಿ "ರಾಮನೀಸಮಾನಮೆವರು" ಎಂಬ ಕೃತಿಯನ್ನು ಹಾಡಿದ್ದು –ಶ್ರೀ ರಾಮರಿಗೇ ಪ್ರೀತಿ. ಇತರರು ಅನೇಕ ಪ್ರಖ್ಯಾತ ಸಂಗೀತ ಗಾರರು ಆ ಕೃತಿಯನ್ನು ಹಾಡಿದ್ದನ್ನು ಕೇಳಿದ್ದೇನೆ. ಆದರೆ ಸ್ಥಳದ ಮಹತ್ವವೋ, ಅಥವ ನಮ್ಮ ಹೃದಯ ಆ ಸನ್ನಿಧಿಯಲ್ಲಿ ಪಕ್ವವಾಗಿತ್ತೆಂ

ತಲ್ಲೋ, ಆ ಕೃತಿಯನ್ನು ಸ್ವೀಕರಿಸುವ ಶ್ರೀ ರಾಮರ ಸಾನ್ನಿಧ್ಯದ ಭಾವನೆ ನನಗೆ ಆ ರೀತಿ ಮತ್ತ್ಯಾವಾಗಲೂ ತುಂಬಿರಲಿಲ್ಲ.

ನಾನು ಜಂಗಮ ಮಠಗಳಲ್ಲಿನ ಕಿನ್ನರಿ ಸೇವೆಗೂ, ಭಜನೆಗಳಿಗೂ ಹೋಗುತ್ತಿದ್ದೆ. ಬಯಲು ನಾಟಕಗಳಿಗೆ ನಾನು ಎಲ್ಲಿಯಾದರೂ ಸಮೀಪದಲ್ಲೇ ಮೊಕ್ಕಾಂ ಮಾಡುತ್ತಿದ್ದರೆ ಆಹ್ವಾನ ಬರುತ್ತಿತ್ತು. ತಪ್ಪದೆ ಹೋಗುತ್ತಿದ್ದೆ. ಗರಡಿಗಳಿಗೆ ನನ್ನನ್ನು ಕರೆಯುತ್ತಿದ್ದರು. ನಾನು ಕಾಲೇಜಿನಲ್ಲಿ ಓದುತ್ತಿದ್ದಾಗ ಗರಡಿಯಲ್ಲಿ ಸಾಮು ಮಾಡಿ ಕುಸ್ತಿ ಕಲಿತಿದ್ದೆ ನಾದ್ದರಿಂದ ಯಾರಾದರೂ ಗರಡಿ ಹುಡುಗರು ಚೆನ್ನಾಗಿ ಕುಸ್ತಿ ಮಾಡುತ್ತಾರೆಂದರೆ, ನನ್ನನ್ನು ಕರೆದು ನನ್ನ ಎದುರಿಗೆ ಅವರನ್ನು ಲಡತ್ತು ಮಾಡಿಸುತ್ತಿದ್ದರು. ಒಬ್ಬಿಬ್ಬರಿಗೆ ನಾನು ಕಲಿತಿದ್ದ ಒಂದೆರಡು ಪಂಜಾಬಿ ವರಸೆಗಳನ್ನೂ ತೋರಿಸಿಕೊಟ್ಟೆ. ಇದರಿಂದ ಆ ಅಂತಸ್ತಿನ ಜನಗಳಿಗೆ ನನ್ನಲ್ಲಿ ಬಹಳ ಪ್ರೀತಿ. ಯಾವುದಾದರೂ ಸಾಹಸದ ಕೆಲಸಕ್ಕೆ ಬೇಕಾದರೆ ನೂರಾರು ಜನ ಯುವಕರು ನನ್ನ ಸಹಾಯಕ್ಕೆ ಸಿದ್ಧವಾಗಿದ್ದರು. ಈ ವಿಚಾರದಲ್ಲಿ ಒಂದು ಸಣ್ಣ ವೃತ್ತ ಜ್ಞಾಪಕಕ್ಕೆ ಬರುತ್ತದೆ. ನಾನು ಭೈರ್ಯಕ್ಕೆ ಸರ್ಕೀಟು ಹೋಗಿದ್ದ ಒಂದು ಸಲ ಸಂತೆ ದಿನ. ಬಹಳ ಜನಗಳು ಸೇರಿದ್ದರು ಅಲ್ಲಿ ಸ್ಟೇಷನ್ ಮುಂದಿನ ಮೈದಾನಿನಲ್ಲಿ ಒಂದು ಸಣ್ಣ ಇರಾನಿ ಪರದೇಶಿಗಳ ಗ್ಯಾಂಗು ವಾಸೆಯ ಮಾಡಿತ್ತು ಅವರು ಸಂತೆಯಲ್ಲಿ ಸಂಚರಿಸುತ್ತಾ ಸ್ವಲ್ಪ ದುಡುಕು ಮಾಡಿದ್ದರಿಂದ ಗ್ರಾಮಸ್ಥರಿಗೂ ಅವರಿಗೂ ಮಾತುಗಳು ಬೆಳೆದು, ಇರಾನಿಗಳ ಪೈಕಿ ಒಬ್ಬ ಯುವಕ ಮೀಸೆ ತಿರುವಿ–'ಈ ಗ್ರಾಮದ ಮೇಲೇ ನನ್ನ ಸವಾಲು, ಯಾರಾದರೂ ನನ್ನ ಸಂಗಡ ಕುಸ್ತಿ ಮಾಡೋ ಗಂಡಸರಿದ್ದರೆ ಬನ್ನಿ ನೋಡೋಣ; ಇಲ್ಲವಾದರೆ ನಿಮ್ಮ ಹೆಂಗಸರನ್ನ ಕಳಿಸಿಕೊಡಿ'– ಎಂದ. ಕೂಡಲೆ ಕೋಲಾಹಲವಾಯಿತು. ಸಂತೆಯಲ್ಲಿ ಭಾರಿ ದೊಂಬಿಯಾಗುವ ಸಂಭವ ನೋಡಿ ನಾನು ಕೂಡಲೆ ಸ್ಥಳಕ್ಕೆ ಹೋಗಿ, ನಡೆದ ವಾರ್ತೆಯನ್ನು ತಿಳಿದೆ. ಇರಾನಿ ಪಹಿಲ್ವಾನ್ ಅಷ್ಟೇನೂ ಭಾರಿ ಆಳಿದ್ದ ಹಾಗೆ ನನಗೆ ಕಾಣಲಿಲ್ಲ. ಆದರೂ ಆ ಜನಗಳ ಜುಬ್ಬ, ಚಳನ, ಪೇಠಗಳ ವಿಜೃಂಭಣೆಯಿಂದ ವಾಸ್ತವಕ್ಕೆ ಮೀರಿದ ದಿಖಾವು ಇತ್ತು. ನಾನು ಅವನನ್ನು

ಕುರಿತು "ಎಲೋ ನಾಚಿಕೆ ಇಲ್ಲದವನೆ, ನೀನೇ ಬಹಳ ರುಸ್ತುಮನೋ? ನೀನೇ ಬಲೀ ಗಂಡೋ? ನಿನ್ನ ಮುಂಡಮೋಚಿತು! ನಿನ್ನನ್ನು ವದ್ದು ನಾನೇ ಉರಳಿಸೇನು, ಆದರೆ ನಿನ್ನನ್ನು ಮುಟ್ಟುವುದಕ್ಕೆ ಅಸಹ್ಯವಾಗುತ್ತೆ. ಇಲ್ಲಿ ನೋಡು"

ಹೀಗೆಂದು ಅಲ್ಲಿದ್ದ ಪೋಲೀಸು ಜಮಾದಾರ್ರ ಬೈಸಿಕಲ್ಲನ್ನು ನನ್ನ ಬಲಗೈಲಿ ಎತ್ತಿ, ಮುಂದೆ (horizontal) ನೇರವಾಗಿ ತೋಳನ್ನು ಚಾಚಿ, ಹಿಡಿದೆ. (ಇದು ಬಾಹುಬಲದ ಕೆಲಸ; ನೀವು ಯತ್ನಮಾಡಿ ನೋಡಿದರೆ ಗೊತ್ತಾಗುತ್ತದೆ. ಬಲ ಒಂದೇ ಅಲ್ಲ; ಸ್ವಲ್ಪ ಅಭ್ಯಾಸ – poise, ಅಂದರೆ ಸ್ನಾಯುಗಳ ಅನ್ಯೋನ್ಯ ಸಹಕಾರ ಮತ್ತು ಕೇಂದ್ರೀಕರಣ – ಸಹ ಬೇಕು.)

"ಇದೋ, ನೋಡು. ನೀನು ಮಾಡೋ ನೋಡೋಣ" ಎಂದೆ.

ಯತ್ನ ಮಾಡಿದ – ಆಗಲಿಲ್ಲ. ತೋಳು ಚಾಚಿದ ಕೂಡಲೆ ಅದು ಭಾರವನ್ನು ನಿರ್ವಹಿಸಲಾರದೆ ಕೆಳಗೆ ಕುಸಿದುಬಿಡವುದು. ಅನೇಕ ಸಲ ಒದ್ದಾಡಿದ. ಅವರ ಗುಂಪಿನವರೆಲ್ಲರೂ ನೋಡಿದರು, ಸಾಗಲಿಲ್ಲ. ಅವರಲ್ಲಿ ಕೆಲವರು ನನಗಿಂತ ಬಲಿಷ್ಠರೇ ಇದ್ದಿರಬಹುದು. ಆದರೆ ಬಲವನ್ನು ಈ ಉದ್ಯಮದಲ್ಲಿ ಪ್ರಯೋಗಿಸುವ ಹುನ್ನರನ್ನು ಅರಿಯದವರು. ನಮ್ಮವರೆಲ್ಲ ಚಪ್ಪಾಳೆ ತಟ್ಟಿ ಜಯಕಾರಗಳನ್ನು ಷುರು ಮಾಡಿದರು. ನಾನು ಇರಾನಿ ಗ್ಯಾಂಗಿನ ನಾಯಕನಿಗೆ – "ಆ ಹುಡುಗ ಬೇಕೂಫ್, ದುರಹಂಕಾರಿ; ಅವನು ಆಡಿದ ಮಾತು ಬಹಳ ತಪ್ಪು; ಜನಗಳನ್ನು ಕ್ಷಮಾಪಣೆ ಕೇಳಿಕೊಳ್ಳಲಿ. ನೀವು ಪರದೇಶಿಗಳು; ದೇಶದ ಜನಗಳಲ್ಲಿ ಸ್ನೇಹದಿಂದ ವರ್ತಿಸದಿದ್ದರೆ ಬಹಳ ಕಷ್ಟಕ್ಕೆ ಸಿಕ್ಕುತ್ತೀರಿ" ಎಂದು ಹೇಳಿದೆ.

ಒಪ್ಪಿದರು. ಆ ಹುಡುಗ ಕ್ಷಮಾಪಣೆಯನ್ನು ಕೇಳಿಕೊಂಡ. ಗ್ರಾಮಸ್ಥರ ಸಂಗಡ ಚಾಕು ವಗೈರೆ ಸಾಮಾನುಗಳನ್ನು ಮಾರಿ, ಕೋಳಿ ಮೊಟ್ಟೆ ಮೊದಲಾದುವನ್ನು ಕೊಂಡು ವ್ಯಾಪಾರವನ್ನು ಮಾಡಿದರು.

ನಾನು ಯಡತೊರೆಗೆ ಬರುವ ಹೊತ್ತಿಗೆ ನನ್ನ ಶೌರ್ಯದ ಕಥೆಗಳನ್ನು ಕೇಳಿ ನನಗೇ ಆಶ್ಚರ್ಯ – ನಾಚಿಕೆ ಕೂಡ ಆಯಿತು. ನಾನು ಆ

ಪೈಲ್ವಾನನ, ಮತ್ತು ಇನ್ನಿಬ್ಬರು ಪೈಲ್ವಾನರ ಸಂಗಡ, ಬಹಿರಂಗವಾಗಿ ಕುಸ್ತಿ ಮಾಡಿ ಹೊಡೆದೆನಂತೆ. ನಂತರ ಅವರೆಲ್ಲರೂ ನನ್ನನ್ನು ಗೇರಾಯಿಸಿ ಹೊಡೆಯಲು ಯತ್ನ ಮಾಡಿದರಂತೆ. ನಾನು ಒಬ್ಬ ಪೋಲೀಸಿನವನ ಲಾಠಿಯನ್ನು ಕಿತ್ತುಕೊಂಡು ವರಿಸೇ ತಿರುವುತ್ತ, ಇರಾನಿಗಳನ್ನು ಚದುರಿಸಿ ಬಿಡಿಸಿಕೊಂಡೆನಂತೆ. ನನ್ನ ಹೆಂಡತಿ ನಾನು ಮನೆಗೆ ಹೋದ ಕೂಡಲೆ, ಕೋಪಿಸಿಕೊಂಡವಳಂತೆ,

"ಸಾರ್ಥಕವಾಯಿತು ಬಿ ಎ., ಬಿ ಎಲ್., ಸಿವಿಲ್ ಸರ್ವಿಸ್ ಪ್ಯಾಸು ಮಾಡಿ ಪರದೇಶಿ ತುರಕರು, ತಾರರು, ಪೋಲಿಗಳು ಇವರುಗಳ ಸಂಗಡ ಲೋಲಾಪ್ತಿ! ನೀವೇನು ಸ್ಕೂಲು ಹುಡುಗರೆ? ಜಟ್ಟೀನೆ? ಅರಮನೆ ಮುಂದೆ ಕುಸ್ತಿ ಮಾಡಿ ಅಸಿಸ್ಟೆಂಟು ಕಮಿಷನ್ನರ ಕೆಲಸ ಸಂಪಾದಿಸಿ"

ಕಠೋರವಾದ ನಾಲಿಗೆ, ಹೆಮ್ಮೆಯಾದ ಕಣ್ಣು.

"ಕುಸ್ತಿ ಕೆಲಸವಲ್ಲ, ಬೈಸಿಕಲ್ಲು ಎತ್ತುವ ಕೆಲಸ" ಎಂದು ನಡೆದ ಸಂಗತಿ ಹೇಳಿ ಸಂತೈಸಿದೆ.

ಆಗಿನ ಕಾಲದ ನೆನಪುಗಳಲ್ಲಿ ಕೆಲವು ಸವಿಕನಸುಗಳಂತೆ ಸ್ಫೂರ್ತಿಗೆ ಬಂದಾಗ ಯೌವನದಲ್ಲಿ ಕೇಳಿದ ಗೀತದ, ಮೂಸಿದ ಗಂಧದ, ಸ್ಮರಣದಂತೆ ಉಲ್ಲಾಸವನ್ನು ಕೊಡುತ್ತವೆ. ಮತ್ತೆ ಕೆಲವು ರುದ್ರನಾಟಕಗಳಂತೆ ಕರುಣ, ಭಯ, ದೈವಹತಕ ಮನುಷ್ಯನ ದುರ್ಬಲತೆಯನ್ನು ಬೀರಿ, ಈಗಲೂ ಅಂತಃಕರಣವನ್ನು ಇರಿಯುತ್ತವೆ. ಕೆಲವು ಲಘು ಪ್ರಹಸನಗಳು ಇವುಗಳ ಸಂಗಡ ಬೆರೆತರೆ, ಮನುಷ್ಯ ಜೀವನ, ಒಬ್ಬ ಫ್ರೆಂಚ್ ಕವಿಯು ಹೇಳುವ ಹಾಗೆ ತೋರುತ್ತದೆ.

ತುಸು ನಗು ತುಸು ಅಳು
  ನನ್ನ ಕಂದ, ಸುಪ್ರಭಾತ.
ತುಸು ಕಹಿ ನಸು ಸಿಹಿ
  ನನ್ನ ಮಗನೆ, ಇದೇ ಹಗಲು.
ಸ್ವಲ್ಪ ಕಷ್ಟ, ಅಲ್ಪ ತುಷ್ಟಿ
  ಇದೇ ಬಾಳು ಇದೇ ಬದುಕು.

ಮಾಡುತ, ಆಡುತ, ಕನಸನೆ ಕಾಣುತ
ರಾತ್ರಿಯು ಬಂದಿತು ಮಲಗೋ ಮಗುವೆ,
ತಂದೆಯಮೇಲೆ ನಂಬಿಕೆಯಿಟ್ಟು.

(ನಾನು ಫ್ರೆಂಚ್ ಪಂಡಿತನೂ ಅಲ್ಲ, ಕನ್ನಡ ಕವಿಯೂ ಅಲ್ಲ– ಆದರೆ ನಗು, ಅಳು, ಸಿಹಿ, ಕಹಿ, ಕಷ್ಟ, ತುಷ್ಟಿ, ಆಟ, ನೋಟ, ಗೆಯ್ಮೆ, ಕನಸು, ನಿದ್ರೆ – ಇವುಗಳನ್ನು ಬಲ್ಲ ವೃದ್ಧ.)

ತಾಲ್ಲೂಕಿನಲ್ಲಿ ಸ್ವಲ್ಪ ದೊಡ್ಡವರು ಎಂಬುವರ ಮನೆಗಳಲ್ಲಿ ಮದುವೆ ಯಾದರೆ ಹೆಣ್ಣಿನ ಕಡೆಯವರೂ ಗಂಡಿನ ಕಡೆಯವರೂ ಪ್ರತ್ಯೇಕವಾಗಿಯೋ, ಅಥವ ಕೂಡಿಯೋ, ಅಮಲ್ದಾರರ ಮನೆಗೆ ಬಂದು ಖುದ್ದು ಔತನ ಹೇಳಿ, ಬರಲೇ ಬೇಕೆಂದು ಬೇಡುತ್ತಿದ್ದರು. ಅಮಲ್ದಾರರು ಮದುವೆ ಮಂಟಪಕ್ಕೆ ಬಂದು ವಧೂವರರಿಗೆ ಆಶೀರ್ವದಿಸಿ, ತಾಂಬೂಲ ತೆಗೆದುಕೊಂಡು ಹೋದರೆ ಅದು ನವದಂಪತಿಗಳಿಗೆ ಶ್ರೇಯಸ್ಕರವಲ್ಲದೆ, ಬೀಗರು ಉಭಯತ್ರರಿಗೂ ಅವರ ಪದವಿ ಬಗ್ಗೆ ಸರ್ಟಿಫಿಕೇಟು ಕೊಟ್ಟ ಹಾಗೆ. ನಾನು ಸಾಧ್ಯವಾದಮಟ್ಟಿಗೆ, ಸಂಭಾವಿತರು, ಗೌರವಸ್ಥರೆಂದು ತಿಳಿದು ಬಂದ ಜನಗಳ ಕಡೆಯಿಂದ ಬಂದ ಆಹ್ವಾನಗಳಿಗೆ ಗೌರವ ಕೊಡುತ್ತಿದ್ದೆ. ಒಂದು ಸಲ ನಮ್ಮ ತೀರ್ಥರೂಪರ ಪರಿಚಿತಸ್ಥರಾದ ಒಬ್ಬ ನಿವೃತ್ತ ಅಧಿಕಾರಿಗಳ ಮಗನ ಮದುವೆಗೆ ಲಗ್ನಪತ್ರಿಕೆ, ಮತ್ತು ರೂಬರೂಬು ಆದರ ಪೂರ್ವಕವಾದ, ಬಲಪೂರಿತವಾದ ಆಹ್ವಾನ, ಸಹ ಬಂದವು. ಅವರು ಯಡತೊರೆಯಿಂದ ನಾಲ್ಕೈದು ಮೈಲಿ ಫಾಸಲೆಯಲ್ಲಿರುವ ತಿಪ್ಪೂರೆಂಬ ದೊಡ್ಡಗ್ರಾಮದಲ್ಲಿ ಗಣ್ಯರಾದ ಜಮೀನುದಾರರಾಗಿದ್ದರು. ಊರಿನಿಂದ ಎರಡು ಮೈಲಿ ಇರುವ ಹಾಗೇ ನನ್ನನ್ನು ವಾದ್ಯ–ಅಂದರೆ ಬ್ಯಾಂಡು (ಆಗಿನ ಕಾಲದಲ್ಲಿ ಸುಸ್ವರವಾದ ಕರ್ನಾಟಕಿ ಓಲಗದಗಿಂತ ಅಪಸ್ವರವನ್ನು ಅರಚುವ ಫರಂಗಿ ಕಹಳೆಗಳ ಬ್ಯಾಂಡಿಗೆ ಯಾಕೋ ಹೆಚ್ಚು ಗೌರವ) ಸಮೇತವಾಗಿ ಎದುರುಗೊಂಡು, ಮೆರವಣಿಗೆಯ ನಾಯಕನನ್ನಾಗಿ ವಿವಾಹ ಮಂಟಪಕ್ಕೆ ಕರೆದುಕೊಂಡು ಹೋದರು. ಆ ಮಂಟಪವೆಂದರೆ, ಅಗ್ರಹಾರ ಬೀದಿಯ ಒಂದು ಕೊನೆಯಿಂದ ಇನ್ನೊಂದು ಕೊನೆಯವರಿಗೂ ಅವಿಚ್ಛಿನ್ನವಾದ ಶಾಲೆ ಅಂಥ

ವಿಸ್ತಾರವಾದ ಶಾಲೆಯಲ್ಲೂ ಹಿಡಿಸದಷ್ಟು ಜನಸಮೂಹ; ಜಗಲಿಗಳ ಮೇಲೆಲ್ಲ ಜನ, ಕೂಡುವುದಕ್ಕೆ ಸ್ಥಳ ಸಾಲದೆ ನಿಂತಿರುವ ಜನ, ಓಡಾಡುವ ಜನ, ಎಲ್ಲರೂ ಏಕಕಾಲದಲ್ಲಿ ಮಾತನಾಡುತ್ತಿರುವ ಜನ; ಎಲ್ಲವೂ ಏಕಕಾಲದಲ್ಲಿ ನುಡಿಯುತ್ತಿರುವ ವಾದ್ಯಗಳು; ವಾದ್ಯಗಳ ಗದ್ದಲದ ವಿವರಗಳಲ್ಲಿ ಆಗಾಗ ಕೇಳಿ ಬರುತ್ತಿದ್ದ ವೇದಘೋಷ. ಮದುವೆ ಮಾಡಿದ ಗೃಹಸ್ಥರು ಸಂಕೇತಿ ಬ್ರಾಹ್ಮಣರು. ಆಗಿನ ಕಾಲದ ಸಂಕೇತಿಗಳಲ್ಲಿ–ಸಾಂಪ್ರದಾಯಿಕ ನಿಷ್ಠೆ, ವೇದಾಧ್ಯಯನ, ಸಂಗೀತ ಜ್ಞಾನ, ಅಲೌಕಿಕ ಒರಟುತನ, ಈ ಗುಣಗಳು ಪ್ರಸಿದ್ಧವಾಗಿದ್ದವು. ಆ ತಾಲ್ಲೂಕಿನಲ್ಲಿನ ಎಲ್ಲ ಸಂಕೇತಿಗಳೂ – ಯಾಕೆ, ಬಹುಶಃ ಎಲ್ಲ ವೈದಿಕ ಬ್ರಾಹ್ಮಣರೂ – ಅಲ್ಲಿಗೆ ಬಂದಿದ್ದರು. ವಧುವರರನ್ನು ಹಸೇಗೆ ಕೂಡಿಸಿದ್ದ ಮಂಟಪ ಮಲ್ಲಿಗೆಮುಗ್ಗಿನಿಂದ ಅಲಂಕರಿಸಿದ್ದಾಗಿತ್ತು. ಬಹಳ ಸುಂದರವಾದ, ಆನಂದಕರವಾದ ದೃಶ್ಯ; ಬಂದವರೆಲ್ಲರೂ ನವದಂಪತಿಗಳನ್ನು ಹೃತ್ಪೂರ್ವಕವಾಗಿ ಹರಿಸಿರಬೇಕು. ಈ ಲಗ್ನದಲ್ಲಿ ತಾಂಬೂಲದ ಜೊತೆಗೆ ನನಗೆ ಒಂದು ವಲ್ಲಿಯನ್ನು ಉಡಗೊರೆಯಾಗಿ ಇಟ್ಟರು. ನಾನು ಆ ಗೃಹಸ್ಥರಿಗೆ, ಬೇಡಿ, ಇದು ರೂಲ್ಸಿಗೆ ವಿರೋಧವೆಂದು ಹೇಳಿದೆ ಅವರು – ಸ್ವಾಮಿ, ಈ ರೀತಿ ಉಡಗೊರೆ ಕೊಡುವುದೂ ಸ್ವೀಕರಿಸುವುದೂ ವಾಡಿಕೆಯಲ್ಲಿವೆ; ತಾವು ಈ ಸಭೆಯಲ್ಲಿ ನಿರಾಕರಿಸುವುದಾದರೆ ನನಗೆ ಬಹಳ ಅವಮಾನವಾಗುತ್ತೆ – ಎಂದರು, ಅವರು ವೃದ್ಧರು ರೂಲ್ಸಿನಲ್ಲಿ, ಯಾವುದೇ ಕಾರಣದಿಂದಾಗಲಿ ಉಡಗೊರೆ ತೆಗೆದುಕೊಳ್ಳುವುದು ಅನಿವಾರ್ಯವಾದರೆ, ಉಡಗೊರೆಯನ್ನು ತೆಗೆದುಕೊಂಡ ಸಂದರ್ಭದ ವಿವರಣೆ ತಿಳಿಸಿ ಸರ್ಕಾರಕ್ಕೆ ಒಪ್ಪಿಸಿ ಬಿಡಬೇಕೆಂದು ಇದೆ. ನಾನು ಉಡಗೊರೆಯನ್ನು ತೆಗೆದುಕೊಂಡು, ಅದನ್ನು ವರದಿಯೊಡನೆ ಡೆಪ್ಯುಟಿ ಕಮಿಷನರ್ Spaikesರವರಿಗೆ ಕಳುಹಿಸಿದೆ. ಬಹಳ ದಿನಗಳವರಿಗೂ ಅದು ತಲಪಿದ್ದಕ್ಕೆ ಜವಾಬು ಬರಲಿಲ್ಲ. ಆಮೇಲೆ ನಾನು ಮೈಸೂರಿಗೆ ಯಾವದೋ ಕೆಲಸಕ್ಕಾಗಿ ಹೋದಾಗ, ಸಾಹೇಬರು ನನಗೆ "Thanks very much for that bl—y cloth, Amildar, but what the h—l do you want me to do with it?"

'ಆ ಬಟ್ಟೆ ಚೂರು ಕಳಿಸಿದ್ದಕ್ಕೆ ತುಂಬ ಥ್ಯಾಂಕ್ಸ್! ಅಮಲ್ದಾರರೇ! ಆದರಿಂದ ನಾನೇನು ಮಾಡಬೇಕೂಂತ?' ಎಂದು ಕೇಳಿದರು. ರೂಲ್ಸು ಇರುವ ಬಗೆಯನ್ನು ಹೇಳಿದೆ.

"How silly! Never had a case like this before. Take the d—n thing away and do what you like with it yourself"

"ಎಂಥ ಐಲಾಟ! ಇಂಥ ಪ್ರಕರಣವೇ ಇದುವರೆಗೆ ಬಂದಿರಲಿಲ್ಲವೇ! ಅದನ್ನು ಆಚೆಗೆ ತೆಗೆದುಕೊಂಡು ಹೋಗಿ ನಿನ್ನ ಮನಸ್ಸಿಗೆ ಬಂದ ಹಾಗೆ ಮಾಡಿಕೊ" ಎಂದು ತೀರ್ಮಾನಿಸಿದರು.
ಆಮೇಲೆ

"Dont return it to the old bird. He would feel insulted if you did, after all he is a sort of family friend isn't he?"

"ಆ ಮುದಿ ಹದ್ದಿಗೆ ಅದನ್ನು ಹಿಂದಿರುಗಿಸಬೇಡ. ಅಪಮಾನ ಆಯ್ತು ಅಂತ ತಿಳಿಕೊಂಡಾನು. ಅವನೇನ್ಹಾದರೂ ಒಂದು ವಿಧದಲ್ಲಿ ನಿಮ್ಮ ಸಂಸಾರದ ಒಬ್ಬ ಬಂಧು ತಾನೆ?" ಎಂದರು.

ಆದರೆ ಒಂದು ತೊಂದರೆ– ತಿಪ್ಟೂರಿನಲ್ಲಿ ಆ ಗೃಹಸ್ಥರು ಒಂದು ಕಕ್ಷಿಯ ನಾಯಕರು. ಒಂದು ಸಲ ಅಲ್ಲ ಒಂದು ಸಲ, ನನ್ನ ಮುಂದೆ ಬರಬಹುದಾದ ವ್ಯವಹಾರದಲ್ಲಿ ಅವರಿಂದ ನಾನು ಉಡುಗೊರೆ ಸ್ವೀಕರಿಸಿದೆನೆಂಬ ಮಾತು ಬರಬಹುದು ಇದಕ್ಕೆ ಅವಕಾಶವಿರಬಾರದು. "ಸೀಜರಿನ ಹೆಂಡತಿ ಅಪವಾದಕ್ಕೂ ಅವಕಾಶಕೊಡ ಕೂಡದು." ಆ ಉಡುಗೊರೆಯನ್ನು ಕೊಟ್ಟವರಿಗೆ ಸಮಾಧಾನ ಹೇಳಿ ವಾಪಸುಮಾಡಿ, ಅವರಿಂದ ರಸೀದಿ ಪಡೆದು ರಿಕಾರ್ಡಿನಲ್ಲಿಟ್ಟೆ.

ಈ ಅನುಭವದ ನಂತರ, ನಾನು ಮದುವೆ ಮನೆಗೆ ಹೋಗುವುದಕ್ಕೆ ಮುಂಚಿತವಾಗೇ ನನಗೆ ಉಡುಗೊರೆ ಕೊಡಲು ಬರಬಾರದೆಂದು ಮಾತು ಮಾಡಿಕೊಳ್ಳುತ್ತಿದ್ದೆ.

ಮದುವೆಗಳ ವಿಚಾರ ಮಾತನಾಡುವಾಗ ನಾನು ನೋಡಿದ ಇನ್ನೆರಡು ಮದುವೆಗಳ ನೆನಪು ಬರುತ್ತದೆ. ಯಡತೊರೆ ತಾಲ್ಲೂಕಿನ

ಭಾರೀ ಗ್ರಾಮ ; ಅದರ ಹೆಸರು ಮಿರ್ಲೆ ; ಆ ಗ್ರಾಮದ ದೊಡ್ಡ ರೈತನ ಮಗಳ ಮದುವೆಗೆ ನನ್ನನ್ನು ಕರೆದಿದ್ದರು. ಆತನ ನಿಜವಾದ ಹೆಸರು ಏನಾದರೂ ಇರಲಿ–ನಮ್ಮ ಕತೆಗಾಗಿ ಲಕ್ಷ್ಮೀಗೌಡನೆಂದು ಇಟ್ಟುಕೊಳ್ಳೋಣ. ಆತ ಭಾರಿ ಜಮೀನುದಾರನಲ್ಲದೆ ಹಣವಂತ ; ಮಿರ್ಲೆ ಮತ್ತು ಆಸುಪಾಸಿನ ಗ್ರಾಮಗಳಲ್ಲಿನ ದೊಡ್ಡ ದೊಡ್ಡ ಒಕ್ಕಲುಗಳೆಲ್ಲ ಅವನ ನಂಟರು—ಅಣ್ಣತಮ್ಮ, ಭಾವ ಮಕ್ಕಳು ಎಂದುಕೊಳ್ಳತಕ್ಕವರು. ಆಗಿನ ಗ್ರಾಮಸಮಾಜದ ರೀತಿಯಲ್ಲಿ ಊರಿನ ದೊಡ್ಡವರ ಮನೆಯಲ್ಲಿ ಮದುವೆ ಅಥವ ಇತರ ಉತ್ಸವವಾದರೆ ಅದು ಗ್ರಾಮ ಸಾಮಾನ್ಯಕ್ಕೇ ಹೊತ್ತದ್ದು. ಅದರೊಳಗಾಗಿ ಬೀಗರು ಬೇರೆ ಗ್ರಾಮದವರಾದರೆ, ಆ ಶುಭಕಾರ್ಯಕ್ಕೆ ಅಂತರರಾಷ್ಟ್ರೀಯ ಗೌರವ ಬರುತ್ತಿತ್ತು. ತಮ್ಮತಮ್ಮಲ್ಲಿ ಇರಬಹುದಾದ ವ್ಯತ್ಯಾಸಗಳು, ಹಗೆತನಗಳು, ಅಸೂಯೆಗಳನ್ನು, ಮರೆತು ಗ್ರಾಮಸ್ಥರೆಲ್ಲರೂ ತಮ್ಮ ಊರಿನ ಮಹತ್ವಕ್ಕಾಗಿ ಮದುವೆ ಮನೆಯವರ ಸಂಗಡ ಸಹಕರಿಸುತ್ತಿದ್ದರು. ಎಲ್ಲರ ಮನೆಯ ಹಾಲು, ಮೊಸರು, ಎಲ್ಲರ ವ ನೆ ಅಡಿಗೆ ಪಾತ್ರೆಗಳು. ಊರಿನಲ್ಲಿ ಅಡಿಗೆಯಲ್ಲಿ ಬುದ್ಧಿವಂತರೆಂಬ ಎಲ್ಲ ಪಾಕಿಗಳೂ, ಮದುವೆ ಮನೆಗೇ ಸೇರುವ ಪದ್ಧತಿ. "ನಮ್ಮ ಗೌಡರು ಬೀಗರ ಊರಿಗೆ ಹೋಗಬೇಕಾದರೆ ಐವತ್ತು ಗಾಡಿ ಜನ ಜೊತೆಗೆ ಹೋದರು" "ನಮ್ಮೂರಲ್ಲಿ ಬೀಗರ ಔತನಕ್ಕೆ ಐದು ಪಲ್ಲ ಅಕ್ಕಿ ಬೆಂದಿತು" "ಮದುವೆ ಮೆರವಣಿಗೆ ಸಂಗಡ ಹತ್ತುಜತೆ ಮೇಳ ಬಂದವು" "ಮಂಟಪದಲ್ಲಿ ಒಟ್ಟಿಗೆ ಐದು ತಾಫೆ ಕಟ್ಟಿದ್ದರು"–ಹೀಗೆ ಲಗ್ನದ ವೈಭವವನ್ನು ವರ್ಣಿಸುವ ಪದ್ಧತಿ. ಮಿರ್ಲೆ ಸಂಪತ್ತುಳ್ಳ ಗ್ರಾಮ, ಲಕ್ಷ್ಮೀಗೌಡರು ಶ್ರೀಮಂತರು, ಊರಿನವರೆಲ್ಲ–ಯಾಕೆ ಹೋಬಳಿಯವರೇ–ಅವರ ಸ್ವಜನ ; ಅವರು ಎಲ್ಲರಿಗೂ ಬೇಕಾದ ಉದಾರ ಸ್ವಭಾವದವರು. ಅವರ ಮಗಳ ಮದುವೆ. ಅವರ ಬೀಗರು ಮೈಸೂರು ತಾಲ್ಲೂಕಿನ ಯಾವದೋ ಗ್ರಾಮದ ಗೌಡರು, ಪುಣ್ಯವಂತರು. ನನಗೆ ಉಭಯ ಕಡೆಯವರಿಂದಲೂ ಔತಣದ ನಿಯೋಗಗಳು ಬಂದವು. ನಾನು ಮಿರ್ಲೆಗೆ ಇತರ ಕೆಲಸಗಳ ನೆಪವನ್ನೂ ಇಟ್ಟುಕೊಂಡು ಲಗ್ನದ ದಿವಸ ಹೋದೆ. ಊರು ಇನ್ನೂ ಒಂದು ಮೈಲಿ ದೂರವಿರುವಾಗಲೇ

ಕೊಂಬು, ಬ್ಯಾಂಡು, ತಮಟೆ, ಢೋಲು, ಇವುಗಳ ಕೋಲಾಹಲ ಎದುರು ಬಂದು, ನನ್ನ ಕುದುರೆಯನ್ನು ಬೆಚ್ಚಿಸಿ ಕುಣಿಯುವ ಹಾಗೆ ಮಾಡಿತು. ಅದನ್ನು ಸುಧಾರಿಸುವುದರೊಳಗಾಗಿ ರಸ್ತೆಯಲ್ಲಿ ಎರಡು ಕಾಲಂಗಳು ನಾಗಸ್ವರ ವಾದ್ಯಕ್ಕೆ ಅನುಸರಿಸಿದ ಅಪ್ಸರೆಯರ ಲಲಿತ ಗಮನ ಸಹಿತವಾಗಿ ನನ್ನನ್ನು ಸ್ವಾಗತಿಸುವುದಕ್ಕೆ ಬಂದವು. ಕುದುರೆಯನ್ನು ಸಮಾಧಾನಕ್ಕೆ ತರುವುದು ಅಸಾಧ್ಯವಾದ್ದರಿಂದ ನಾನು ಜೀನಿನಿಂದ ಇಳಿದು, ಬೀಗರು ಉಭಯತ್ರರಿಗೂ ಅಭಿನಂದನೆ ಆಶೀರ್ವಚನಗಳನ್ನು ಸಮವಾಗಿ ಹಂಚಿ – Behold the conquering Hero comes (ಬಿಜಮಾಡ್ತಾನೆ ನೋಡು, ವೀರ ಶೂರ ವಿಕ್ರಮಾರ್ಕ) ಎಂಬುದರ ನಿದರ್ಶನದಂತೆ ಟ್ರಾವೆಲ್ಲರ್ಸ್ ಬಂಗಲೆಗೆ ಬಂದೆ. ಅಲ್ಲಿ ಪುನಃ ವಾದ್ಯದ ಗೊಂದಲ, ವೇಶ್ಯೆಯರ ಬೆಡಗು, ಅಭಿನಂದನೆಗಳ ಸುರಿಮಳೆ. ಅಂತೂ ಹ್ಯಾಗೋ ಬಿಡಿಸಿಕೊಂಡು, ಸಂಜೆ ವಿವಾಹ ಮಂಟಪಕ್ಕೆ ಬರುವುದಾಗಿ ಮಾತುಕೊಟ್ಟು, ಒಳಗೆ ಸೇರಿದೆ ನಮ್ಮ ಅಡಿಗೆಯ ಮನೆಯಲ್ಲಿ ಭಕ್ಷ್ಯಗಳ ಚಲ್ಲಾಟ – ಅವುಗಳ ದೃಶ್ಯ ಸ್ಪರ್ಶ ಗಂಧಗಳ ಭರಾಟೆಯಿಂದ ಪರವಶನಾದ ನನ್ನ ಅಡಿಗೆಯವನು, ಎರಡು ಹುಲ್ಲುಮೆದೆಗಳ ಮಧ್ಯದ ಗಾರ್ಧಭ ರಾಜನಂತೆ ಸ್ಥಬ್ದನಾಗಿ ನಿಂತಿದ್ದವ, ನನ್ನನ್ನು ಕಂಡಕೂಡಲೆ, ಸಂಭ್ರಮದಿಂದ – ಬ್ರಾಂಬರು ಮಾಡಿದ್ದೆ ಮಹಸ್ವಾಮಿ – ಅಂದ. ಅವನನ್ನು ಮೃದುಸಂಭಾಷಣೆಯಿಂದ ಕರ್ತವ್ಯ ಜ್ಞಾನಕ್ಕೆ ಎಚ್ಚರಿಸಿ, ಸಾಧ್ಯವಾದಷ್ಟು ಊಟಮಾಡಿ, ಏನನ್ನೋ ಓದುತ್ತಾ, ಬರೆಯುತ್ತಾ ಸಾಯಂಕಾಲದವರಿಗೆ ಹೊತ್ತು ತುಂಬಿಸಿದೆ ಸಾಯಂಕಾಲ ನನ್ನನ್ನು ಮದುವೆ ಮಂಟಪಕ್ಕೆ ಕರೆದು ಒಯ್ಯಲು ಪುನಃ ಉಭಯ ಬೀಗರುಗಳ ಮೇಳ ಸಹಿತವಾದ ತಂಡಗಳು ಬಂದವು. ಊರಿನ ದೊಡ್ಡ ಬೀದಿಯೆಲ್ಲ ಒಂದೇ ಚಪ್ಪರವಾಗಿತ್ತು. ಹಸರುವಾಣಿ ಚಪ್ಪರ. ಹೂಸಹಿತವಾದ ರೆಂಬೆಗಳು, ಹಂಬುಗಳು, ಗೊನೆಸಹಿತವಾದ ಬಾಳೆಗಿಡಗಳು, ಹೊಂಬಾಳೆ ವಗೈರೆ ವಗೈರೆ – ವಸಂತ ಸಂಭ್ರಮವೇ ಅಲ್ಲಿ ನೆರೆದಿತ್ತು. ಈ ಇಡೀ ಊರ ಅಳತೆಯ ಚಪ್ಪರದ ಒಂದು ಕಡೆಗೆ ಲಕ್ಷ್ಮೀಗೌಡರ ಮನೆ ಮುಂದೆ ಹಸೇ ಮಂಟಪ. ಅದರ ಕಂಬಗಳಿಗೆಲ್ಲ ನಿಬಿಡವಾಗಿ ಮಲ್ಲಿಗೆಮೊಗ್ಗು

ಕಟ್ಟಿತ್ತು. ಚಾವಣಿಯು ಕೆಂಪುಮಲ್ಲಿನ ಮೇಲೆ ಗುನ್ನಾಂಪಟ್ಟಿ ಬೇಲು ಅಂಟಿಸಿದ್ದಾಗಿತ್ತು. ಇದರೊಳಗೆ ಗರ್ಭಗುಡಿಯೋ ವಿಮಾನವೋ ಎಂಬಂತೆ ಒಂದು ಅಬರಖ್, ಜಿಲ್ಲಾ ಕಾಗದದ ಮುಸಲ್ಮಾನ ಕುಶಲರು ಬಾಬೈಯನ ಹಬ್ಬದಲ್ಲಿ ಮೆರವಣಿಗೆಗೆ ತಯಾರ್ಮಾಡುವಂಥ "ತಾಬೂತ್" ತರಹದ ಸುಂದರವಾದ ಒಳಗೂಡು ಇದರಲ್ಲಿ ಗಂಡು ಹೆಣ್ಣು ಸೋಫಾಗಳ ಮೇಲೆ ಕುಳಿತಿದ್ದರು. ಈ ಸೊಗಸೆಲ್ಲ ಚೆನ್ನಾಗಿ ಕಾಣುವಂತೆ ಜಾಣತನದಿಂದ ಸರಿಯಾದ ಸ್ಥಾನಗಳಲ್ಲಿ ಇರಿಸಿರುವ ವಾರ್ಷಿಗ್‌ಟರ್ ಉಜ್ವಲ ದೀಪಗಳು. ನನಗೆ ವಧುವರರನ್ನು ನೋಡಿ ಬಹಳ ಸಂತೋಷವಾಯಿತು, ಯೌವನ, ರೂಪು, ವಿನಯ, ಯುಕ್ತ ಅಲಂಕಾರ, ಮುಖದ ಮೇಲೆ ಉಕ್ಕಿ ಹೊರಮೂಡುವ ಹರ್ಷರಸ– ಇವುಗಳು ಒಟ್ಟುಗೂಡಿದ್ದರೆ ಇನ್ನೊಬ್ಬರ ಸುಖದಲ್ಲಿ ಸಂತೋಷಪಡುವ ಯಾರಿಗೆ ತಾನೆ ಆನಂದ ಕೊಡುವುದಿಲ್ಲ? ಹೂಗಳಿಂದ ಅಲಂಕರಿಸಿದ ಹೊರ ಮಂಟಪದಲ್ಲಿ ಅತಿಥಿಗಳಿಗೆ, ಮತ್ತು ಬೀಗರಿಗೆ ರತ್ನಗಂಬಳಿ ಹಾಸಿ, ಒರಗದಿಂಬುಗಳನ್ನಿಟ್ಟು ಕೂಡುವುದಕ್ಕೆ ಸ್ಥಾನಗಳನ್ನು ಮಾಡಿದ್ದರು. ವಧುವರರ ಎದುರಿನ ಚೌಕದಲ್ಲಿ, ಮಾನ್ಯ ಅತಿಥಿ ಬಂಧುಗಳ ಸಾಲುಗಳ ಮಧ್ಯದಲ್ಲಿ, ಕ್ಲುಪ್ತವಾದ ರಂಗದಲ್ಲಿ, ವೇಶ್ಯೆಯರ ಮೇಳ ನೃತ್ಯಗಳು ನಡೆಯುತ್ತಿದ್ದವು. ಈ ಉತ್ಸವದಲ್ಲಿ, ಉತ್ಸವಕ್ಕೆ ಸಂಬಂಧಪಟ್ಟ ಆದರ ಮರ್ಯಾದೆ ಉಪಚಾರಗಳಲ್ಲಿ, ಬೀಗರುಗಳಿಗೆ ಅವರ ಗುಂಪುಗಳಿಗೆ ಸ್ಪರ್ಧೆ ಬಹಳ ಉತ್ಸಾಹದಿಂದ ನಡೆಯುತ್ತಿತ್ತೆಂದು ಕಂಡು ಬಂತು. ಮಿರ್ಲೆಯವರು ಮೈಸೂರಿನಿಂದ ಮತ್ತು ತಿರುಮಕೂಡಲಿನಿಂದ ಹೆಸರುವಾಸಿಯಾದ ಇಬ್ಬರು ನರ್ತಕಿಯರನ್ನೂ ಅವರ ಪಾರ್ಟಿಗಳನ್ನೂ ಕರೆಸಿದ್ದರು. ಅವರ ಬೀಗರು ಇದಕ್ಕೆ ಪೈಪೋಟಿಯಾಗಿ ತಂಜಾವೂರಿನಿಂದ ಗ್ರಾಮೋಫೋನ್ ವಿಖ್ಯಾತರಾದ ಸಂಗೀತಗಾರರಿಬ್ಬರನ್ನು ಹಿಮ್ಮೇಳ ಸಹಿತ ಕರೆಸಿದ್ದರು. ನಾನು ಚಪ್ಪರದಲ್ಲಿ ಪ್ರವೇಶ ಮಾಡುತ್ತಿದ್ದ ಹಾಗೆ ಲಕ್ಷ್ಮೇಗೌಡರ ಹಿರಿಮಗ ಬೀಗರ ಹಿರಿಮಗನನ್ನು ತೋರಿಸಿ, ಮೈಸೂರು ನಾಯಿಕಸಾನಿಗೆ— "ಹಾಕು ಶಿವೇಗೌಡರಿಗೆ ಹಾರ– ಅಂತ ಆಜ್ಞೆಯಿತ್ತ. ಆಕೆ ನಗುತ್ತಾ ಹೋಗಿ ಹರ್ಷಯುತ

ವಾದ ಲಜ್ಜೆಯನ್ನು ತೋರುತ್ತಿದ್ದ ಆ ಯುವಕನಿಗೆ ಒಂದು ಹೂಹಾರವನ್ನು ಹಾಕಿದಳು. ಅವನು ಜೇಬಿನಿಂದ ಒಂದೋ ಎರಡೋ ರೂಪಾಯಿಗಳನ್ನು ಅವಳಿಗೆ ಕೊಟ್ಟು–ಹಾಕು ರಾಮೇಗೌಡರಿಗೆ ಹಾರಾವ–ಅಂತ ತಂಜಾವೂರ ಅಪ್ಸರೆಗೆ ಹೇಳಿದ ಆಕೆಗೆ ಕನ್ನಡ ಬಾರದಿದ್ದರೂ ಚಾಲಾಕು ಬುದ್ಧಿಯಿಂದಲೂ, ಪ್ರಪಂಚ ಜ್ಞಾನದಿಂದಲೂ ಆತನ ಇಂಗಿತವನ್ನು ತಿಳಿದು ಹಾರವನ್ನು ರಾಮೇಗೌಡರ ಕತ್ತಿಗೆ ಹಾಕಿದಳು. ಈ ಸತ್ಕಾರ ವಿನಮಯಗಳು ನಡೆಯುತ್ತಿರುವಾಗ ನಾನು ಅಲ್ಲಿಗೆ ಹೋದೆ. ಎಲ್ಲರೂ ಎದ್ದು ನನಗೆ ಸ್ವಾಗತ ಬಯಸಿ ಉಚಿತವಾದ ಪೀಠವಲ್ಲಿ ಕುಳ್ಳಿರಿಸಿದರು.

ಸಂಗೀತ, ನಾಟ್ಯ, ಅಭಿನಯವೆಂಬವು ನಮ್ಮ ಸಂಸ್ಕೃತಿಗೆ ಲಾವಣ್ಯ ಸೌರಭ್ಯಗಳನ್ನು ಕೊಡುವ ಲಲಿತಕಲೆಗಳು, ಇವುಗಳ ರಸವರಿಯದವರು ಪಾಮರರು ಎಂಬ ತಿಳುವಳಿಕೆ ಇತ್ತೀಚಿನದು. ಈಗ ನಾವು ಈ ಕಲೆಗಳಿಗೆ ಮಾನ್ಯ ಸ್ಥಾನವನ್ನು ಕೊಡುತ್ತೇವೆ. ಇವುಗಳಲ್ಲಿ ಪ್ರವೀಣರಾದವರನ್ನು ಗೌರವಿಸುತ್ತೇವೆ ನಮ್ಮ ಹೆಣ್ಣು ಮಕ್ಕಳಿಗೆ ಇವುಗಳನ್ನು ಕಲಿಸುತ್ತೇವೆ. ಇವುಗಳಲ್ಲಿ ಅವರು ಪ್ರಾವೀಣ್ಯವನ್ನು ಪಡೆದರೆ, ಅವರ ವಿದ್ಯೆಯನ್ನು ಪ್ರದರ್ಶಿಸಲು ಹೆಮ್ಮೆಯಿಂದ ಅವಕಾಶ ಕೊಡುತ್ತೇವೆ. ಇದು ನ್ಯಾಯ, ಯುಕ್ತ. ಆದರೆ ಕೇವಲ ಈಚಿನ ಜ್ಞಾನೋದಯ. ನಾನು ಬರೆಯುತ್ತಿರುವ ನೆನಪುಗಳ ಕಾಲದಲ್ಲಿ ಹೀಗಿರಲಿಲ್ಲ. ಸಂಗೀತಕ್ಕೇನೋ ಮಾನ್ಯಸ್ಥಾನವಿತ್ತು, ಆದರೆ ಗಂಡಸರಲ್ಲಿ ಮಾತ್ರ. ಕರ್ಣಾಟಕ ಸಂಗೀತವನ್ನು ಉದ್ಧಾರ ಮಾಡಿದವರು, ಮಹಾವಿದ್ವಾಂಸರೂ ಭಕ್ತರೂ ಆದ ಬ್ರಾಹ್ಮಣ ದೇವತಾಪುರುಷರು. ಒಳ್ಳೆ ಮನೆಗಳಲ್ಲಿ–ಅದರಲ್ಲೂ ಸಂಗೀತಗಾರರ ಮನೆಗಳಲ್ಲಿ–ಹೆಣ್ಣು ಮಕ್ಕಳು ಸಂಗೀತವನ್ನು ತಮ್ಮ ಮಾತೃಭಾಷೆಯನ್ನು ಕಲಿಯುವ ರೀತಿಯಲ್ಲೇ ಕೇಳಿ ಕಲಿಯುತ್ತಿದ್ದರು. ಕೆಲವರು ಪಾಠ ಹೇಳಿಸಿಕೊಂಡು ಕಲಿಯುತ್ತಿದ್ದರು; ಆದರೆ ಅವರು ಹಾಡುತ್ತಿದ್ದದ್ದು ಕೀರ್ತನೆಗಳು, ದೇವರನಾಮಗಳು, ಬೀಗರ ಹಾಡುಗಳು, ಮಾತ್ರ. ನಂಟರ ಮನೆ ಮದುವೆ, ಆರತಿ, ಅಕ್ಷತೆ, ಇಂಥ ವಿಶೇಷ ಸಂದರ್ಭಗಳಲ್ಲಿ ಇವರ ಸುಸ್ವರ ಕೇಳು

ತ್ತಿತ್ತೆ ಹೊರತು ಬಹಿರಂಗದಲ್ಲಲ್ಲ. ನೃತ್ಯ ಅಭಿನಯಗಳ ವಾಸನೆಯೇ ಇರಲಿಲ್ಲ. ಯಾರಾದರೂ ಮಾತಿನ ಔತ್ಸುಕ್ಯದಲ್ಲಿ ಕೈ, ಮೈ, ಆಡಿಸಿದಲ್ಲಿ– ಇದೇನೇ ಸೂಳೇರ ಹಾಗೆ ಕೈತಿರುವುತ್ತೀ– ಥೂ– ಎನ್ನುತ್ತಿದ್ದರು, ಆಕೆಯ ಹಿರಿಯರು. ಸಭೆಯಲ್ಲಿ ಹೆಂಗಸರ ಸಂಗೀತವೆಂದರೆ, ವೇಶ್ಯೆಯರ ಸಂಗೀತವೆ. ಅವರಿಗೂ ರಾಗ, ಸ್ವರ, ತಾಳ, ಲಯ, ಇವುಗಳ ಜ್ಞಾನ ಬರಬೇಕಾದರೆ, ಅವರಿಗೆ ದೇವರು ಕೊಟ್ಟಿರುವ ಕೋಮಲ ಧ್ವನಿ ಸಂಸ್ಕೃತಿಗೆ ಬಂದು, ಪಲಕುಗಳು ಸರಿಯಾಗಿ ನುಡಿಯಬೇಕಾದರೆ, ವಿದ್ವಾಂಸರಿಂದ ಸಂಪ್ರದಾಯ ಪೂರ್ವಕವಾಗಿ ವಿದ್ಯೆಯ ವ್ಯಾಸಂಗವನ್ನು ಮಾಡಿಸಲೇ ಬೇಕು; ಶಕ್ತಿಯಿದ್ದವರು ಮಾಡಿಸುತ್ತಲೂ ಇದ್ದರು. ಅವರಲ್ಲಿ ಕೆಲವರು ಪ್ರಖ್ಯಾತಿಯನ್ನು ಪಡೆದ ಸಂಗೀತಗಾರರಾಗಿದ್ದರು – ವೀಣೆಧನಂ, ಪ್ಯಾರಿ, ನಾಗರತ್ನ, ಗೋದಾವರಿ, ಕೊಯಮುತ್ತೂರು ತಾಯಿ, ತಿರುಮಕೂಡಲು ಸುಂದರಿ– ಇವರುಗಳ ಹೆಸರು ಈಗಲೂ ಮಾಸಿಲ್ಲ. ಅಂದರೆ ಸಂಗೀತವೆಂಬುದು ವೇಶ್ಯೆಯರಿಗೆ ಪ್ರಾಧಾನ್ಯವಲ್ಲ; ಅವರಿಗೆ ಮುಖ್ಯವಾದ್ದು ನೃತ್ಯ. ಸಂಗೀತ ತಾಫೆಯ ಅವಯವ– ಮಾತ್ರ ಅವಕಾಶ ಅಷ್ಟೆ. ನನಗೆ ಜ್ಞಾಪಕವಿರುವ ಹಾಗೆ ವೇಶ್ಯೆಯರ "ಕಛೇರಿ"ಗೆ ಬಂದವರು ಬಹುಶಃ ನಾಟ್ಯ ನೋಡುವುದಕ್ಕೆ ಬರುತ್ತಿದ್ದರೇ ವಿನ ಸಂಗೀತ ಕೇಳುವುದಕ್ಕಲ್ಲ– ಅವರಲ್ಲಿ ಶಾರೀರ ಸಂಪತ್ತಿನ ಮೆಚ್ಚುಗರಗಿಂತಲೂ ಶರೀರ ಸಂಪತ್ತಿನ ವಿಮರ್ಶಕರು ಹೆಚ್ಚು ಪಾಲು ಇರುತ್ತಿದ್ದರು. ಒಂದು ಸಲ ಒಬ್ಬ ವೃದ್ಧರು ಸೇಲಂ ಗೋದಾವರಿ ಸಂಗೀತಕ್ಕೆ ಬಂದಿದ್ದರು. ಆಕೆ ತನ್ನ ದಿವ್ಯವಾದ ಕಂಠದಲ್ಲಿ "ಚಕ್ಕನೆರಾಜ" "ಇಂಕಾ ದಯಾರಾಲೇದ" ಕೃತಿಗಳನ್ನು ಹಾಡಿದಳು. ಆವರು ಬೇಸರದ ನಿಟ್ಟುಸಿರಿನಿಂದ ಎದ್ದು– ಎರಡು ಜಾವಡಿ ಕೇಳೋಣ ಅಂತ ಇಲ್ಲಿಗೆ ಬಂದರೆ, ಮುಂಡೆ ರಾಮಾ ಕೃಷ್ಣ– ಅಂತ ಪ್ರಾರಂಭಿಸಿಬಿಟ್ಟಳು– ಎಂದು ಹೊರಟೇ ಹೋದರು.

ಇನ್ನೊಂದು ಸಲ ಒಬ್ಬ ಮಹನೀಯರ ಮನೆಗೆ ಇನ್ನೊಬ್ಬ ಮಹನೀಯರು ಅತಿಥಿಗಳಾಗಿ ಬಂದಿದ್ದರು. ಅವೊತ್ತು ರಾತ್ರೆ ಮೃಷ್ಟಾನ್ನ ಭೋಜನದ ನಂತರ ಪ್ರಖ್ಯಾತಳಾದ ಗೌರ್ ಜಹನ್‌ಳ ಸಂಗೀತ. ಅತಿಥಿ

ಗಳೆಲ್ಲ ಊಟ ಮಾಡಿಕೊಂಡು ಡ್ರಾಯಿಂಗ್ ರೂಮಿಗೆ ಬಂದು ತಾಂಬೂಲ ಸೇವನೆ ಮಾಡುತ್ತಾ ಸಂಗೀತಗಾರಳ ಪ್ರವೇಶವನ್ನು ಎದುರು ನೋಡುತ್ತಿದ್ದೆವು. ಮುಖ್ಯ ಅತಿಥಿಯವರಿಗೆ ನಿದ್ದೆಗಣ್ಣು. ಆದರೂ ಸಂಗೀತ ಕೇಳಬೇಕೆಂತಲೊ, ಸಂಗೀತಗಾರಳನ್ನು ನೋಡಬೇಕೆಂತಲೋ, ಹಟಾತ್ತಾಗಿ ಎಚ್ಚರವಾಗಿದ್ದರು. ಆಯಿತು, ಬಂದಳು. ಮುಖ್ಯ ಅತಿಥಿಗಳು ನಿರಾಶೆಯಿಂದ ಥಟಕ್ಕನೆ ಎದ್ದು—ಹೂ, ಹೂ, ಮುಸಲಿ, ಮುಸಲಿ-ಎನ್ನುತ್ತಾ ತಮ್ಮ ಕೊಠಡಿಗೆ ಹೊರಟು ಹೋದರು.

ಸಾಮಾನ್ಯವಾಗಿ ನಾಟ್ಯವೆಂದರೆ, ನರ್ತಕಿಯರು ಜಾವಡಿಗಳನ್ನು ಹಾಡುತ್ತಾ ಅವುಗಳ ರಸವನ್ನು ಹಿಂಡಿ ತೋರಿಸುವಂತೆ ಹೆಜ್ಜೆ, ಅಂಗನ್ಯಾಸ, ಕರನ್ಯಾಸ, ಹಾವಭಾವಗಳನ್ನು ಪ್ರದರ್ಶಿಸುತ್ತಿದ್ದರು. ಜಾವಡಿಗಳ ಭಾಷೆ ಅಶ್ಲೀಲ, ಮಟ್ಟುಗಳು ಬಹಳ ಥಳಕು; ಇವುಗಳನ್ನು ಹಾಡಿ ಅಭಿನಯ ಹಿಡಿದು ನಾಟ್ಯಕಟ್ಟಬೇಕಾದರೆ, ಸ್ವಾಭಾವಿಕವಾಗಿ ಬರೀ ವ್ಯಂಗ್ಯ ಮಾತ್ರವಲ್ಲ, ಸ್ವಲ್ಪ ಗ್ರಾಮ್ಯವಾದ ಅಶ್ಲೀಲತೆಯನ್ನೂ ತಪ್ಪಿಸಲಿಕ್ಕಾಗುತ್ತಿರಲಿಲ್ಲ. ತಾಫೆ ನೋಡುವದಕ್ಕೆ ಹೋದಾಗ ನನಗೆ ಯಾವಾಗಲೂ ಪ್ರಾರಂಭದಲ್ಲಿ ಸ್ವಲ್ಪ ಅಸಹ್ಯ ಬೆರಿಕೆಯಾದ ನಾಚಿಕೆಯಾಗುತ್ತಿತ್ತು; ಒಂದು ಅರ್ಧ ಘಂಟೆಯಾದಮೇಲೆ ಅದರ ಸ್ವಾರಸ್ಯದ ಅನುಭವ ಬರುತ್ತಿತ್ತು. ಆಗ ನಾನು ವೃದ್ಧನೂ ಅಲ್ಲ, ಖುಷಿಯೂ ಅಲ್ಲ—ಸಂಗೀತವನ್ನು ಕೇಳಿದರೆ, ಕೋಮಲವಾದ ವಿಲಾಸಗಳನ್ನು ನೋಡಿದರೆ, ನನಗೂ ಇತರರಂತೆಯೇ ಸಂತೋಷವಾಗುತ್ತಿತ್ತು. ಕೆಲವರು ವೇಶ್ಯೆಯರು ಸಂಸ್ಕೃತವನ್ನು ಕಲಿತು, ಕೂಡಿದ ಮಟ್ಟಿಗೆ ಸಾಹಿತ್ಯ ಜ್ಞಾನವನ್ನು ಸಂಪಾದಿಸಿ, ಗೀತಗೋವಿಂದದ ಪದಗಳು, ಮುಕುಂದ ಮಾಲಾಸ್ತೋತ್ರದ ಶ್ಲೋಕಗಳೇ ಮೊದಲಾದವುಗಳನ್ನು ತಮ್ಮ ಮಧುರ ಸ್ವರದಿಂದ ಬಹು ಚೆನ್ನಾಗಿ ಹಾಡುತ್ತಿದ್ದರು. ನಾಗರತ್ನ, ತಾಯಿ, ಗೋದಾವರಿ, ಸುಂದರಿ—ಇವರುಗಳು ಹಾಡಿದ್ದನ್ನು ನಾನು ಕೇಳಿದ್ದೇನೆ. ಕವಿಯ ಸಂಪೂರ್ಣ ಅನುಭವ ಬೇಕಾದರೆ ಸಾಹಿತ್ಯಕ್ಕೆ ಸಂಗೀತದ ಸಮ್ಮೇಳನವಿರಬೇಕೆಂದು ನನಗೆ ತೋರುತ್ತದೆ. ಈ ಮಾತನ್ನು ಹೇಳುವಾಗ ನನ್ನ ಅನುಭವದ ಒಂದು ಸುಧಾಪಾನ—ದೇವಾರ್ಹವಾದ ಮಾನು

ಷಾಭೋಗ—ಜ್ಞಾಪಕಕ್ಕೆ ಬರುತ್ತದೆ. ಗೀತಗೋವಿಂದದಲ್ಲಿನ "ಯಾಹಿ ಮಾಧವ ಯಾಹಿಕೇಶವ ಮಾ ವದ ಕೈತವವಾದಂ" – ಎಂಬ ಸ್ಮರಶರಜರ್ಜರಿತಳಾದರೂ ಮಾನಿನಿಸ್ವಭಾವವಾದ ಸಾಭ್ಯಸೂಯದಿಂದ ರಾಧೆಯು ತನ್ನ ಪ್ರಾಣನಾಥನಿಗೆ ಗದ್ಗದ ಸ್ವರದಿಂದ ಹೇಳುವ ಮಾತಿನ ಗೀತೆಯನ್ನು ತಿರುಮಕೂಡಲು ಸುಂದರಿ ಹಾವ, ಭಾವ, ಅಭಿನಯಗಳೊಡನೆ ಹಾಡಿದ್ದನ್ನು ನಾನು ಎಂದಿಗೂ ಮರೆಯಲಾರೆ. ಆಕೆಯ ಆ ಗೀತದ ಭಾವ ವಿಕಾಸವನ್ನು ಕೇಳಿದಾಗಲೇ ನನಗೆ ಅದರ ಸೌಂದರ್ಯ ಸಂಪೂರ್ಣವಾಗಿ ಮುಂದಟ್ಟಿಗೆ ಬಂದದ್ದು. ಸೌಂದರ್ಯಲಹರಿ ರಸ ತರಂಗಗಳಾಗಿ ಪ್ರವಹಿಸಿತು. ಮೊದಲು ಕೈತವ್ಯದಿಂದ ನೊಂದ ರಾಧೆ ತನ್ನ ಪ್ರಾಣಕ್ಕಿಂತಲೂ ಹೆಚ್ಚಾದ ಸ್ವಾಮಿಗೆ ರೋಷದಿಂದ—ಹೋಗು—ಎಂದು ಗದರಿಸಿ ಮುಖವನ್ನು ಅತ್ತಲಾಗಿ ತಿರುಗಿಸಿಕೊಳ್ಳುತ್ತಾಳೆ. ಆಮೇಲೆ ಕೋಪದ ಸಂಗಡ ಕನಿಕರ ಬೆರಕೆಯಾಗಿ – ಪಾಪ, ಅವನೂ ನೊಂದಿರೋ ಹಾಗೆ ಕಾಣುತ್ತೆ, ಅವನ ಪ್ರೇಯಸಿಯಾದ ನಾನೇ ಹೀಗೆ ಕಠೋರವಾಗಿ ಮಾತನಾಡಿ ಅವನನ್ನು ಇನ್ನೂ ನೋಯಿಸಬಹುದೇ?— ಎಂಬ ಶಂಕೆ. ನಂತರ – ಇವನಿಗೆ ನಿಜವಾಗೂ ನನ್ನ ಮೇಲೇ ಪ್ರೇಮವಿದೆ ; ದುಷ್ಟನಾರಿಯರು ಅನುಭವವಿಲ್ಲದ ಮೃದುಹೃದಯನಾದ ಇವನನ್ನು ಮರುಳು ಮಾಡಿದಾರೆ ; ಹೌದು ; ಆದರೂ ಇವನ ಮೇಲೆ ಪ್ರಾಣವಿಟ್ಟುಕೊಂಡಿರುವ ನನ್ನನ್ನು ಇವನು ಹೀಗೆ ನೋಯಿಸಬಹುದೆ ? ಇವನಮೇಲೆ ನನಗೆ ಕೋಪವಿಲ್ಲವಾದರೂ ಬುದ್ಧಿ ಕಲಿಸೋಣ – ವೆಂಬ ಭಾವ. ಅದಾದ ಮೇಲೆ – ನಾನು ನಿಜವಾಗೂ ಕೋಪಮಾಡಿಕೊಂಡಿದ್ದೇನೆಂದು ಎಣಿಸಿ ತನ್ನದೇ ತಪ್ಪು, ಅದರ ಫಲವನ್ನು ತಾನು ಉಣಲೇ ಬೇಕೆಂದು ಅವನು ಸಂಕಟಪಟ್ಟುಕೊಂಡು ಹೊರಟೇ ಹೋದರೆ ಏನು ಗತಿ ?—ಎಂಬ ಭಯ. ಕೊನೆಗೆ ಬಾಯಲ್ಲಿ – ಹೋಗು – ಎನ್ನುವ ಮಾತಿದ್ದರು, ಕಣ್ಣಿನಲ್ಲಿ, ಮುಖದಲ್ಲಿ, ಉಸುರಿನಲ್ಲಿ, ಸಮಸ್ತಭಾವದಲ್ಲೂ—ಬಾ, ನನ್ನ ಸ್ವಾಮಿಯೇ ಪ್ರೀತಿ ಮಾಡಿದರೂ ನೀನೇ, ಕೋಪ ಮಾಡಿದರೂ ನೀನೇ, ಸರ್ವಸ್ವವೂ ನೀನೇ, ನಿನ್ನನ್ನು ಬಿಟ್ಟು ನಾನು ಬದುಕಲಾರೆ – ಎಂದು ಸರ್ವ ಅವಯವವೂ ಪ್ರಣಿಪತ್ತಿ ಭಕ್ತಿಯಿಂದ ನುಡಿಯುತ್ತಿತ್ತು. ಹಾಡುವ ಸ್ತ್ರೀಯ

ಹೃದಯವು ಕವಿಯ ಭಾವದಿಂದ ತುಂಬಿ ಕರಗಿ, ಆಕೆಯ ಕಣ್ಣಿನಿಂದ ಅಶ್ರುಧಾರೆ ಸುರಿಯಲಾರಂಭಿಸಿತು. ನನ್ನ ಮನಸ್ಸಿನಲ್ಲಿ– ಆಕೆಯೇ ಧನ್ಯೆ; ರಾಧಾಕೃಷ್ಣರ ಪವಿತ್ರ ಪ್ರೇಮದ ಆನಂದ ಅನುಭವಿಸುತ್ತಿದ್ದಾಳೆ– ಅಂದುಕೊಂಡೆ.

ಮಿರ್ಲೆ ಲಕ್ಷ್ಮೀಗೌಡರ ಮನೆ ಮದುವೆ ಮಂಟಪಕ್ಕೆ ನಾನು ಒಂದೇ ದಿವಸ ಹೋಗಿದ್ದದ್ದು. ಮದುವೆಯ ಉತ್ಸವಗಳು ಏಳು ದಿನ ಬಹಳ ವಿಜೃಂಭಣೆಯಿಂದ ನಡೆದವೆಂದು ಕೇಳಿದೆ. ನಾನು ಹೋಗಿದ್ದ ದಿವಸ ಹರ್ಷ ಉತ್ಸಾಹಗಳ ಸಂಗಡ ಗಾಂಭೀರ್ಯವೂ ಬಹಳ ಮಟ್ಟಿಗೆ ಬೆರೆತಿತ್ತು. ಹುಡುಗ ಪಾಳ್ಯದ ಕೆಲೆದಾಟ ಬಹಳವಾಗಿದ್ದಾಗ್ಯೂ, ಅತಿಥಿಗಳಿಗೆ ಸತ್ಕಾರ, ಹಿರಿಯರುಗಳಲ್ಲಿ ಗೌರವ, ನಡತೆಯಲ್ಲಿ ಮರ್ಯಾದೆ ಚೆನ್ನಾಗಿದ್ದವು. ಆಗ ಊರೆಲ್ಲ ಕಕ್ಷಿಗಳನ್ನು ಮರೆತು ಒಗ್ಗಟ್ಟಾಗಿದ್ದುದನ್ನು ನೋಡಿದ ನನಗೆ ಯಾವಾಗಲೂ ಹೀಗೆಯೇ ಇರಬಾರದೇ, ಎಂದು ಅನ್ನಿಸಿತು. ಆದರೆ ಸದಾಕಾಲ ಹಬ್ಬವಲ್ಲ – ದಂಪತಿಗಳ ಜೀವನವೆಲ್ಲ ಮದುವೆ ಉತ್ಸವವಲ್ಲ.

ಇನ್ನೊಂದು ಮದುವೆಯ ಕತೆಯನ್ನು – ಅದು ಮಿರ್ಲೆ ಮದುವೆಯಾದ ಒಂದೆರಡು ವರ್ಷಗಳ ನಂತರ ನಡೆದದ್ದಾದರೂ – ಈಗಲೇ ಹೇಳುತ್ತೇನೆ. ಈ ಲಗ್ನ ತಿರುಮಕೂಡ್ಲು ನರಸೀಪುರದ ಪರಿವಾರ, ಅಥವ ತೊರೆಯ, ಅಥವ ಗಂಗೆ ಮಕ್ಕಳು, ಎಂಬ ಗುಂಪಿನವರಲ್ಲಿ ನಡೆದದ್ದು. ಈ ಜನ ಹಿಂದಿನ ರಾಜರುಗಳ ಸೈನ್ಯಗಳಲ್ಲಿ ಪದಾತಿಗಳಾಗಿದ್ದರೆಂದು ಪ್ರತೀತಿ; ಅವರು ತಮ್ಮ ಹೆಸರಿಗೆ ಹೆಮ್ಮೆಯಿಂದ ನಾಯಕನೆಂಬ ಬಿರುದುನಿಪಾತವನ್ನು ಸೇರಿಸಿಕೊಳ್ಳುತ್ತಾರೆ. ಅವರ ಗುಂಪು ಯೋಧರ ಗುಂಪುಗಳಂತೆಯೇ. ಗ್ರಾಮ ಯಜಮಾನ ಉಪಯಜಮಾನರುಗಳು, ಅವರ ಅಧೀನದ ವಕ್ಕಲುಗಳು, ಈ ರೀತಿಯಲ್ಲಿ ರಚನೆಯಾಗಿ, ಬಿಗಿಯಾದ ಕಟ್ಟಿನಿಂದ ಒಗ್ಗಟ್ಟಾಗಿರುವುದು. ಸಾಮಾನ್ಯವಾಗಿ ಪೋಲೀಸು, ಅಟ್ಟಾವಣೆ, ಕಂದಾಚಾರಗಳಲ್ಲಿ ಈ ಪಂಗಡದವರು ಅನೇಕರು ಚಾಕರಿಗೆ ಸೇರುತ್ತಿದ್ದರು. ಬಹಳ ಶ್ರದ್ಧೆಯಿಂದ, ನಂಬಿಕೆಯಿಂದ, ಯಜಮಾನನಲ್ಲಿ ಭಕ್ತಿಯಿಂದ ಕೆಲಸಮಾಡತಕ್ಕವರೆಂದು ನನ್ನ

ಅನುಭವ. ಒಕ್ಕಲಿಗರ ಮತ್ತು ಕುರುಬರಗಿಂತ ಇವರು ಜಾತಿಯಲ್ಲಿ ಕಡಿಮೆ ಎಂಬುದು ನಿರ್ವಿವಾದವಾದರೂ, ಅವರುಗಳಿಗಿಂತ ಬಹಳ ಹಿಂದುಳಿದ ಬಡವರಾಗಿದ್ದರೂ, ಆತ್ಮಗೌರವದಲ್ಲಿ, ಸಂದರ್ಭ ಬಿದ್ದರೆ ಪೌರುಷದಲ್ಲಿ, ತೊರೆಯರು ಯಾರಿಗೂ ಕಡಿಮೆಯಾದವರಲ್ಲ. ಹೊಳೆ ಪಾಲು ಗ್ರಾಮಗಳಲ್ಲಿ ಇವರು ಅಂಬಿಗರು, ಮತ್ತು ಮೀನು ಹಿಡಿಯು ವರು. ಇವರು – ಸ್ತ್ರೀ ಪುರುಷರು ಉಭಯತ್ರರೂ – ರೂಪವಂತರು. ಆದರೆ ಬಡತನ, ಕಷ್ಟಜೀವನದಿಂದ ಅಲ್ಪ ಕಾಲದಲ್ಲೇ ಶರೀರಸಂಪ ತ್ತನ್ನು ಕಳೆದುಕೊಂಡು, ಮುದಿತನಕ್ಕೆ ಬರತಕ್ಕವರು. ಇವರಲ್ಲಿ ಒಂದು ದುರ್ಗುಣವೆನ್ನೋಣವೇ, ವಾಡಿಕೆಯೆಂದರೆ ಸಾಕೆ – ಒಂದು ವಾಡಿಕೆ, ಕೈಲಿ ಕಾಸಿದ್ದರೆ ಹೆಂಡ ಕುಡಿಯುವುದು. ಗಂಗೆಯ ಮಕ್ಕಳಿಗೆ ಅಜಸ್ರ ದಾಹ.

ಸರಿ, ಈಗ ನಾನು ಹೇಳಬಯಸುವುದು, ಬನ್ನೂರ ಗ್ರಾಮದಲ್ಲಿ ಈ ಜನಗಳಲ್ಲಿ ನಡೆದ ಒಂದು ಮದುವೆಯ ವಿಚಾರ. ನಿರಖಾದ ಹೆಸರು ಗಳು ನನಗೆ ಜ್ಞಾಪಕವಿಲ್ಲ, ಒಂದುವೇಳೆ ಜ್ಞಾಪಕವಿದ್ದರೂ ಅವುಗಳನ್ನು ಮರೆಮಾಡುವುದರಿಂದ ಬಾಧಕವೇನೂ ಇಲ್ಲ; ಅದಕ್ಕೋಸ್ಕರ ಈ ಕತೆಯಲ್ಲಿ ಬರುವ ಹೆಸರುಗಳು ಕೃತಕವೆಂದು ತಿಳಿಯಬೇಕು. ಬನ್ನೂರು ಗ್ರಾಮದಲ್ಲಿ ಒಕ್ಕಲಿಗರೂ, ತೊರೆಯರು, ಇವರೆ ಮುಕ್ಕಾಲು ಮೂರು ವೀಸೆಪಾಲು ನಿವಾಸಿಗಳು. ಕೆಲವು ದಾಯರೆ ಮುಸಲ್ಮಾನ್ ಜಮೀನ್ ದಾರುಗಳೂ, ವರ್ತಕರೂ ಇದ್ದರು. ಒಕ್ಕಲಿಗರು ಭಾರಿ ರೈತರು, ವ್ಯವ ಹಾರಜ್ಞರು, ಬೆಂಗಳೂರು ಮೈಸೂರು, ಸರಕಾರ, ಲಾಯರು, ಎಲ್ಲ ವನ್ನೂ ಕಂಡವರು. ತೊರೆಯರು ಜನಸಂಖ್ಯೆಯಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಒಕ್ಕಲಿಗರಿಗೆ ಸಮವಾಗಿದ್ದರೂ, ಐಶ್ವರ್ಯದಲ್ಲಿ, ಬುದ್ಧಿಯಲ್ಲಿ, ಪ್ರಬಲರ ಅನುಸರಣೆಯಲ್ಲಿ ಬಹಳ ಹಿಂದುಳಿದವರು.

ತೊರೆಯರ ಯಜಮಾನ ಮಾದನಾಯಕನ ಮಗನ ಮದುವೆ. ಹೆಣ್ಣು, ಮಳವಳ್ಳಿ ಯಜಮಾನ ಮಲ್ಲನಾಯಕನ ಮಗಳು. ಇವರಲ್ಲಿ ಮದುವಣಿಗನನ್ನು ಕುದುರೆಯ ಮೇಲೆ ಕೂರಿಸಿಕೊಂಡು ಮೆರವಣಿಗೆ ಮಾಡಿಕೊಂಡು ದೇವಸ್ಥಾನಕ್ಕೆ ಹೋಗಿ, ಅಲ್ಲಿ ಹಣ್ಣು ಕಾಯಿ ಮಾಡಿಸಿ

ಕೊಂಡು ಬರುವ ಪದ್ಧತಿ. ಮಾದನಾಯಕ ಬನ್ನೂರು ರಾಜಬೀದಿಯಲ್ಲಿ ಮೆರವಣಿಗೆ ಮಾಡಿಕೊಂಡು ಬನ್ನೂರಮ್ಮನ ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡಿಸಿಕೊಂಡು, ಬೇರೆ ಮಾರ್ಗದಲ್ಲಿ ವಾಪಸು ಬರಲು ಲೈಸೆನ್ಸಿಗೆ ಅರ್ಜಿ ಹಾಕಿಕೊಂಡ. ನಾನು ಅದನ್ನು ಮಾಮೂಲಿನಂತೆ ಇನ್‌ಸ್ಪೆಕ್ಟರಿಗೆ ಅಭಿಪ್ರಾಯದ ಬಗ್ಗೆ ಕಳುಹಿಸಿಕೊಟ್ಟೆ. ಮೆರವಣಿಗೆ ಸಂದರ್ಭದಲ್ಲಿ ಜನಗಳ ನೆಮ್ಮದಿಗೆ ಪೋಲೀಸಿನವರು ಜವಾಬ್ದಾರರಾದ್ದರಿಂದಲೂ, ಅವಶ್ಯವಾದ ಬಂದೋಬಸ್ತನ್ನು ಮಾಡುವುದು ಅವರ ಭಾರವಾದ್ದರಿಂದಲೂ, ಈ ವಾಡಿಕೆ ಯುಕ್ತವಾದ್ದೇ ಸರಿ.

ಪೋಲೀಸು ಇನ್‌ಸ್ಪೆಕ್ಟರು ಸ್ಥಳಕ್ಕೆ ಹೋಗಿ ವಿಚಾರ ಮಾಡಿ, ಮೆರವಣಿಗೆಯ ಮಾರ್ಗವನ್ನು ನೋಡಿ– ಮೆರವಣಿಗೆ ಹೋಗಬೇಕೆಂಬುದು ಎಲ್ಲರಿಗೂ ಸಮಹಕ್ಕುಳ್ಳ ಪಬ್ಲಿಕ್ ರೋಡು; ಅದರ ಪಾರ್ಶ್ವಗಳಲ್ಲಿ ಒಕ್ಕಲಿಗರ ಮನೆಗಳೂ, ಮುಸಲ್ಮಾನರ ಮನೆಗಳೂ, ಅಂಗಡಿಗಳೂ ಇವೆ; ಜನಗಳ ಸಂಚಾರಕ್ಕೆ ಅಡಚಣೆ ಇಲ್ಲದಂತೆ, ಸಾಧುವಾದ ರೀತಿಯಲ್ಲಿ ಮೆರವಣಿಗೆ ಹೋಗುವುದಕ್ಕೆ ಆಕ್ಷೇಪಣೆ ಕಾಣುವುದಿಲ್ಲ; ಒಕ್ಕಲಿಗರು ತಮ್ಮ ಕೋಮಿನವರ ಮದುವೆಗಳಲ್ಲಿ ಮೆರವಣಿಗೆ ಆ ರೋಡಿನಲ್ಲಿ ಹೋಗುವ ಪದ್ಧತಿ; ತೊರೆಯರು ಈಚೆಗೆ ಆ ಮಾರ್ಗವಾಗಿ ಹೋದ ದಾಖಲೆ ಇಲ್ಲ, ಒಕ್ಕಲಿಗರು ತೊರೆಯರು ವಾದ್ಯ ಸಮೇತವಾಗಿ ಮೆರವಣಿಗೆಗೆ ಬರುವುದಕ್ಕೆ ಒಪ್ಪುವುದಿಲ್ಲವೆಂದು ರಿಪೋರ್ಟು ಮಾಡಿದರು.

ನಾನು ಕೇಳಿದ್ದಕ್ಕೆ– "ಮುಸಲ್ಮಾನರದೇ ಆಗಲಿ, ಆ ರೋಡಿನಲ್ಲಿ ಮತ್ಯಾವ ಕೋಮಿನವರದೇ ಆಗಲಿ ತಕರಾರಿಲ್ಲ"ವೆಂದು ಹೇಳಿದರು. ಹೊಳೇನೀರಿಗೆ ದೊಣೇ ನಾಯಕನ ಅಪ್ಪಣೆ ಯಾಕೆ? ಎಂದು ನನಗೆ ತೋರಿತು. ಎಲ್ಲರಿಗೂ ಸಾಮಾನ್ಯವಾದ ಪಬ್ಲಿಕ್ ರಸ್ತೆಯಲ್ಲಿ ಯಾರ ಅನುಕೂಲ್ಯಕ್ಕೂ ನೆಮ್ಮದಿಗೂ ಭಂಗವಿಲ್ಲದೆ ಮೆರವಣಿಗೆ ತೆಗೆದುಕೊಂಡು ಹೋಗುವ ಹಕ್ಕುಂಟೆಂದು ತೋರಿತಾದ್ದರಿಂದ ಲೈಸೆನ್ಸನ್ನು ಕೊಟ್ಟೆ. ಕೊಟ್ಟ ಒಂದೆರಡು ದಿನಗಳಲ್ಲೇ ಒಕ್ಕಲಿಗರ ಮುಖಂಡರಿಬ್ಬರು– ಅವರ ಹೆಸರು ಚಾಮೇಗೌಡ, ತಿಮ್ಮೇಗೌಡ, ಎಂದು ಜ್ಞಾಪಕ–

ನನ್ನಲ್ಲಿ ಹಾಜರಾಗಿ ಸುಮಾರು ನೂರು ರುಜುಗಳುಳ್ಳ ಒಂದು ತಕರಾರು ಅರ್ಜಿಯನ್ನು ದಾಖಲ್ಮಾಡಿ, ತೊರೇರು ರಾಜಬೀದಿಯಲ್ಲಿ ಒಕ್ಕಲಿಗರ ಮನೆಗಳ ಮುಂದೆ ಕುದುರೆ ಸವಾರಿಯ ಮೆರವಣಿಗೆ ಹೋಗುವುದು ಗೈರು ಮಾಮೂಲು, ಇದರಿಂದ ಒಕ್ಕಲಿಗರಿಗೆ ಬಹಳ ಅಪಮಾನ, ಲೈಸನ್ಸನ್ನು ರದ್ದುಮಾಡಬೇಕು ; ಇಲ್ಲವಾದರೆ ನೆಮ್ಮದಿಗೆ ಭಂಗವುಂಟಾಗಬಹುದು ; ಎಂದು ಒತ್ತಿ ಹೇಳಿ, ಪೋಲೀಸಿನವರ ಮೇಲೂ ಪಕ್ಷಪಾತದ ಆರೋಪಣೆ ಮಾಡಿದರು. ಇನ್ನೊಬ್ಬರ ಹಕ್ಕಿಗೆ ಬಾಧಕವಿಲ್ಲದೆ ಪಬ್ಲಿಕ್ ರಸ್ತೆಯಲ್ಲಿ ಮೆರವಣಿಗೆ ಹೋಗುವುದಕ್ಕೆ ಎಲ್ಲರಿಗೂ ಬಾಧ್ಯತೆಯಿರುವಂತೆ ನನಗೆ ತೋರಿತು. ನಾನು ಚಾಮೇಗೌಡರಿಗೆ – ನಿಮ್ಮಲ್ಲಿ ಅನೇಕ ಲಗ್ನಗಳಾಗಿರಬೇಕು. ನೀವು ಆ ರೋಡಿನಲ್ಲಿ ಮೆರವಣಿಗೆ ಹೋಗಿಲ್ಲವೇ ? ಮುಸಲ್ಮಾನರೇ ಆಗಲಿ, ಮತ್ಯಾರೇ ಆಗಲಿ ಆಕ್ಷೇಪಣೆ ತಂದಿದ್ದಾರೆಯೇ ? – ಎಂದು ಕೇಳಿದ್ದಕ್ಕೆ – ಹಾಗಂದರೇನು, ಮಹಾಸ್ವಾಮಿ, ತೊರೇರೂ ನಾವೂ ಒಂದೇನೇ ಹಾಗಾದರೆ ? ಅವರು ನಮ್ಮ ವ್ಯಾನಾ ಎತ್ತೋ ಜಾತಿ, ಅವರು ನಮ್ಮಲ್ಲಿ ಜೀತಕ್ಕಿರೋ ಜಾತಿ – ಎಂದರು. ಇವರ ಸಂಗಡ ವಾದಿಸಿ ಪ್ರಯೋಜನ ಕಾಣಲಿಲ್ಲ. ಮೂರ್ಖತನಗಳಲ್ಲೆಲ್ಲ ಜಾತಿ ಅಹಂಕಾರದ ಮೂರ್ಖತನ ಅಗ್ರಗಣ್ಯವಾದದ್ದು. ಇವರ ಸಂಗಡ ಮಾತನಾಡಿದರೆ ನಾನು ತೊರೆಯರ ಪಕ್ಷಪಾತಿ ಎಂತಲೂ, ಆ ಪಕ್ಷಪಾತಕ್ಕೆ ಸಾಧುವಲ್ಲದ ಕಾರಣಗಳಿರಬೇಕೆಂತಲೂ ಊಹಿಸಿ, ಇವರುಗಳು ತಮ್ಮ ಕೋಮಿನವರಿಗೆ ನನ್ನಲ್ಲಿರುವ ನಂಬಿಕೆಯನ್ನು ನಾಶಮಾಡುತ್ತಾರೆ. ಮುಂದೆ ಇದೇ ಮೆರವಣಿಗೆಯ ವಿಷಯದಲ್ಲಿ ನಾನು ನಡಸಬೇಕಾಗಬಹುದಾದ ಅಮಲಿಗೂ ಅಪಾರ್ಥವನ್ನು ಕಲ್ಪಿಸಿ ತೊಡಕುಗಳನ್ನುಂಟುಮಾಡುತ್ತಾರೆ. ಈ ಯೋಚನೆಗಳು ನನ್ನ ಮನಸ್ಸಿಗೆ ಹೊಳೆದು,

"ನೋಡಿ, ಗೌಡರೆ, ತೊರೇರ ಲೈಸೆನ್ಸ್ ಅರ್ಜಿಯನ್ನು ನಾನು ಸಾಮಾನ್ಯವಾಗಿ ಅಂಥ ಅರ್ಜಿಗಳನ್ನು ವಿಲೇವಾರಿ ಮಾಡುವಂತೆಯೇ ಪೋಲೀಸು ರಿಪೋರ್ಟಿನ ಮೇಲೆ ವಿಲೇವಾರಿ ಮಾಡಿರುತ್ತೇನೆ ನೀವು ಹೇಳುವುದು ನೋಡಿದರೆ ಇದು ನಿಮ್ಮ ಕೋಮಿನವರ ಗೌರವಕ್ಕೆ ಸಂಬಂಧಿಸಿದ ದೊಡ್ಡ ವಿಷಯವೆಂದು ನೀವು ಭಾವಿಸುವಂತೆ ಕಾಣುತ್ತೆ.

ಅದು ಹಾಗೇ ಇರಬಹುದು. ಆದರೆ ನನ್ನ ಆರ್ಡರನ್ನು ಬದಲಾಯಿಸ ಬೇಕೆಂದು ಒಂದುವೇಳೆ ತೋರಿದರೂ ನಾನೇ ಬದಲಾಯಿಸಲಿಕ್ಕಾಗವು ದಿಲ್ಲ. ಅದನ್ನೇ ಜಾರಿ ಮಾಡಬೇಕೆಂಬ ಹಠವೇನೂ ನನಗಿಲ್ಲ. ನಾನು ಮಾಡಿರತಕ್ಕ ಆರ್ಡರು ಇನ್‌ಸಾಫ್ ಅಲ್ಲವೆಂದು ನಿಮಗೆ ತೋರಿದರೆ – ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರಲ್ಲಿ ಅಪ್ಪೀಲು ಮಾಡಿ. ಅದುವರೆಗೂ ಮೆರ ವಣಿಗೆಯನ್ನು ತಡೆಯುವಂತೆ ಅವರಿಂದಲೇ ಹುಕ್ಕುಂ ತನ್ನಿ" ಎಂದು ಹೇಳಿದೆ.

ಹಾಗೇ ಮಾಡಿದರು. ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರು ಉಭಯ ಕಕ್ಷಿಯವರಿಗೂ ನೋಟೀಸು ಕೊಟ್ಟು ಅವರ ವಾದವನ್ನು ಲಾಯರುಗಳ ಮೂಲಕ ಕೇಳಿ, ನಾನು ಮಾಡಿದ್ದ ಆರ್ಡರನ್ನೇ ಖಾಯಂ ಮಾಡಿ, ತೊರೆಯರ ಮೆರವಣಿಗೆಗೆ ಲೈಸೆನ್ಸು ಕೊಟ್ಟು, ಅದಕ್ಕೆ ತಕ್ಕ ಬಂದೋ ಬಸ್ತು ಮಾಡುವಂತೆ ತಾಲ್ಲೂಕು ಪೋಲೀಸಿನವರಿಗೆ ತಾಕೀದು ಕಳುಹಿ ಸಿದರು. ಆ ಬಂದೋಬಸ್ತಿನ ಜವಾಬ್ದಾರಿ ತಾಲ್ಲೂಕು ಪೋಲೀಸಿನ ಮುಖಂಡ ಆಫೀಸರಾದ ನನ್ನ ಮೇಲೇ ಬಂದಿತು. ಯಾಕೆಂದರೆ, ಪೋಲೀಸು ಇನ್‌ಸ್ಪೆಕ್ಟರು—ಸ್ವಾಮಿ, ಇದು ದೊಡ್ಡ ವಿಷಯ, 'ಫೈರಿಂಗ್'ಗೆ ಅವಶ್ಯಕತೆ ಬಿದ್ದರೂ ಬೀಳಬಹುದು. ಭಾರಿ ದೊಂಬಿ ನಡೆಯುವ ಸಂಭವವಂತೂ ಇದೆ. ತಾವೇ ಬನ್ನೂರಿಗೆ ಬಂದು ಪೋಲೀಸು ಬಂದೋ ಬಸ್ತಿಗೆ ಏರ್ಪಾಡು ಮಾಡಬೇಕು. ನಾನೂ ಬಂದು ತಮ್ಮ ಆಜ್ಞೆಯಲ್ಲಿ ಹಾಜರಿರುತ್ತೇನೆ – ಅಂದರು. ನಾನು ಆಗಲಿ, ಅರಸಿನವರೆ – ಎಂದು ಒಪ್ಪಿದೆ. ಅವರ ಹೆಸರು ಚೆನ್ನಮರಾಜೇ ಅರಸಿನವರು, ಆನೆಗೊಂದೆ ಚಕ್ರವರ್ತಿಗಳ ಸಂತತಿಗೆ ಸೇರಿದವರೆಂದು ಹೇಳುತ್ತಿದ್ದರು. ಬಹಳ ದೊಡ್ಡ ತರಹದವರು, ಒಳ್ಳೇ ನಿಯತ್ತಿನವರು, ಕೆಲಸದಲ್ಲಿ ಮುಂದಾಳು ತನ, ಧೋರಣೆ – ಮುಖ್ಯವಾಗಿ ಪೋಲೀಸು ಆಫೀಸರಿಗೆ ಇರಬೇಕಾದ "ಜೂರತ್"– ಅಷ್ಟೇನೂ ಇರಲಿಲ್ಲ. ನಾಳೆ ಲಗ್ನ, ಅದೇ ರಾತ್ರಿ ಮೆರ ವಣಿಗೆ, ಎನ್ನುವಾಗ ಬನ್ನೂರಿಗೆ ಹೋದೆವು. ನಾನು ಟ್ರಾವೆಲರ್ಸ್ ಬಂಗಲೆಯಲ್ಲಿದ್ದೆ. ನಮ್ಮ ಇನ್‌ಸ್ಪೆಕ್ಟರು ಊರಿನಲ್ಲಿ ಪೋಲೀಸು ಸ್ಟೇಷ

ನ್ನಿನಲ್ಲಿ ತಂಗಿದರು. ಚಾಮೇಗೌಡ ತಿಮ್ಮೇಗೌಡ ಮೊದಲಾದ ಒಕ್ಕಲಿಗ ಮುಖಂಡರು ನನ್ನನ್ನು ನೋಡಲಿಕ್ಕಾಗಿ ಕಾದಿದ್ದರು.

"ಇದೇನು ಸ್ವಾಮಿ, ಡೆಪ್ಯೂಟಿ ಕಮಿಷನ್ನರು ಈ ರೀತಿ ಅನ್ಯಾಯವಾದ ಆರ್ಡರು ಮಾಡಿದಾರೆ. ಇದನ್ನು ಒಪ್ಪಲಿಕ್ಕಾಗೋಲ್ಲ. ಮಹಾರಾಜರ ವರೆಗೂ ತೆಗೆದುಕೊಂಡುಹೋಗುತ್ತೇವೆ"- ವಗೈರೆ, ವಗೈರೆ. ಕೆಲವರು ಬಿಸಿನೆತ್ತರುಳ್ಳ ಹುಡುಗರು – "ಪ್ರಾಣ ಹೋದರೂ ಸರಿಯೇ, ಇದು ಆಗದು ಸ್ವಾಮಿ. ತಲೆಗಳು ಬಿದ್ದರೂ ಸಮವೇ" — ಹೀಗೆಲ್ಲ ಮಾತನಾಡಲಿಕ್ಕೆ ಪ್ರಾರಂಭ ಮಾಡಿದರು. ಇಂಥ ಸಂದರ್ಭಗಳಲ್ಲಿ ಹೆಚ್ಚು ಮಾತು ಉರಿಯಮೇಲೆ ಎಣ್ಣೆ ಹುಯಿದ ಹಾಗೆ. ಆದರೆ ಮೌನವಾಗಿರುವುದು ಉಚಿತವಲ್ಲ. ನಾನು,

"ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರ ಆರ್ಡರನ್ನು ನಿಮ್ಮೊಂದಿಗೆ ಚರ್ಚಿಸಲು ನಾನು ಇಷ್ಟಪಡುವುದಿಲ್ಲ. ಅವರ ಆರ್ಡರನ್ನು ಜಾರೀ ಮಾಡುವ ಜವಾಬ್ದಾರಿ ಮಾತ್ರ ನನ್ನದು. ಅವರ ಅಧಿಕಾರದ ಎಲ್ಲೆಯಲ್ಲಿ ಅವರು ಮಾಡಿರುವ ಆರ್ಡರು, ನಮ್ಮನ್ನಾಳುವ ಮಹಾಸ್ವಾಮಿಗಳ ಆಜ್ಞೆಯಂತೆ ಹೊರತು, ಬೇರೆಯಲ್ಲ. ಪ್ರಜೆಗಳಾದ ನಾವುಗಳೆಲ್ಲರೂ ಶಿರಸಾವಹಿಸಿ ಅದನ್ನು ಗೌರವಿಸಬೇಕು. ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರ ಆರ್ಡರು ಅನ್ಯಾಯವೆಂದು ನಿಮ್ಮ ಅಭಿಪ್ರಾಯವಾದರೆ, ಅದನ್ನು ತಿದ್ದಿಸಿಕೊಳ್ಳುವುದಕ್ಕೆ, ಅಥವ ರದ್ದುಮಾಡಿಸುವುದಕ್ಕೆ ಕಾನೂನಿನಲ್ಲಿ ಬೇರೆ ಮಾರ್ಗವಿದೆ. ಕಾನೂನಿಗೆ ವಿಧೇಯವಾಗಿರುವುದು ನಾಗರಿಕಧರ್ಮ. ಕಾನೂನಿಗೆ ವಿರೋಧವಾಗಿ ನಡೆದರೆ ಶಿಕ್ಷೆ ಸಿದ್ಧ. ಶಿಕ್ಷೆ ಮಾಡುವುದು ನನಗೇನೂ ಸಂತೋಷದ ಕೆಲಸವಲ್ಲ. ಅಂಥ ವ್ಯಸನಕ್ಕೆ ನನ್ನನ್ನು ಗುರಿಮಾಡಬಾರದು. ಬನ್ನೂರಿನ ಕೀರ್ತಿಯನ್ನು ಮಣ್ಣುಮಾಡಬಾರದು"

—ಎಂದು ಹೇಳಿ, ನನ್ನ ಕೊಠಡಿಯೊಳಕ್ಕೆ ಹೊರಟುಹೋದೆ. ಆಮೇಲೆ ಪೋಲೀಸು ಇನ್ಸ್ಪೆಕ್ಟರನ್ನು ಕರೆಸಿ ಅವರ ಸಂಗಡ ಆಲೋಚನೆ ಮಾಡಿದೆ. ಮೈಸೂರಿಂದ ರಿಜರ್ವ್ ಪೋಲೀಸಿನವರನ್ನು ಕರೆಸಬೇಕೆಂತಲೂ, ನಮ್ಮ ತಾಲ್ಲೂಕಿನ ಸ್ಟೇಷನ್‌ಗಳಿಂದ ಆಯುಧಪಾಣಿಗಳಾದ

ಕಾನ್‌ಸ್ಟೇಬಲ್‌ಗಳನ್ನು ಬರಮಾಡಿಕೊಂಡು, ಅವರನ್ನು ಮೆರವಣಿಗೆಯ ರಕ್ಷಣೆಗೆ ನೇಮಿಸಬೇಕೆಂತಲೂ ಸಲಹೆ ಬಂತು. ನನಗೆ ಇದು ಒಪ್ಪಲಿಲ್ಲ. ನಮ್ಮ ತಾಲ್ಲೂಕಿನ ಒಂದು ಗ್ರಾಮದ ವಿಷಯವನ್ನು ಒಂದು ಯುದ್ಧ ಪ್ರಸಂಗವನ್ನಾಗಿ ಮಾಡಿಕೊಂಡು – ಇದು ನಮ್ಮಿಂದ ನಿರ್ವಹಿಸಲು ಅಸಾಧ್ಯ, ನಿಮ್ಮ ಸಹಾಯ ಬೇಕು – ಎಂದು ಕೇಳುವುದಕ್ಕೆ ಸಾಕಾದಷ್ಟು ಕಾರಣ ಕಾಣಲಿಲ್ಲ. ಅಲ್ಲದೆ ನಾವು ಹೆದರಿದೆವೆಂಬ ಭಾವ ತೋರಿದರೆ– ಈ ಸಂದರ್ಭ ಹಾಗಿರಲಿ, ಮುಂದಿನ ಕಾಲದಲ್ಲೂ ನಮ್ಮ ದರ್ಪಕ್ಕೆ ಹಾನಿ, ನಮ್ಮ ತಾಲ್ಲೂಕಿನವರಿಗೆ ನಮ್ಮಲ್ಲಿರತಕ್ಕ ಪ್ರೀತಿ ಗೌರವಗಳಿಗೂ ಕುಂದಕ. ಇನ್ನೊಂದು ಯೋಚನೆ. ನಮ್ಮ ಹೆದರಿಕೆಯ ಪ್ರದರ್ಶನ ನಾವು ಶಂಕಿಸುವ ಅನಿಷ್ಟಕ್ಕೇ ಕಾರಣವಾಗಬಹುದು. ರಿಜರ್ವ್ ಪೋಲೀಸಿನವರನ್ನು ನೋಡಿದಮಾತ್ರಕ್ಕೇ ಘಾಬರಿಗೊಂಡು ಓಡುವ ಜನಗಳಲ್ಲ, ನಮ್ಮ ರೈತರು. ಉದ್ರೇಕಗೊಂಡು ಎದುರುಬೀಳುವವರು. ಅವರನ್ನು ಪೋಲೀಸು ಬಂದೂಕಗಳ ಗುಂಡಿಗೆ ಗುರಿ ಮಾಡುವುದೆಂದರೆ ನನಗೆ ಪ್ರಾಣಹೋದ ಹಾಗೆ. ನಮ್ಮ ತಾಲ್ಲೂಕು ಪೋಲೀಸಿನವರೆಂದರೆ ಏಳೆಂಟು ಜನ ಸಿಕ್ಕಬಹುದು. ನಮ್ಮಲ್ಲಿದ್ದುದು ನಾಲ್ಕೈದು ಬಂದೂಕುಗಳು, ಎಂಟು ಹತ್ತು ಹಳೇಕಾಗದದ ತೋಟಾಗಳು. ಇವುಗಳ ಪ್ರದರ್ಶನ ದುರ್ಬಲತೆಯ ಪ್ರದರ್ಶನ. ಅದೂ ಅಲ್ಲದೆ ಯಾವ ಏರ್ಪಾಡಿಗೂ ಕಾಲ ಸಾಲದು. ವಿಳಂಬ ಮಾಡಿದರೆ ವೈಷಮ್ಯಗಳು ಉದ್ರೇಕಗೊಳ್ಳುವ ಸಂಭವವೂ ಉಂಟು.

ಮಾರನೆಯ ಬೆಳಗ್ಗೆ ನಾನು ಮಾಮೂಲಿನಂತೆ ಕುದುರೆಯನ್ನು ಹತ್ತಿ ಆಸುಪಾಸು ಗ್ರಾಮಗಳ ಗಸ್ತಿಗಾಗಿ ಹೊರಟೆ. ಊರಿನಿಂದ ಎರಡು ಮೂರು ಮೈಲುಗಳ ಫಾಸಲೆಯಲ್ಲಿ ದಾಯರೆ ಮುಸಲ್ಮಾನ್ ಸಾಹುಕಾರರು ಸುಲ್ತಾನ್ ಸಾಹೇಬರೆಂಬುವರು ಸಿಕ್ಕರು. ಅವರು ನನಗಾಗಿಯೇ ಕಾದಿರುವುದಾಗಿ ಹೇಳಿದರು. ನಾನು ಆ ಕಡೆಗೆ ಹೋಗುತ್ತೇನೆಂದು ಹೇಗೆ ಗೊತ್ತೆಂದು ಕೇಳಿದ್ದಕ್ಕೆ ಬಹುಶಃ ತುರಗನೂರು ಕಡೆ ಬರಬಹುದೆಂದು ತುರಗನೂರು ಶಾನುಭೋಗರು ಹೇಳಿದರೆಂದರು. ಅವರಿಗೆ ಹೇಗೆ ಗೊತ್ತಾಯಿತೋ ಕಾಣೆ. ನಾನು ಹೋಗುತ್ತಿದ್ದದ್ದಂತೂ

ಆ ಕಡೆಗೇ. ‘ ದಾರಿ ಕಾದು ಮಾತನಾಡುವ ಅವಶ್ಯಕತೆ ಏನಿತ್ತು ? ಬಂಗಲೆಯಲ್ಲೇ ಕಾಣಬಹುದಿತ್ತಲ್ಲ, – ಎಂದೆ.

“ ಬಂಗಲೆಯ ಹತ್ತಿರ, ಬಂದವರು ಹೋದವರನ್ನು ನೋಡಲು ಜನಗಳು ಹೊಂಚುಕಾಯುತ್ತಿರುತ್ತಾರೆ. ಗುಟ್ಟಾಗಿ ಮಾತನಾಡಬೇಕಿತ್ತು” ಎಂದರು.

ನಾನು ಕುದುರೆಯಿಂದ ಇಳಿದು, ಅವರ ಸಂಗಡ ಅಲ್ಲಿದ್ದ ಒಂದು ಸಣ್ಣ ಪಣಬಿನ ಕೈಪಿಡಿಮೇಲೆ ಕುಳಿತು, ವಿಷಯವೇನೆಂದು ಕೇಳಿದೆ.

“ ಇವತ್ತು ಬೆಸ್ತರ ಮೆರವಣಿಗೆ ಉಸ್ತುವಾರಿಗೆ ಯಾರನ್ನು ನೇಮಿಸುತ್ತೀರಿ ?” ಎಂದು ಕೇಳಿದರು.

“ ಒಹೋ, ಆ ಮಾತಿಗೇ ? ನಾನೇ ಹೋಗುತ್ತೇನೆ.”

“ ಗಲಾಟೆಯಾಗಬಹುದು. ಇನ್‌ಸ್ಪೆಕ್ಟರನ್ನು ನೇಮಿಸಿದರೆ ಉತ್ತಮ ”

“ ಅವರಿಗೆ ಗಲಾಟೆಯಾದರೆ ಪರವಾ ಇಲ್ಲವೇ, ಸಾಹೇಬರೇ ? ಇದು ಎಲ್ಲಿ ಮಾತು !”

“ ಮೈಸೂರಿಂದ ಪೋಲೀಸು ಫೌಸು ಕರೆಸಬಾರದಿತ್ತೆ ?”

“ ನಾನು ಕರೆಸಲು ಏರ್ಪಾಡು ಮಾಡಿಲ್ಲವೆಂದು ನಿಮಗೇನು ಗೊತ್ತು ? ಅಲ್ಲದೆ, ಊರಿನಲ್ಲಿ ಎಲ್ಲರೂ ರಾಂಗು ಕೋರರೇನೇ ಇರೋದು ? ನಿಮ್ಮಂಥ ಸಂಭಾವಿತರೂ, ದೊಡ್ಡಮನುಷ್ಯರೂ ಇಲ್ಲವೇ? ಬನ್ನೂರೇನು, ದುಷ್ಕರ್ಮ ಪಾಳ್ಯಪಟ್ಟೇ ?”

“ ಅದೇ ನಾನು ಹೇಳಬೇಕೆಂದು ಕಾದಿದ್ದದ್ದು ಜನಾಬ್. ತಾವು ಪೋಲೀಸಿನವರನ್ನು ಕರೆಸುವುದಕ್ಕೆ, ಅಥವ ಶಿಪಾಯಿಗಳನ್ನು ಕರೆಸುವುದಕ್ಕೆ, ಕೂಡ ಖಾವಂದರಾಗಿದ್ದೀರಿ. ಆದರೆ, ಹಾಗೆ ಮಾಡಿದ್ರೇ ಆದರೆ ನಮ್ಮೂರಿಗೇ ಪುಂಡುಕೊಂಪೆಯೆಂಬ ಬದ್ನಾಮಿ ಬರುತ್ತೆ. ಆ ಬೀದಿಯಲ್ಲಿ ನಾವೂ ಅನೇಕ ಘರಾನ್ದಾರ್ರಿದ್ದೀವಿ. ನಮ್ಮದೂ ಜವಾಬ್ದಾರೀ ಇದೆ, ಅಲ್ಲ ? ನಮ್ಮ ಮೇಲೂ ವಜನ್ ಹೊರೆಸಿ. ನಮ್ಮ ಮೇಲೆ ಐತಲ್ಲ– ನಮ್ಮ ಜನಕ್ಕೆ ಬಹಳ ಪಿರೀತಿ. ನಿಮ್ಮ ಹಿಂದೆ ಬರೋಕೆ ತಯಾರಿದ್ದಾರೆ.”

ಈ ಮಾತು ನನ್ನ ಅಂತಃಕರಣವನ್ನು ಮುಟ್ಟಿ ನನ್ನ ಕಣ್ಣು ತೇವವಾಗುವಂತೆ ಮಾಡಿತು. ಆದರೆ ಇದನ್ನು ಮರೆಮಾಡಿ, ಸ್ವಲ್ಪ ನಕ್ಕು,

"ಗೌಡರದು, ನಾಯಕರದು, ಎರಡು ಪಾರ್ಟಿ ಸಾಲದೆ ನಾನು ಒಂದು ಸಾಬರದು ಮೂರನೇ ಪಾರ್ಟಿ ಕಟ್ಟಿ, ಅದಕ್ಕೆ ನಾನೇ ಲೀಡರ್ (ನಾಯಕ) ಆಗಲೇ ?" ಎಂದೆ.

"ಅಹಹ! ಎಂಥ ಮಸ್ಕರೀ ಮಾತು ಇದು! ನಾನು ಅಂಥ ಬೇಕೂಫನೇ, ಖಾವಿಂದ್ ? ನಾನು ಹೇಳೋದು ಇಷ್ಟೆ. ತಾವು ಮೆರವಣಿಗೆಯ ಬಂದೋಬಸ್ತಿಗೆ ಬಂದರೆ ತಮ್ಮ ಅಂಗರಕ್ಷಣೆಗೆ ನಾವಿರುತ್ತೇವೆ. ತಮ್ಮ ಹುಕ್ಕುಂನ ಉಸ್ತುವಾರಿ ಜವಾಬ್ದಾರಿ ನಮ್ಮದು."

ಅವರ ಕೈಯನ್ನು ನನ್ನ ಕೈಲಿ ಹಿಡಿದು,

"ಬಹಳ thanks (ವಂದನೆಗಳು) ಸಾಹೇಬರೇ. ಇದು ನಿಜವಾದ ಸ್ನೇಹ. ನಾನು ನಿಮ್ಮ ಪ್ರೀತಿಯನ್ನು ಎಂದಿಗೂ ಮರೆಯಲಾರೆ. ಆದರೆ, ಈ ಉಸ್ತುವಾರಿಯನ್ನು ಜಾರಿ ಮಾಡುವುದು ಹೇಗೆ? ನಾನು ನನ್ನ body guard (ಅಂಗರಕ್ಷಕರು) ಆಗಿ ಜನಗಳನ್ನು ನನ್ನ ಸಂಗಡ ಕರೆದುಕೊಂಡು ಹೋಗುವುದಿಲ್ಲ. ಚೆನ್ನಾಗಿರೋದಿಲ್ಲ. ನಮ್ಮ ಇನ್ಸ್‌ಪೆಕ್ಟರೊಬ್ಬರನ್ನು ಮಾತ್ರ ಕರೆದುಕೊಂಡು ಹೋಗಬೇಕೆಂದಿದ್ದೇನೆ"

"ಸರಿ, ಸರ್, ಹಾಗೇ ಮಾಡಿ. ನಮ್ಮೋರು ಹತ್ತಿಪ್ಪತ್ತು ಜನ ಮೆರವಣಿಗೆ ಗುಂಪಿನಲ್ಲಿ ತಮ್ಮ ಹತ್ತಿರದಲ್ಲೇ ಇರುತ್ತಾರೆ ಏನಾದರೂ ಗಲಭೆಯಾದರೆ, ತಾವು ಸೀಟಿ ಯೂದಿದರೆ, ಕೂಡ್ಲೆ ತಮ್ಮ ಕುಮ್ಮಕ್ಕಿಗೆ ಮುಂದೆ ಬರುತ್ತಾರೆ. ಅವರು ನಮ್ಮ ಗರಡಿ ಹುಡುಗರು. ಉಸ್ತಾದ್ ಖಲೀಫರಿಗೆ ಈ ಏರ್ಪಾಡೆಲ್ಲ ಸೇರಿದ್ದು."

ನಾನು ಖಲೀಫ ಪೈಲ್ವಾನರನ್ನು ಬಲ್ಲೆ. ಅವರು ಬೆಂಗಳೂರು ಪ್ರಸಿದ್ಧ ಪೈಲ್ವಾನ್ ಗೋಣಿಗರ ಸುಬ್ಬಣ್ಣನ (ನಾನು ಆತನ ಗರಡಿಗೇ ವಿದ್ಯಾರ್ಥಿಯಾಗಿ ಹೋಗುತ್ತಿದ್ದದ್ದು) ಸಂಗಡ ಕುಸ್ತಿಮಾಡಿ, ಸಮಜೋಡಿಯಾದ ಕೀರ್ತಿವಂತರು.

"ಸರಿ. ಆದರೆ ಇವರು ಲಾಠೀ, ಚೂರಿ, ವಗೈರೆ ಯಾವ ಆಯುಧವನ್ನೂ ತರಕೂಡದು. ಆದಕ್ಕೆ ನೀವು ಜವಾಬ್ದಾರರಾಗಬೇಕು."

"ಹುಕ್ಕುಂ. ಅದರ ಜವಾಬ್ದಾರಿ ನನ್ನ ತಲೇಮೇಲೆ."

ಅವರಿಗೆ ಪುನಃ ನನ್ನ ಧನ್ಯವಾದವನ್ನು ಹೇಳಿ ಆದರದಿಂದ shake hand ಕೊಟ್ಟು ಕುದುರೆಯನ್ನೇರಿ ನನ್ನ ದಾರಿ ಹಿಡಿದು ನಾನು ಹೋದೆ. ಆ ದಿವಸ ಒಕ್ಕಲಿಗರು ನನ್ನನ್ನು ನೋಡಬೇಕೆಂದು ಬಂಗಲೆಗೆ ಬಂದರು. ನೋಡಲಿಕ್ಕಾಗುವುದಿಲ್ಲವೆಂದು ಹೇಳಿಕಳುಹಿಸಿದೆ. ತೊರೆಯರ ಯಜಮಾನರು ಮದುವೆಯ ಮಂಟಪಕ್ಕೆ ತಾಂಬೂಲಕ್ಕೆ ಕರೆಯಲಿಕ್ಕೆ ಬಂದರು. "ಮೆರವಣಿಗೆಯ ವೇಳೆಗೆ ಬರುತ್ತೇನೆ ನಾನು ಬರುವ ವರೆಗೂ ಮೆರವಣಿಗೆ ಹೊರಡಕೂಡದು. ಅದಕ್ಕೆ ಮುಂಚೆ ಬರಲಿಕ್ಕಾಗುವುದಿಲ್ಲ" ಎಂದು ಹೇಳಿದೆ. ರಾತ್ರಿ ಎಂಟು ಘಂಟೆಯ ಹೊತ್ತಿಗೆ–ಮೆರವಣಿಗೆ ಸಿದ್ಧವಾಗಿದೆ, ದಯಮಾಡಿಸಬೇಕೆಂದು ಕರೆದರು. ಮೋಡ ಕವಿದುಕೊಂಡು, ಸಣ್ಣನಾಗಿ ಮಳೆ ಹನಿಯುತ್ತಿತ್ತು. ನಾನು ನನ್ನ ಪೋಷಾಕಿನ ಮೇಲೆ ಒಂದು ಮಂದವಾದ ಓವರ್ ಕೋಟನ್ನು ಹಾಕಿಕೊಂಡು, ಇನ್‌ಸ್ಪೆಕ್ಟರನ್ನೂ, ನನ್ನ ಆರ್ಡರ್ಲಿ ಮಾದನೆಂಬುವನನ್ನೂ ಕರೆದುಕೊಂಡು ಹೊರಟೆ. ಊರಿನ ತೊರಗೆರೆಯ ಬಾಗಿಲಿನಲ್ಲಿ ತೊರೆಯರು ಗುಂಪು ನಮ್ಮನ್ನು ಎದುರುಗೊಂಡಿತು. ಅವರ ಚಾವುಡಿಯ ಬಳಿಗೆ ಹೋದೆವು ಅಲ್ಲಿ ಮೆರವಣಿಗೆಗೆ ಎಲ್ಲವೂ ಅಣಿಮಾಡಿಕೊಂಡಿದ್ದರು. ಬಣ್ಣದ ಬಟ್ಟೆಗಳಿಂದಲೂ, ಶೇವಂತಿಗೆ ದಂಡೆಗಳಿಂದಲೂ, ಕಲ್ಕಿತುರಾಯಿಯಿಂದಲೂ ಅಲಂಕರಿಸಲ್ಪಟ್ಟಿದ್ದ ಒಂದು ವೃದ್ಧ ಕುದುರೆ, ಅದು ತನ್ನ ಯೌವನದ ಪುರಾತನ ಕಾಲದಲ್ಲಿ ಸವಾರ್ ಇಲಾಖೆಯ ತುತ್ತೂರಿಗಳನ್ನು ಕೇಳಿದ್ದಿರಬೇಕು ಈಗಲೂ ವಾದ್ಯ ಮತ್ತು ತಮಟೆಗಳ ರವಕ್ಕೆ ಕಿವಿ ನೆಟ್ಟನೆ ಮಾಡಿ ಕೆನೆಯುತ್ತಿತ್ತು. ಬ್ಯಾಂಡು, ತಮಟೆ, ಕೊಂಬು, ಢೋಲು ಮೊದಲಾದ ವಾದ್ಯಗಳಿದ್ದವು. ವಾದ್ಯಗಾರರು ಹರ್ಷರಸ ಮಾತ್ರದಿಂದೇ ಅಲ್ಲ, ಬೇರೇ ಜಾತಿ ರಸದಿಂದಲೂ ಭರಿತರಾಗಿ ಖುಷೀಮೇಲಿದ್ದರು. ಚಾವುಡಿಯಲ್ಲಿ ಮೆರವಣಿಗೆಗೆ ಸನ್ನದ್ಧನಾಗಿದ್ದ ಮದುವಣಿಗನನ್ನು ಅವನ ಸಮವಯಸ್ಸಿನ ಗೆಳೆಯರೂ, ನೆಂಟರೂ ಸೇರಿ ಕರೆದುಕೊಂಡು ಬಂದರು. ಪಂಜುಗಳು, ದೀವಟಿಗೆಗಳು, ಪೆಟ್ರೋಮ್ಯಾಕ್ಸ್ ದೀಪಗಳು ಹತ್ತಿಸಲ್ಪಟ್ಟವು. ಮದುವೆ ಗಂಡು ನನಗೂ ಇನ್‌ಸ್ಪೆಕ್ಟರಿಗೂ ನಮಸ್ಕರಿಸಿದ.

ನಾವು ಆಶೀರ್ವದಿಸಿ, ಮೆರವಣಿಗೆ ಹೊರಡಲು ಸೂಚನೆ ಕೊಟ್ಟೆವು. ಗಂಡಿನವರು ಹೆಣ್ಣಿನವರು ಸೇರಿ ಸುಮಾರು ಸಾವಿರ ಜನದ ಗುಂಪು. ಆ ಗುಂಪಿನಲ್ಲಿ ಸುಲ್ತಾನ್ ಸಾಹೇಬರು ಹೇಳಿದ್ದ ತಾಲಿಂ ಹುಡುಗರೂ ಇದ್ದಿರಬೇಕು, ಆದರೆ ನನ್ನ ಕಣ್ಣಿಗೆ ಬೀಳಲಿಲ್ಲ. ತರಹಾವಾರಿ ರಂಗಿನ ವಸ್ತ್ರಗಳನ್ನು ಧರಿಸಿರುವ ಗುಂಪು; ಎಲ್ಲರೂ ಸಂತೋಷದಿಂದ ತುಂಬಿದ ನಗೆಮೊಗದವರು; ಲೈಸೆನ್ಸುಗಳ ವ್ಯವಹಾರದಲ್ಲಿ ಗೆದ್ದು ತಮ್ಮ ಜಾತಿಯ ಗೌರವವನ್ನು ಉಳಿಸಿಕೊಂಡೆವೆಂಬ ಜಂಭವಿದ್ದರೂ, ಈಗ ಅದು ಜಗಳಕ್ಕೆ ಕಾಲುಕರೆಯುವ ಜಂಭವಲ್ಲ; ಉತ್ಸಾಹ ರೂಪವನ್ನು ತಾಳಿದಂತೆ ನನಗೆ ಕಂಡಿತು. ಅಲ್ಲದೆ ತಮ್ಮ ಮೆರವಣಿಗೆಗೆ ಅಮಲ್ದಾರರೇ ಕುಮ್ಮಕ್ಕಾಗಿ ಬಂದಿದ್ದಾರೆಂಬ ಹಿಗ್ಗಿಕೆ – ಮತ್ತೆ, ಯಾರಲ್ಲೂ ಆಯುಧ – ಕೊನೆಗೆ ದಪ್ಪನಾದ ಕೋಲೂ – ಇಲ್ಲ; ಇದರ ವಿಚಾರದಲ್ಲಿ ಮೊದಲೇ ಕಡ್ಡಾಯವಾಗಿ ಎಚ್ಚರಿಸಿದ್ದೆವು.

ಮದುವಣಿಗನನ್ನು ಅವನ ಸ್ನೇಹಿತರು ಎತ್ತಿ ಕುದುರೆಯ ಮೇಲೆ ಕೂರಿಸಿದರು. ಕಿನಕಾಬಿನ ನಿಲುವಂಗಿ, ದೊಡ್ಡ ಜರೀಪೇಟ, ಅದರ ಮೇಲಿನ ಕೆಂಪು ಹಸರು ವರ್ತಿ ಹಾಕಿ ರತ್ನಗಳಿಂದ ಕೆತ್ತಿರುವಂತೆ ದೀವಟಿಗೆಗಳ ಬೆಳಕಿನಲ್ಲಿ ಹೊಳೆಯುತ್ತಿದ್ದ ಭಾಷಿಂಗ, ಪೇಟಾ ಮೇಲಿನ ಕಲ್ಕಿ ತುರಾಯಿ, ಈ ನೇಪಥ್ಯವನ್ನೇ ಮುಚ್ಚುವಂತೆ ಹೇರಳವಾಗಿ, ಆಳನ್ನೇ ಜಗ್ಗಿಸುವಂತೆ ಘನವಾಗಿರುವ ನಾನಾ ಬಗೆಯ ಬಣ್ಣಗಳ ಹೂಹಾರಗಳು – ಇವುಗಳಿಂದ ಅಲಂಕೃತನಾದ ಆ ಪ್ರಾಯದ ಗಂಡು ಕುದುರೆಯ ಮೇಲೆ ಕುಳಿತದ್ದನ್ನು ನೋಡಿದ ಅವನ ಜನರ ಸಂತೋಷ ಸಹಜವಾಗೇ ಕಂಡಿತು. ಜಯಘೋಷಗಳೊಡನೆ ಮೆರವಣಿಗೆ ಹೊರಟಿತು. ಆ ಮೆರವಣಿಗೆಯ ಮುಖದಲ್ಲೇ – ಅದರ ನೇತೃತ್ವವನ್ನು ವಹಿಸಿಕೊಂಡಿರುವಂತೆ – ನಾನೂ, ನಮ್ಮ ಇನ್ಸ್‌ಪೆಕ್ಟರೂ ನಡೆದೆವು. ಮೆರವಣಿಗೆ ಪ್ರಾರಂಭವಾದಾಗ ನಮ್ಮ ಕತ್ತುಗಳಿಗೂ ದಪ್ಪನಾದ ದಂಡೇ ಹಾರಗಳನ್ನು ಹಾಕಿದ್ದರು. ದೀವಟಿಗೆಗಳ ಬೆಳಕಿನಲ್ಲಿ ನಮ್ಮ ಠೀವಿ ಜೋರಾಗೇ ಇದ್ದಿರಬೇಕು; ಆದರೆ ನನ್ನ ಮನಸ್ಸಿನಲ್ಲಿ ಕ್ಷಣ

ಕ್ಷಣಕ್ಕೂ ಕಳವಳ ಬೆಳೆಯುತ್ತಲೇ ಇತ್ತು. ಬೆಸ್ತರ ಕೇರಿಯನ್ನು ಕಳೆದು ಊರಿನ ರಾಜಬೀದಿಗೆ ಬಂದೆವು.

ಅಲ್ಲಿ ಇರುವವು ಬಹು ಭಾಗ ಒಕ್ಕಲಿಗರ ಮನೆಗಳು, ಕೆಲವು ಮುಸಲ್ಮಾನರ, ಮತ್ತು ಇತರರ ಮನೆಗಳೂ ಇವೆ ಎಂದು ಮೊಧಲೇ ಹೇಳಿದ್ದೇನಲ್ಲವೇ? ಅಲ್ಲಿಗೆ ಬಂದಾಗ ನನ್ನ ಚಿಂತೆ ಈಡೇರಿತು. ಅನೇಕ ಭಯದಾಯಕ ಸನ್ನಿವೇಶಗಳ ಅನುಭವ ನನಗಿದೆ– ನೀರಿನಿಂದ, ಕಳ್ಳರಿಂದ, ಕ್ರೂರ ಮೃಗಗಳಿಂದ ಬಂದ ಪ್ರಾಣಭಯ ನನಗೆ ಜ್ಞಾಪಕವಿದೆ– ಆದರೆ ಅವೊತ್ತು ನನ್ನನ್ನು ಕುಗ್ಗಿಸಿ ಖಿದ್ಯಸಿದ ಜವಾಬ್ದಾರಿಯ ಹೊರೆಯನ್ನು, ನಡುಗಿಸಿದ ಭಯವನ್ನು, ನಾನು ಯಾವಾಗಲೂ ಅನುಭವಿಸಿರಲಿಲ್ಲ. ಎಂಥ ಭಯ? ನನಗೇನಾದೀತೋ? ಎಂಬ ಭಯವೇ? ಛೀ! ಅದು ಬಹಳ ಸ್ವಲ್ಪ ವಿಷಯ. ಭಯದ ರೂಪು ಕೇಳಿ; ನಾನು ರಿಜರ್ವ್ ಪೋಲೀಸನ್ನು ಕರೆಸಲಿಲ್ಲ– ಮತ್ಯಾವ ಮುಂಜಾಗರೂಕತೆಯನ್ನೂ ಕಲ್ಪಿಸಿಕೊಳ್ಳಲಿಲ್ಲ. ನನ್ನ ಬೇಜವಾಬ್ದಾರಿ ಅಹಂಕಾರದಿಂದ ಸಾವಿರಾರು ಮಂದಿ (ನನ್ನ ಮೇಲಿನ ಭರವಸೆಯಿಂದ ನಿರಾಯುಧರಾಗಿ ಬಂದಿರುವ) ತೊರೆಯರಿಗೂ ಸಾವಿರಾರು ಮಂದಿ ಕ್ರೋಧ ಮೂರ್ಛಿತರಾದ ಒಕ್ಕಲಿಗರಿಗೂ ರಕ್ತಪಾತಯುಕ್ತ ದೊಂಬಿಯಾದರೆ ಏನು ಗತಿ? ನನ್ನ ತಪ್ಪಲ್ಲವೇ? ಸುಲ್ತಾನಸಾಹೇಬರು ನನ್ನ ಕುಮ್ಮಕ್ಕಿಗೆಂದು ಏರ್ಪಡಿಸುತ್ತೇವೆಂದು ಹೇಳಿದ ಮುಸಲ್ಮಾನ ಗುಂಪಿಗೂ ಒಕ್ಕಲಿಗರಿಗೂ ಕೈಕೈ ಹತ್ತಿ, ಅದು ಕೋಮುವಾರು ಕದನವಾಗಿ, ತಲೆಗಳು ಉರಳಿದರೆ, ಅದೂ ನನ್ನ ಜವಾಬ್ದಾರಿಯಲ್ಲವೆ? ನಾನು ಯಾಕೆ ಇಂಥ fool-hardy– ಅವಿವೇಕ– ಸಾಹಸಕ್ಕೆ ಉದ್ಯುಕ್ತನಾದೆ? ದೇವರಿದ್ದಾನೆ ಕಾಪಾಡೋಕೆ, ಇಷ್ಟರಮೇಲೆ ಮಿತಿಮೀರಿ ಬಂದು ಅನಾಹುತವಾದರೆ, ನನ್ನ ಜೇಬಿನಲ್ಲಿ ರಿವಾಲ್ವರಿದೆ, ನನ್ನ ಮಾನವನ್ನುಳಿಸಲಿಕ್ಕೆ. ಹೀಗೆಂದು ಚಿಂತಿಸುತ್ತಿರುವಲ್ಲಿ ರಾಜಬೀದಿಗೆ ಬಂದೆವು. ಬೀದಿಯಲ್ಲಿ ಯಾರ ಸಂಚಾರವೂ ಇರಲಿಲ್ಲ, ಆದರೆ ಎರಡು ಪಕ್ಕದ ಜಗಲಿಗಳ ಮೇಲೂ ಒಕ್ಕಲಿಗರ ಗುಂಪುಗಳು ದಟ್ಟವಾಗಿ ನೆರದಿದ್ದವು. ಅವರ ಮುಖದಲ್ಲಿ – ಕೋಪವಲ್ಲ, ಆಕ್ರೋಶವಲ್ಲ, ಒಂದು ತರಹದ ಒತ್ತಿ ಹಿಡಿದಿರುವ ಮೂಕ ಅವೈತ್ರಿ-

ಕ್ರೋಧ ಬೆಂಕಿಯಾದರೆ, ಆ ಅಮೈತ್ರಿಯನ್ನು ಹೊಗೆಗೆ ಹೋಲಿಸ ಬಹುದು; ಇಂಗ್ಲಿಷಿನಲ್ಲಿ ಅದಕ್ಕೆ sullenness ಎನ್ನುತ್ತಾರೆ – ಕಾಣು ತ್ತಿತ್ತು. ನನಗೆ ತೋರಿತು – ಈ ಜನ ತಾವಾಗೇ ಮೇಲೆ ಬೀಳುವುದಿಲ್ಲ, ಆದರೆ ಸ್ವಲ್ಪನೆವ ಸಿಕ್ಕರೆ ಸಾಕು ಹೊಡೆದಾಟಕ್ಕೆ ಕಾದಿದ್ದಾರೆ – ಅಂತ. ಅಷ್ಟರಲ್ಲಿ ಸುಲ್ತಾನ್ ಸಾಹೇಬರು, ತಮ್ಮ ಮನೆಯೊಳಗಿನಿಂದ ಅಂತ ಕಾಣುತ್ತೆ, ಒಂದು ತಟ್ಟೆಯಲ್ಲಿ ಹಣ್ಣು ಹಾರಗಳನ್ನು ತಂದು, ಹಾರ ವನ್ನು ನನ್ನ ಕತ್ತಿಗೆ ಹಾಕಿದರು. ಯಾಕೆ ಹೀಗೆ ಮಾಡಿದರೋ ನನಗೆ ಗೊತ್ತಿಲ್ಲ – ಅವರು ಆಮೇಲೆ ನನಗೆ ಹೇಳಿದರು – ಸುಬೇದಾರರು ನಮಗೆ ಬಹಳ ಬೇಕಾದವರು, ಹುಷಾರು, ಎಂದು ಒಕ್ಕಲಿಗರಿಗೆ ಎಚ್ಚರಿಸೋಕೆ– ಎಂದು. ಅದು ಹ್ಯಾಗಾದರೂ ಇರಲಿ, ದೇವರ ಕೃಪೆಯಲ್ಲಿ ಇದರ ಪರಿಣಾಮ ಕೂಡಲೆ ಸಮಸ್ಯೆಯನ್ನು ಪರಿಹರಿಸಿತು.

ಒಬ್ಬ ರೈತರ ಹುಡುಗ ಘೊಳ್ಳೆಂತ ನಕ್ಕು

"ನೋಡಿದ್ಯ — ಸುಬೇದಾರರದೇ ಮೆರವಣಿಗೆ ಕಣಾ, ಅವರೇ ಮದವಣಿಗ!"

ಎಂದು ಘಟ್ಟಿಯಾಗಿ ಕೂಗಿದ. ಮತ್ತೊಬ್ಬ – "ಹಂಗಾದರೆ ಎಣ್ಣೆಲ್ಲ್ಯೈ? ಗೋಷಾನಾ?" ಅಂದ. ರಸ್ತೆಯ ಉಭಯ ಪಾರ್ಶ್ವ ಗಳಿಂದಲೂ ಅಟ್ಟಹಾಸದ ಧ್ವನಿ, ಚಪ್ಪಾಳೆ ಸದ್ದು ಎದ್ದವು. ಇವು ಗಳಲ್ಲಿ ಗೇಲಿ ಹೊರತು ಕೋಪವಿರಲಿಲ್ಲ. ನಾನೂ ನಕ್ಕು ಅವರ ಗೇಲಿಗೆ ಮೆಚ್ಚಿ, ಅವರ ನಕಲಿಯಲ್ಲಿ ಭಾಗವಹಿಸುವನಂತೆ ತೋರ್ಪಡಿಸಿದೆ. ಕಾಲಮೇಘದಂತೆ ಕಟ್ಟಿದ್ದ ಅಪಘಾತದ ಭೀತಿಯು ಹಾಸ್ಯದ ಬಿರುಗಾಳಿ ಯಲ್ಲಿ ತೇಲಿಹೋಯಿತು ನನ್ನ ಸಂಗಡ ಸುಲ್ತಾನ್ ಸಾಹೇಬರೂ ಕೆಲವು ದೂರ ಬಂದರು. ಬೆಸ್ತರ ಮೆರವಣಿಗೆ ಆತಂಕವಿಲ್ಲದೆ ಉತ್ಸಾಹದಿಂದ ನಡೆಯಿತು. ಅದು ಸ್ವಸ್ಥಾನಕ್ಕೆ ಮರಳಿ ಸೇರಿದ ಮೇಲೆ ನಾನೂ ಇನ್ಸ್ಪೆ ಕ್ಟರೂ ನಮ್ಮ ನಮ್ಮ ಬಿಡಾರಗಳಿಗೆ ಬಂದೆವು. ಇನ್ಸ್ಪೆಕ್ಟರು ದಾರಿಯಲ್ಲಿ,

"ತಮ್ಮ ಮೊಖಪುಣ್ಯ ದೊಡ್ಡದು Sir" ಎಂದರು.

"ದೇವರು ದೊಡ್ಡವನು" ಎಂದೆ. ಮುಸಲ್ಮಾನರು ಈ ಸಂಬಂ ಧದಲ್ಲಿ ನಮಗೆ ಒತ್ತಾಸೆ ನೀಡಿದ್ದು ಕೇವಲ ನನ್ನ ಮೇಲಿದ್ದ ಪ್ರೀತಿಗೋ

ಸ್ಕರವೇ ಎಂದು ನಾನು ಹಿಗ್ಗುವಷ್ಟು ದಡ್ಡನಲ್ಲ – ಸರ್ಕಾರದ ಮೇಲಿನ ಭಕ್ತಿಯಿಂದೆಂತಲೂ ಹೇಳಲಾರೆ. ತಾವಿರುವ ರಾಜಬೀದಿಯಲ್ಲಿ ಬೇರೆ ಕೋಮಿನವರು ಮೆರವಣಿಗೆಗಳನ್ನು ತರಕೂಡದೆಂಬ ವಕ್ಕಲಿಗರ ಹಟ ಗೆದ್ದರೆ, ಮುಂದೆ ಮುಸಲ್ಮಾನರವರ ಉತ್ಸವಗಳಿಗೂ ತೊಂದರೆ ಬರಬಹು ದೆಂಬ ಶಂಕೆಯೂ ಇವರ ಮನಸ್ಸಿನಲ್ಲಿದ್ದಿರಬೇಕು. ಹೀಗೆ ಹೇಳಿದೆನೆಂ ದರೆ, ಇವರಿಗೆ ನನ್ನ ಮೇಲೆ ವಿಶ್ವಾಸವೇ ಆಗಲಿ, ಸರ್ಕಾರದಲ್ಲಿ ಭಕ್ತಿಯೇ ಆಗಲಿ, ಇರಲಿಲ್ಲವೆಂದಲ್ಲ. ನನಗೂ ಆ ಕೋಮಿನವರಲ್ಲಿ ಅನೇಕರು ಬಹಳ ಬೇಕಾದವರಿದ್ದರು ; ಅವರಿಂದ ಸರ್ಕಾರದ ಕೆಲಸಗಳಲ್ಲಿ ಬಹಳ ವಾಗಿ ಸಹಕಾರವನ್ನೂ ಪಡೆದಿದ್ದೇನೆ.

ಸ್ಪಾರ್ಕ್ಸ್ (Sparkes) ಸಾಹೇಬರು ಯಡತೊರೆ ತಾಲ್ಲೂಕಿನ ಛಾರ್ಜಿನಲ್ಲಿ ಅಮಲ್ದಾರನು ಎದುರಿಸಬೇಕಾದ ತೊಂದರೆಗಳನ್ನು ನನಗೆ ಹೇಳಿ, ಸಬ್ ಡಿವಿಜನ್ ಆಫೀಸರಿಗೆ ನನ್ನ ಕೆಲಸದಲ್ಲಿ ಕೈಹಾಕಿ ಹದಗೆಡಿಸ ದಂತೆ ಸೂಚಿಸುವುದಾಗಿ ಧೈರ್ಯ ಕೊಟ್ಟರೆಂದು ಮೊದಲೇ ಬರೆದಿದ್ದೇನೆ. ಡೆಪ್ಯುಟಿ ಕಮಿಷನ್ನರಿಗೆ ಅಮಲ್ದಾರರಲ್ಲಿ ಅಭಿಮಾನವೂ ನಂಬಿಕೆಯೂ ಇದ್ದರೆ, ಸಬ್‌ಡಿವಿಜನ್ ಆಫೀಸರು ತಾಲ್ಲೂಕಿನ ಆಡಳಿತದಲ್ಲಿ ಹೆಚ್ಚಾಗಿ ಪ್ರವೇಶಿಸಲು ಆಗುತ್ತಿರಲಿಲ್ಲ. ಡೆಪ್ಯುಟಿ ಕಮಿಷನ್ನರುಗಳ ಅನುಗ್ರ ಹಕ್ಕೆ ಪಾತ್ರರಾದ ಅಮಲ್ದಾರರುಗಳು ಕೆಲವರು ತಮ್ಮ ಸಮೀಪ ಮೇಲ್ಪಟ್ಟ ಅಧಿಕಾರಿಗಳಾದ ಸಬ್‌ಡಿವಿಜನ್ ಆಫಿಸರುಗಳನ್ನು ಅಸಡ್ಡೆ ಮಾಡಿರುವುದನ್ನು ನಾನು ಕೇಳಿದ್ದೆ – ನೋಡಿಯೂ ಇದ್ದೆ ; ಹೀಗೆ ಮಾಡು ವುದು ಹೀನ ಆಚರಣೆ ಎಂದು ನನ್ನ ಮತವಾಗಿತ್ತು. ನನ್ನ ಸಬ್‌ಡಿವಿ ಜನ್ ಆಫೀಸರು ದಳವಾಯ ಮನೆತನದ ಚಿಕ್ಕದೇವರಾಜೇ ಅರಸರೆಂಬ ದೊಡ್ಡ ಮನುಷ್ಯರು. ಅವರು ಸ್ವಭಾವತಃ ಒಳ್ಳೆಯವರು, ತಮ್ಮ ವಂಶಕ್ಕೆ ಸಹಜವಾದ ಗಾಂಭೀರ್ಯ, ಸೌಜನ್ಯಗಳು ಅವರಲ್ಲಿದ್ದವು. ಆದರೆ ತಮ್ಮ ಅಧಿಕಾರ ತಮ್ಮ ಘನತೆಗೆ ತಕ್ಕುದಲ್ಲವೆಂಬ ಭಾವನೆಯಿಂ ದಲೋ, ಅಥವ ಸ್ವಾಭಾವಿಕ ಧೀಮಾಯಿ ಇಂದಲೋ, ಅವರು ಕೆಲಸ ವನ್ನು ಹೊತ್ತು ಮುತವರ್ಜಿ ತೋರಿಸುತ್ತಿರಲಿಲ್ಲ. ನಿಯಮದಂತೆ ಸರ್ಕೀಟು ನಿರ್ವಹಿಸುತ್ತಿದ್ದರು. ಅವರ ಜೊತೆಗೆ ಅವರ ಮನೆವಾರ್ತೆಯೋ,

ಸ್ನೇಹಿತರೋ, ಅಂತು ಅವರ ಆಜ್ಞಾಧಾರಕ ಆಪ್ತರಾದ ಒಬ್ಬ ಎಡ ಪ್ರಾಯದ ಶಿವಾಚಾರದವರು ಯಾವಾಗಲೂ ಕ್ಯಾಂಪಿಗೆ ಬರುತ್ತಿದ್ದರು. ಇತರರೂ ಒಬ್ಬಿಬ್ಬರು ಇರುತ್ತಿದ್ದುದೂ ಉಂಟು. ಕ್ಯಾಂಪಿನಲ್ಲಿ ಒಬ್ಬಿಬ್ಬ ಸಬ್‌ಡಿವಿಜನ್ ಗುಮಾಸ್ತೆಗಳೂ, ಊಳಿಗದವರೂ ಇರುತ್ತಿದ್ದರು. ಕ್ಯಾಂಪಿನಲ್ಲಿ ಅಷ್ಟೇನೂ ಕೆಲಸ ಜರುಗದಿದ್ದರೂ, ವಿನೋದವಾಗಿ ಕಾಲ ಸಾಗಿಹೋಗುತ್ತಿತ್ತು. ಅಮಲ್ದಾರರು ಸಬ್‌ಡಿವಿಜನ್ ಆಫೀಸರು ತಮ್ಮ ತಾಲ್ಲೂಕಿನಲ್ಲಿ ಸಂಚಾರ ಮಾಡುವಾಗ ತಾವೂ ಅವರ ಸಂಗಡ ಇರುವುದು ಸಂಪ್ರದಾಯ. ಈ ಸಂಚಾರಗಳು, ಉಳಿದ ಕಾಲದಲ್ಲಿ ದಿನಕ್ಕೆ ಹನ್ನೆರಡು ಘಂಟೆಗಳ ಕೆಲಸ ದುಡಿಯುತ್ತಿದ್ದ ಅಮಲ್ದಾರರುಗಳಿಗೆ ಕೇವಲ ವಿರಾಮಕಾಲ–ಪಿಕ್‌ನಿಕ್. ನಮ್ಮ ಸಬ್‌ಡಿವಿಜನ್ ಆಫೀಸರಿಗೆ ನನ್ನ ಮೇಲೆ ಬಹಳ ಅಭಿಮಾನ; ಅಲ್ಲದೆ, ಧೂರ್ತರೆಂದು ಹೆಸರುವಾಸಿಯಾದ ಡೆಪ್ಯೂಟಿ ಕಮಿಷನ್ನರ ವಿಶ್ವಾಸಕ್ಕೆ ಪಾತ್ರನಾದ ಅಮಲ್ದಾರನಿಗೆ ಕಿರುಕುಳ ಕೊಡುವುದು ಲೌಕಿಕವಲ್ಲವೆಂಬದೂ ಇದ್ದಿರಬಹುದು. ಅವರಿಗೆ ನನ್ನ ಮೇಲೆ ಅಭಿಮಾನವಿದ್ದರೂ, ನನಗೆ ಅವರಲ್ಲಿ ಗೌರವ ವಿದ್ದರೂ–ಯಾವ ಕಾರಣದಿಂದಲೋ ಕಾಣೆ; ಸ್ಥಾನ ದೋಷದಿಂದಿರಬಹುದು–ನನಗೆ ಅವರಿಗೆ ಒಂದೆರಡು ಸಲ ಸ್ವಲ್ಪ ಘರ್ಷಣೆಯುಂಟಾಯಿತು. ಸ್ಥಾನ ದೋಷವೇನೆಂತೀರೋ? ಅಮಲ್ದಾರರು ಸಬ್‌ಡಿವಿಜನ್ ಆಫೀಸರ ತಾಬೆಯ ಹುದ್ದೇದಾರರೇನೋ ಸರಿ; ಆದರೆ ಸಬ್ ಡಿವಿಜನ್ ಆಫೀಸರಿಗೆ ಅಮಲ್ದಾರರ ಮೇಲೆ ವಾಸ್ತವ ಅಧಿಕಾರವಿರಲಿಲ್ಲ; ಅವರಿಬ್ಬರಿಗೂ ಅಂತರವೂ ಅಷ್ಟೇನು ಇರಲಿಲ್ಲ. ನಿಜವಾದ ಅಧಿಕಾರ–ಆಜ್ಞಾಶಕ್ತಿ–ಇದ್ದದ್ದು ತಾಲ್ಲೂಕಿನಲ್ಲಿ ಅಮಲ್ದಾರರಲ್ಲಿ, ಡಿಸ್ಟ್ರಿಕ್ಟಿನಲ್ಲಿ ಡೆಪ್ಯುಟಿ ಕಮಿಷನ್ನರಲ್ಲಿ. ರೆವೆನ್ಯೂ ಬಾಬಿನಲ್ಲಿ ಸಬ್ ಡಿವಿಜನ್ ಆಫೀಸರು ಅಮಲ್ದಾರರ ಮೇಲ್ಪಟ್ಟ ಅಧಿಕಾರಿಗಳೇನೋ ಹೌದು, ಆದರೆ ಆ ಬಾಬಿನಲ್ಲೂ ಕೂಡ ಅಧಿಕಾರ ಬಹಳ ಇಕ್ಕಟ್ಟಿನದೇ. ಸ್ಥಳ ವಿದ್ಯಮಾನಗಳ ಸಂಗ್ರಹ ಮತ್ತು ಅವುಗಳ ಮೇಲಿನ ಟೀಕೆ ಅಮಲ್ದಾರರ ಅಧೀನ, ಭಿನ್ನಾಭಿಪ್ರಾಯ ಬಂದರೆ ವ್ಯವಹಾರದ ಅಂತ್ಯ ತೀರ್ಪು ಡೆಪ್ಯುಟಿ ಕಮಿಷನ್ನರದು. ಅಲ್ಲದೆ, ಸಬ್ ಡಿವಿಜನ್ ಆಫೀಸರ ಹತೋ

ಟಿಗೆ ಒಳಪಡದ ಪೋಲೀಸ್ ಮತ್ತು ಮೆಜಿಸ್ಟೀರಿಯಲ್ ಅಧಿಕಾರ ಅಮ ಲ್ದಾರರಿಗಿತ್ತು. ಸಬ್‌ಡಿವಿಜನ್ ಆಫೀಸರ ಮನಸ್ಸಿನಲ್ಲಿ ಅಮಲ್ದಾರರು ತಮ್ಮನ್ನು ಲಘುವಾಗಿ ಕಾಣುತ್ತಾರೆಂಬ ಶಂಕೆ; ಅಮಲ್ದಾರರಿಗೆ, ಸಬ್ ಡಿವಿಜನ್ ಆಫೀಸರು ಅನವಶ್ಯಕವಾಗಿ ವಹಿವಾಟಿನಲ್ಲಿ ಕೈ ಹಾಕುತ್ತಾ ರೆಂಬ ಭಾವನೆ. ಉಭಯತ್ರರೂ ಸಂಭಾವಿತರಾದರೆ ಈ ವೈಷಮ್ಯ ಅಡಗಿರುತ್ತಿತ್ತು. ಆದರೆ ಒಂದೊಂದು ವೇಳೆ ವೈಯುಕ್ತಿಕ ಭಿನ್ನತೆಯಿಂದ ಅದು ಪ್ರಕಾಶಕ್ಕೆ ಬಂದು ನಗೆಗೇಡಾಗಿ ಪರಿಣಮಿಸುತ್ತಿತ್ತು. ಒಬ್ಬ ಬಹಳ ದರ್ಪವಂತರಾದ ಅಮಲ್ದಾರರನ್ನು ಒಬ್ಬ ದುರಹಂಕಾರಿಯಾದ ಸಬ್ ಡಿವಿಜನ್ ಆಫೀಸರು ಬಹಿರಂಗವಾಗಿ ತೇಜೋಭಂಗ ಮಾಡಿ ದರು. ಆ ಅಮಲ್ದಾರರು ಸಬ್‌ಡಿವಿಜನ್ ಆಫೀಸರ ಬಿಡಾರಕ್ಕೆ ಹಾಲು, ಮೊಸರು, ಸೌದೆ ಮೊದಲಾದ ಯಾವ ಸರಬರಾಜೂ ಬಾರದಂತೆ ಕಟ್ಟು ಮಾಡಿ, ಬಿಡಾರದ ಸಮೀಪಕ್ಕೆ ಯಾರೂ ಹೋಗದಂತೆ ಬಂದೋಬಸ್ತು ಮಾಡಿದರು. ಒಂದೆರಡು ದಿನ ಜನವಿಲ್ಲದ ದರ್ಬಾರು ಮಾಡಿ ಕೊನೆಗೆ ಸಬ್‌ಡಿವಿಜನ್ ಆಫೀಸರು ತಮ್ಮ ಕ್ಯಾಂಪು ಗುಮಸ್ತೆಯ ದ್ವಾರ ಸಂಧಿ ಯನ್ನು ಮಾಡಿಕೊಳ್ಳಬೇಕಾಯಿತು. ಇದು ಕಥೆಯಲ್ಲ; ಇದನ್ನು ನಾನು ಸಂಬಂಧಪಟ್ಟ ಅಮಲ್ದಾರರು, ಮತ್ತು ಸಬ್ ಡಿವಿಜನ್ ಆಫೀಸರು ಉಭಯತ್ರರಿಂದಲೂ ಖುದ್ದು ಕೇಳಿದೇನೆ.

ನನಗೂ ನಮ್ಮ ಸಬ್‌ಡಿವಿಜನ್ ಆಫಿಸರಿಗೂ ಬಂದ ಪ್ರಸಂಗ ವನ್ನು ಹೇಳುತ್ತೇನೆ.

ಹಾಡ್ಯವೆಂಬುದೊಂದು ಹೊಳೆಯ ಕೆರೆಗ್ರಾಮ. ಅಲ್ಲಿನ ನಿವಾಸಿ ಗಳು ಬಹುಭಾಗ ಶಿವಭಕ್ತರು, ಕೆಲವು ಮಾತ್ರ ಗಂಗಡಿಕಾರ ವಕ್ಕಲು ಗಳು ಇದ್ದವು. ನನಗೆ ಈಗ ಹೆಸರುಗಳು ಚೆನ್ನಾಗಿ ಜ್ಞಾಪಕವಿಲ್ಲ- ಹೆಸರುಗಳು ಕಾಲಪ್ರವಾಹದಲ್ಲಿ ಸವೆದು ಹೋಗುವ ನೆನಪಿನ ಅಂಚು ಗಳು. ಈ ಗ್ರಾಮದಲ್ಲಿನ ಗಂಗಡಿಕಾರ ರೈತರಲ್ಲೊಬ್ಬನ ಜಮೀನಿನ ವಿಚಾರ ವ್ಯವಹಾರ ಬಂತು. ಆತನಿಗೆ ಇಬ್ಬರು ಹೆಂಡತಿಯರೂ, ಹಿರಿ ಯಳ ಹೊಟ್ಟೆಯಲ್ಲಿ ಹುಟ್ಟಿದ ಒಬ್ಬನೇ ಮಗನೂ ಇದ್ದರು. ಆ ಮಗ ನಿಗೆ ಮದುವೆ ಮಾಡಿದ್ದ. ಸೊಸೆ ಆಗತಾನೆ ಮನೆಗೆ ಬಂದಿದ್ದಳು.

ಸೊಸೆಗೂ ಬಲ ಅತ್ತೆಗೂ ಸರಿಹೋಗುತ್ತಿರಲಿಲ್ಲ. ಹೀಗಿರುವಾಗ ರೈತ ತೀರಿಕೊಂಡ. ಅವನು ತೀರಿಕೊಂಡ ಒಂದು ತಿಂಗಳಲ್ಲಿ ಅವನ ಮಗನೂ ತೀರಿಕೊಂಡ. ಸೊಸೆ– ಅವಳ ಹೆಸರು ಹೊನ್ನಮ್ಮನೆಂದು ಜ್ಞಾಪಕ– ಹಾಡ್ಯದ ಮನೆಯಲ್ಲಿ ತನಗೆ ರಕ್ಷಕರಿಲ್ಲದ್ದರಿಂದ ತತ್ಕಾಲಕ್ಕೆ ಮೈಸೂರಿಗೆ ತನ್ನ ತವರ ಮನೆಗೆ ಹೋದಳು. ಅವಳ ಗೈರುಹಾಜರಿಯಲ್ಲಿ ಹಾಡ್ಯ ದಲ್ಲಿನ ಪ್ರಬಲ ಸಾಹುಕಾರರೊಬ್ಬರು– ಅವರ ಹೆಸರು ಏನೇ ಇರಲಿ ಗುರುಕಾರ ಶಿವಪ್ಪನವರೆನ್ನೋಣ– ಊರಿನಲ್ಲೇ ವಾಸವಾಗಿದ್ದ ಇಬ್ಬರು ವಿಧವೆ ಅತ್ತೆಯರಿಂದ ಕುಟುಂಬದ ಸ್ವತ್ತುಗಳನ್ನು ಭೋಗ್ಯಕ್ಕೆ ಬರೆಸಿ ಕೊಂಡು, ಅವುಗಳ ಪೈಕಿ ಒಂದು ಗದ್ದೆಯನ್ನು ಅದರ ಮೇಲಿದ್ದ ಬೆಳೆ ಯನ್ನು ತಮ್ಮ ಸ್ವಾಧೀನಪಡೆದುಕೊಳ್ಳಲು ಯತ್ನಮಾಡಿದರು. ಈ ಸುದ್ದಿ ಮೈಸೂರಿನಲ್ಲಿನ ಹೊನ್ನಮ್ಮನ ತಂದೆಗೆ ತಿಳಿದ ಕೂಡಲೆ ಅವನು ಲಾಯರು ಗಳ ಸಲಹೆಯಂತೆ ತನ್ನ ಮಗಳನ್ನೂ ಕರೆದುಕೊಂಡು ಯಡತೊರೆಗೆ ಬಂದು, ಪೋಲೀಸು ಆಫೀಸಿನಲ್ಲಿ– ಸದರಿ ಸೊತ್ತು ಹೊನ್ನಮ್ಮನದು, ಅದನ್ನು ದುಂಡಾವೃತ್ತಿಯಿಂದ ಸ್ಥಳದಲ್ಲಿ ಬಲವಂತರಾದ ಗುರುಕಾರರು ಆಕ್ರಮಿಸಿಕೊಳ್ಳಬೇಕೆಂದು ಏರ್ಪಾಡು ಮಾಡುತ್ತಿದ್ದಾರೆ; ಬೆಳೆ ಕಟಾವಿಗೆ ಸಿದ್ಧವಾಗಿದೆ, ಹೊನ್ನಮ್ಮ ಅದನ್ನು ರೂಢಿಸಿಕೊಳ್ಳುವುದಕ್ಕೆ ಅಲ್ಲಿಗೆ ಹೋಗುತ್ತಾಳೆ, ಅವಳಿಗೆ ಗುರುಕಾರರ ಕಡೆಯವರಿಂದ ಪ್ರಾಣಭಯವಿದೆ; ಪೋಲೀಸು ಕುಮ್ಮಕ್ಕು ಬೇಕೆಂದು ಅರ್ಜಿಕೊಟ್ಟ. ಪೋಲೀಸಿನವರು– ಇದು ಸಿವಿಲ್ ವ್ಯವಹಾರ, ಕೋರ್ಟಿನಲ್ಲಿ ತೀರ್ಮಾನಿಸಿಕೊಳ್ಳಬಹುದು– ಎಂದು ಹೇಳಿದರು. ನಂತರ ಹೊನ್ನಮ್ಮನೂ ಅವಳ ತಂದೆಯೂ ಹಾಡ್ಯಕ್ಕೆ ಹೋಗಿ ಜಮೀನಿನ ಮೇಲಿನ ಭತ್ತದ ಬೆಳೆಯ ಕುಯಲಿಗೆ ಯತ್ನಮಾಡುವಲ್ಲಿ ಗುರುಕಾರರೂ, ಅವರ ಕಡೆಯವರೂ ಬಂದು, ಅವ ರನ್ನು ಚೆನ್ನಾಗಿ ಹೊಡೆದು, ದೂಡಿ,– ಅಪಮಾನವಾಗುವಂತೆ ಹೆಣ್ಣು ಮಗಳ ಶ್ಯಾಲೆಯನ್ನೂ ಕಿತ್ತಾಡಿದರೆಂತಲೂ ಆಪಾದನೆ– ಜಮೀನಿನಲ್ಲಾದ ಭತ್ತದ ಬೆಳೆಯನ್ನೆಲ್ಲಾ ಹೊತ್ತುಕೊಂಡುಹೋದರು. ಹೊನ್ನಮ್ಮ ನಿಗೂ ಅವಳ ತಂದೆಗೂ ಗಾಯಗಳಾಗಿದ್ದದ್ದಕ್ಕೆ ಯಡತೊರೆಯಲ್ಲಿ ವೈದ್ಯರ ಸರ್ಟಿಫಿಕೇಟನ್ನು ಮಾಡಿಕೊಂಡು, ಅವರು ಅಮಲ್ದಾರ ಮ್ಯಾಜಿ

ಸ್ಟೇಟಾದ ನನ್ನಲ್ಲಿ ಫಿರ್ಯಾದು ದಾಖಲ್ಮಾಡಿದರು. ನಾನು ಪಿರ್ಯಾದನ್ನು ಪೋಲೀಸ್ ಪ್ರಿಲಿಮಿನರಿ (preliminary) ವಿಚಾರಣೆಗೆ ಕಳುಹಿಸಿ, ಅವರಿಂದ ಕೇಸು ಸಾಬೀತಾಗಿದೆಯೆಂಬ ಅಭಿಪ್ರಾಯದಿಂದ ಛಾರ್ಜು ಷೀಟು ಬಂದಮೇಲೆ, ಕೇಸನ್ನು ನನ್ನ ಫೈಲಿಗೆ ತೆಗೆದುಕೊಂಡು, ಅಪರಾಧಿಗಳಿಗೆ ಜಾಮೀನು ವಾರಂಟನ್ನೂ, ಸಾಕ್ಷಿಗಳಿಗೆ ಸಮ್ಮನ್ಸುಗಳನ್ನೂ ಕಳುಹಿಸಿದೆ. ಗುರುಕಾರರು ತಲೆತಪ್ಪಿಸಿಕೊಂಡಿದ್ದಾರೆಂದು ರಿಪೋರ್ಟು ಬಂತು. ಕೇಸನ್ನು ಮುಂದಕ್ಕೆ ಹಾಕಿ, ಛಾರ್ಜು ಷೀಟಿನಲ್ಲಿನ ಒಂದು ತಕ್ಸೀರು ಜಾಮೀನಿಗೆ ಅರ್ಹವಲ್ಲದಾದ್ದರಿಂದ ಗುರುಕಾರರ ದಸ್ತಗಿರಿಗೆ ಜಾಮೀನಿಲ್ಲದ ವಾರಂಟನ್ನು ಇಷ್ಯೂ (issue) ಮಾಡಿದೆ.

ಗುರುಕಾರರಿಗೆ ಮೈಸೂರಿನಲ್ಲಿ ದೊಡ್ಡವರುಗಳ ಮನೆವಾರ್ತೆಗಳ, ಮತ್ತು ಚಾಕರರುಗಳ ನೆಂಟಸ್ತನ, ಮತ್ತು ಗೆಳೆತನ ಬಹಳ ಉಂಟಂತೆ. ಅಂತೂ, ಅವರು ಹ್ಯಾಗೊ ನಮ್ಮ ಸಬ್‌ಡಿವಿಜನ್ ಆಫೀಸರ ಭೇಟಿಯನ್ನು ಸಂಪಾದಿಸಿ, ತಮ್ಮ ಕಥೆಯನ್ನು ತಮಗೆ ಬೇಕಾದಂತೆ ಹೇಳಿಕೊಂಡು– ಅಮಲ್ದಾರರು ಹುಡುಗರು, ಜನಗಳ ತಾರತಮ್ಯವನ್ನು ಅರಿಯದವರು, ಆದರ ಮೇಲೆ ಹಾರವರಿಗೆ ಸಹಜವಾಗಿ ಲಿಂಗಾಯತರ ಮೇಲಿರುವ ಕಾರ ಬೇರೆ; ಈ ಕಾರಣಗಳಿಂದ ದೊಡ್ಡಮನೆತನಸ್ತ, ಭಾರೀಕುಳವಾದ ತಮಗೆ ಅವಮಾನಪಡಿಸಬೇಕೆಂದು ದಸ್ತಗಿರಿ ವಾರಂಟು ಕೊಟ್ಟಿದ್ದಾರೆ– ಇನ್ನೂ ಏನೇನನ್ನೋ ಆರೋಪಿಸಿ– ಅದರಲ್ಲಿ ಹೊನ್ನಮ್ಮನ ರೂಪು ಲಾವಣ್ಯಗಳೂ ಚಿತ್ರಿತವಾಗಿದ್ದವು — ಈ ಅಮಲ್ದಾರರಿಂದ ತಮ್ಮನ್ನು ಹ್ಯಾಗಾದರೂ ರಕ್ಷಿಸಬೇಕೆಂದು ಶರಣಾಗತರಾದಂತೆ. ಇದನ್ನು ನಾನು ಕೇಳಿದ್ದು ಮಾತ್ರ; ನಡೆದದ್ದನ್ನು ಇನ್ನು ಹೇಳುತ್ತೇನೆ.

ಅನಿರೀಕ್ಷಿತವಾಗಿ ಸಬ್‌ಡಿವಿಜನ್ ಆಫೀಸರು ಚುಂಚನಕಟ್ಟೆಯಲ್ಲಿ ಮೊಕ್ಕಾಂ ಮಾಡುವುದಾಗಿ ಬರೆದರು. ನಾನು ಅವರನ್ನು ಮಾಮೂಲಿನಂತೆ ಆ ಮೊಕ್ಕಾಂನಲ್ಲಿ ಮಿಳಿತವಾದೆ. ಚುಂಚನಕಟ್ಟೆ ಹಾಡ್ಯದಿಂದ ಆರು ಮೈಲುಗಳ ಫಾಸಲೆ. ಚುಂಚನಕಟ್ಟೆ ಬಂಗಲೆಯಲ್ಲಿ ಎರಡು ಕೊಠಡಿಗಳು—ಒಂದರಲ್ಲಿ ಸಬ್ ಡಿವಿಜನ್ ಆಫೀಸರೂ, ಮತ್ತೊಂದರಲ್ಲಿ ನಾನೂ ತಂಗಿಕೊಂಡಿದ್ದೆವು. ಸಾಯಂಕಾಲ ಚುಂಚನಕಟ್ಟೆ ಸ್ಟೇಷನ್

ಹೌಸ್ ಆಫೀಸರು ಬಂದು, ವಾರೆಂಟಿಗೆ ತಲೆತಪ್ಪಿಸಿಕೊಂಡಿರುವ ಹಾಡ್ಯದ ಗುರುಕಾರರು ಸಾಹೇಬರ ಕೊಠಡಿಯಲ್ಲಿ ಸಾಹೇಬರ ಸಂಗಡ ಮಾತನಾಡುತ್ತಿದ್ದಾರೆ, ಎಂದು ಹೇಳಿದ. ಸುಮ್ಮನಿದ್ದೆ. ಸ್ವಲ್ಪ ಹೊತ್ತಿನನಂತರ ಸಾಹೇಬರು ನನ್ನನ್ನು ಕರೆದರು. ಹೋದೆ. ಅಲ್ಲಿ ಗುರುಕಾರರು ಒಂದು ಕುರ್ಚಿಯ ಮೇಲೆ ಕುಳಿತಿದ್ದವರು, ನಾನು ಹೋದ ಕೂಡಲೆ ಎದ್ದು ನಿಂತು ಕೈಮುಗಿದರು ಸಾಹೇಬರು ನನಗೆ,

"ಏನು ಈ ಗುರುಕಾರರ ಸಮಾಚಾರ ಸುಬೇದಾರರೆ? ಯಾರೋ ಪ್ರೋಕರಿಗಳು ಇವರ ಮೇಲೆ ಕೇಸುಮಾಡಿದಾರಂತಲ್ಲ?" ಎಂದು ಕೇಳಿದರು.

"ಕೇಸಿದ್ದರೆ ಅದರ ವಿಚಾರ ನಾನು ಮಾತನಾಡುವುದು ಯುಕ್ತವಲ್ಲ, ಕ್ಷಮಿಸಬೇಕು" ಎಂದೆ.

"ಇವರನ್ನು ನಾನು ಒಲ್ಲೆ. ಬಹಳ ಗೌರವಸ್ತರು. ಭಾರಿ ಲೇವಾದೇವಿಯನ್ನೂ ಮಾಡುತ್ತಾರೆ."

"ಸರಿ, ಸ್ವಾಮಿ. ನನ್ನನ್ನು ತಾವು ಕರೆದ ಸಮಾಚಾರವೇನು?"

"ಇದೇ ಹೇಳೋಣ, ಅಂತ. ಮಾನಸ್ತರ ಮಾನವನ್ನು ಕಾಪಾಡುವ ಭಾರ—"

"ಎಲ್ಲರ ಮಾನದ ಕಾವಲಿಗಾಗೇ ನನ್ನನ್ನು ಇಲ್ಲಿ ಇಟ್ಟಿರುವುದು ಸ್ವಾಮಿ ನನಗೆ ದೇವರು ಕೊಟ್ಟಿರುವ ಬುದ್ಧಿಗೆ ಸಾಧ್ಯವಾದಷ್ಟು ಮಹಾರಾಜರ ನ್ಯಾಯವನ್ನು ನನ್ನ ಅಧಿಕಾರದ ಎಲ್ಲೆಯಲ್ಲಿ ಸಲ್ಲಿಸುತ್ತೇನೆ. ಇನ್ನು ಅಪ್ಪಣೆಯಾದರೆ ಬರುತ್ತೇನೆ"

ಹೀಗೆಂದು ಕೈಮುಗಿದು ಅವರ ಅಪ್ಪಣೆಯನ್ನು ಪಡೆದು ಈಚೆಗೆ ಬಂದೆ. ನಾನು ಆಡಿದ್ದು ಬಹಳ ಸ್ವಾಭಿಮಾನದ ಡೊಂಬರಗಣಿ (self-righteous and stilted) ಮಾತು; ಆದರೆ ಗುರುಕಾರರು ವಾರೆಂಟಿಗೆ ತಲೆ ತಪ್ಪಿಸಿಕೊಂಡು, ತಮ್ಮ ಪಕ್ಷದವರ ಮೂಲಕ ನನ್ನ ಮೇಲೆ ಏನೇನೋ ದೂರು ಹೇಳಿದ್ದು ಗೊತ್ತಿತ್ತು; ಅವರ ಮಾತನ್ನು ಮನ್ನಿಸಿ ನಮ್ಮ ಸಬ್‌ಡಿವಿಜನ್ ಆಫೀಸರು ಅವರ ಎದುರಿಗೇ ನನ್ನನ್ನು ಕರೆಯಿಸಿ ಈ ಪ್ರಸ್ತಾಪವನ್ನೆತ್ತಿದ್ದು ನನಗೆ ಬಹಳ ಅಸಮಾಧಾನವನ್ನು ಉಂಟು

ಮಾಡಿತ್ತು. ನಾನು ಈಚೆಗೆ ಬಂದು, ಪೋಲೀಸು ಸ್ಟೇಷನ್ ಹೌಸು ಆಫೀಸರಿಗೆ– ಈಗ ಗುರುಕಾರರು ಇಲ್ಲಿಂದ ಹಾಡ್ಯಕ್ಕೆ ವಾಪಸು ಹೋಗುತ್ತಾರೆ. ವಾರೆಂಟು ಜಾರಿ ಮಾಡಿ– ಎಂದು ಹೇಳಿದೆ.

ಕೆಲವು ನಿಮಿಷಗಳಾದ ಮೇಲೆ ಗುರುಕಾರರು ಈಚೆಗೆ ಬಂದು ತಮ್ಮ ಗಾಡಿಯನ್ನು ಏರಿ ಹಾಡ್ಯದ ದಾರಿ ಹಿಡಿದರು. ಸ್ವಲ್ಪದೂರ ಹೋಗುವುದರೊಳಗಾಗಿ, ವಾರೆಂಟನ್ನು ಜಾರಿಮಾಡಿ ಪೋಲೀಸಿನವರು ಅವರನ್ನು ಠಾಣೆಗೆ ಕೊಂಡುಹೋದರು. ಅವರ ಪರಿವಾರ ಹಾಹಾಕಾರ ಮಾಡುತ್ತ ಬಂಗಲೆಗೆ ಓಡಿ ಬಂದು ಸಾಹುಕಾರರನ್ನು ಲಾಕಪ್ಪಿಗೆ ಕೂಡಿದಾರೆಂದು ಸಾಹೇಬರಲ್ಲಿ ಕೂಗಿಕೊಂಡರು. ಸಾಹೇಬರೂ ನಾನು ಬಂದ ಮೇಲೆ ನಾನು ಹೇಳಿದ್ದನ್ನು ಯೋಚಿಸಿರಬೇಕು.

"ಇದು ಕೋರ್ಟಿನ ಮುಂದಿರುವ ಮೊಕದ್ದಮೆಗೆ ಸಂಬಂಧಪಟ್ಟದ್ದು. ನಾವು ಪ್ರವೇಶ ಮಾಡುವುದಕ್ಕಾಗುವುದಿಲ್ಲ. ಲಾಯರನ್ನಿಟ್ಟು ಅಮಲ್ದಾರರ ಕೋರ್ಟಿನಲ್ಲೇ ಜಾಮೀನು ಕೇಳಿಕೊಳ್ಳಿ" ಎಂದು ಹೇಳಿಬಿಟ್ಟರು ಪುನಃ ಈ ವಿಚಾರ ಅನ್ಯೋನ್ಯ ಒಳಸಮಯದಿಂದ ಸಬ್ ಡಿವಿಜನ್ ಆಫೀಸರೂ ನಾನೂ ಮಾತನಾಡದಿದ್ದರೂ, ಮೊದಲಿನಂತೆಯೇ ನಮ್ಮ ಹೊರ ನಡತೆಯಿದ್ದರೂ, ನಮ್ಮ ಹಿಂದಿನ ಸ್ನೇಹದ ಕುಡಿ ಬಾಡಿತೆಂದು ನನಗೆ ತೋರಿತು.

ಈ ಗುರುಕಾರರ ಕೇಸಿನ ವಿಷಯ ಒಂದೆರಡು ಮಾತನ್ನು ಹೇಳಬೇಕು. ಅವರ ಪರ ಲಾಯರು ಜಾಮೀನು ಅಪ್ಲಿಕೇಷನ್ನನ್ನು ಕೊಟ್ಟಾಗ ಗುರುಕಾರರನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಿದೆ. ಅವರು ತಮ್ಮ ವಿಚಾರಣೆಯನ್ನು ಬೇರೇ ಕೋರ್ಟಿಗೆ ವರ್ಗಾಯಿಸಿಕೊಳ್ಳಲು ಬಹಳ ಯತ್ನ ಮಾಡಿದರು. ಅವರ ವರ್ಗದ ಅರ್ಜಿಯಲ್ಲಿ ನನಗೆ ಅವರ ಮೇಲೆ ಕ್ರೋಧವಿರುವುದಾಗಿಯೂ, ಅವರಿಗೆ ಬೇಡದಿದ್ದವರು ನನ್ನ ಮನಸ್ಸನ್ನು ಅವರ ವಿಷಯದಲ್ಲಿ ಕೆಡಿಸಿದ್ದಾರೆಂತಲೂ, ನನ್ನ ಕೋರ್ಟಿನಲ್ಲಿ ಅವರಿಗೆ ನ್ಯಾಯ ದೊರೆಯುವುದಿಲ್ಲವೆಂತಲೂ ಬಯಾನು ಮಾಡಿದ್ದರು. ಆ ಅರ್ಜಿಯನ್ನು ನನ್ನ remarks– ಉದಾಹರಣೆ– ಗೆ ಕಳುಹಿಸಲಾಗಿ– ಅದರಲ್ಲಿ ನಮೂದಿಸಿರುವ ಕಾರಣಗಳು ಸುಳ್ಳು, ಆದರೆ ಕೇಸನ್ನು

ವರ್ಗ ಮಾಡುವ ವಿಷಯದಲ್ಲಿ ನನ್ನ ಆಕ್ಷೇಪಣೆ ಏನೂ ಇಲ್ಲ--ಎಂದು ಬರೆದೆ.

ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರು ಯಡತೊರೆಗೆ ಅದೇ ಕಾಲದಲ್ಲಿ ಸರ್ಕೀಟು ಬಂದಾಗ ಗುರುಕಾರರೂ ಅವರ ವಕೀಲರೂ ಪುನಃ ಅವರನ್ನು ಕಂಡು ತಮಗಿರುವ ಮಹತ್ತರವಾದ ಭಯವನ್ನು ವಿಸ್ತಾರವಾಗಿ ಹೇಳಿಕೊಂಡು ಕೇಸನ್ನು ವರ್ಗಮಾಡಬೇಕೆಂದು ಆಗ್ರಹದಿಂದ ಬೇಡಿದರು. ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರು—ಸ್ಪರ್ಕ್ಸ್ ಸಾಹೇಬರು—ನನ್ನನ್ನು ಕರೆಸಿ ಅಂತರಂಗವಾಗಿ—

"ಇದೇನು, ಅಮಲ್ದಾರರೇ ? ನಿಮಗೆ ಆ ಮನುಷ್ಯನ ಮೇಲೆ ಬಹಳ ದ್ವೇಷವಂತೆ ?" ಎಂದು ಕೇಳಿದರು.

ನಾನು,

" ನ್ಯಾಯಸ್ಥಾನದಲ್ಲಿ ಕುಳಿತು ಅನ್ಯಾಯ ಮಾಡುವಷ್ಟು ದ್ವೇಷವೇ ಆಗಲಿ ಪ್ರೇಮವೇ ಆಗಲಿ ನನಗೆ ಯಾವ ಮನುಷ್ಯನ ಮೇಲೂ ಇಲ್ಲ. ನಿರ್ದೋಷಿಯಾದವನನ್ನು ಶಿಕ್ಷಿಸುವಷ್ಟು ದ್ವೇಷ ಯಾರ ಮೇಲೂ ಇಲ್ಲ; ತಪ್ಪು ಸಾಬೀತಾದರೂ ಖುಲಾಸೆ ಮಾಡುವಷ್ಟು ಯಾರ ಸಂಗಡಲೂ ಸ್ನೇಹವೂ ಇಲ್ಲ. ಈ ಮೊಖದ್ದಮೆಯನ್ನು ಬೇರೆ ಕೋರ್ಟಿಗೆ ಕಳುಹಿಸುವುದಕ್ಕೆ ನನ್ನ ಆಕ್ಷೇಪವೇನೂ ಇಲ್ಲವೆಂದು ಮೊದಲೇ ಬರೆದಿದ್ದೇನೆ" ಎಂದೆ.

"ಈ ಛಾರ್ಜುಷೀಟನ್ನು ನಾನು ಓದಿದ್ದೇನೆ. ಆಪಾದನೆ ರುಜುವಾತಾದರೆ ಕಠಿಣವಾಗೇ ಶಿಕ್ಷಿಸಬೇಕಾಗುತ್ತಲ್ಲವೇ ? "

" ಅದೇ ನನ್ನ ಅಭಿಪ್ರಾಯವೂ."

" ನಿಮ್ಮ ತಾಲ್ಲೂಕಿನ ಪುಂಡತನವನ್ನು ನಿಮ್ಮ ದಂಡಾಧಿಕಾರದಿಂದ ತಪ್ಪಿಸಿದರೆ, ಆಡಳಿತ ಸಡಿಲವಾಗುತ್ತಲ್ಲವೇ ?"

" ಅಂಥ ಸಂದರ್ಭದಲ್ಲಿ ನನ್ನನ್ನೇ ಬೇರೆ ಕಡೆಗೆ ವರ್ಗಮಾಡಬಹುದಲ್ಲವೇ ? ಆಡಳಿತ ಸಡಿಲವಾಗುವುದು ಬಹಳ ದೊಡ್ಡ ಪಬ್ಲಿಕ್ ವಿಪತ್ತು."

ಕೇಸು ವರ್ಗವಾಗಲಿಲ್ಲ; ಅದನ್ನು ನಾನೇ ವಿಚಾರಣೆ ಮಾಡಿದೆ. ಕೇಸು ನಡೆಯುತ್ತಿರುವಾಗ, ನನಗೆ ಕೋಪಬರಿಸಿ ನಾನು ತಪ್ಪು ವರ್ತಿ

ಸುವಂತೆ ರೇಗಿಸಬೇಕೆಂದು ಬಹುವಿಧವಾದ ಕಿರುಕುಳ ಕೊಟ್ಟರು. ಅದರಲ್ಲಿ ಒಂದು ಸ್ವಲ್ಪ ವಿನೋದವಿದೆ. ಅಪರಾಧಿಯ ಕಡೆ ಲಾಯರು ಒಂದು ದಿವಸ ಸ್ವಲ್ಪ ತಡವಾಗಿ ಕೋರ್ಟಿಗೆ ಬಂದರು. ಆ ದಿನ ತಮ್ಮ ವಾದವನ್ನು ಪೂರ್ತಾ ಕೇಳಬೇಕೆಂದು ಕೋರಿದರು. 'ಆಗಬಹುದು, ಆದರೆ ನನಗೆ ಐದೂವರೆ ಘಂಟೆಗೆ ಟೆನ್ನಿಸ್ ಆಡಲು ಪರಸ್ಥಳದ ಸ್ನೇಹಿತರೊಡನೆ ಎಂಗೇಜುಮೆಂಟ್ ಇದೆ. ದಯವಿಟ್ಟು ವಾದವನ್ನು ಅಷ್ಟರಲ್ಲೇ ಪೂರೈಸಬೇಕೆ'ಂದು ಹೇಳಿದೆ. ಒಪ್ಪಿದರು. ಅಲ್ಲಿಗೆ ವಾದಕ್ಕೆ ಎರಡು ಘಂಟೆಗಳ ಅವಕಾಶ ಒದಗುವಂತಾಯಿತು ಆದರೆ ನಮ್ಮ ಲಾಯರ ವಾಗ್ವಿಲಾಸದಿಂದ ಇನ್ನೂ ಪ್ರಸ್ತಾವನೆಯಲ್ಲೇ ಕಾಲ ತೀರುತ್ತಾ ಬಂತು. ನಾನು— ತಮ್ಮ ಭಾಷಣವನ್ನು ಕೇಳುವ ಆನಂದದಲ್ಲಿ ನನಗೆ ಹೊತ್ತು ಕಳೆದದ್ದೇ ಗೊತ್ತಾಗಲಿಲ್ಲ. ಆದರೆ ಇನ್ನು ಕಾಲು ಘಂಟೆಗೆ ನಾನು ಹೋಗಲೇಬೇಕು— ಎಂದು ಎಚ್ಚರಿಸಿದೆ. ಇನ್ನು ಕಾಲು ಘಂಟೆ ಹೆಚ್ಚು ಅವಕಾಶ ಬೇಡಿದರು. ಒಪ್ಪಿದೆ ಅದೂ ತೀರಿತು. ನಾನು ಎದ್ದು— ಬಹಳ ವಿಷಾದಪಡುತ್ತೇನೆ, ಆದರೆ ಹೋಗಲೇ ಬೇಕು; ನಾಳೆ ಉಳಿದದ್ದನ್ನು ಕೇಳೋಣವೇ, ಅಥವ ಇನ್ಯಾವದಾದರೂ ತಾರೀಖಿಗೆ ಮುಂದೆ ಹಾಕೋಣವೇ?— ಎಂದು ಕೇಳಿದೆ. ಉತ್ತರವಿಲ್ಲ— ವಾದ ಮಾತ್ರ ದ್ರುತಗತಿಯಲ್ಲಿ ಚಲಿಸಲಾರಂಭಿಸಿತು. ನಾನು ಪೀಠದಿಂದ ಇಳಿದು ಬಾಗಿಲ ಕಡೆಗೆ ಬಂದೆ. ಅವರು ನನಗೆ ಮುಖ ಕೊಟ್ಟು ವಾದಮಾಡುತ್ತಲೇ ಹಿಂದೆ ಹಿಂದೆ ಬಾಗಿಲ ಕಡೆಗೆ ಸರಿದರು. ನಾನು— ಸ್ವಾಮಿ ಜೋಕೆ, ಹೊಸಲು, ಮೆಟ್ಟಲುಗಳು ಇವೆ— ಎಂದು ಪರಾಕು ತಿಳಿಸದಿದ್ದರೆ ಅಪಾಯವಾಗುತ್ತಿತ್ತು. ಬಾಗಿಲಲ್ಲಿ ಸ್ವಲ್ಪ ನಿಂತು ನಾನು ಮುಂದೆ ಹೋಗುವುದನ್ನು ಒಂದು ನಿಮಿಷ ತಡೆದರು. ನಾನು ಉಪಾಯದಿಂದ ಅವರನ್ನು ಸುತ್ತು ಬಳಸಿ ಬಿಡುಗಡೆ ಮಾಡಿಕೊಂಡು ಈಚೆಗೆ ಹೊರಟು ಟೆನ್ನಿಸ್ ಕೋರ್ಟಿನ ಕಡೆ ಬಂದೆ. ಮಾತನಾಡುತ್ತಲೇ ಹಿಂಬಾಲಿಸಿದರು. ನಾನು— ಕೋಪಿಸಿಕೊಳ್ಳಬೇಕೋ, ನಗಬೇಕೋ ತಿಳಿಯದೆ—'ಸರ್, ಇದು ಚಂಡಾಡುವ ಕೋರ್ಟು; ಮ್ಯಾಜಿಸ್ಟ್ರೇಟ್ ಕೋರ್ಟು ಅಲ್ಲ; ಇಲ್ಲಿ ಅಡ್ವೋಕೇಟುಗಳ

eloquenceಗೆ— ಶ್ರಾವ್ಯ ಭಾಷಣಕ್ಕೆ — ಅವಕಾಶವಿಲ್ಲ ಎಂದು ಹೇಳಿ ಟೆನ್ನಿಸ್ ಕೋರ್ಟಿಗೆ ಇಳಿದೆ. ಆಗ ಕೋಪ ನಗುಗಳ ಜಗಳದಲ್ಲಿ ನಗುವೇ ಗೆದ್ದಿತು.

ಇದು ಇಲ್ಲಿಗೇ ನಿಲ್ಲಲಿಲ್ಲ. ನಮ್ಮ ಅಡ್ವೋಕೇಟರು ಪ್ರಜಾಪ್ರತಿನಿಧಿ ಸಭೆಯ ಮೆಂಬರು. ಅಲ್ಲಿ, ಈಗಿನ ಕಾಲದ ಬಾಲ ಅಧಿಕಾರಿಗಳ ದುರಹಂಕಾರವನ್ನು ಪ್ರಸ್ತಾವಿಸಿ ಮೇಲಿನ ಕತೆಯನ್ನು ಹೇಳಿದರು. ಸಭೆಯವರು ನಕ್ಕದ್ದು ನನಗೆ ತಕ್ಕ ಶಿಕ್ಷೆ ಎಂದು ಭಾವಿಸಿ ತೃಪ್ತರಾದರು.

ಕೊನೆಗೆ ಗುರುಕಾರರ ಮೇಲಿನ ಕೇಸು ಸಾಬೀತಾಗಿ ಅವರು ವೃದ್ಧರೆಂದು ಅವರಿಗೆ ಲಘುವಾದ ಶಿಕ್ಷೆ ವಿಧಿಸಿ, ಅವರ ಕಡೆ ಆಳುಗಳಾದ ಅಪರಾಧಿಗಳಿಗೆ— ಅದರಲ್ಲೂ ಹೆಂಗಸಿನ ಮೇಲೆ ಕೈ ಮಾಡಿದವರಿಗೆ— ಸ್ವಲ್ಪ ಕಡುದಾಗೇ ದಂಡಿಸಿದೆನೆಂದು ಜ್ಞಾಪಕ.

ಆ ಕಾಲದಲ್ಲಿ ಅರಸುಗಳೆಂದರೆ privileged class– ವಿಶೇಷ ಗೌರವಕ್ಕೆ—ಹಕ್ಕುಳ್ಳ ಜಾತಿ ಎಂಬ ಭಾವನೆ ತಾಲ್ಲೂಕು ಒಳಗ್ರಾಮಗಳಲ್ಲಿನ ಅರಸುಗಳು, ಅರಸುಗಳ ಕ್ರಮವಲ್ಲದ ಸಂತಾನದವರು, ಅವರಿಗೆ ಬಡ ಅರಸುಗಳೆಂದು ರೂಢಿ — ಗ್ರಾಮದ ಇತರ ಕೋಮುಗಳವರ ಮೇಲೆ ಹುಕ್ಕುಮತ್ ದರ್ಪವನ್ನು ಬೀರುವ ವಾಡಿಕೆ— ಇತರ ಕೋಮುಗಳವರು ಇದನ್ನು ಸಹಿಸುತ್ತಿದ್ದರೆಂಬುದು ಆಶ್ಚರ್ಯವಾದ ಸಂಗತಿ. ಮೈಸೂರಿನಲ್ಲಿ ವಾಸವಾಗಿದ್ದ ಅರಸುಗಳು, ಮತ್ತು ಕುಮಾರ ಸಂತತಿ, ಅಳಿಯ ಸಂತಾನದವರು, ಸಹ ತಮ್ಮ ದರ್ಪವನ್ನು ಕಾಪಾಡಿಕೊಳ್ಳುವುದರಲ್ಲಿ ದಕ್ಷರಾದ ಒಗ್ಗಟ್ಟು ಗುಂಪು ನಾನು ಚಿಕ್ಕ ಹುಡುಗನಾಗಿದ್ದಾಗ ಅವರಲ್ಲಿ ಒಬ್ಬರು ಸವಾರಿ ಹೊರಡುವಾಗ ಮಹಾರಾಜರಂತೆ ಬಾಡಿಗಾರ್ಡು ಸವಾರರನ್ನು ಬಿಟ್ಟುಕೊಂಡು ಬರುತ್ತಿದ್ದರು. ಇವರ ಅವಲೋಪಕ್ಕೆ ಇತಿಹಾಸದಲ್ಲಿ ಬೀಜವಿದ್ದಿರಬಹುದು; ಆ ಕಾಲದಲ್ಲಿ ಮೈಸೂರಿನಲ್ಲಿ ಹೇರಳವಾಗಿದ್ದ ಅವರ ದೀನ ಆಶ್ರಿತ ಜನದ ಸ್ತುತಿಪಾಠ, ಸೇವಾವೃತ್ತಿ ಕೃಷಿಯಿಂದ ಈ ಬೀಜದ ಮೊಳಕೆ ಚೆನ್ನಾಗಿ ಬೆಳೆದಿತ್ತು. ಇವರ ಅವಲಂಬಿಗಳಾಗಿ ಮೈಸೂರಿಗೆ ಸೇರಿ, ಇವರ

ಪೋಷಕ ವರ್ಗವಾಗಿ ತಲೆತಲಾಂತರದಿಂದಲೂ ಇರುವಬ್ರಾಹ್ಮಣರ ಮತ್ತು ಶಿವಾಚಾರದ ಮನೆತನಗಳು ಅಸಂಖ್ಯಾತವಾಗಿದ್ದವು. ಇವರ ಮನೆಗಳಲ್ಲಿ ಅಡಿಗೆ, ಪರಿಚಾರಿಕೆ, ವಗೈರೆ ಸೇವಾವೃತ್ತಿಗೆ ಚಾಮರಾಜ ನಗರ, ನಂಜನಗೂಡು, ತಿರಮಕೂಡಲು ನರಸೀಪುರ ತಾಲ್ಲೂಕುಗಳ ಗ್ರಾಮಗಳಿಂದ ಶಿವಾಚಾರದ ಗಂಡಸರೂ ಹೆಂಗಸರೂ ಸಹ ಸೇರಿಕೊಂಡು ಅವರ ಅಭಿಮಾನಕ್ಕೆ ಪಾತ್ರರಾಗಿ, ತಮ್ಮ ತಮ್ಮ ಗ್ರಾಮಗಳಲ್ಲಿ ಗಣ್ಯರೆಂದು ಭಾವಿತರಾಗಿ, ಅಲ್ಲಿನ ವ್ಯವಹಾರಗಳಲ್ಲಿ ಪಕ್ಷಗಳನ್ನು ವಹಿಸುತ್ತಿದ್ದರು. ಹಾಡ್ಯದ ಗುರುಕಾರರ ಕೇಸಿನಲ್ಲಿ ಬಂದ ಶಿಪಾರಸು ಇದರ ಒಂದು ನಿದರ್ಶನವಾಗಿದೆ. ಫ್ರೆಂಚ್ ಜನಾಂಗದಲ್ಲಿ ಲೂಯಿ ರಾಜರುಗಳ ಕಾಲದಲ್ಲಿ ನೊಬ್ಲೆಸ್ (noblesse) ಆಡಳಿತದ ಭರಾಟೆಯಲ್ಲಿ ಹೀಗಿದ್ದಿರ ಬಹುದೆಂದು ನನಗೆ ತೋರುತ್ತಿತ್ತು. ಫ್ರಾನ್ಸಿನಲ್ಲಿಯಂತೆಯೇ ನಮ್ಮ ನೋಬ್ಲೆಸ್‌ನಲ್ಲಿಯೂ ಅನೇಕ ಭಾರಿ ಗುಣಗಳೂ ಇದ್ದವು. ಇತರರಿಂದ ಮರ್ಯಾದೆಯನ್ನು ಅಪೇಕ್ಷಿಸುವಂತೆಯೇ ಇತರರಿಗೆ ಮರ್ಯಾದೆಯನ್ನೂ ಕೊಡುತ್ತಿದ್ದರು ; ಸೇವಕರನ್ನು ಬಿಟ್ಟುಕೊಡುತ್ತಿರಲಿಲ್ಲ ; ಆಶ್ರಿತರನ್ನು ರಕ್ಷಿಸುತ್ತಿದ್ದರು ; ಮಿತ್ರರಲ್ಲಿ ನಿಜವಾದ ಪ್ರೇಮ, ಔದಾರ್ಯಗಳನ್ನು ಉಳ್ಳವರಾಗಿದ್ದರು. ಈ ಸಂದರ್ಭದಲ್ಲಿ ಆಗ ಜನಗಳಲ್ಲಿ ಬಹಳ ಕ್ಷೋಭೆ' ಯನ್ನುಂಟುಮಾಡಿದ ಒಂದು ಕೇಸು ಜ್ಞಾಪಕಕ್ಕೆ ಬರುತ್ತದೆ. ಒಳ್ಳೆಯ ಮನೆತನದವರೂ, ಒಬ್ಬ ದೊಡ್ಡ ಹುದ್ದೇದಾರರ ಮಕ್ಕಳೂ ಆದ ಇಬ್ಬರು ಬ್ರಾಹ್ಮಣ ಅಣ್ಣತಮ್ಮಂದಿರು ಮೈಸೂರಿನಲ್ಲಿ ವಿದ್ಯಾರ್ಥಿಗಳಾಗಿ ಇದ್ದರು. ಯಾವದೋ ಸಂದರ್ಭದಲ್ಲಿ ಇವರ ಮೇಲೆ ಕಳವಿನ ಗುಮಾನೆಯನ್ನು ಯಾರೋ ಹೇಳಿದರಂತೆ. ಇದರಮೇಲೆ ಇವರಿಬ್ಬರನ್ನೂ ಪೋಲೀಸು ಸ್ಟೇಷನ್ನಿಗೆ ಕೂಡಿಕೊಂಡು, ಮೂಗೂರು ದೇವರಾಜೇ ಅರಸು ಎಂಬ ಒಬ್ಬ ಪೋಲೀಸ್ ಇನ್ಸ್ಪೆಕ್ಟರು ಬಹಳವಾಗಿ ಹೊಡೆದು ಹಿಂಸಿಸಿದರು. ಇವರ ಮೈಮೇಲಿನ ಘಾಯಗಳಿಗೆ ನಂತರ ಸರ್ಟಿಫಿಕೇಟಾಯಿತು. ಈ ಹುಡುಗರು ನಿರಪರಾಧಿಗಳೆಂದು ಸ್ಪಷ್ಟವಾಗಿ ಗೊತ್ತಾಯಿತು. ಅವರ ಅವಸ್ಥೆಯನ್ನು ನೋಡಿ, ಕರುಳು ಬೆಂದು, ಜನಗಳು ಸರಕಾರಕ್ಕೆ ಮೊರೆಯಿಟ್ಟರು. ಮೈಸೂರಿನ ಮಹಾಪುರುಷರೆಂದು ಚಿರಸ್ಮರಣೀಯರಾದ

ವೃದ್ಧ ಪಿತಾಮಹ ವೆಂಕಟಕೃಷ್ಣಯ್ಯನವರು ಮುಂದೆ ನಿಂತು ಈ ಕಠೋರ ವಾದ ಅನ್ಯಾಯವನ್ನು ಔದಾಸೀನ್ಯಕ್ಕೆ ಮಾರ್ಗವಿಲ್ಲದಂತೆ ಸರ್ಕಾರದ ಗಮನಕ್ಕೆ ತರಲಾಗಿ, ದೇವರಾಜೇ ಅರಸಿನವರ ಮೇಲೆ ಮ್ಯಾಜಿಸ್ಟ್ರೇಟು ಕೋರ್ಟಿನಲ್ಲಿ ಕೇಸಾಯಿತು. ಈ ಕೇಸಿನ ವಿಚಾರಣೆಯ ಕಾಲದಲ್ಲಿ ವೈಷಮ್ಯಗಳೂ ಪಕ್ಷಪಾತಗಳೂ ಅಂತಸ್ಥಿತಿಗೆ ಏರಿದವು. ಕೇಸು ಕ್ರಮೇಣ ಅಸಿಸ್ಟೆಂಟ್ ಸೆಷನ್ಸ್ ಕೋರ್ಟಿನಲ್ಲಿ ವಿಚಾರಣೆಯಾಗಿ ದೇವರಾಜೇ ಅರಸಿನವರ ಮೇಲೆ ಆಪಾದನೆ ಸಾಬೀತಾಗಿ ಅವರಿಗೆ ಸಜಾ ವಿಧಿಸಲಾಯಿತು. ಕೋರ್ಟು ತೀರ್ಮಾನವನ್ನು ಕೊಟ್ಟ ದಿನ ಅರಮನೆಯಲ್ಲಿ ಏನೋ ವಿಶೇಷ ಉತ್ಸವವಂತೆ. ಈ ತೀರ್ಮಾನವನ್ನು ಕೇಳಿ ಉತ್ಸವಕ್ಕೆ ನೆರೆದಿದ್ದವರು ಬಹಳ ಖಿನ್ನರಾಗಿ ಚದುರಿದರಂತೆ. ಇದನ್ನು ಅವರ ಪೈಕಿ ಒಬ್ಬ ದೊಡ್ಡಮನುಷ್ಯರಿಂದ ನಾನು ಕೇಳಿದೆ. ಕೊನೆಗೆ ಈ ಮೊಖದ್ದಮೆ ಛೀಪ್ ಕೋರ್ಟಿಗೆ ಹೋಗಿ, ಅಲ್ಲಿದೇವರಾಜೇ ಅರಸಿನವರಿಗೆ ಖುಲಾಸೆಯಾಯಿತು. ಅವರ ಇನ್‌ಸ್ಪೆಕ್ಟರ್ ಹುದ್ದೆಯೂ ಅವರಿಗೆ ಪುನಃ ಒಂತು. ಈ ಹುದ್ದೆಯಲ್ಲಿ ಇವರು ನಾನಿದ್ದ ಯಡತೊರೆ ತಾಲ್ಲೂಕಿಗೆ ವರ್ಗವಾಗಿ ಬಂದರು. ಯಾವದೋ ಮಾತಿನಮೇಲೆ, ನನ್ನಲ್ಲಿ ಅವರು ತಾವು ಆ ಹುಡುಗರನ್ನು ಪೋಲೀಸು ಮಾಮೂಲಿನಂತೆ ಹೊಡೆದದ್ದುಂಟು; ಆ ಹುಡುಗರೂ ತಾವು ದೊಡ್ಡ ಮನೆಯವರೆಂಬ ಜಂಭದ ಮೇಲೆ ತಮ್ಮನ್ನು ತುಚ್ಛವಾಗಿ ಮಾತನಾಡಿ ಕೋಪ ಬರಿಸಿದರೆಂದು ಹೇಳಿ ವಿಷಾದಪಟ್ಟರು. ನಾನು — ಸರಿ, ಆದದ್ದು ಹೋಗಲಿ ಬಿಡಿ; ನನ್ನ ತಾಲ್ಲೂಕಿನಲ್ಲಿ ಮಾತ್ರ ದುಡುಕಿ ನನ್ನನ್ನು ನಿಷ್ಠುರಕ್ಕೆ ಸಿಕ್ಕಿಸಬೇಡಿ—ಎಂದು ನಗುತ್ತಾ ಹೇಳಿದೆ. ಅವರು ನನ್ನಲ್ಲಿ ಕೆಲಸ ಮಾಡುತ್ತಿದ್ದಾಗ ಸಭ್ಯರಾಗೇ ವರ್ತಿಸಿದರು ಕೆಲಸದಲ್ಲಿ ಘಟ್ಟಿಗರಲ್ಲ; ಪದೇಪದೇ ಸ್ವಲ್ಪ ನೆವ ಸಿಕ್ಕರೆ ಸಾಕು, ಮೈಸೂರಿಗೆ ಹೊರಟುಹೋಗಿ ಕೆಲಸದಿಂದ ಗೈರುಹಾಜರಾಗುತ್ತಿದ್ದರು; ಅಷ್ಟೇ ಹೊರತು ಇನ್ನೇನು ದೋಷವೂ ಕಾಣಲಿಲ್ಲ.

ಅಮಲ್ದಾರರು "ತಳತಾಯಿ"ಯಾದ್ದರಿಂದ ಅವರಲ್ಲಿ ಗೃಹಕೃತ್ಯದ ಜಗಳಗಳು ಫೈಸಲಾತಿಗೆ ಬರುತ್ತಿದ್ದವೆಂದು ಹೇಳಿದ್ದೇನೆ. ಒಂದು ಸಲ

ಮೇಲೂರೆಂಬ ಗ್ರಾಮದಲ್ಲಿ ಒಬ್ಬ ಅನುಕೂಲಸ್ಥ ರೈತ ಅವನ ಮಗಳನ್ನು ಕರೆದುಕೊಂಡು ಬಂದು ಛೇರ್ರ್ಯದಲ್ಲಿ ಮೊಕ್ಕಾಂ ಮಾಡುತ್ತಿದ್ದ ನನ್ನಲ್ಲಿ ತನ್ನ ಅಳಿಯನ ಮೇಲೆ ಫಿರ್ಯಾದು ಹೇಳಿಕೊಂಡ. ಆ ಹುಡುಗಿಯ ಜತೆಗೆ ಅವಳ ತಾಯಿಯೂ ಬಂದಿದ್ದಳು. 'ಅಳಿಯ ಬಹಳ ವರಟು ಮನುಷ್ಯ, ಹೆಂಡತಿಯನ್ನು ಸರಿಯಾಗಿ ಬಾಳಿಸದೆ ದನವನ್ನು ಹೊಡೆದ ಹಾಗೆ ಹೊಡೆಯುತ್ತಾನೆ; ಕಾರಣವಿಲ್ಲದ ಕೋಪದವನು; ಅವನಿಂದ ಅವಳ ಜೀವಕ್ಕೆ ಅಪಾಯ — ಇದೋ ನೋಡಿ, ಅವನು ಹೊಡೆದಿರೋ ಬರ್‍ರೆ'— ಎಂದು ಹೇಳಿ ಆ ಹುಡುಗಿಯ ಬೆನ್ನು, ತೋಳುಗಳ ಮೇಲೆ ಕೆಂಪನೆ ಊದಿ ಎದ್ದಿದ್ದ ಬಾಸುಂಡೆಗಳನ್ನು ತೋರಿಸಿದರು. ತನ್ನ ಕಷ್ಟದ ಕಥೆ ಕೇಳುತ್ತಾ ಆ ಹುಡುಗಿ ಬಿಕ್ಕಿಬಿಕ್ಕಿ ಅಳುವುದಕ್ಕೆ ಪ್ರಾರಂಭಿಸಿದಳು. ನನಗೂ ಬಹಳ ಮನಸ್ಸುನೊಂದಿತು. ಹೊಡೆಯಲು ಕಾರಣವೇನು ಎಂದು ಕೇಳಿದೆ. ಅವರ ಹೇಳಿಕೆಯಿಂದ ಹುಡುಗಿ ತಾಯಿಮನೆಯಲ್ಲಿ ಸುಖವಾಗಿ ಬೆಳೆದವಳು; ಗಂಡ ಬಡವ, ಅವನ ಮನಸ್ಸಿನಲ್ಲಿ ಅವಳು ತನ್ನನ್ನು ಬಡತನಕ್ಕಾಗಿ ಧಿಕ್ಕಾರ ಮಾಡುತ್ತಾಳೆಂಬ ಭಾವನೆ, ಎಂದು ನನಗೆ ತೋರಿತು ಆ ಹುಡುಗಿಯಲ್ಲಿ ಮತ್ತಾವ ತಪ್ಪೂ ಇಲ್ಲವೆಂದು ಹೇಳಿದರು. ನನಗೂ ಅದು ನಿಜವೆಂದು ತೋರಿತು. ಅವಳು ಹಸುಮಗುವಿನಂಥ ಎಳೆಯ ಮುಖದ ಮುಗ್ಧೆ. ನಾನು ಅವಳ ಗಂಡನನ್ನು ಕರೆಕಳಿಸಿದೆ. ಅವನು ಇಪ್ಪತ್ತೆರಡು ಇಪ್ಪತ್ತು ಮೂರು ವರ್ಷದ ಸೊಗಸಾದ ಮೈಕಟ್ಟಿನ ಸ್ಫುರದ್ರೂಪಿಯಾದ ಯುವಕ. ತನ್ನ ಅತ್ತೆ ಮಾವ ಹೆಂಡತಿ ಎಲ್ಲರೂ ಬಂದು ಅಮಾಲ್ದಾರರಲ್ಲಿ ತನ್ನ ಮೇಲೆ ಫಿರ್ಯಾದು ಹೇಳಿದ್ದಾರೆಂದು ಮುಖದ ಮೇಲೆ ಕೋಪ ಬೆರಕೆಯಾದ ಭೀತಿ ಕಾಣುತ್ತಿತ್ತೇ ಹೊರತು ಕೆಟ್ಟತನವಾಗಲಿ ದುಷ್ಟತನವಾಗಲಿ ತೋರುತ್ತಿರಲಿಲ್ಲ

"ನೀನು ಮನುಷ್ಯನೋ ದನವೋ? ನಿನ್ನ ನಂಬಿ ಕೈಹಿಡಿದು ಬಂದ ಹೆಣ್ಣುಮಗಳನ್ನು ಹೀಗೆ ಹೊಡೆಯೋದೆ? ನೀನು ಅಕ್ಕತಂಗಿಯರ ನಡುವೆ ಹುಟ್ಟಿದವನಲ್ಲವೇನೋ?"

ಹೀಗೆ ಕೋಪವನ್ನು ತೋರಿಸುವ ಮುಖವನ್ನು ಮಾಡಿಕೊಂಡು ಘರ್ಜಿಸಿ ಕೇಳಿದೆ. ನನ್ನ ಮಾತನ್ನು ಕೇಳಿದ ಆ ಹೆಣ್ಣು ಅಳಲಿಕ್ಕೆ

ಪ್ರಾರಂಭಿಸಿದಳು. ಅವಳ ಕೈ ಮೇಲಿನ ಕೆನ್ನೆಗಳ ಮೇಲಿನ ಬಾಸುಂಡೆಗಳು ಚೆನ್ನಾಗಿ ಕಾಣುತ್ತಿದ್ದವು.

"ಉಂಟು, ಬುದ್ಧಿ ನನಗೆ ಏನು ಶಿಕ್ಷೆ ಮಾಡ್ತೀರೋ ಮಾಡಿ. ಕ್ವಾಪದ ಹೊತ್ತು, ಹೊಡೆದುಬಿಟ್ಟೆ. ಯಾಕೇ ಬಿಸಿಮುದ್ದೆ ಮಾಡ್ಲಿಲ್ಲ, ಯಾಕೇ ಕೈಗೆ ನೀರು ಎರನಿಲ್ಲ—ಅಂದರೆ ನೀನಿಟ್ಟ ಅಳಾ? ನೀ ದೊರೆ ಮಗನಾ — ಹಿಂಗೆಲ್ಲ ಅಂಬೋದ? ಅವರಪ್ಪ ಸಾವಕಾರ, ಅವರ ಹಟ್ಟಿ ದೊಡ್ಡದು ನಾನು ಗೋರ ಗರೀಬ, ನನ್ನ ಮನೆ ಸಣ್ಣದು, ಔದೇಳಿ. ಅಂತಾದ್ದರಲ್ಲಿ ಮದುವೆಯಾಗಬಾರದಿತ್ತೇಳಿ. ಮದುವೆಯಾದ ಮೇಲೆ ಹೆಂಡರಾಗಿರಬೇಕೋ ಇಲ್ಲೋ, ಸಂಪನ್ನೆ? ಮೊದಲು ಸರಿಯಾಗೇ ಇದ್ದಳು. ಈಚೆಗೆ ಅವರ ತಾಯಿ ಏಳಿಕೊಟ್ಟು ನನ್ನ ಸಂಸಾರ ಕೆಡಸಿಬುಟ್ಲು. ನಾನು ಶಾಲೆ ತಂದುಕೊಟ್ರೆ ಉಡೊಲ್ಲ—ನಾನು ನಂಟ್ರ ಮನೆಗೆ ಕರೆದರೆ—ಊಹೂ—ಮಾನಕ್ಕಡಮೆ ನನ್ನ ಜತೆಗೆ ಬರೋಕೆ — ಯಾವಾಗಲೂ ತಲೇ ಬಿರೀಹಾಕ್ಕೊಂಡು ಅಳೋದು — ಅಯ್ಯೋ ನನ್ನ ಬಾಳು ಬ್ಯಾಡ್ಲೇಳಿ"

ಅವನ ಕಣ್ಣಿನಲ್ಲಿ ನೀರು ಧಾರಾಳವಾಗಿ ಸುರಿಯಲಾರಂಭಿಸಿತು.

"ಅವಳ್ನ ವಡೀಬೇಕೂ ಅಂತ ವಡದವನಲ್ಲ. ಬಿಸಲಲ್ಲಿ ದುಡಿದು, ಬೆಂಡಾಗಿ, ನೀರು ಕಂಡೇನೇ ಅಂತ ಬಂದರೆ, ಒಂದು ವಳ್ಳೇ ಮಾತು ಬ್ಯಾಡವ? ಕ್ವಾಪ ಬರಿಸಿ ವಡಿಸಿಕೊಂಡು ನನ್ನ ಹೊಟ್ಟೆ ಉರಿಸೋದೇ, ಈ ಮೂದೇವಿ? ಜೇಲಿಗೆ ಕಳಿಸಿ ಬುದ್ಧಿ — ನಾನು ಕೇಳ್ಕೊಂಡು ಬಂದದ್ದಾಗಲಿ"

ಹೀಗೆ ಮಾತನಾಡುತ್ತಿದ್ದಾಗ ಗಂಡಹೆಂಡರು ಒಬ್ಬರ ಕಡೆ ಒಬ್ಬರು ನೋಡುತ್ತಿದ್ದದ್ದನ್ನು ನಾನು ನೋಡಿದೆ. ಮೊದಲು ಕೋಪ, ಆಮೇಲೆ ಕನಿಕರ, ಆಮೇಲೆ ಪಶ್ಚಾತ್ತಾಪ ಬೆರಕೆಯಾದ ಪ್ರೇಮ.

"ಸರಿ. ಕೈಹಿಡಿದ ಹೆಂಡತಿಯನ್ನು ದನವನ್ನ ಹೊಡೆದ ಹಾಗೆ ಹೊಡೆದೆನೆಂದು ನೀನೇ ಒಪ್ಪಿದ್ದಿ. ನಿನಗೆ ಸಜ ಹಾಕಿ, ಅವಳನ್ನ ಅವಳ ತವುರು ಮನೆಗೆ ಕಳಿಸುತ್ತೇನೆ. ಯಾರೋ ಅಲ್ಲಿ! ಇವನ್ನ ಲಾಕಪ್ಪಿಗೆ

ತೊಗೊಂಡು ಹೋಗು. ನಿನ್ನ ಮಗಳನ್ನು ನಿಮ್ಮ ಮನೆಗೆ ಕರಕೊಂಡು ಹೋಗು, ಗೌಡ" ಹೀಗೆಂದು ಹೇಳಿ ಎದ್ದೆ.

ಗೌಡ, ಬಾರವ್ವ! ಎಂದು ಮಗಳ ಕೈಹಿಡಿದು ಕರೆದ. ಅವಳು ಕೈವದರಿ ಬಿಡಿಸಿಕೊಂಡು ನನ್ನ ಕಾಲಿಗೆ ಬಿದ್ದು—

"ಬೇಡಿ ನನ್ನೊಡೆಯ, ಅವರು ಏಳಿದ್ದು ಸತ್ಯ ಏಳಿ. ಅವರಿಗೆ ನಾನೇ ಕ್ವಾಪ ಬರಿಸಿದಿ. ಅವರು ಇವರು ಆಡಿದ ಮಾತಿಗೆ ಮುನಿಸಿಕೊಂಡಿದ್ದಿ; ಜೀವಕ್ಕೂ ಚಂದಾಗಿರಲಿಲ್ಲ—ಏನೋ ಅಂದುಬುಟ್ಟೆ. ಗಂಡಸರಿಗೆ ಕ್ವಾಪ ಬರೋಲ್ವಾ, ಏಳಿ? ಏಟು ಬಾಳ ಪಿರೀತಿ ಇದ್ದರೂ ಗಂಡ ಯಂಡರಿಗೆ ವಡೀದೇಲೆ ಇರೊಕಾಗ್ತದಾ? ನೀವೇ ಮನೇಲಿ ಒಂದೇಟೂ ವಡದಿಲ್ಲವಾ?"

ನಾನು ನಗುವನ್ನು ತಡೆದುಕೊಂಡು—

"ಇಲ್ಲಾ, ಕಾಣಮ್ಮ, ಸತ್ಯವಾಗೂ ಇಲ್ಲ. ಯಾಕಂತೀಯೋ, ನನ್ನ ಯಜಮಾನಗಿತ್ತಿ ನಾನು ಬಿಸಲಲ್ಲಿ ಬೆಂಡಾಗಿ ನೆಳಲು ಕಂಡೇನೆ ಅಂತ ಮನೆಗೆ ಬಂದಾಗ ಮೊಖ ಗಂಟು ಹಾಕಿಕೊಂಡು ನನಗೆ ಎದುರು ಮಾತಾಡೋಲ್ಲ; ನಾನು ಮೆಚ್ಚಬೇಕೆಂದು ತಲೇ ಬಾಚಿಕೊಂಡು, ಹೂ ಮುಡಿದು, ನಗನಗತಾ, ಪ್ರೀತಿ ಮಾತನಾಡಿ ನನಗೆ ಊಟಕ್ಕಿಟ್ಟು ಉಪಚಾರ ಮಾಡ್ತಾರೆ; ಸಾಹುಕಾರರ ಮನೆ ಹೆಣ್ಣಾದರೂ ಆ ಜಂಭದಿಂದ ನನ್ನನ್ನು ಹೀಯಾಳಿಸೋದಿಲ್ಲ, ನಮ್ಮ ಮನೆ ಮಾತು ಹೆರರಿಗೆ ಬಾಯಿ ಬಿಡೋಲ್ಲ— ಸರ್ಕಾರಕ್ಕೆ ತಿಳಿಸೋದು ಹಾಗಿರಲಿ. ನಮ್ಮ ಮಾತನ್ನ ತನ್ನ ಹೆತ್ತ ತಾಯಿಗೇ ಉಸರೋದಿಲ್ಲ; ಅದಕ್ಕೋಸ್ಕರ ನಾನು ಆಕೆಗೆ ಯಾವಾಗಲೂ ಒಂದೇಟೂ ಹೊಡೇಬೇಕಾಗಲಿಲ್ಲ. ನಿನ್ನ ಗಂಡನ್ನ ಈಗಂತೂ ಜೈಲಿಗೆ ಕಳಿಸುತ್ತೇನಲ್ಲ, ಅವ ಹೊರಕ್ಕೆ ಬಂದ ಮೇಲಾದರೂ ನಮ್ಮ ಮನೆಯಾಕೆ ಮಾಡ್ತಾರೇ ಅಂತ ಹೇಳಿದೆನೆಲ್ಲ, ಹಾಗೆ ಮಾಡಿ ನೋಡು, ತೆಗೆದುಕೊಂಡು ಹೊಗೋ ಅವನ್ನ, ಲಾಕಪ್ಪಿಗೆ!" ಎಂದೆ.

"ಅಯ್ಯೋ ಬೇಡಿ ಬುದ್ಧಿ! ನನ್ನ ಬಾಳು ಮುರೀಬೇಡಿರಿ" ಅಂತ ಗೋಗರೆದಳು.

"ನೀನು ಏನು ಹೇಳಿಯೋ ? ನಿನ್ನ ಹೆಂಡತಿಯನ್ನು ಸರಿಯಾಗಿ ಬಾಳಿಸುವುದಾದರೆ, ಈ ಸಲಕ್ಕೆ ನಿನ್ನಿಂದ ಮುಚ್ಚಳಿಕೆ ಬರೆಸಿಕೊಂಡು, ನಿನ್ನ ನಡತೆಯನ್ನು ಕೆಲವುಕಾಲ ನೋಡುತ್ತೇವೆ. ಇಲ್ಲವಾದರೆ ಇವತ್ತು ಲಾಕಪ್ಪು, ನಾಳೇ ಜೈಲು!"

ಅವನು ನನ್ನ ಕಾಲಿಗೆ ಬಿದ್ದು, ಅಳುತ್ತ—"ನನ್ನ ಅಪ್ಪ ಅವ್ವ ನೀವೇ! ನೀವು ಹೇಳಿದ್ಹಾಂಗೆ ಕೇಳ್ತೇನಿ. ನನ್ನ ಹೆಂಡರು ಬಾಳವಳು ಮನಸಿನೋಳು. ಕಂಡೋರ ಮಾತು ಕೇಳಿ ಮೂದೇವಿಯಾಗಾಡ್ತಾಳೆ. ಅವಳಿಗೂ ಬುದ್ಧಿ ಹೇಳಿ ನನ್ನ ವಡೆಯ"

ಅವನಿಂದ– ಇವೊತ್ತು ಮಾಡಿದ್ದು ತಪ್ಪಾಯಿತು, ಕೋಪದಿಂದ ಬುದ್ಧಿ ಕೆಟ್ಟು ಹೀಗೆ ನನ್ನ ಹೆಂಡತಿಯನ್ನು ಹೊಡೆದೆ, ಈ ದಫಕ್ಕೆ ಮಾಫ್ ಮಾಡಬೇಕು. ನನ್ನ ಹೆಂಡತಿಯನ್ನು ಮುಂದೆ ಸೌಖ್ಯವಾಗಿ ಮಾನವಾಗಿ ಕಾಪಾಡುತ್ತೇನೆ ತಪ್ಪಿದರೆ ನನ್ನ ಬದುಕನ್ನೆಲ್ಲಾ ಅವಳ ಹೆಸರಿಗೆ ಮಾಡಿ, ನನಗೆ ತಕ್ಕ ಶಿಕ್ಷೆ ಮಾಡಬಹುದು— ಎಂದು ಮುಚ್ಚಳಿಕೆ ಘಟ್ಟಿಯಾಗಿ ಹೇಳಿ ಬರೆಸಿ, ಅವನ ರುಜುಹಾಕಿಸಿ ಅವನ ಮಾವನ ಮತ್ತು ಅಲ್ಲಿದ್ದ ಇನ್ನೊಬ್ಬಿಬ್ಬರ ಸಾಕ್ಷಿ ಹಾಕಿಸಿ, ಗಂಭೀರವಾದ ಮುಖದಿಂದ ಅದನ್ನು ನನ್ನ ಸ್ವಂತ ಆಫೀಸು ಪೆಟ್ಟಿಗೆಯಲ್ಲಿ ಹಾಕಿಕೊಂಡೆ. ಆ ಹುಡುಗಿಗೆ,

"ನಮ್ಮ ಯಜಮಾನಗಿತ್ತೀನ ನಾನು ಹೊಡೆಯದೇ, ಇರುವುದು ಯಾಕೆ ಅಂತ ಹೇಳಿದೆನಲ್ಲ, ತಾಯಿ ನೀನೂ ಹಂಗೇ ನಡಕೋಬೇಕು. ನಿನ್ನ ಗಂಡನ ಉಪಚಾರ, ಊಟ, ಎಲೆ ಅಡಿಕೆ, ನಗಸಾರ ಇವನ್ನೆಲ್ಲಾ ಸರಿಯಾಗಿ ನೋಡಿಕೊಂಡು ಖುಷಿಯಾಗಿಟ್ಟುಕೊಳ್ಳಲಾರದಿದ್ದರೆ ಎಂಥ ಹೆಣ್ಣಮ್ಮ, ನೀನು? ನೋಡು, ಇವತ್ತು ಅವನ್ನ ಜೈಲಿಗೆ ಕಳಿಸಿದ್ದರೆ, ನೀನು ಅವನ ಪಾಲಿನ ನಾರಿಯೋ ಹೆಮ್ಮಾರಿಯೋ? ಇನ್ನು ಹೋಗಿ; ಸುಖವಾಗಿ ಬಾಳಿ; ತಿರಗಾ ನನ್ನ ತಾವ ಬರಬೇಡಿ" ಎಂದುಕಳಿಸಿಕೊಟ್ಟೆ.

ಅವರಿಬ್ಬರನ್ನೂ ನಾನು ಪುನಃ ಒಂದು ವರ್ಷದ ಮೇಲೆ ನೋಡಿದೆ. ಅವರೇ ನನ್ನನ್ನು ನೋಡಲಿಕ್ಕೆ ಬಂದರು. ಸಂಗಡ, ತಾಯಿಯ ಕಂಕುಳಲ್ಲಿ ಅವರ ಮಗೂನೂ ಇತ್ತು. ಅವರ ಮುಖದಲ್ಲಿ ಬೆಳಗುತ್ತಿದ್ದ ಆನಂದ

ದೇವರಿಗೇ ಪ್ರೀತಿ. ನಾನು ಅವರಿಗೆ ತಾಂಬೂಲ, ಮಗುವಿಗೆ ಹಣ್ಣು ಸಕ್ಕರೆ, ತರಿಸಿಕೊಟ್ಟು, ಆ ಹುಡುಗನಿಂದ ಬರೆಸಿಕೊಂಡಿದ್ದ ಮುಚ್ಚಳಿಕೆಯನ್ನು ಅವನ ಎದುರಿಗೇ ಹರಿದುಹಾಕಿ ಅವರಿಗೆ ಆಶೀರ್ವದಿಸಿ ಕಳುಹಿಸಿಕೊಟ್ಟೆ.

ಇನ್ನೊಂದು ಕತೆ. ಒಂದು ಬೆಳಿಗ್ಗೆ ನಾನು ಟೌನ್ ಅಜಮಾಯಿಷಿಗೆ ಹೊರಡಲು ಕುದುರೆಯನ್ನೇರುತ್ತಿರುವಾಗ – ಅಯ್ಯೋ ಬುದ್ಧಿ, ನನ್ನ ಮನೆ ಉಳಿಸಿ – ಎಂದು ಅರಚುತ್ತಾ ಒಬ್ಬ ಯುವಕ ನನ್ನ ಕುದುರೆಯ ಮುಂದೆ ಕೈಚಾಚಿ ಶರಣುಬಿದ್ದ. ನಾನು ಅವನನ್ನು ಏಳಿಸಿ, ಅವನ ಕಷ್ಟವೇನೆಂದು ವಿಚಾರಿಸಿದೆ.

"ಬುದ್ಧಿ, ನನ್ನ ಮನೆ ಮುರಿಯಿತು. ಸಾಲಾ ಮಾಡಿ ಮದುವೆ ಮಾಡಿಕೂಂಡ ಹೆಂಡತಿ ಒಡವೆ, ವಸ್ತು, ಶಾಲೇ, ಬಟ್ಟೆಬರ್ರೆ, ನಾನು ಸಾಲಗಾರರಿಗೆ ಕೊಡೋಣೆಂದು ಕೂಡಿಟ್ಟಿದ್ದ ದುಡ್ಡು ಕಾಸು, ಎಲ್ಲ ಸೂರೇ ಮಾಡಿಕೊಂಡು ಓಡಿಹೋಗಿದಾಳೆ ನನ್ನ ಒಡೆಯ. ನೀವು ಬದುಕಿಸಿದರೆ ಉಂಟು; ಇಲ್ಲವಾದರೆ ನೀರಿಗೆ ಬಿದ್ದುಕೊಳ್ಳುತೀನಿ" ಎಂದು ಬಿಕ್ಕಿಬಿಕ್ಕಿ ಅಳಲಿಕ್ಕೆ ಹತ್ತಿದ.

ಅವನು ಎತ್ತರವಾದ, ಒಳ್ಳೆಯ ಮೈಕಟ್ಟಿನ, ಸುಮಾರು ಇಪ್ಪತ್ತೈದು ವರ್ಷದ ಹುಡುಗ. ಗೋಳಾಟ, ದಾರಿ ನಡೆದ ಆಯಾಸಗಳಿಂದ ಮುಖ ಕೆಟ್ಟಿದ್ದರೂ, ಚೆನ್ನಾದ ರೂಪವೆಂತಲೇ ಹೇಳಬೇಕು. ನನಗೆ ಅವನು ಗಟ್ಟಿಯಾಗಿ ಗಂಟಲು ಬಿಟ್ಟು ಅತ್ತದ್ದು ಕನಿಕರವನ್ನು – ಸ್ವಲ್ಪಮಟ್ಟಿಗೆ ಅಸಹ್ಯವನ್ನೂ ಉಂಟುಮಾಡಿತು.

"ಕೇಳಿ ವ್ಯಸನವಾಗುತ್ತಪ್ಪ. ಆದರೆ, ಇದರಲ್ಲಿ ನಾವು ಏನು ಮಾಡಬೇಕು? ಪೋಲೀಸಿನಲ್ಲಿ ನಿನ್ನ ಫಿರ್ಯಾದನ್ನು ಬರೆಸು. ತನಿಖೆ ಮಾಡಿಸೋಣ" ಎಂದೆ.

"ಬುದ್ಧಿ, ಅವರನ್ನ ನಾನೇ ಪತ್ತೆಮಾಡಿದೇನೆ. ಅವರು ಊರು ಆಚೆಗೆ ಹೊಳೆಕರೆಯಲ್ಲಿನ ಗೋಸಾಯಿ ಮಂಟಪದಲ್ಲಿದ್ದಾರೆ, ಅವರನ್ನ ನಾನು ತೋರಿಸಿಕೊಡುತೀನಿ. ಹಿಡತರಿಸಿ ನನ್ನ ಸಂಸಾರ ಉಳಿಸಬೇಕು" ಅಂದ.

"ಎಲ! ಅವರು ಅಲ್ಲಿದ್ದದ್ದನ್ನ ನೋಡಿದರೆ ನೀನೇ ಯಾಕೆ ಹಿಡ ತರಲಿಲ್ಲಯ್ಯ ?"

"ನಾನು—(ಪಲಾಸೆ) ಹಳ್ಳಿಯವನು (ಪೆರಿಯಾಪಟ್ಣದ ತಾವಲ ಯಾವದೋ ಹಳ್ಳಿಯ ಹೆಸರು ಹೇಳಿದ). ಸಂತೆಗೆ ಹೋದೋಳು ನನ್ನ ಹೆಂಡತಿ ಮನೆಗೆ ಬರಲಿಲ್ಲ. ಸಂತೆಗೆ ಹೋಗಿ ಬಂದವರನ್ನ ಕೇಳಿದೆ. ಅಯ್ಯೋ ಪೆದ್ದಮುಂಡೇದೆ, ನಿನಗೆ ದಕ್ಕಿಯಾಳೇನೋ, ಅಂತ ಅರಗಿಳಿ ? ಚಿನ್ನದ ಕರಡಿಗೆ ಮರಿಶೆಟ್ಟಿ (ನನ್ನ ನೋಟು—ಹೆಸರು ಬದಲಾಯಿಸಿದ್ದೇನೆ) ಅವಳನ್ನ ಹಾರಿಸಿಕೊಂಡು ಹ್ವಾದ–ಅಂಪರು ಬೆಟ್ಟದಪುರದ ಕಡೆಗೆ ಹ್ವಾದರು; ಈಗ್ಲೇ ಬೆನ್ನತ್ತಿದರೆ ಸಿಕ್ಕಬೌದು–ಅಂದರು ನಾನು ನನ್ನ ಚಿಕ್ಕಪ್ಪನ್ನ ಕರಕೊಂಡು ಹೊರಟೆ. ಬೆಟ್ಟದಪುರದಲ್ಲಿ, ಹೊಸೂರಿಗೆ ಹ್ವಾದರು, ಅಂದರು. ಹೊಸೂರಲ್ಲಿ, ಚುಂಚನಕಟ್ಟೇಲಿ ವಿಚಾರಿಸು, ಅಂದರು. ಕೊನೆಗೆ ಗೋಸಾಯಿ ಗಟ್ಟದ ಮಂಟಪದಲ್ಲಿ ಪತ್ತೇಮಾಡಿದೆವು. ನಾನು–ಅವರಿಬ್ಬರನ್ನೂ ಒಂದೊಂದೇ ಏಟಿಗೆ ತರಿದು ಆಕಿಬಿಡೋಣವೇ—ಅಂತ ಮುಂದೆಬಿದ್ದೆ ನಮ್ಮ ಚಿಕ್ಕಪ್ಪ ನನ್ನ ತಡೆದ–ಹಂಗೆ ಮಾಡಿದರೆ ನಿನ್ನ ಬಾಳು ನೆಟ್ಟಗಾಯಿತ? ನಿನ್ನೂ ಗಲ್ಲಿಗೆತ್ತಿಬಿಡ್ತಾರೆ, ಸರ್ಕಾರದೋರು. ಒಂದು ಉಪಾಯ ಏಳ್ತೀನಿ ಕೇಳು—ಅಂದವನೇ ನನ್ನ ಅಲ್ಲೇ ಕಾವಲಿಟ್ಟು, ಚಂದಗಾಲಿಗೆ ಹೋಗಿ, ಪಟೇಲನನ್ನ ಕರಕೊಂಡು ಬಂದು, ಅವರನ್ನ ಅಲ್ಲೇ ಮಂಟಪದಲ್ಲಿ ಕೂಡಿ, ನನ್ನನ್ನ–ದಣಿ ಹತ್ರ ಆವಾಲು ಏಳಿಕೋ ಅಂತ ಕಳಿಸಿಕೊಟ್ಟ" ಎಂದು ಹೇಳಿದ.

ಭಲೇ, ಚಿಕ್ಕಪ್ಪ ಬುದ್ಧಿವಂತ. ಮಗನಿಗೆ ಚಿಕ್ಕ ವಯಸ್ಸಿನಲ್ಲೇ ಬಾಳೂ ಮುರಿದು, ಫಾಶಿಯೂ ಆಗುವುದನ್ನು ತಪ್ಪಿಸಿದ, ಎಂದುಕೊಂಡು, ಅವನ ಸಂಗಡ (ಅವನ ಹೆಸರು ಮಾದಯ್ಯನೆಂದು ಇಟ್ಟುಕೊಳ್ಳೋಣ) ಇಬ್ಬರು ಪೋಲೀಸಿನವರನ್ನು ಕಳುಹಿಸಿ, ಅವನು ತೋರಿಸುವ ಜನಗಳನ್ನು ಹಿಡಿದು ತಂದು ಕಛೇರಿಯ ಹತ್ತಿರ ಇಟ್ಟುಕೊಂಡಿರಲು ಆಜ್ಞೆಮಾಡಿ, ಕಳುಹಿಸಿಕೊಟ್ಟೆ.

ನಾನು ಊರಗಸ್ತು ಮುಗಿಸಿಕೊಂಡು ಕಛೇರಿಗೆ ಬಂದಾಗ, ಗಂಡ, ಹೆಂಡತಿ, ಮೂರನೆಯವನು, ಚಿಕ್ಕಪ್ಪ ಎಲ್ಲರೂ ಹಾಜರಿದ್ದರು.

ಆ ಫರಾರಿ ಹೆಣ್ಣು – ಸುಮಾರು ಇಪ್ಪತ್ತು ವರ್ಷದ ಅಂದವಾದ ಮೈಕಟ್ಟಿನ ತರುಣಿ. ಎಣ್ಣೆಗಪ್ಪು ವರ್ಣ; ಸುಂದರವಾದ ಮುಖ. ಪ್ರತಿಯೊಂದು ಚಲನೆಯಲ್ಲೂ ಭಾವದಲ್ಲೂ ಯೌವನ ಮತ್ತು ಆರೋಗ್ಯ ಸಂಪತ್ತಿಯ ಧಾಷ್ಟ್ರ್ಯ ಕಾಣುತ್ತಿತ್ತೇ ಹೊರತು, ದುಷ್ಟಸ್ವಭಾವದ ಅಥವ ಕೆಟ್ಟ ಜೀವನದ ನಿರ್ಲಜ್ಜೆ ಇರಲಿಲ್ಲ. ಮಾಡಬಾರದ, ಕ್ಷಮೆ ಇಲ್ಲದ, ಪಾತಕ ಮಾಡಿದ್ದೇನೆ, ಅದರ ಫಲ ಉಣ್ಣಲೇಬೇಕು, ಗೋಗರೆದು ಏನು ಪ್ರಯೋಜನ? ಆದದ್ದಾಗಲಿ ನನ್ನ ಹಣೇಲಿ ಬರೆದದ್ದು – ಎಂಬ ನಿರಾಶಾ ಭಾವ ಆ ಧೀರ ಮುಖದಲ್ಲಿ ನನಗೆ ಕಂಡಿತು. ಅಯ್ಯೋ ಪಾಪ, ಅರಿಯದ ಮಗು – ಬುದ್ಧಿ ಹೇಳುವರಿಲ್ಲದೆ, ದುಷ್ಟರ ಮಾಯೆಗೆ ಒಮ್ಮೆ ಮರುಳಾಗಿ ಬಿದ್ದರ, ಅವಳ ಜೀವನವೇ ಹಾಳಾಗಬೇಕೆ? ಎಂದು ಬಹಳ ಮರುಕಗೊಂಡೆ One more unfortunate (ಇನ್ನೊಬ್ಬಳು ದುರ್ದೈವಿ) ಎಂಗು ಪ್ರಾರಂಭವಾಗುವ ಹುಡ್ ಕವಿಯ ಪದಗಳು ನೆನಪಿಗೆ ಬಂದವು.

ಕನಕ ಕರಡಿಗೆ ವ್ಯಾಜದಿಂದ ಆ ಹುಡುಗಿಯನ್ನು ಉಪಹರಿಸಿದ ಮರಿಶೆಟ್ಟಿಯೋ? ಅವನು ಮನ್ಮಥನಲ್ಲ; ಹತ್ತು ತಲೆಗಳ ಧೀರ ರಾವಣನಲ್ಲ ಸುಮಾರು ನಲವತ್ತು ನಲವತ್ತೈದು ವರ್ಷದ, ಸ್ವಾಭಾವಿಕವಾಗಿ ದುರ್ಬಲವಾದ್ದೋ, ಅಥವ ಕೆಟ್ಟಜೀವನದಿಂದ ಶಿಥಿಲವಾದ್ದೋ, ಕೋಲು ನೀಳಾದ ಶರೀರದ, ಕುಣಿಗಣ್ಣಿನ, ಬತ್ತಿದ ಕೆನ್ನೆಗಳ, ಷೋಢ ಭಾವದ, ಮನುಷ್ಯ. ಈಗ ಬಹಳ ಬೆದರಿ, ಚಂಚಲವಾದ ದೃಷ್ಟಿಯಿಂದ ಇತ್ತ ಅತ್ತ ನೋಡುತ್ತಿದ್ದಾನೆ; ಆದರೂ ಅವಕಾಶ ಕುದುರಿದರೆ ಅಧಿಕ ಪ್ರಸಂಗಿಯಾಗಿ ಎದುರು ಬೀಳುವ ಸ್ವಭಾವದವನೆಂದು ತೋರಿತು.

ಸರಿ; ವಿಚಾರಣೆ ಮೊದಲು ಮಾಡಿದೆ. ಮಾದಯ್ಯ ಮೊದಲಿನಂತೆಯೇ ತನ್ನ ಫಿರ್ಯಾದನ್ನು ಹೇಳಿದ. ಅವನು ಮೊದಲು ಹೇಳಿದ ಕತೆಯಲ್ಲಿನ ಕಳುವಾಗಿ ಹೋಗಿದ್ದ ಸ್ವತ್ತುಗಳು ಎರಡನೆಯ ಕತೆಯಲ್ಲಿ ಸ್ವಲ್ಪ ಹಿರಿದಾಗಿದ್ದವು. ಒಡವೆಗಳ ವೈಖರಿಯನ್ನೂ ಶೀರೆಗಳ ಸೊಗಸನ್ನೂ ಅವನು ವರ್ಣಿಸಲು ಪ್ರಾರಂಭಿಸಿದಾಗ, ಅದುವರಿಗೂ ತಲೆ

ಬಗ್ಗಿಸಿಕೊಂಡಿದ್ದ ಅವನ ಹೆಂಡತಿ, ಮೊದಲು ಆಶ್ಚರ್ಯದಿಂದಲೂ, ಆಮೇಲೆ ಆ ದುರವಸ್ಥೆಯಲ್ಲೂ ತಡೆಯಲಾಗದ ಮುಗುಳುನಗೆಯಿಂದಲೂ, ಅವನ ಕಡೆಯೇ ರೆಪ್ಪೆಹಾಕದೆ ನೋಡುತ್ತಿದ್ದಳು. ಕತೆ ಮುಗಿದ ಮೇಲೆ ನಾನು — " ಕೇಳಿದಲ್ಲ, ಅಮ್ಮ, ನೀನು ಏನು ಹೇಳುತ್ತಿ ? "— ಎಂದೆ.

" ಬುದ್ಧಿ, ನಮ್ಮಪ್ಪ - ನಿಮ್ಮ ಪಾದದಾಣೆ ಆ ವಸ್ತ್ರಾನ, ಆ ಒಡವೇನ, ಆ ಪಟ್ಟೇಶಾಲೇನ, ಕಾಣೋ ಪುಣ್ಯ ಕೇಣಿಕೊಂಡು ಬಂದಿವನ, ನಾನು ? ಹೊಟ್ಟೆತುಂಬ ಇಟ್ಟು, ಮೈತುಂಬ ಬಟ್ಟೆ ಕೊಟ್ಟಿದ್ದರೆ ಈ ಪಾಡೆ ? " ಎಂದು ಅಳೋಕಿಟ್ಟಳು.

ನಾನು,

" ಅಳಬೇಡ ಮಗು ; ಹೋಗಲಿ, ಚಿನ್ನ ಬೆಳ್ಳಿ, ಬಟ್ಟೆ ಎಲ್ಲ ಸುಳ್ಳು ಅನ್ನೋಣ ; ಆದರೆ, ಕೈಹಿಡಿದ ಗಂಡ ಬಡವ ಅಂತ ಮನೆ ಮುರಿದು ಓಡಿಹೋಗೋದು ಸರಿಯೇನಮ್ಮ ? "

" ಅಯ್ಯೋ ಏನು ಗಂಡ ಏಳಿ ! ಎಂಡೊತ್ತೂ ಕಂಡೋರ ಮನೆ ಜೀತಕ್ಕೆ ದುಡಿಯೋದು, ಮಾತಿಲ್ಲ, ಕತೆ ಇಲ್ಲ - ಮನ್ಯಾಗ ಏನು ಸುಕ ಜೀವಕೆ ? " ಎಂದು ಪುನಃ ಅಳು.

ನಾನು ಕೋಪ ಬಂದವನಂತೆ —

" ಅವನು ನಿನಗೆ ಲಾಯಃಖಾದ ಗಂಡನಲ್ಲ ಅಂತೀಯಲ್ಲ, ಈ ಮುದಿಗೂಬೇನ ಮೆಚ್ಚಿ ಕಟ್ಟಿಕೊಂಡು ಓಡಿಬಂದಿದ್ದಿಯಲ್ಲ, ಅವನು ಭಲೇ ಶೂರ ಹಮ್ಮೀರನೋ ? ಅವನು ನಿನ್ನ ಮದುವೆಯಾಗುತ್ತಾನೆಯೋ ? ನಿನ್ನನ್ನ ಸಾಯೋವರಿಗೂ ಕಾಪಾಡ್ಯಾದರೂ ಕಾಪಾಡುತ್ತಾನೆಯೇ ? "

ಅವಳು, "ಅವನೂ ಅಷ್ಟೇ ಏಳಿ ; ಹ್ಯಂಗೋ, ಹಿಂಗೂ ಕೆಟ್ಟೆ ಹಂಗೂ ಕೆಟ್ಟೆ" - ಎಂದು ಸೆರಗಿನಿಂದ ಮುಖಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅತ್ತಳು.

ನಾನು ಮರಿಶೆಟ್ಟಿಯನ್ನು ವಿಚಾರಿಸಲಾಗಿ ಅವನು,

" ಸ್ತಿರಿ (ಸ್ತ್ರಿ) ಯರ ಶೋಬಾವ (ಸ್ವಭಾವ) ತಮ್ಮಂತ ಶಕಲವನ್ನು ತಿಳಿದವರಿಗೆ ನಮ್ಮಂತವರು ಏಳಬೇಕೆ ? ಈ ಎಣ್ಣು ಸಂತೆಸಂತೆಗೂ

ಬಂದು, ವಿಲಾಶ ಮಾಡಿ, ಸಂಸಾರಿಯಾದ ನನ್ನ ಮರಳು ಮಾಡಿ, ಮಂಕು ಬೂದಿಚಲ್ಲಿ, — ನನ್ನ ಕರಕೊಂಡು ಹೋಗು — ನಿನ್ನ ಮೇಲೆ ನನಗೆ ಪರಾಣ – ಹೀಗೆ ಬೇಜಾರು ಬರಸೋಳು. ನಾಸು – ಬ್ಯಾಡವ್ಮ, ನೀ ಬದುಕೋಳು, ಬಾಳೋಳು; ಅತವ ಅಲ್ಲ, ಹಂಗೇನಾದರೂ ಬೇಕಾ ದರೆ, ಮನ್ಯಾಗೆ ಇದ್ದುಕೊಂಡು ಮಾಡಿಕೋವ್ವ, ನಿನ್ನ ಗಂಡ ಎರಡೊತ್ತೂ ಇದ್ದಾನಾ? ಅಂಬ್ಲಿ ಕುಡಿಯೋಕೆ ಬಂದೋರು ಅಳಿಗೆ ಕದ್ದುಹೋಗ ಬೇಕಾ? ಎಂದು ಎಷ್ಟೋ ಬುದ್ಧಿ ಏಳಿದೆ. ಆ ಮೂರ್ಕ (ಮೂರ್ಖ) ಇಡದ ಅಟ ಬಿಡದೆ – ಕಪಿಮುಷ್ಟಿ ಅಂದರೆ ಕಪಿಮುಷ್ಟಿ, ಏಳಿ – ಅಂಗಾದ್ರೆ ಹೊಳೆಗೆ ಬಿದ್ದುಗೊಳ್ತೀನಿ — ಬಾವಿಗೆ ಬೀಳ್ತೀನಿ — ಇಶ ಕುಡಿದೋ, ಉರಳು ಆಕ್ಕೊಂಡೋ ಪರಾಣ ಬಿಟ್ಟು, ದೆವ್ವಾ ಆಗಾ ದರೂ ನಿನ್ನ ಬಿಡೋದಿಲ್ಲ — ಅಂತ ಕಾಡಿಸೋಕೆ ಶುರೂ ಮಾಡಿದಳು ಅಯ್ಯೋ ಇದೇನು ಬಂತಪ್ಪ ಘಾಚಾರ ಅಂದುಕೊಂಡೆ. ಅವಳಿಗೆ ತಿಳೀದೆ ಸಂತೆಯಿಂದ ಹೊರಟು ಹೋಗೋಣೆಂದು ಹರಟೆ ಹಿಂದೇ ಬರಬೇಕೆ, ಈ ನಾಚಿಕ್ಕೆಟ್ಟ ಮೂಳಿ? ನಾನೂ ನರಮನಸ್ಸನಲ್ಲವೆ, ಸಾರ್? ಯಿಂತೆಂತವರೋ — ವಿಶ್ವಾಮಿತ್ತರೂ, ನಾರದರೂ, ಇಂತ ಮಹಾರುಸಿಗಳೇ — ಸ್ತಿರಿಯರ ಪಾಷಕ್ಕೆ ಕಟ್ಟುಬೀಳ್ಳಿಲ್ಲವೇ? ನಮ್ಮಂತ ನರಮನುಸ್ಯರ ಪಾಡೇನು—"

ಅವನು ಪೇಟೆ ಸ್ಥಳಗಳಲ್ಲಿ ಮಾತು ಕಲಿತ ಪ್ರಾಜ್ಞ. ಅವನ ನಾಗರಿಕತೆಗೂ ರೂಪಕ್ಕೂ ತೇಜಸ್ಸಿಗೂ ಮೆಚ್ಚಿ ಆ ಹುಡುಗಿ ಬೇಡ ವೆಂದರೂ ಅವನ ಬೆನ್ನುಹಿಡಿದು ಬಂದಳಂತೆ. ನನಗೆ ಹೇಳಲಾಗ ದಷ್ಟು ಅಸಹ್ಯವಾಗಿ ಅವನಿಗೆ ನನ್ನ ಕೈಲಿದ್ದ ಕುದುರೇ ಛಡಿಯಿಂದ ನಾಲ್ಕೈದು ರಸವತ್ತಾದ ಪೆಟ್ಟು ಹೊಡೆದೆ. ಪೋಲೀಸು ಇನ್ಸ್ಪೆಕ್ಟರನ್ನು ಕರೆಸಿ — ಈ ಸಂಗತಿ ಚೆನ್ನಾಗಿ ವಿಚಾರ ಮಾಡಿ, ಭಯ ನಯ ಎಲ್ಲ ಉಪಯೋಗಿಸಿ, ಸಾಧ್ಯವಾದರೆ ಆ ಯುವಕ ದಂಪತಿಗಳ ಸಂಸಾರವನ್ನು ಉಳಿಸಿ, ಪಾಪ. ಅವರಿಗೆ ಏನಾದರೂ ಪರಿಹಾರವನ್ನೂ ಕೊಡಿಸೋಣ — ಎಂದು ನನ್ನ ಇಂಗಿತವನ್ನು ಸೂಚಿಸಿ—ಚಂದಗಾಲು ಪಟೇಲನನ್ನೂ, ಅಲ್ಲಿ ಆಗ ಸೇರಿದ್ದ ಮೂರು ನಾಲ್ಕು ಜನ ದೊಡ್ಡಮನುಷ್ಯರನ್ನೂ

ಪಂಚಾಯಿತರನ್ನಾಗಿ ಇನ್‌ಸ್ಪೆಕ್ಟರ ಸಹಾಯಕ್ಕೆ ನೇಮಿಸಿ, ನಾನು ಕಛೇರಿಯೊಳಕ್ಕೆ ಹೋದೆ. ಸ್ವಲ್ಪ ಕಾಲವಾದ ಮೇಲೆ, ಇನ್‌ಸ್ಪೆಕ್ಟರು ವ್ಯವಹಾರದ ಕಕ್ಷಿಗಾರರರನ್ನೂ ಪಂಚಾಯಿತರನ್ನೂ ಕರೆದುಕೊಂಡು ನಾನಿದ್ದ ಕಡೆಗೆ ಬಂದು—"ಫೈಸಲಿಗೆ ಬಂತು, ಸರ್; ತಾವು ಒಪ್ಪಿದರೆ ಅದರಂತೆ ಜಾರಿ ಮಾಡಿಸುತ್ತೇನೆ"— ಎಂದು ತಿಳಿಸಿದರು.

ಹ್ಯಾಗೆ ? ಎಂದು ಕೇಳಿದೆ.

"ಹೇಳಿರಯ್ಯ, ಪಂಚಾಯತದಾರ್ರೇ," ಎಂದರು. ಪಂಚಾಯತರ ಪರವಾಗಿ ಯಜಮಾನ ಮಲ್ಲಪ್ಪ (ಅದು ಅವರ ನಿಜವಾದ ಹೆಸರಲ್ಲ, ತಿಳೀತೆ) ಪಂಚಾಯತರ ತೀರ್ಪನ್ನು ಈ ರೀತಿ ವಿವರಿಸಿದರು:

"ಮರಿಶೆಟ್ಟಿ ತಾನು ಮಾಡಿದ್ದು ಬಹಳ ಉಚ್ಚಕೆಲಸ, ತಾನು ಒಂದು ನೂರು ರೂಪಾಯಿಗಳನ್ನು ಗಂಡ ಮಾದಯ್ಯನಿಗೆ ದಂಡವಾಗಿ ಕೊಡಲು ಸಿದ್ಧವಾಗಿದ್ದೇನೆಂದು ಒಪ್ಪಿದ್ದಾನೆ. ಕೆಂಪಮ್ಮ ಸಂಪನ್ನೆ, ಅವಳ ಪಾತಿವ್ರತ್ಯ ಭಂಗವಾಗಿಲ್ಲವೆಂದು ಪ್ರಮಾಣ ಮಾಡುತ್ತಾನೆ; ಆ ಹೆಣ್ಣುಮಗಳೂ ಹಾಗೇ ಹೇಳುತ್ತಾಳೆ. (ಇದನ್ನು ಹೇಳಿದಾಗ ಮಲ್ಲಪ್ಪನವರ ಮುಖದಲ್ಲಿ ಹುಸುನಗೆಯ ಛಾಯವಿತ್ತೋ? ಅಥವ ಇತ್ತೆಂದು ಕೇವಲ ನನ್ನ ಊಹೆಯೋ?) ಮಾದಯ್ಯ ಇದಕ್ಕೆ ಒಪ್ಪಿ ತನ್ನ ಹೆಂಡತಿಯನ್ನು ತನ್ನ ಮನೆಗೆ ಕರೆದುಕೊಂಡು ಹೋಗುವುದಾಗಿ ನಮಗೆ ತಿಳಿಸಿದ್ದಾನೆ; ಆಕೆಯೂ ಅದಕ್ಕೆ ಸಮ್ಮತಿಸಿ, ಇನ್ನುಮೇಲೆ ಮಾನವಾಗಿ ಗರತಿ ಬಾಳು ಬಾಳುವಂತೆ ದೇವರಲ್ಲಿ ಆಣೆಯಿಟ್ಟಿದ್ದಾಳೆ. ಖಾವಿಂದರು ಈ ನ್ಯಾಯವನ್ನು ಮಂಜೂರ್ಮಾಡರೆ ಅದರಂತೆ ನಡೆದುಕೊಳ್ಳುತ್ತಾರೆ."

ನಾನು ಪಾರ್ಟಿಗಳನ್ನು ಕೇಳಲಾಗಿ "ಸರಿ ಬುದ್ಧಿ" "ಉಂಟು ಬುದ್ಧಿ" "ಇನ್ನೇನು ಮಾಡೋದು" ಹೀಗೆ ವಿವಿಧವಾಗಿ ಅಂಗೀಕಾರವನ್ನು ಸೂಚಿಸಿದರು. ನಾನು ಅದಕ್ಕೆ ನನ್ನ ಮಂಜೂರಾತಿಯನ್ನು ಕೊಟ್ಟು ಅವರುಗಳಿಗೆ ಬುದ್ಧಿವಾದವನ್ನು ಹೇಳಿದೆ.

ಕೆಂಪಮ್ಮನಿಗೆ – ನಿನ್ನ ಗಂಡ ಒಳ್ಳೇವನವ್ಮಾ, ಮುಂದಕ್ಕೆ ಬರೋ ಹುಡುಗ. ನೀನೂ ಮೊಖ ನೋಡಿದರೆ ಒಳ್ಳೇವರ ಹೊಟ್ಟೇಲಿ

ಹುಟ್ಟಿದವಳ ಹಾಗೆ ಕಾಣುತ್ತಿ. ಈ ದಫಾಕ್ಕೆ ನಿನ್ನ ಹಣೇಬರಹ ಚನ್ನಾಗಿದ್ದದ್ದಕ್ಕಾಗಿ–ನಿನ್ನ ಬಾಳು ಉಳಿಯಿತು. ಇನ್ನುಮೇಲಾದರೂ ಜಾಣೆಯಾಗಿ ಸಂಪನ್ನೆಯಾಗಿರಮ್ಮ"

ಅವಳ ಗಂಡನಿಗೆ—

"ಹೆಂಡತಿಗೆ ಹಿಟ್ಟು ಬಟ್ಟೆ ಕೊಟ್ಟರೆ ಸಾಲದು ಕಾಣಯ್ಯ. ಪ್ರೀತಿ ಮಾಡಬೇಕು. "ನಿನ್ನಂಥ ಚಂದುಳ್ಳ ಚಲುವೆಯಿಲ್ಲ" ಅಂತ ನೋಡಿಕೋಬೇಕು. ನಗನಗತ, ಮಾತು, ಕತೆ, ಕುಷಿ, ಇವೆಲ್ಲ ಮಾಡಿ ಸಂತೋಷವಾಗಿಟ್ಟುಕೊಂಡಿದ್ದರೆ ಅವಳಿಗೂ ನಿನ್ನ ಮೇಲೆ ಪ್ರೀತಿ ಹುಟ್ಟಿ, ನಿನಗಾಗಿ ಪ್ರಾಣಾನಾದರೂ ಕೊಡ್ತಾಳೆ ಕೇಳಿದ್ದೀಯಲ್ಲ, ವಲಿದರೆ ನಾರಿ, ಮುನಿದರೆ ಹೆಮ್ಮಾರಿ ಅಂತ. ಮನೆಗೆ ಕರೆದುಕೊಂಡು ಹೋಗು ಇದನ್ನೆಲ್ಲಾ ಮರೆತುಬಿಡು. ಮುನಿಸಿನಲ್ಲೂ ಈ ಮಾತು ಮಾಕರಿಸಬೇಡ"

"ಬುದ್ಧಿ, ಹಂಗೇ ಮಾಡ್ತೀನಿ ನಾನು ಬಡವ. ವಸಿ ಬೂಮಿ ಗೀಮಿ ಇದ್ದರೆ ನಾನೂ ನನ್ನ ಹೆಂಡರೂ ಗೇಕೊಂಡು ಸುಖವಾಗಿದ್ದೇವು" ಅಂದ.

ಅವನಿಗೆ ನನ್ನ ಸ್ನೇಹಿತರಾದ ಹುಣಸೂರು ಸುಬೇದಾರ್‌ರಿಗೆ ಒಂದು ಕಾಗದ ಕೊಟ್ಟೆ— ಯಾವುದಾದರೂ ಜಮೀನಿದ್ದರೆ ಇವನಿಗೆ ದರ್ಖಾಸ್ತಿಗೆ ಕೊಡಿಸಿ, ಎಂದು ಶಿಪಾರ್ಸುಮಾಡಿ. (ಅವರು ಅವನಿಗೆ ಐದು ಎಕರೆ ಹೊಲ ಕೊಟ್ಟರೆಂದು ಕೇಳಿದೆ)

ಮರಿಶೆಟ್ಟಿಗೆ,

ಈ ಸಲಕ್ಕೆ ಬದುಕಿದೆ,— ಮಗನೆ. ಇನ್ನೊಂದು ಸಲ ಇಂಥ ಮನೆ ಮುರಿಯುವ ಕೆಲಸಕ್ಕೆ ಹೋಗಿ ಸಿಕ್ಕರೆ ನಿನ್ನನ್ನ ದನವಿನ ಆಸ್ಪತ್ರೆಗೆ ಕಳುಹಿಸಿ ನಿನ್ನ ವಿಷದ ಹಲ್ಲು ಕೀಳಿಸಿ ಹಾಕಿಬಿಡುತ್ತೇನೆಂದು ಹೇಳಿದೆ ಅವನು ಒಪ್ಪಿದ. ದಂಡದ ಮೊಬಲಗನ್ನು ಕೊಡಿಸುವುದಕ್ಕೆ ಸರಿಯಾದ ಬಂದೋಬಸ್ತನ್ನು ಮಾಡಿದೆ.

ನಾನು ಯಡತೊರೆಯಲ್ಲಿದ್ದಾಗ ಅಲ್ಲಿ ಒಂದು ಸಲ ಕಾಲರಾದ ಭಯಂಕರ ಉಪಘಾತ ಪ್ರಾಪ್ತವಾಯಿತು. ವರ್ಷೆ ವರ್ಷೇ ಗ್ರಾಮ

ಗ್ರಾಮದಿಂದಲೂ ಜನಗಳು, ಗಂಡಸರೂ, ಹೆಂಗಸರೂ, ಮಕ್ಕಳ ಸಹಿತ ವಾಗಿ, ಮಾದೇಶ್ವರನ ಬೆಟ್ಟಕ್ಕೆ ಜಾತ್ರೆಗೆ ಹೋಗುವ ವಾಡಿಕೆ. ಬಹುಶಃ ಭಕ್ತಿಪಾರವಶ್ಯದಿಂದ ಪಾದಚಾರಿಗಳಾಗೇ ಹೋಗುವರು. ಬಿಸಿಲಲ್ಲಿ ಬೆಂಡಾಗಿ, ದಾರಿ ನಡೆದು ಬಳಲಿ, ಜಾತ್ರಾಕ್ಷೇತ್ರದಲ್ಲಿ ಸಿಕ್ಕಿದ ತಿಂಡಿ ತಿಂದು, ಕಂಡ ನೀರು ಕುಡಿದು, ಅಲ್ಲಿ ಸೋಂಕು ಏನಾದರೂ ಇದ್ದರೆ ಅದಕ್ಕೆ ಸಲಭವಾಗಿ ಬಲಿಯಾಗುವರು. ಅಲ್ಲಿನ ಅನಿವಾರ್ಯ ತೊಂದರೆ ಗಳನ್ನೂ ಅಪಾಯಗಳನ್ನೂ ಎಣಿಸಿದರೆ, ಯಾತ್ರಿಕರು ಸುರಕ್ಷಿತವಾಗಿ ತಮ್ಮ ಊರಿಗೆ ಮರಳಿ ಬರುವುದೇ ದೇವರ ಕೃಪೆಯಿಂದ ಎನ್ನಬಹುದು. ಸೋಂಕು ಜಾಡ್ಯವೇನಾದರೂ ಅಲ್ಲಿದ್ದರೆ ಅದರ ಬೀಜವನ್ನು ವಾಪಸು ಬರುವ ಯಾತ್ರಿಕರು ತಮ್ಮ ತಮ್ಮ ಊರುಗಳಲ್ಲಿ ಬಿತ್ತುತ್ತಾರೆ. ಇದರ ಫಲವಾಗಿ ಆ ಸೋಂಕು ಏಕಕಾಲದಲ್ಲಿ ಅನೇಕ ಗ್ರಾಮಗಳಲ್ಲಿ ಕಾಣಿಸಿ ಕೊಂಡು, ಗ್ರಾಮಗ್ರಾಮಕ್ಕೆ ಕಾಡ್ಗಿಚ್ಚಿನ ಹಾಗೆ ಹರಡುತ್ತದೆ– ಅದರಲ್ಲೂ, ನಾಲಾ, ನದಿ, ತೀರಗಳಲ್ಲಿರುವ ಗ್ರಾಮಗಳು ದೂಷಿತವಾದರೆ, ದೇವರೇ ಗತಿ.

ಮೊದಲು ಕಾವೇರಿ ತೀರದ ಹನಸೋಗೆಯಲ್ಲಿ ಇಬ್ಬರು ಸತ್ತ ಸುದ್ದಿ ಬಂತು. ಆಮೇಲೆ ಹೊಳೆ ಸಾಲಿನ ಇತರ ಗ್ರಾಮಗಳಿಂದಲೂ ಮರಣ ಗಳ ವರದಿ ಬಂತು. ನಾನು ನಮ್ಮ ತಾಲ್ಲೂಕು ಡಾಕ್ಟರನ್ನು ಕರೆದು ಕೊಂಡು ಆ ಗ್ರಾಮಗಳಲ್ಲಿನ ಸಾವುಗಳ ಸುದ್ದಿ ಸರಿಯಾಗಿ ತಿಳಿಯಲು ಹೋದೆ. ವಾಂತಿಭೇದಿ ಎಂದು ಹೇಳುವುದಕ್ಕೇ ಜನಗಳಿಗೆ ವಾಗತ್ಯ, ಬಾಯಿಬರದು; ಒಬ್ಬರು ಹೇಳಿದರು— "ಅವನಿಗೆ ಬಹಳ ದಿನಗಳಿಂದ ಸೀತದಮೇಲೆ ಜುಲಾಬಾಗುತ್ತಿತ್ತು; ಮೊನ್ನೆ ಮಳೆ ಬಂದ ಸೀತಕ್ಕೆ ಖಾಯಿಲೆ ಹೆಚ್ಚಾಗಿ ತೀರಿಕೊಂಡ" ಅಂತ. ಮತ್ತೊಂದು ಊರಲ್ಲಿ— ಹಗೇವಿನಲ್ಲಿದ್ದ ಮುಗ್ಗಲು ರಾಗಿ ತಿಂದು ಒಬ್ಬಿಬ್ಬರು ಸತ್ತರು; ಆ ರಾಗಿಯನ್ನೆಲ್ಲಾ ಹೊಳೆಗೆ ಹಾಕಿಸಿಬಿಟ್ಟೆವು– ಅಂತ ವರದಿ. ಹಾಲಿ ಖಾಯಿಲೆಯಿದ್ದ ಒಬ್ಬಿಬ್ಬರೂ ಮುಗ್ಗಲು ರಾಗಿ ತಿಂದವರೇ ಅಂತೆ. ನಮ್ಮ ಡಾಕ್ಟರು (ಡಾಕ್ಟರೆಂಬುದು ಗೌರವ ಪದ, ಅವರಿಗೆ ಡ್ರೆಸ್ಸರು, ಹಾಸ್ಪಿಟಲ್ ಅಸಿಸ್ಟೆಂಟು, ಎಂಬ ನಾಮಧೇಯಗಳೂ ಉಂಟು; ಈಚೆಗೆ ಸಬ್

ಅಸಿಸ್ಟೆಂಟ್ ಸರ್ಜನ್ ಎಂದೂ ಕರೆಯುತ್ತಾರೆ, ಆ ಪದವಿಗೆ ಬರುವವರಿಗೆ ವಿದ್ಯೆಯನ್ನೂ ಸ್ವಲ್ಪ ಹೆಚ್ಚು ಮಾಡಿದ್ದಾರೆ) ; ಸರಿ, ನಮ್ಮ ಡಾಕ್ಟರು ಕೆಲವು ವ್ಯಾಧಿಗ್ರಸ್ಥರನ್ನು ನೋಡಿ–ಇದು ಕಾಲರಾನೇ ಎಂದು ನಿಸ್ಸಂದೇಹ ವಾಗಿ ಅಭಿಪ್ರಾಯಪಟ್ಟರು. ಹೊಳೆಸಾಲು ಮತ್ತು ನಾಲಾಸಾಲಿನ ಗ್ರಾಮ ಗಳಲ್ಲಿ ಮೇಲಿನ ಗ್ರಾಮಗಳಿಂದ ಕೆಳಗಿನ ಗ್ರಾಮಗಳಿಗೆ ರೋಗ ವ್ಯಾಪಿ ಸಿದ್ದರಿಂದ ಇದು ಸೋಂಕು ಜಾಡ್ಯವೆಂಬುದೇ ನನಗೂ ನಿರ್ಧರವಾ ಯಿತು. ಕೂಡಲೆ ಹೊಳೆ ಮತ್ತು ನಾಲೇ ಸಾಲು ಗ್ರಾಮಗಳನ್ನೆಲ್ಲಾ ಒಂದು ಸಲ ಗಸ್ತುಮಾಡಿ ಜನಗಳಿಗೆ ಎಚ್ಚರಿಕೆ ಕೊಟ್ಟು, ನನಗೆ ತಿಳಿದಷ್ಟು ಮುಂಜಾಗರೂಕತೆಯ ಬಂದೋಬಸ್ತು ಮಾಡಿದೆ. ಪ್ರತಿ ಗ್ರಾಮದಲ್ಲೂ ಹೊಳೆಗೆ ಅಥವ ನಾಲೆಗೆ ಮೈಲಿಗೆ ಬಟ್ಟೆ, ಅಥವ ಮುಸುರೆ, ಹಾಕಕೂಡದೆಂದು ಕಟ್ಟುಮಾಡಿ, ಜನಗಳು ನೀರು ಮೊಗೆಯುವ ಸ್ಥಳ ಗಳಲ್ಲಿ ಗ್ರಾಮಕಾವಲು ಹಾಕಿದೆ. ಪ್ರತಿಯೊಂದು ಕೋಮಿನವರೂ ಅವರವರ ಕೋಮಿಗೆ ಕುಡಿಯುವುದಕ್ಕೆ ಮತ್ತು ಅಡಿಗೆಗೆ ಬೇಕಾದಷ್ಟು ನೀರನ್ನು ಒಟ್ಟಾಗಿ ಬೆಲ್ಲದ ಕೊಪ್ಪರಿಗೆಗಳಲ್ಲಿ ಕಾಯಿಸಿ, ಅದಕ್ಕೆ ಕಾವ ಲಿಟ್ಟು, ಮನೆಮನೆಗೂ ನೀರನ್ನು ಹಂಚಬೇಕೆಂದು ಏರ್ಪಾಡು ಮಾಡಿದೆ. ಈ ಏರ್ಪಾಡುಗಳನ್ನು ಭಕ್ತನಾದ ನನ್ನ ಬೇಡಿಕೆಯಂತೆ ಗ್ರಾಮದೇವತೆ ಗಳು ಪೂಜಾರಿಗಳ ಮೇಲೆ ಬಂದೋ, ಕಣಿ ಮೂಲಕವಾಗೋ, ಮೆಚ್ಚಿ ಖಾಯಂ ಮಾಡಿದರು. ಹೀಗೆ ದೈವಾಜ್ಞೆಯಿಂದ ದೃಢಪಟ್ಟ ಕಟ್ಟಲೆ ಗಳನ್ನು ಮೀರಿದವರಿಗಾಗಿ ಹಿಂದಿನ ಕಾಲದ ಗ್ರಾಮದಂಡನೆಯಾದ ಕೋಳವನ್ನು ಪುನರ್ಜೀವಕ್ಕೆ ತಂದೆ. ಅದೂ ಅಲ್ಲದೆ ಪ್ರತಿ ಗ್ರಾಮ ದಲ್ಲೂ ಖಾಯಿಲೆಯವರಿಗೆ ಗಂಜಿ ಕೊಡುವುದಕ್ಕೆಂದು ಪುಣ್ಯವಂತ ರಿಂದ ಕಾಳೋ ಕಾಸೋ ಚಂದ ಎತ್ತಿ, ಕೋಮಿನ ಮುಖಂಡರಿಗೆ ಈ ಧರ್ಮದ ವೈವಾಟನ್ನು ಒಪ್ಪಿಸಿದೆ. ಅನಂತರ ಮೈಸೂರಿಗೆ ಹೋಗಿ, ಡೆಪ್ಯುಟಿ ಕಮಿಷನ್ನರನ್ನು ನೋಡಿ, ಈ ಉಪಘಾತದ ಪೆಟ್ಟಿಗೆ ಸಿಕ್ಕವರ ಸಹಾಯಕ್ಕಾಗಿ ಡಿಸ್ಟ್ರಿಕ್ಟು ಫಂಡಿನಿಂದ ಅಲ್ಪ ಸ್ವಲ್ಪ ಗ್ರಾಂಟನ್ನು ಮಂಜೂರು ಮಾಡಿಸಿಕೊಂಡೆ. ಡಿಸ್ಟ್ರಿಕ್ಟು ಮೆಡಿಕಲ್ ಆಫೀಸರನ್ನು ಕಂಡು, ಅವರಿಂದ ಕಾಲರಾ ಚಿಕಿತ್ಸೆಗೆ ಆಗ ವಾಡಿಕೆಯಲ್ಲಿದ್ದ ಮಾತ್ರೆ

ಗಳನ್ನೂ ಕ್ಲೋರೋಫಾರಂ ಮತ್ತು ಮಾರ್ಫಿಯಾ ಟಿಂಕ್ಚರ್ (Tincture of Chloroform and Morphia)ನ್ನೂ ನೂರಾರು ಕೇಸುಗಳಿಗೆ ಸಾಕಾಗುವಷ್ಟು ಪಡೆದು ತಂದೆ. ಸ್ಪೆಷಲ್ ಡ್ಯೂಟಿಮೇಲಿದ್ದ ಒಬ್ಬ ಡಾಕ್ಟರಗಸ್ತಿಗೆ ಯಡತೊರೆಯನ್ನು ಸೇರಿಸುವಂತೆ ಏರ್ಪಾಡು ಮಾಡಿದೆ. ನಾನು ಸಂಚಾರ ಮಾಡುವಾಗ ನನ್ನ ಜೇಬಿನಲ್ಲಿ ಒಂದು ಸೀಸೆ ಟಿಂಕ್ಚರನ್ನೂ ಒಂದು ಸಣ್ಣ ಪ್ಯಾಕೆಟ್ಟು ಮಾತ್ರೆಗಳನ್ನೂ ತೆಗೆದುಕೊಂಡು ಹೋಗಿ, ರೋಗಿಗಳಿಗೆ ಕೊಡುವುದಲ್ಲದೆ ಗ್ರಾಮ ನೌಕರರಲ್ಲೂ ದಾಸ್ತಾನನ್ನು ಇಡುತ್ತಿದ್ದೆ. ದೇವರ ದಯದಿಂದ ಈ ಉಪಘಾತವೂ ಇತರ ಅಪಾಯುಗಳಂತೆಯೇ ಕೊನೆಗಂಡಿತು. ಮರಣಗಳ ಸಂಖ್ಯೆ ದಿನಕ್ಕೆ ಮೂವತ್ತರಿಂದ ಕ್ರಮೇಣ ಇಳಿದು ಕೊನೆಗೆ ಮಾಮೂಲಿಗೆ ಬಂತು. ಈ ಕಾಲರಾ ಹಾವಳಿಯ ಭರಾಟೆಯಲ್ಲಿನ ಒಂದೆರಡು ದೃಶ್ಯಗಳು ನನಗೆ ಕಣ್ಣಿಗೆ ಕಟ್ಟಿದ ಹಾಗಿವೆ. ಒಂದು ಸಲ ನಾನು ಹೊಸ ಅಗ್ರಹಾರದಲ್ಲಿ ರೋಗದ ಪೆಟ್ಟಿಗೆ ವಿಶೇಷವಾಗಿ ಗುರಿಯಾಗಿದ್ದ ಆದಿಕರ್ಣಾಟಕ ಕೇರಿಗೆ ವಿಚಾರಣೆಗಾಗಿ ಹೋದೆ. ಅಲ್ಲಿ ಊರಿನ ಅಂಚಿನಲ್ಲಿದ್ದ ಒಂದು ಗುಡಿಸಿಲಿನಲ್ಲಿ ಒಂದು ಮಗು ಅಳುತ್ತಿದ್ದದ್ದು ಕೇಳಿ ಒಳಗೆ ಹೋಗಿ ನೋಡಲಾಗಿ, ಆರು ತಿಂಗಳ ಕೂಸು ಒಂದೇ ಒಂದು ಗುಡಸಲಿನ ಮಧ್ಯದಲ್ಲಿ ನೋಡಿಕೊಳ್ಳುವರಿಲ್ಲದೆ ಒಂದು ಕಂಬಳಿಯ ಚಿಂದಿ ಮೇಲೆ ಮಲಗಿ ಅಳುತ್ತಿತ್ತು. ನನ್ನ ಜತೆಗೆ ಬಂದಿದ್ದ ಕೋವಿನ ಯಜಮಾನ ಆ ಶಿಶುವಿನ ತಾಯಿ ಎರಡು ದಿನಗಳಹಿಂದೆ ಸತ್ತಳೆಂತಲೂ, ತಂದೆಯು ಹೊರತು ಮನೆಯಲ್ಲಿ ಇನ್ನ್ಯಾರೂ ದಿಕ್ಕಿಲ್ಲವೆಂತಲೂ, ಅವನೆಲ್ಲೋ ಕೆಲಸಕ್ಕೆ ಹೋಗಿರಬೇಕೆಂತಲೂ ತಿಳಿಸಿ– ಮಾರಾ, ಎಲೋ ಮಾರಾ– ಎಂದು ಕೂಗಿದ. ಆಗ ಒಬ್ಬ ಮನುಷ್ಯ ಕೈನಲ್ಲಿ ಒಂದು ಬಿದಿರು ಮಳಿಗೆ ಹಿಡಿದುಕೊಂಡು ಗದ್ದೆ ಕಡೆಯಿಂದ ಓಡಿ ಬಂದು, ಬಂದಿ, ಕಂದ, ಅಳಬೇಡ– ಎಂದು ಕೂಸನ್ನು ಎತ್ತಿಕೊಂಡು, ಮಳಗಿಯಿಂದ ಹಾಲು ಕುಡಿಸಲು ಮೊದಲು ಮಾಡಿದ. ಅರ್ಧ ಹಾಲು ಬಾಯಿನಲ್ಲಿ, ಉಳಿದದ್ದು ಮುಖದ ಮೇಲೆ. ಅವನು ತಪ್ಪಿಗೆ ಕ್ಷಮಾಪಣೆ ಬೇಡುವನಂತೆ ನನ್ನ ಕಡೆ ತಿರುಗಿ,

ಅಲು ಬೇಡೋಕೆ ಓಗಿದ್ದಿ ನನ್ನ ಒಡೆಯಾ–

ಎಂದು ಹೇಳಿ, ಮಗುವಿಗೆ ಸಮಾಧಾನ ಮಾಡುವದಕ್ಕೆ ಅಭ್ಯಾಸ ವಿಲ್ಲದ ತೊದಲುಮಾತು ಯತ್ನ ಮಾಡಿದ. ಏನು ಆಪತ್ತು, ಏನು ವ್ಯಸನ, ಏನು ಪ್ರೀತಿ!

ಇನ್ನೊಂದು ಸಲ, ಚುಂಚನಕಟ್ಟೆ ಹತ್ತಿರದ ಹೊಸೂರೆಂಬ ಗ್ರಾಮಕ್ಕೆ ನಾನೂ ನಮ್ಮ ಸಬ್ ಡಿವಿಜನ್ ಆಫಿಸರೂ ಹೋಗಿದ್ದೆವು. ಆ ಸಣ್ಣ ಹಳ್ಳಿಯಲ್ಲಿ ಕೂಡ ಅದುವರಿಗೆ ಹತ್ತು ಹನ್ನೆರಡು ಮರಣ ಗಳಾಗಿದ್ದವು ನಾವು ಹೋದಾಗ ಒಂದು ಹಟ್ಟಿಯ ಜಗುಲಿಯ ಮೇಲೆ ಒಬ್ಬ ಹುಡುಗನನ್ನು ಹಾಕಿಕೊಂಡು, ಒಬ್ಬ ಮುದುಕಿ ಕುಳಿತಿದ್ದಳು. ನಮ್ಮನ್ನು ನೋಡಿ, ಆಕೆ ಅದುರುತ್ತಿರುವ ಸ್ವರದಿಂದ –

ಬುದ್ಧಿ ನನ್ನ ಹೈದನ್ನ ಬದುಕಿಸಿಕೊಡಿ – ಎಂದು ಗೋಗರೆದಳು.

ಹತ್ತಿರ ಹೋಗಿ ನೋಡಲಾಗಿ ರೋಗಿ ಅಸ್ತಾವಸ್ಥೆಯಲ್ಲಿದ್ದದ್ದು ಕಂಡು ಬಂತು ಕಣ್ಣು ಕುಳಿಬಿದ್ದು ಗಂಜಿ ಕಟ್ಟಿತ್ತು, ಮೂಗು ಚೂಪ ನಾಗಿ ಎದ್ದುಕೊಂಡಿತ್ತು. ಕೈಕಾಲು ತಣ್ಣಗಾಗಿದ್ದವು. ರೋಗಿ ನೀರು ಅಂತ ಹೀನ ಸ್ವರದಿಂದ ಉಸುರಿದ; ನಾನು – ಅವನು ಕೇಳಿದಷ್ಟು ನೀರು ಕೊಡವ್ವ – ಎಂದು ಆ ತಾಯಿಗೋ, ಅಜ್ಜಿಗೋ, ಹೇಳಿ ಮುಂದೆ ಸರಿಯುತ್ತಿದ್ದೆ. ಮದ್ದು ಕೊಡೋಕಿಲ್ಲವಾ ಬುದ್ಧಿ – ಎಂದು ಮುದುಕಿ ಕೇಳಿದಳು. ನನ್ನ ಜೇಬಿನಲ್ಲಿ ಟಿನ್‌ಕ್ಚರ್ ಸೀಸೆ ಇತ್ತು; ಆದರೆ ರೋಗಿಯ ಸ್ಥಿತಿ ಔಷಧಿಗೆ ಮೀರಿದ್ದದ್ದರಿಂದ, ಅದು ಕೊಟ್ಟದ್ದರಿಂದ ಫಲವಿಲ್ಲ, ಅದರಲ್ಲಿ ಜನಗಳಿಗಿರುವ ನಂಬಿಕೆ ಕೆಡುತ್ತೆಂದು ನನಗೆ ತೋರಿ, ಅವಳಿಗೆ ಸಮಾಧಾನಕ್ಕಾಗಿ – ಸಾಯಂಕಾಲದ ವರೆಗೆ ನೋಡೋಣ, ಆಮೇಲೆ ಮದ್ದು ಕಳಿಸುತ್ತೇನೆ – ಎಂದು ಹೇಳಿ ಬರುತ್ತಿದ್ದೆ. ಸಬ್ ಡಿವಿಜನ್ ಆಫೀಸರು ಇಂಗ್ಲಿಷಿನಲ್ಲಿ ನನಗೆ— ಕೊಡರೀ, ಔಷಧಿ ನಿಮ್ಮ ಕಿಶಿಯಲ್ಲಿ ಇದೆಯಲ್ಲ, ಅದೂ ಒಂದು ಅವನ ಹಣೇಬರಹದ ಪರೀಕ್ಷೆ ಯಾಗಲಿ – ಎಂದರು. ನಾನು ಹೇಳಿದೆ—ಅದರಿಂದಲೇ ಸತ್ತ ಎಂಬುವ ಅಪವಾದ ಬರುತ್ತೆ ಸ್ವಾಮಿ. ಆದರೂ ನೀವು ಹೇಳಿದ ಮೇಲೆ ಅವನ ಅದೃಷ್ಟ ಪರೀಕ್ಷೆಯಾಗಲಿ – ಎಂದು ನೀರನ್ನು ತರಿಸಿ, ಟಿನ್‌ಕ್ಚರು ಮಾಮೂಲು ಡೋಸು ಹುಯಿದು, ಅವನಿಗೆ ಕುಡಿಸ ಹೇಳಿದೆ. ಅದು·

ಗಂಟಲಿನಲ್ಲಿ ಇಳಿಯುತ್ತಿದ್ದ ಹಾಗೆ, ಅವನು ತೇಲುಗಣ್ಣು ಮಾಡಿ-ಕ – ಕ್ಕ – ಕ್ಕ – ಅಂತ ಎರಡು ಮೂರು ಸಲ ಕಕ್ಕರಿಸಿ ಪ್ರಾಣಬಿಟ್ಟ.

* * * *

ಪಟೇಲ ದೇವರಸೇ ಗೌಡನ ವಿಚಾರದಲ್ಲಿ ಅನೇಕರು ಅನೇಕ ವಿಧವಾಗಿ ನನ್ನನ್ನು ಎಚ್ಚರಿಸಿದ್ದರು. ಅವನು ಪಾಳ್ಳೇಗಾರ; ಅವನಿಗೆ ತಿಳಿಯದೆ ಆವನ ಸಾಮಿಾಲಿಲ್ಲದೆ ಯಾವ ತಕ್ಸೀರೂ ನಡೆಯುವುದಿಲ್ಲ: ಎಲ್ಲಿ ಹೋದರೂ ಅವನು ಗೆದ್ದುಕೊಂಡು ಬರುತ್ತಾನೆ; ಸರ್ಕಾರದ ಭಯಕ್ಕಿಂತಲೂ ಜನಕ್ಕೆ ಅವನ ಭಯ ಹೆಚ್ಚು; ಸರ್ಕಾರದ ಅಧಿಕಾರಿಗಳನ್ನು ಆವನು ನಯದಿಂದಲೋ, ಭಯದಿಂದಲೋ ತನ್ನ ಬಲೆಗೆ ಹಾಕಿಕೊಳ್ಳುತ್ತಾನೆ,—ವಗೈರೆ — ವಗೈರೆ. ಸಾಲಿಗ್ರಾಮದ ಕುನ್ನೀರು ಕಟ್ಟೆಯ ವಿಚಾರದಲ್ಲಿ ಅವನು ನನಗೆ ಮಾಡಿದ ಸಹಾಯವನ್ನು ವಿವರಿಸಿದ್ದೇನೆ - ನನ್ನ ಸಂಗಡ ಅವನು ತಂದ್ರೆಗೆ ಬಂದು, ಮದುವೆ ಮನೆಯಲ್ಲಿ ನಡೆದ ಕಳವು ಕೇಸಿನ ಮಾಲುಗಳನ್ನು ಹಿಡಿದ ಸಂದರ್ಭದಲ್ಲಿ ನನ್ನ ಜತೆಗೆ ಇದ್ದದ್ದನ್ನು ಹೇಳಿದ್ದೇನೆ. ಇವನು ಬುದ್ಧಿವಂತ, ಧೀರ, ಜನಗಳಿಗೆ ಕಷ್ಟದಲ್ಲಿ ಸಹಾಯ ಮಾಡುತ್ತಾನೆ, ಒಳ್ಳೆಯ ಸ್ನೇಹಿತ, ಹೆದರಬೇಕಾದ ಶತ್ರು; ಈ ಗುಣಗಳಿಂದಲೂ, ಇವುಗಳಿಂದ ಇವನಲ್ಲಿ ಬಹು ಜನಗಳಿಗಿರತಕ್ಕ ಭಕ್ತಿ, ವಾತ್ಸಲ್ಯಗಳಿಂದಲೂ, ಇವನಿಗೆ ಸರ್ಕಾರದಲ್ಲೂ ಮಾನ್ಯತೆಯುಂಟು; ಅದಕ್ಕಾಗಿ ಅನೇಕರು ಅಸೂಯೆ ಪಡುತ್ತಾರೆ; ಇನ್ನೇನೂ ಮಾಡಲಾರದಿದ್ದರೂ ಅಪವಾದಗಳನ್ನು ಹರಡುತ್ತಾರೆಂದು ತಿಳಿದುಕೊಂಡಿದ್ದೆ.

ಕ್ರಮೇಣ ನನಗೆ ಇವನ ನಿಜವಾದ ಸ್ವಭಾವದ ತಿಳಿವು ಬಂತು. ಮೇಲೆ ಹೇಳಿದ ಸದ್ಗುಣಗಳೆಲ್ಲ ಇವನಲ್ಲಿ ಇದ್ದವೆಂಬುದಕ್ಕೆ ಸಂದೇಹವಿಲ್ಲ – ಈ ಚಿತ್ರದಲ್ಲಿ ಒಂದೊಂದಾಗಿ ವಕ್ರರೇಖೆಗಳೂ ಕಾಣುತ್ತ ಬಂದವು. ಇವನಿಗೆ ಮುಖ್ಯವಾಗಿ ತನ್ನ ಸಮಾನ ಶಿಕ್ಷೆರಕ್ಷೆಗೆ ದಕ್ಷನಾದ ಮನುಷ್ಯ ಮತ್ತೊಬ್ಬನಿಲ್ಲವೆಂಬ ದುರಭಿಮಾನ - ಎಣೆ ಇಲ್ಲದ Vanity. ತನಗೆ ಶರಣಾಗತರಾದವರು, ತನ್ನ ಪೋಷ್ಯವರ್ಗಕ್ಕೆ ಸೇರಿದವರು, ಏನು ತಪು ಮಾಡಿದರೂ ಅವರನ್ನು ಬಚಾಯಿಸುತ್ತೇನೆ; ಆವರನ್ನು ಯಾರೂ

ಶಿಕ್ಷಿಸಲಾರರು, ತನಗೆ ಬೇಡದಿದ್ದವರನ್ನು, ತನಗೆ ಎದುರುಬಿದ್ದವರನ್ನು, ಬಲಿಹಾಕುತ್ತೇನೆ, ಅವರನ್ನು ಯಾರೂ ರಕ್ಷಿಸಲಾರರು, ಎಂಬ ಹೆಮ್ಮೆ. ಇವನಿಗೆ ಅಂಗರಕ್ಷಕರೂ, ಇವನ ಆಜ್ಞಾಧಾರಕರೂ ಆದ ಹತ್ತು ಹದಿನೈದು ಮಂದಿ ಗುಂಡಾಗಳಿದ್ದರು. ಅವರನ್ನು ಕಂಡರೆ ಜನಗಳಿಗೆ ನಡುಕ. ಅವರು ಸಂತೆಗೆ ಹೋದರೆ ಅವರು ಹೇಳಿದ್ದೆ ವ್ಯಾಪಾರ. ಅಂಗಡಿಗೆ ಹೋದರೆ ಅವರು ಕೇಳಿದ ಮಾಲನ್ನು ಸಾಲವಾಗಿ ಕೊಟ್ಟು, ಬೆಲೆಯನ್ನು ಅವರು ಕೊಟ್ಟಾಗ ಇಸುಕೊಳ್ಳುವರು. ಸುತ್ತುಮುತ್ತಿನ ಗ್ರಾಮಗಳಲ್ಲಿ ಏನಾದರೂ ಜಗಳವಾದರೆ, ಯಾವ ಕಕ್ಷಿಯುಪರಾದರೂ ಪಟೇಲ ದೇವರಸೇ ಗೌಡನ ಸಹಾಯವನ್ನು ಅಪೇಕ್ಷಿಸಿ ಅವನನ್ನೇ ಮೊರೆಹೊಕ್ಕಲ್ಲಿ ಈ "ಗುಂಡಾ" ಸೈನ್ಯದವರು ಆ ಸ್ಥಳಕ್ಕೆ ಹೋಗಿ ಆ ಪಕ್ಷವನ್ನು ವಹಿಸಿ, ಜಗಳ ಗೆದ್ದುಕೊಡುವರು. ಸರ್ಕಾರದಿಂದ ಏನಾದರೂ ಆಗ ಬೇಕಾಗಿದ್ದರೆ, ಸರ್ಕಾರದಲ್ಲಿ ಏನಾದರೂ ಕೇಸು ಇದ್ದರೆ, ಗೌಡನ ಮೂಲಕ ಕಛೇರಿಗೆ ಹೋದರೆ ಕಾರ್ಯಸಾಧನೆಯಾಗುತ್ತೆಂದು ಜನ ನಂಬುತ್ತಿದ್ದರು.

ಒಂದೆರಡು ಪೋಲೀಸು ಕೇಸುಗಳಲ್ಲಿ ಗೌಡ ಆಪಾದಿತರ ಕಡೆಗೆ ಸೇರಿಕೊಂಡು ಸಾಕ್ಷ್ಯ ನುಡಿಯಬಹುದಾದವರಿಗೆ ಹೆದರಿಸಿ ವಿಚಾರಣೆಯನ್ನು ಭಂಗಪಡಿಸಿದನೆಂದು ಕೇಳಿದೆ. ನಾನು ಗೌಡನನ್ನು ನೋಡಿದಾಗ ನ್ಯಾಯದ ಧೋರಣೆಗೆ ಅಂತರಾಯ ಮಾಡುವುದು ಯಾರಿಗೂ ಧರ್ಮವಲ್ಲ, ಅದರಲ್ಲೂ ಗ್ರಾಮದ ಮುಖ್ಯಾಧಿಕಾರಿಯಲ್ಲಿ ಇದು ರಾಜದ್ರೋಹವೆಂದು ಎಚ್ಚರಿಸಿದೆ ಆತ ಬಹಳ ನೊಂದವನಂತೆ, ಯಾರೋ ತನಗೆ ಬೇಡದವರು ತನ್ನನ್ನು ದೂರಿರಬೇಕು, ಭೂದೇವಿ ಸಾಕ್ಷಿಯಾಗಿ ತಾನು ಹಾಗೆ ಮಾಡಿದವನಲ್ಲ, ಮಾಡುವವನೂ ಅಲ್ಲವೆಂದು, ಬಹಳ ಆಗ್ರಹದಿಂದ ಹೇಳಿ, ಕಣ್ಣೀರು ಸುರಿಸಿ ಇಂಥ ಅಸೂಯೆಗಾರರ ಮಾತಿಗೆ ಕಿವಿಗೊಡದೆ ನಾನು ತನ್ನ ಮಾನವನ್ನು ಕಾಪಾಡಬೇಕೆಂದು ಅಡ್ಡಬಿದ್ದ. ನಾನು ಲಾಯರಿ ಕಸುಬಿನಲ್ಲೂ ಇತರ ಸಂದರ್ಭಗಳಲ್ಲೂ ಇಂಥ ನಾಟಕಗಳನ್ನು ಕಂಡವನಾದರೂ ಈ ಹಿರಿಯ ಮನುಷ್ಯನ ಬಿಣ್ಣಾಣಕ್ಕೆ ಸ್ವಲ್ಪ ಮರುಳಾದೆನೆಂದು ಕಾಣುತ್ತದೆ.

ಇದಾದ ಕೆಲವು ವಾರಗಳ ನಂತರ ಒಬ್ಬ ಒಕ್ಕಲಿಗರ ಯುವಕನ ಮೇಲೆ ಅವನು ಮತ್ತೊಬ್ಬನನ್ನು ಓಡಿಸಿಕೊಂಡು ಹೋಗಿ, ಅವನ ಮನೆಯೊಳಕ್ಕೂ ಬೆನ್ನು ಹತ್ತಿ ನುಗ್ಗಿ, ಹೊಡೆದು ಘಾಯಪಡಿಸಿದನೆಂದು ನನ್ನಲ್ಲಿ ಫಿರ್ಯಾದು ದಾಖಲಾಯಿತು. ಮೊಕದ್ದಮೆ ದರ್ಯಾಪ್ತಿಯಾಗುತ್ತಿರುವಾಗ ಪಟೇಲ ನನ್ನಲ್ಲಿ ಬಂದು—ಸ್ವಾಮಿ, ಆ ಹುಡುಗ ನನ್ನ ಸೋದರಳಿಯ, ಅವನನ್ನು ಕಾಪಾಡಬೇಕು—ಎಂದು ಶಿಪಾರ್ಸು ಹೇಳತೊಡಗಿದ. ನಾನು—ನಿಮ್ಮ ಕಡೆ ಹುಡುಗನಾದರೆ ನೀವು ಬುದ್ಧಿ ಹೇಳಿ ಹತೋಟಿಯಲ್ಲಿಟ್ಟಿರಬೇಕು; ಕೇಸು ಕೋರ್ಟಿಗೆ ಬಂದ ಮೇಲೆ, ಕಕ್ಷಿಗಾರರು ಯಾರೇ ಆಗಲಿ, ರುಜುವಾತ್ತು, ನ್ಯಾಯ, ಇವುಗಳ ಮೇಲೆ ತೀರ್ಪು ಕೊಡಲಾಗುತ್ತದೆಯೇ ಹೊರತು, ಶಿಪಾರ್ಸು ದಾಕ್ಷಿಣ್ಯದ ಮೇಲಲ್ಲ; ಇನ್ನು ಮೇಲೆ ಇಂಥ ಮಾತಿಗೆ ನೀವು ಬರಬೇಡಿ—ಎಂದು ಸ್ವಲ್ಪ ಕಟುವಾಗೇ ಹೇಳಿದೆ.

ಆಮೇಲೆ ಒಂದು ಜಮೀನು ಮೊಕದ್ದಮೆಯಲ್ಲಿ ಪಟೇಲನ ಕಡೆಯವರು ಇಬ್ಬರು ಒಂದು ಪಾರ್ಟಿಯವನ ಕುಪ್ಪಕ್ಕೆಗೆ ಹೋಗಿ, ಜಮೀನಿನ ಮೇಲೆ ಅತಿಕ್ರಮ ಪ್ರವೇಶಮಾಡಿ, ಜಮೀನಿನ ಸ್ವಾಧೀನದಲ್ಲಿದ್ದ ಎದುರು ಕಕ್ಷಿಯವನನ್ನು ಹೊಡೆದು ಘಾತಿಮಾಡಿದರೆಂದು ಮೊಕದ್ದಮೆ ಬಂತು. ಆ ಮೊಕದ್ದಮೆಯಲ್ಲಿ ಅಪರಾಧಿಗಳ ಪರವಾಗಿ ಮೈಸೂರಿಂದ ಹೆಸರುವಾಸಿಯಾದ ಲಾಯರುಗಳು ಬಂದರು. ಅವರಲ್ಲಿ ಒಬ್ಬ ಲಾಯರು ಅಪರಾಧಿಗಳು ಗೌರವಸ್ಥರು, ಪಟೇಲ ದೇವರಸೇಗೌಡರೂ ಇವರನ್ನು ಬಲ್ಲರು—ಎಂದು ನನಗೆ ಹಿಷಾರೆ ಕೊಡುವಂತೆ ಹೇಳಿದರು. ನನಗೆ ಹೆದರಿಸುವುದಕ್ಕೆ ಎಂದು ನನಗೆ ತೋರಿತು. ಕೋರ್ಟಿನಲ್ಲಿದ್ದವರು ಒಬ್ಬರ ಕಡೆ ಒಬ್ಬರು ನೋಡಿದ್ದನ್ನೂ ನಾನು ಕಂಡೆ—ಮೊಕದ್ದಮೆಯಲ್ಲಿ ರುಜುವಾತ್ತು ಸರಿಯಾಗಿ ಬಂದದ್ದರಿಂದ ನಾನು ಅಪರಾಧಿಗಳಿಗೆ ಸ್ವಲ್ಪ ಕಠಿಣವಾದ ಶಿಕ್ಷೆಯನ್ನೇ ಕೊಟ್ಟೆ.

ಈ ಮೊಕದ್ದಮೆ ನಡೆಯುತ್ತಿದ್ದ ಕಾಲದಲ್ಲಿ ನನಗೆ ಅನೇಕ ಬೇನಾಂ ಕಾಗದಗಳು ಬಂದವು ಕೆಲವು ಹಿತಚಿಂತಕರಿಂದ ಬಂದ ಹಾಗೆ; ಅವುಗಳ ಬಗೆ—ಸ್ವಾಮಿ, ನೀವು ಒಳ್ಳೆಯವರು, ಮುಂದಕ್ಕೆ

ಬರತಕ್ಕವರು ; ಸಂಸಾರಿಗಳು ; ದುಡುಕಬೇಡಿ ; ಇದು ದುಷ್ಟರ ಕೊಂಪೆ, ನಿಮಗೆ ಬಹಿರಂಗವಾಗಿ ಅಪಮಾನ ಮಾಡ್ಯಾರು ; ಹಿಂದೆ ಒಬ್ಬ ಅಧಿಕಾರಿಗಳಿಗೆ ಎಕ್ಕಡಗಳ ಸರಹಾಕಿ ಕತ್ತೆಯ ಮೇಲೆ ಕೂರಿಸಿ ಮೆರವಣಿಗೆ ಮಾಡಿದ ಜನ ಇವರು, ನಿಮ್ಮನ್ನು ಹೊಡೆಯಲು, ಹೇಸುವರಲ್ಲ ; ನಿಮ್ಮ ಪ್ರಾಣಕ್ಕೇ ಅಪಾಯ ತಂದರೂ ತರಬಹುದು" ಎಂದು ಇನ್ನು ಕೆಲವು ಕಾಗದಗಳಲ್ಲಿ ಮರೆಸಿಲ್ಲದ ಬೈ, ಬೆದರಿಸಾಣಿಕೆ ; ನಾನು ಅಧಿಕಾರದ ಹೆಮ್ಮೆಯಿಂದ ಜನಗಳನ್ನು ಕೆಣಕಿದರೆ ನನಗಾಗುವ ಗತಿಯ ವರ್ಣನೆ. ಇವುಗಳಲ್ಲೂ ಜೋಡಿನ ಸರದ ಅಲಂಕಾರ, ಕತ್ತೆ ವಾಹನ, ಮಿತಿ ಮೀರಿದರೆ ದೇಹ ಮತ್ತು ಪ್ರಾಣಕ್ಕೆ ಅಪಾಯ, ಇವುಗಳ ವಿವರಣೆ ಇದ್ದದ್ದರಿಂದ, ಹಿತೋಕ್ತಿ, ಭಯೋತ್ಪಾದನೆ ಎರಡೂ ಒಂದೇ ಮೂಲದಿಂದ ಹೊರಟವುಗಳೆಂದು ಗೊತ್ತುಮಾಡಿಕೊಂಡೆ. ನನಗೆ ಬಹಳ ಅಸಹ್ಯವೂ ಕೋಪವೂ ಬಂದವು ಇದಕ್ಕೆಲ್ಲ ಪಟೇಲ ದೇವರಸೇಗೌಡನೆ ಮುಖ್ಯ ಕಾರಣನೆಂದು ನನಗೆ ಚೆನ್ನಾಗಿ ಮನಸ್ಸಿಗೆ ಮುಟ್ಟಿತು. ಇವನ ಹೆಮ್ಮೆಯನ್ನು ತಗ್ಗಿಸಬೇಕು ; ನನಗೆ ದೇವರು ಬುದ್ಧಿ ಕೊಟ್ಟಿರುವವರಿಗೂ ನಾನು ನ್ಯಾಯವನ್ನು ಬಿಡುವುದಿಲ್ಲ ; ಹೆದರಿಕೆಯಿಂದಾಗಲಿ, ಮತ್ಯಾವ ಕಾರಣದಿಂದಾಗಲಿ ನನ್ನ ಕರ್ತವ್ಯದಲ್ಲಿ ನಾನು ಹಿಂಜರುಗಿದರೆ ನನ್ನ ಆತ್ಮಕ್ಕೂ, ನನ್ನ ಧಣಿಯಾದ ಸರ್ಕಾರಕ್ಕೂ ದ್ರೋಹ ಮಾಡಿದ ಹಾಗೆ. ನಾನು ಹೆದರಿಕೆಗೆ ಬಗ್ಗುವ ಹೇಡಿಯಲ್ಲವೆಂಬುದು ದೇವರಸೇಗೌಡನಿಗೂ, ಅವನಂಥ ಇತರರಿಗೂ ತೋರಿಸಬೇಕೆಂದು ಸಂಕಲ್ಪ ಮಾಡಿದೆ. ಪೋಲೀಸಿನವರ ಮೂಲಕವೂ, ನನ್ನ ಖುದ್ದು ವಿಚಾರಣೆಯಿಂದಲೂ ದೇವರಸೇ ಗೌಡನ ಪರಿವಾರದ ಮುಂದಾಳುಗಳ ಪಟ್ಟಿ ತಯಾರಿಸಿ ಇಟ್ಟುಕೊಂಡೆ ಆಗಿನ ಕಾಲದಲ್ಲಿ ನಾನು ಸಂಚಾರ ಮಾಡಬೇಕಾದರೆ ನನ್ನ ಸಂಗಡ ನನ್ನ ರಿವಾಲ್ವರು ಇರುತ್ತಿತ್ತು. ಈ ಪದ್ಧತಿಯನ್ನು ಜ್ಞಾಪಕದಿಂದ ಅನುಸರಿಸಿದೆ. ಸಾಮಾನ್ಯವಾಗಿ ನಾನು ಒಬ್ಬಂಟಿಗನಾಗಿ ತಿರುಗಾಡುತ್ತಲೇ ಇರಲಿಲ್ಲ. ನಾನು ಕೆಲಸದ ಮೇಲೆ ಹೋದರೆ ಆ ಕೆಲಸಕ್ಕೆ ಸಂಬಂಧಪಟ್ಟ ನೌಕರರು, ಕಕ್ಷಿಗಾರರು, ಇರುತ್ತಿದ್ದರು. ವಾಕಿಂಗ್ – ವಿಹಾರಕ್ಕೆ ನಡೆದು – ಹೋದರೆ ಯಾರಾದರೂ

ಸ್ನೇಹಿತರು ಸಂಗಡ ಬರುತ್ತಿದ್ದರು. ನನ್ನ ಆರ್ಡರ್ಲಿ ಷೇಖ್ ಮೊಹರ್ದಿ ನನ್ನ ಹಾಜರಿಯಲ್ಲೇ ಇರುತ್ತಿದ್ದ ನನ್ನ ದೇಹಕ್ಕೆ ಪ್ರಾಣಕ್ಕೆ ಅಪಾಯದ ಸಂಭವ ಅಷ್ಟೇನು ಕಾಣಲಿಲ್ಲ; ಯಾರಾದರೂ ದುಷ್ಟರು ಪ್ರಯತ್ನ ಪಟ್ಟರೆ ನನ್ನ ರಕ್ಷಣೆಯನ್ನು ಮಾಡಿಕೊಳ್ಳಲಿಕ್ಕೆ ಸಿದ್ಧನಾಗಿದ್ದೆ– ದೇವರ ದಯವಿದ್ದರೆ ಶಕ್ತನೂ ಆಗಿದ್ದೆನೆಂದು ನಂಬಿಕೆ. ಯೌವನದ ದರ್ಪದಲ್ಲಿ, ಯಾರಾದರೂ ಯತ್ನಮಾಡ್ಯಾರೆ, ಅವರಿಗೆ ಬುದ್ಧಿ ಕಲಿಸೇನೆಯೋ, ಎಂಬ ಕೋರಿಕೆಯೂ ಇತ್ತು.

ಹೀಗಿರುವಲ್ಲಿ ಸಾಲಿಗ್ರಾಮದ ಪಟಾಕಿ ಎಂಬುವನ ಮೇಲೆ ನನ್ನ ಕೋರ್ಟಿನಲ್ಲಿ ಒಂದು ಫಿರ್ಯಾದು ದಾಖಲಾಯಿತು ಈ ಪಟಾಕಿಯು ಗೌಡನ ದಂಡಿನಲ್ಲಿ ಒಬ್ಬ ದೊಡ್ಡನಾಯಕ. ಇವನು ಅದೇ ಗ್ರಾಮದ ಭಾರಿಕುಳ ಮತ್ತು ಸಾಹುಕಾರನಾದ ಹನುಮೇ ಗೌಡನೆಂಬಾತನ ಮಗ ಅವನ ಹೆಸರು ಬೋರೇಗೌಡನೋ, ಏನೋ, ಚೆನ್ನಾಗಿ ಜ್ಞಾಪಕವಿಲ್ಲ–– ಸಂತೇಮಾಳದಲ್ಲಿ ಚಡಾವಿನಿಂದ ಅನೇಕ ಪೆಟ್ಟುಗಳನ್ನು ಎಣಿಸಿ ಹೊಡೆದ ನೆಂದು ಆಪಾದನೆ ಫಿರ್ಯಾದಿ ನನ್ನಲ್ಲಿ ಅರ್ಜಿಕೊಡಲು ಬಂದಾಗ ಅವನ ತಲೆ, ಮುಖ, ತೋಳುಗಳು ಇವುಗಳ ಮೇಲೆ ಕಂದು ಘಾಯಗಳು, ಊದು, ಸಹ ಇದ್ದವು ಇವನು ದೇವರಸೇ ಗೌಡನ ಅಳಿಯನೆಂದು ಜ್ಞಾಪಕ; ಸಂಸಾರದಲ್ಲಿ ಏನು ತಿಶ್ರ ಬಂದಿತ್ತೋ– ಅಂತು ಹನುಮೇ ಗೌಡನಿಗೂ ದೇವರಸೇ ಗೌಡನಿಗೂ ಅನೇಕ ದಿವಸಗಳಿಂದ ಮಾತಿಲ್ಲ.

ಈ ಮೊಕದ್ದಮೆಯ ವಿಚಾರಣೆ ಕಾಲದಲ್ಲಿ ನಾನು ಮೇಲೆ ಹೇಳಿದಂಥ ಹೆಸರಿಲ್ಲದ ಕಾಗದಗಳು ಬಹುವಾಗಿ ಬರಲಿಕ್ಕಿಟ್ಟವು. ಮಿರ್ಲೆಯ ಮರ್ಯಾದಸ್ಥ ಕೃತರೊಬ್ಬರು ನನ್ನನ್ನು ಅದೇ ಕೆಲಸವಾಗಿಯೇ ನೋಡಲು ಬಂದು– ಸ್ವಾಮಿ, ಪಟಾಕಿ ಕೇಸನ್ನು ಇನ್ಯಾವ ಕೋರ್ಟಿಗಾದರೂ ಕಳುಹಿಸಿ ಬಿಡಿ, ಅವನನ್ನು ಬಿಟ್ಟರೆ ಅಪವಾದ, ಶಿಕ್ಷಿಸಿದರೆ ತಮ್ಮ ಜೀವಕ್ಕೇ ಅಪಾಯ– ಎಂದು ಹೇಳಿದರು. ನಿಮಗೆ ಹ್ಯಾಗೆ ಗೊತ್ತೆಂದು ಕೇಳಿದರೆ– ಎಲ್ಲರೂ ಅದೇ ಮಾತನ್ನಾಡುತ್ತಾರೆ, ನನಗೆ ಸೂಕ್ಷ್ಮವಾಗಿ ಎಚ್ಚರಿಸಬೇಕೆಂದು ತನ್ನನ್ನು ನನ್ನಲ್ಲಿ ವಿಶ್ವಾಸವಿರುವ ಹತ್ತು ಜನ ಸೇರಿ ಕಳುಹಿಸಿದ್ದಾಗಿ ತಿಳಿಸಿದರು. ಇವರ ಮಾತು ನನ್ನ ಅಂತಃಕರಣವನ್ನು

ಮುಟ್ಟಿತು ಭಲೇ, ಅಪ್ಪ; ನನ್ನ ಮೇಲೆ ಪ್ರೀತಿಯುಳ್ಳವರೂ ಇದ್ದಾರೆ, ಅವರ ಪ್ರೀತಿಯನ್ನು ದಕ್ಕಿಸಿಕೊಳ್ಳಬೇಕಾದರೆ ನಿರ್ಭೀತನಾಗಿ ನನ್ನ ಕರ್ತವ್ಯವನ್ನು ಮಾಡಲೇಬೇಕೆಂಬ ನಿಶ್ಚಯವು ದೃಢಪಟ್ಟಿತು. ನಾನು ಮಿರ್ಲೆಗೌಡರಿಗೆ ನನ್ನ ಧನ್ಯವಾದವನ್ನು ಹೇಳಿ, ಕಳುಹಿಸಿಕೊಟ್ಟೆ.

ಮೊಕದ್ದಮೆ ಹೀರಿಂಗು ಜರುಗಿತು. ಮೈಸೂರಿಂದ ಪ್ರಖ್ಯಾತರಾದ ಲಾಯರುಗಳೂ ಆಪಾದಿತನ ಕಡೆ ವಾದಮಾಡಿದರು. ತಪ್ಪು ಸಾಬೀತಾದ್ದರಿಂದ ಅಪರಾಧಿಗೆ ಮೂರು ತಿಂಗಳ (ಇದು ನೆನಪು) ಕಠಿಣಸಜ ವಿಧಿಸಿದೆ. ಕೆಲಸ ತೀರಿಸಿಕೊಂಡು ಮನೆಗೆ ಹೋಗಲಿಕ್ಕೆ ಊಚಿಗೆ ಬಂದಾಗ ದೇವರನೇಗೌಡ ಕೋರ್ಟು ಆಸುಪಾಸಿನಲ್ಲಿದ್ದವನು ಕಣ್ಣು ಮರೆಯಾಗುತ್ತಿದಕ್ಕೆ ಒಂದು ಮರದ ಹಿಂದೆ ಜರುಗಿದ್ದನ್ನು ಕಂಡೆ.

ನಾನು ಅವನನ್ನು ಹೆಸರು ಹಿಡಿದು ಕರೆದೆ. ಬಂದ. ಹತ್ತಿರದಲ್ಲೇ ಇದ್ದ Travellers' Bungalow (ಮುಸಾಫರ ಬಂಗಲೆ)ಗೆ ಅವನ ಸಂಗಡಲೇ ಹೋಗಿ ಪೋಲೀಸು ಇನ್‌ಸ್ಪೆಕ್ಟರನ್ನೂ ಕರೆಸಿದೆ-ದೇವರನೇಗೌಡನಿಗೆ ಯಾಕೆ ಕರೆದೆನೆಂದು ಕುತೂಹಲವಿದ್ದಿರಬೇಕು; ಕಳವಳವೂ ಒದ್ದಿರಬಹುದು. ಮುಖದ ಮೇಲೆ ಬೆವರೂರುತ್ತಿತ್ತು.

ನಾನು ಆತನನ್ನು ಒಂದು ಕುರ್ಚಿಯ ಮೇಲೆ ಕೂಡುವಂತೆ ಹೇಳಿದೆ. ಬಹಳ ಸಂಕೋಚದಿಂದ ಕುಳಿತ. ಆ ಆವರಣದಲ್ಲಿ ಯಾರೂ ಇಲ್ಲದಂತೆ ನೋಡಿ ದೇವರನೇ ಗೌಡನಿಗೆ ಹೀಗೆ ಹೇಳಿದೆ:—

ನಿಮ್ಮಿಂದ, ನಿಮ್ಮ ಕಡೆಯವರಿಂದ ಬಂದ ಬೇನಾಂ ಕಾಗದಗಳನ್ನೆಲ್ಲಾ ಓದಿದೆ. ಇದರಿಂದ ಏನು ಪ್ರಯೋಜನವೆಂದು ಮಾಡುತ್ತೀರಿ? ನಾನು ಮಹಾರಾಜರ ಉಪ್ಪು ತಿನ್ನುವವನು, ಭಯವಿಲ್ಲದೆ ಮಹಾರಾಜರ ಸೇವೆ ಮಾಡುತ್ತೇನೆ. ನನ್ನ ಯೋಗಕ್ಷೇಮವನ್ನು ನನ್ನ ಧಣಿ ನೋಡಿಕೊಳ್ಳುತ್ತಾರೆ. ಅಲ್ಲದೆ ನೋಡಿ, ನನ್ನ ತಾವು ಯಾವಾಗಲೂ ಆಯುಧವಿರುತ್ತೆ. ಅದರಲ್ಲಿ ಆರು ಮೃತ್ಯುಗಳಿವೆ. ನನ್ನನ್ನು ಹೊಡೆಯುವುದಕ್ಕೆ ಯಾರಾದರೂ ಬಂದರೆ, ಮೊದಲು ಆರು ಹೆಣ ಬೀಳಬೇಕು, ನನ್ನನ್ನು ಮುಟ್ಟಬೇಕಾದರೆ. ನೀವು ಯಾರಿಗೋ ಎಕ್ಕಡದ ಸರ ಹಾಕಿಸಿದರಂತೆ. ನನ್ನ ಕೆಲಸವನ್ನು ನಾನು ಸತ್ಯವಾಗಿ ಮಾಡಿದ್ದಕ್ಕೆ ಅಂಥ ಸರ ಬಿದ್ದರೆ,

ಅದೂ ಬಹುಮಾನವೆ. ಮುಖ್ಯವಾಗಿ ತಿಳಿಯಿರಿ, ನನಗೇನಾದರೂ ಕೆಡಕು ಮಾಡಿದರೆ, ನಿಮ್ಮ ಮನೆಯೇ ನಾಶವಾಗುವಷ್ಟು ರಿಕಾರ್ಡು ಮಾಡಿಟ್ಟಿರುತ್ತೇನೆ, ಅದು ಸರ್ಕಾರಕ್ಕೆ ಹೋಗುತ್ತೆ. ನನಗೆ ಬಹಳ ಎಚ್ಚರಿಕೆ ಕೊಟ್ಟಿರಿ, ನಿಮಗೂ ಕೊಡುತ್ತೇನೆ. ಇದೋ, ಹುಷಾರ್; ನಿಮ್ಮವರು ಯಾರು ನಿಮ್ಮ ಬಲಿಮೆ ಮೇಲೆ ತಪ್ಪು ಮಾಡಿದರೂ ಅವರಿಗೆ ಸಜ ಕೊಟ್ಟೇ ಕೊಡುತ್ತೇನೆ. ನೀವೂ ಈ ದುಷ್ಟ ಮಾರ್ಗವನ್ನು ಬಿಡದಿದ್ದರೆ ಒಂದು ದಿವಸ ಸಿಕ್ಕೇ ಸಿಗುತ್ತೀರಿ; ಇಷ್ಟು ದಿವಸ ಗೌರವವಾಗಿ ಬಾಳಿ, ಜೈಲಿನಲ್ಲಿ ಸಾಯುತ್ತೀರಿ."

ದೇವರಸೇಗೌಡ ಎದ್ದು ಕೈಮುಗಿದು, "ಕಾಗದಗಳನ್ನು ಯಾರು ಬರೆದರೋ ನನಗೇನು ಗೊತ್ತು? ನಾನು ಅಂಥ ಕೆಲಸ ಮಾಡಿದವನೂ ಅಲ್ಲ, ಮಾಡೋನೂ ಅಲ್ಲ. ನಮ್ಮೂರು ಪರಿಂಗರು ಮಾಡಿದ ಕೆಲಸಕ್ಕೆಲ್ಲ ನಾನೇ ಹೊಣೇನೆ, ಬುದ್ಧಿ? ತಾವು ನನ್ನ ಚನ್ನಾಗಿ ಪರೀಕ್ಷೆ ಮಾಡಿ ನೋಡಿ. ಅವರ ಇವರ ಮಾತನ್ನ ಕೇಳಬೇಡಿ. ನಾನು ತಪ್ಪು ಮಾಡಿದ್ದು ಕಂಡರೆ, ಜೋಡಿನಿಂದ ಹೊಡೆಯಿರಿ. ಚಾಡಿ ಮಾತಿನ ಮೇಲೆ ತಲೆ ಹೊಡೀಬೇಡಿ" ಎಂದ.

ನಾನು ಅವನ ಹೆಗಲಿನ ಮೇಲೆ ಕೈಯಿಟ್ಟು;

"ನೋಡಿ ಗೌಡರೆ, ನಿಮ್ಮ ಮೇಲೆ ನನಗೆ ದ್ವೇಷವಿಲ್ಲ, ನಿಜವಾಗೂ ಗೌರವ, ಮೆಚ್ಚಿಗೆ ಇದೆ. ಸತ್ಯವಾಗಿ ಹೇಳುತ್ತೇನೆ– ಆದರೆ ತಾಲ್ಲೂಕು ಸುಬೇದಾರನಾಗಿ, ತಾಲ್ಲೂಕಿನಲ್ಲಿ ಪುಂಡುತನ, ದೊಂಬಿ, ಕಾನೂನು ತಿರಸ್ಕಾರ ಇದ್ದರೆ ನೋಡಿಕೊಂಡು ಸುಮ್ಮನಿರಲಿಕ್ಕಾಗುತ್ತೆಯೋ? ನಿಮ್ಮಂಥವರು ದೇಶದ ದೊಡ್ಡ ಮಕ್ಕಳು, ದೇಶದ ಸೇವಕರಾದ ನಮ್ಮ ಸಂಗಡ ಸೇರಿ ಸಹಾಯ ಮಾಡಬೇಕು" ಎಂದೆ.

ಗೌಡ ನಮಸ್ಕಾರ ಮಾಡಿ ಹೊರಟುಹೋದ. ನಾನು ಆ ತಾಲ್ಲೂಕಿನಲ್ಲಿ ಆಮೇಲೆ ಇದ್ದ ಸುಮಾರು ಎರಡು ವರುಷಗಳ ಕಾಲ ನನಗೆ ಆತನಿಂದ ಯಾವ ತೊಂದರೆಯೂ ಆಗಲಿಲ್ಲ. ನಾನು ಅಲ್ಲಿಂದ ವರ್ಗವಾಗುವ ಕೆಲವು ತಿಂಗಳ ಹಿಂದೆ, ಅವನ ದುರದೃಷ್ಟವಶಾತ್ತು ಅವನು ಬಿದರಕ್ಕದ ಮೊಕದ್ದಮೆ ಎಂದು ಆಗ ಹೆಸರುವಾಸಿಯಾದ ಒಂದು

ದೊಂಬಿ ಸಹಿತ ಖೂನಿ ಕೇಸಿನಲ್ಲಿ ಒಂದು ರೀತಿಯಲ್ಲಿ ಸಿಕ್ಕು ನಾನೇ ಅವನನ್ನು ದಸ್ತಗಿರಿ ಮಾಡಬೇಕಾಯಿತು. ಆ ಕತೆಯನ್ನು ಮುಂದೆ ಹೇಳುತ್ತೇನೆ.

೨೨

ಹಿಂದಿನ ಅಧಿಕಾರಿಗಳು ಲಂಚ, ರುಷವತ್ತು ತೆಗೆದುಕೊಳ್ಳುತ್ತಿದ್ದ ರೆಂದು ನಾನು ಹುಡುಗನಾಗಿದ್ದಾಗ ವಾಡಿಕೆಯಾದ ಮಾತಾಗಿತ್ತು. ಯಾರಾದರೂ ಅಧಿಕಾರಿಯ ಮಾತು ಬಂದರೆ, ಸಾಮಾನ್ಯವಾಗಿ ಪ್ರಶ್ನೋ ತ್ತರಗಳೂ ಈ ರೀತಿ ಇರುತ್ತಿದ್ದವು:

"ಸಂಬಳ ಎಷ್ಟು?"

"ಐವತ್ತೋ, ನೂರೋ,' ಎಷ್ಟೋ ಆ ಸಂಖ್ಯೆಯ ನಿರೂಪಣೆ.

"ಮೇಲು ಸಂಪಾದನೆ?"

ಅದರ ವಿವರಣೆ–ಸಾಮಾನ್ಯವಾಗಿ ಸಂಬಳದ ಎರಡು ಮೂರರಷ್ಟು.

ಸಂಬಳ ಅದೃಷ್ಟದ ಮಾತು, ಮೇಲು ಸಂಪಾದನೆ, ಹುದ್ದೇದಾರನ ಶಕ್ತಿಯ ಅಳತೆ.

"ಅಹಹ, ಮಹಾರಾಯ, ತಾನೂ ತಿನ್ನುತ್ತಾನೆ, ಇತರರಿಗೂ ಹಾಕುತ್ತಾನೆ" "ಮದುವೇ ಮಾಡಿಸಿ ಊಟ ಮಾಡುತ್ತಾನೆ, ಶ್ರಾದ್ಧ ಮಾಡಿಸಿ ಅಲ್ಲ" "ತಾನೇ ತಿನ್ನದವ ಇತರರಿಗೆ ಏನು ಉಣಿಸಿಯಾನು?" "ಎಂಥ ಅಧಿಕಾರ! ಹತ್ತು ಜನನ್ನ ಬದುಕಿಸಿ ತಾನೂ ಬದುಕಬಹುದಾ ಗಿತ್ತು; ಆ ನಿರ್ಭಾಗ್ಯನಿಗೆ ಅದು ನಪುಂಸಕನಿಗೆ ರಂಭೆ ಸಿಕ್ಕಿದ ಹಾಗೆ ಸಿಕ್ಕಿತು!" ಇವು, ಇಂಥ ಸ್ತುತಿ, ನಿಂದೆಗಳನ್ನು ಪೂರ್ವದ ಅಧಿಕಾರಿ ಗಳ ವಿಚಾರದಲ್ಲಿ ಸಾಮಾನ್ಯವಾಗಿ ಕೇಳುತ್ತಿದ್ದೆ. ನಾನು ನೌಕರಿಗೆ ಸೇರಿ ದಾಗಲೂ ಹಳೇ ಹುಲಿಗಳೆಂದು ಪ್ರಸಿದ್ಧರಾದ ಕೆಲವು ಅಮಲ್ದಾರರು ಗಳಿದ್ದರು. ನನಗೆ ತಿಳಿದ ಹಾಗೆ ಒಬ್ಬರು–ಅವರು ಪ್ರಸಿದ್ಧರಾದ ಒಬ್ಬ ಹಿಂದಿನ ದಿವಾನರ ಮನೆಯಲ್ಲಿ ಅಡಿಗೆ ಪರಿಚಾರಿಕೆ ಕೆಲಸಗಳನ್ನು ಶ್ರದ್ಧೆಯಿಂದ ಮಾಡಿ, ಮೆಚ್ಚಿಗೆಯನ್ನು ಪಡೆದು ಅಮಲ್ದಾರಿಯನ್ನು ಸಂಪಾದಿಸಿದವರು— ಪೆನ್‌ಷನ್ ವಯಸ್ಸಾದ ಮೇಲೆ ಬಲವಾದ ಶಿಫಾ

ಶ್ರೀಂದ ಆರು ತಿಂಗಳ ಸರ್ವೀಸು ಬಡಾವಣೆಯನ್ನು ಪಡೆದು, ನಂತರ ದಿಟ್ಟಂ ಜಮಾಬಂದಿಯನ್ನು ಪ್ರಾರಂಭಿಸಿದರು. ಪ್ರಾರಂಭಕ್ಕೆ ಪ್ರಸ್ತಾವನೆಯಾಗಿ ಗ್ರಾಮನೌಕರರನ್ನೆಲ್ಲಾ ತಮ್ಮ ಮನೆಗೆ ಬರಮಾಡಿಕೊಂಡು, ಸತ್ಕರಿಸಿ, ಈ ರೀತಿ ತಮ್ಮ ಮನೋರಥವನ್ನು ಅಪ್ಪಣೆ ಕೊಡಿಸಿದರು:

ಅಯ್ಯಾ,– ಮೂವತ್ತು ವರುಷ ಜನಗಳ ಸೇವೆ ಮಾಡಿ ಈಗ ಚಾಕರಿ ಬಿಟ್ಟುಹೋಗೋಣಾಗಿದ್ದೇನೆ– ನಾನು ನನ್ನ ಕೈಲಾದಮಟ್ಟಿಗೂ ಜನಗಳಿಗೆ ಉಪಕಾರ ಮಾಡಿದವನೇ ಹೊರತು ಕೆಡಕು ಮಾಡಿದವನಲ್ಲ. ನಾನು ದೊಡ್ಡ ಸಂಸಾರಿ– ಓದೋ ಮಕ್ಕಳು ಮೊಮ್ಮಕ್ಕಳೂ, ಮದುವೆಯಾಗೋ ಹೆಣ್ಣು ಮಕ್ಕಳೂ ಇದ್ದಾರೆ. ನೀವೆಲ್ಲ ನನಗೆ ಸಹಾಯಮಾಡಬೇಕು. ನಾನು ಜಮಾಬಂದಿಗೆ– ಇದೇ ನನ್ನ ಕೊನೇ ಜಮಾಬಂದಿ, ಮರೆಯಬೇಡಿ– ಜಮಾಬಂದಿಗೆ ಬರುತ್ತೇನೆ– ಲೆಖ್ಖಗಳ ಸಂಗಡ ನಿಮ್ಮ ನಿಮ್ಮ ಗ್ರಾಮಗಳ ಮರ್ಯಾದೆಗೆ ತಕ್ಕ ಹಾಗೆ ನಮಗೆ ಸಂಭಾವನೆಯನ್ನು ತರಬೇಕು.

ಇದನ್ನು ಕೇಳಿದ ಕೆಲವು ಹಳಬರು–"ನ್ಯಾಯ ಸ್ವಾಮಿ. ಸುಬೇದಾರ್ರು ದೇವರಂಥ ಮನುಷ್ಯರು. ಏನೂ ಮರ್ಮ, ಅಹಂಕಾರ, ಅನ್ನೋದೆ ಇಲ್ಲ" ಎಂದು ಕಣ್ಣಿನಲ್ಲಿ ನೀರು ಹಾಕಿದರಂತೆ. ಅಂತು ಜಮಾಬಂದಿ ತೃಪ್ತಿಕರವಾಗಿ ನಡೆಯಿತಂತೆ. ನಾನು ಆಮೇಲೆ ಆ ಅಮಲ್ದಾರರನ್ನು ಕೇಳಿದೆ. ಅವರು ಆಗ ರಿಟೈರಾಗಿದ್ದರು. ಮುಖದ ಮೇಲೆ ಆಗಲೇ ವಯೋವೃದ್ಧ ವಾನಪ್ರಸ್ಥಾಶ್ರಮಿಗಳ ಶಾಂತಕಳೆ ಬಂದಿತ್ತು. ಅವರು ನನ್ನನ್ನು ಪುಣ್ಯಜಲದಿಂದ ಪ್ರೋಕ್ಷಿಸುವಂತೆ ಕರುಣಾದೃಷ್ಟಿಯಿಂದ ನೋಡಿ—

"ನೀವು ಹುಡುಗರು. ಕಾಪಿಪ್ಲೇಟು ಶಿರೋನಾಮೆಗಳನ್ನ ವೇದವಾಕ್ಯವೆಂದು ತಿಳಿದಿದ್ದೀರಿ– ನಾವೇನೂ ಚಾಕರಿ ಮಾಡೋದು ಸರ್ಕಾರವನ್ನು ಉದ್ಧಾರ ಮಾಡೋದಕ್ಕೇ? ಅಥವ ಮೋಕ್ಷವಾಗುತ್ತೆಂದೇ? ಎಲ್ಲ ಮಾಡೋದು ಹೊಟ್ಟೆಗಾಗಿ? ಆದರೆ ನಿಮ್ಮ ಹೊಟ್ಟೆಗಾಗಿ ಒಬ್ಬರಿಗೂ ಕೆಡಕು ಮಾಡಬಾರದು; ಒಬ್ಬರಿಗೂ ಹೊಟ್ಟೆಮೇಲೆ ಹೊಡೆಯಬಾರದು—ಅದೇ ಅಧಿಕಾರದ ಧರ್ಮ. ಕೈನಲ್ಲಿ ಮೂರು ಕಾಸಿದ್ದರೆ

ರಿಟೈರಾದಮೇಲೆ ದಾನ ಮಾಡಬಹುದು, ಧರ್ಮ ಮಾಡಬಹುದು ; ನಿಮ್ಮ ಮಕ್ಕಳು, ನಿಮ್ಮ ಬಂಧುಗಳು, – ಯಾಕೆ, ಪ್ರಪಂಚವೇ – ನಿಮ್ಮನ್ನು ಗೌರವಿಸುತ್ತಾರೆ. ಇಲ್ಲದಿದ್ದರೆ ನಿಮ್ಮ ಅಧಿಕಾರ ಹೋದಮೇಲೆ ನೀವು ಹೆಣ – ಸತ್ತ ಹೆಣ – ಅಂತಿಟ್ಟುಕೊಳ್ಳಿ ” – ಎಂದರು.

ನಾನು ಸರ್ಕೀಟು ಹೋಗುವಾಗ ನನಗೂ ನನ್ನ ಅಡಿಗೆಯವನಿಗೂ, ನನ್ನ ಕೈಸಾಲೆ ಆಳಿಗೂ ಸಾಕಾಗುವಷ್ಟು ಲವಾಜಮೆಯನ್ನು ತೆಗೆದುಕೊಂಡು ಹೋಗುತ್ತಿದ್ದೆ. ಆದರೆ ನನ್ನ ಪಂಕ್ತಿಯಲ್ಲಿ ಹತ್ತು ಹನ್ನೆರಡು ಜನ ಊಟ ಮಾಡುತ್ತಿದ್ದರು. ಬಿಡಾರದಲ್ಲಂತೂ ಆಳು ಕಾಳು ದೇಖೀಲು ಇಪ್ಪತ್ತು ಜನಗಳ ಮೇಲೆ ಭೋಜನಕ್ಕೆ ಸೇರುತ್ತಿದ್ದರು. ಇವರಿಗೆಲ್ಲ ಲವಾಜಮೆ ಎಲ್ಲಿಂದ ಬರುತ್ತೆಂದು ನಾನು ವಿಚಾರಿಸುತ್ತಿರಲಿಲ್ಲ – ಹಾಲು, ಮೊಸರು, ಬೆಣ್ಣೆ, ಇವುಗಳಿಗೆ ಕ್ರಯ ಕೊಡಲು ಯತ್ನಮಾಡಿದೆ. ಈ ಯತ್ನದಲ್ಲಿ ದುಡ್ಡು ನನ್ನ ಕೈತಪ್ಪಿ ಹೋಯಿತೇ ಹೊರತು ಸಾಮಾನು ಕೊಟ್ಟವನಿಗೆ ಮುಟ್ಟಲಿಲ್ಲವೆಂದು ಮಂದಟ್ಟಾಯಿತು – ಆಮೇಲೆ ದುಡ್ಡು ಕೊಡುವುದನ್ನು ಬಿಟ್ಟೆ. ನಮ್ಮ ಮನೆಗೆ ಬೇಕಾಗುವಷ್ಟು ಹುಲ್ಲು, ಸೌದೆ, ಜೋಳದ ಕಡ್ಡಿ, ಇವುಗಳನ್ನು ನಮ್ಮ ಆಳುಗಳು ಯಾವದೋ ಮಾಮೂಲು ಸರದಿಯಂತೆ ಗ್ರಾಮಾಂತರ ಸಂಗ್ರಹಿಸಿ ಮನೆಗೆ ಹಾಕಿ ಬಿಡುತ್ತಿದ್ದರು.

ನಾನು ಒಂದು ಸಲ ಮೈಸೂರಿಗೆ ಹೋದಾಗ ಮಾಮೂಲಿನಂತೆ ಅಲ್ಲಿಗೆ ದಯಮಾಡಿಸಿದ್ದ ಒಬ್ಬ ಕೌನ್‌ಸಿಲ್ಲರನ್ನು ನೋಡಲಿಕ್ಕೆ ಹೋದೆ. ಅವರು ಹಳೇ ಸ್ಕೂಲಿನ ಆಫೀಸರು. ಬಹಳ ಒಳ್ಳೆಯವರು. ಅಸಿಸ್ಟೆಂಟ್ ಕಮ್ಮಿಷನ್ನರ್, ಡೆಪ್ಯುಟಿ ಕಮಿಷನ್ನರ್ ಹುದ್ದೆಗಳಲ್ಲಿ ಶಕ್ತರು, ಸತ್ಯವಂತರು, ಎಂಬ ಕೀರ್ತಿ ಪಡೆದು, ರಿಟೈರಾಗುವುದಕ್ಕೆ ಮುನ್ನ, ದಿವಾನ್ ಪದವಿಗೆ ಎರಡನೆಯದಾದ, ಕೌನ್‌ಸಿಲ್ಲರ್ ಸ್ಥಾನಕ್ಕೆ ಬಂದಿದ್ದರು. ಅವರು ಏನೋ ಮಾತಿನ ಮೇಲೆ

– ನೀವು ಬಹಳ ಶಕ್ತರು ನಿಸ್ಪೃಹರು ಎಂದು ಕೇಳಿ ಸಂತೋಷಪಡುತ್ತೇನೆ. ಆದರೆ – ನಾನು ಹೇಳೋದಕ್ಕೆ ಅಪಾರ್ಥಮಾಡಿಕೋಬೇಡಿ — honesty ಯನ್ನು ಕೂಡ ಅಹಂಕಾರದಿಂದ ವಕ್ರವಾಗಿ ಆಚರಿಸಿ

ದೋಷವಾಗುವಂತೆ ಚಾಚಬಹುದು. ನಿಮ್ಮ ಹಿಂದಲೋರೆಲ್ಲ dis-honest, ನೀವೇ honest, ಎಂದು ತಿಳಿದುಕೊಳ್ಳುವುದೂ ತಪ್ಪು. ಕೆಲವು ಮಾಮೂಲು ಮರ್ಯಾದೆಗಳಿರುತ್ತವೆ—ಅವು ನಿಮ್ಮ ಅಧಿಕಾರಕ್ಕೆ ಕಾಣಿಕೆ. ನಿಂಬೆಹಣ್ಣು, ಹುವ್ವಿನಹಾರ, ಡಾಕಿಗೆ ಎತ್ತುಗಳು, ನೀವು ಮೊಕ್ಕಾಂ ಮಾಡಿದ ಕಡೆ ಹಾಲು, ಬೆಣ್ಣೆ ತರಕಾರಿ–ಇಂಥವು. ಇವುಗಳನ್ನು ನೀವು ತೆಗೆದುಕೊಳ್ಳದಿದ್ದರೆ, ಅದು ಈಗ ಬರೀ bad manners ; ಉತ್ತರೋತ್ತರ ನಿಮ್ಮ ನೌಕರಿಯ ಘನತೆಗೆ ಕುಂದು. ಇದು ಸತ್ಯದ ಅಂತಸ್ಥಿಗೆ ಏರುವ ವಿಷಯವಲ್ಲ. An honest and sensible man will have no difficulty in deciding for himself what is right and what is wrong. But one shouldn't get laughed at as an oddity, and one shouldn't compromise the dignity of one's office by dispensing with customary tributes of respect. (ಸತ್ಯವಂತನಾದ ವಿವೇಕಿ ಯಾವದು ಸರಿ ಯಾವದು ಅಲ್ಲವೆಂಬುದನ್ನು ಸುಲಭವಾಗಿ ವಿವೇಚಿಸಬಹುದು. ಆದರೆ ವಿಜಾತಿ ವಿಗ್ರಹವೆಂದು ಯಾರೂ ನಗಗೇಡಾಗ ಬಾರದು ; ತನ್ನ ಅಧಿಕಾರಕ್ಕೆ ಮಾಮೂಲಾಗಿ ಸಲ್ಲತಕ್ಕ ಮರ್ಯಾದೆಗಳನ್ನು ತ್ಯಜಿಸಿ ಅಧಿಕಾರದ ಗೌರವವನ್ನು ಅತಂತ್ರಕ್ಕೆ ತರಬಾರದು )

ಈ ಬುದ್ಧಿವಾದವನ್ನು ನಾನು ಆಪ್ತವಾಕ್ಯವನ್ನಾಗಿ ಎಣಿಸುತ್ತಿದ್ದೆ. ಬಹಳ ದಿನಗಳವರೆಗೂ ನನಗೆ ಲಂಚದ ವಿಚಾರ ಅರ್ಥವಾಗದಿದ್ದ ಸಮಸ್ಯೆ ಇದೊಂದು–ತೆಗೆದುಕೊಳ್ಳುವವನು ಲಂಚವನ್ನು ಯಾವ ಮುಖದಿಂದ ನಾಚಿಕೆ ಬಿಟ್ಟು ಕೇಳೋದು? ಕೊಡುವವನು ಯಾವ ಧೈರ್ಯದಿಂದ ಅಧಿಕಾರಿಗೆ ಲಂಚವನ್ನು ಕೊಡುತ್ತೇನೆಂದು ಹೇಳೋದು? ನನ್ನಲ್ಲಿ ಖದೀಮರಾದ ಒಬ್ಬ ಹೆಡ್‌ಗುಮಸ್ತೆಯರಿದ್ದರು. ಅವರು ಏನೋ ಮಾತು ಬಂದಾಗ ಒಬ್ಬ ದೊಡ್ಡಮನುಷ್ಯರ ಹೆಸರು ಹೇಳಿ–ಅವರ ಮೇಲಿನ ಗುಮಾನೆ ತಪ್ಪಿಸಿಕೊಳ್ಳೋಕೆ ಎಂದೂ ಒಂದು ಕಾಸು ಬಿಚ್ಚದವರು ಪೋಲೀಸಿನವರಿಗೇ ಒಂದು ಸಾವಿರ ರೂಪಾಯಿ ಕೊಟ್ಟರು, ಎಂದು ಹೇಳಿದರು. ಇದರ ಅರ್ಥ–ಕಷ್ಟಕ್ಕೆ ಸಿಕ್ಕಿದವರು ತಾವಾಗೇ ಲಂಚದ initiative ತೆಗೆದುಕೊಳ್ಳುತ್ತಾರಾದೀತೆಂದು ಅಲ್ಲವೆ? ಇಂಥ

ವರಿಂದಲೇ ಯುವಕ ಆಫೀಸರುಗಳಿಗೆ ಅಸತ್ಯಬೋಧೆ– ಇಂಥವರ ವಿಚಾರದಲ್ಲಿ ಬಹಳ ಜಾಗರೂಕತೆಯಿಂದಿರಬೇಕೆಂದು ತಿಳಿದುಕೊಂಡೆ. ಈ ಭಾವನೆಯು ಸತ್ಯವೆಂಬುದು ನನಗೆ ಕೆಲವು ದಿವಸಗಳಲ್ಲಿಯೇ ನಿದರ್ಶನಕ್ಕೆ ಬಂತು.

ಯಡತೊರೆ ತಾಲ್ಲೂಕಿನ ಪೂರ್ವಭಾಗದಲ್ಲಿ ಕೆಲವು ದೊಡ್ಡ ಇನಾಂ ಗ್ರಾಮಗಳಿವೆ. ಅವುಗಳಲ್ಲಿ ಒಂದು– ಅದರ ಹೆಸರು ಬೇಡ– ಹತ್ತು ಹನ್ನೆರಡು ವೃತ್ತಿಗಳಾಗಿ ವಿಭಾಗಿಸಲ್ಪಟ್ಟು ಬ್ರಾಹ್ಮಣರಿಗೆ ಸೇರಿದ್ದಾಗಿದೆ. ಪ್ರತಿ ವೃತ್ತಿಯಲ್ಲೂ ಹಲವಾರು ಸರ್ವೇ ನಂಬರುಗಳು ಅಡಕವಾಗಿವೆ. ಇವುಗಳಲ್ಲಿ ಕೆಲವು ಬಟಾಯಿ— ಅಂದರೆ ವೃತ್ತಿದಾರರಾದ ಇನಾಂದಾರರ ಸ್ವಂತ ಅನುಭವ ಅಥವ ವಹಿವಾಟಿನಲ್ಲಿದ್ದವು; ಉಳಿದವುಗಳು– ಇವೇ ಹೆಚ್ಚು ಭಾಗ— ಗ್ರಾಮದ ಹೆಗ್ಗಡೆ ಕುಳಗಳ ಸಾಗುವಳಿಯಲ್ಲಿದ್ದವು. ಈ ಭಾಗದ ಜಮೀನಿನ ರೈತರು ತಲೆತಲಾಂತರದಿಂದ ತಮ್ಮ ತಮ್ಮ ಹಿಡುವಳಿಯನ್ನು ಅನುಭವಿಸಿಕೊಂಡು ಬಂದು, ವೃತ್ತಿದಾರರಿಗೆ ನಗದು ಗುತ್ತಿಗೆ ಕೊಡುತ್ತಿದ್ದರು. ಇವು ಕಾವೇರಿ ನಾಲಾ ಕೆಳಗಣ ಜಮೀನುಗಳು, ಬಹಳ ಬೆಲೆ ಬಾಳತಕ್ಕವು. ವೃತ್ತಿದಾರರುಗಳು ಗುತ್ತಿಗೆಯನ್ನು ಹೆಚ್ಚಿಸಲು ಯತ್ನಮಾಡಿದರು. ರೈತರು ಇದಕ್ಕೆ ಒಪ್ಪಲಿಲ್ಲ, ಜಮೀನನ್ನು ಅವರ ಕೈತಪ್ಪಿಸಲು ಸಾಹಸ ಮಾಡಿದರೂ ಅದೂ ಸಾಗಲಿಲ್ಲ. ರೈತರು ತಮ್ಮ ಹಿಡುವಳಿ ಖದೀಂ ಹಕ್ಕು— ಇನಾಂದಾರರಿಗೆ ಗುತ್ತಿಗೆಗೆ ಮಾತ್ರ ಬಾಧ್ಯತೆ, ಎಂದು ವಾದಿಸಿದರು. ಇದು ಕೋರ್ಟುಗಳಲ್ಲಿ ವ್ಯವಹರಿಸಬೇಕಾದ ವಿಷಯ; ಫಲಿತಾಂಶದ ಭರವಸೆಯಿಲ್ಲ; ಬಹು ಕಾಲ ಮತ್ತು ಖರ್ಚು ಹಿಡಿಯುತ್ತೆಂಬುದು ಮಾತ್ರ ಖಂಡಿತ. ಹೀಗಿರುವಲ್ಲಿ ಯಾರೋ ಲಾಯರು ಅವರಿಗೆ ಒಂದು ಉಪಾಯವನ್ನು ಹೇಳಿಕೊಟ್ಟರೆಂದು ಕಾಣುತ್ತೆ. ವೃತ್ತಿದಾರರು ತಮ್ಮ ತಮ್ಮ ವೃತ್ತಿಗಳಲ್ಲಿನ ತಮಾಂ ಸರ್ವೆ ನಂಬರುಗಳಿಗೂ ಸರ್ಕಾರಕ್ಕೆ ಖಾತೇದಾರರು ವೃತ್ತಿದಾರರ ಹೊರತು ಮತ್ಯಾರ ಹೆಸರೂ ಸರ್ಕಾರಿ ಲೆಖ್ಖಗಳಲ್ಲಿಲ್ಲ. ಅವರು ಸರ್ಕಾರಕ್ಕೆ ಕ್ವಿಟ್‌ರೆಂಟು ಕೊಡಬೇಕು. ಈ ಸರ್ವೇ ನಂಬರುಗಳ ಪೈಕಿ ರೈತರ ಅನುಭವದಲ್ಲಿದ್ದವುಗಳ ಗುತ್ತಿಗೆಯನ್ನು ವೃತ್ತಿದಾರರೇ

ವಸೂಲ್ಮಾಡಿಕೊಂಡು, ಒಟ್ಟು ವೃತ್ತಿಕಂದಾಯವನ್ನು ತಾವೇ ಸರ್ಕಾರಕ್ಕೆ ಕೊಡುತ್ತಿದ್ದರು. ರೈತರ ಹೆಸರು ಸರ್ಕಾರಿ ಲೆಖ್ಖದಲ್ಲಿಲ್ಲವಾದ್ದರಿಂದ ರೈತರಿಗೂ ಸರ್ಕಾರಕ್ಕೂ ಕಂದಾಯದ ಸಂಬಂಧವಿಲ್ಲ. ವೃತ್ತಿದಾರರು ಎತ್ತಿದ ಉಪಾಯವೇನೆನ್ನುತ್ತೀರೋ ? ರೈತರಿಂದ ಗುತ್ತಿಗೆ ವಸೂಲ್ಮಾಡಿದರೂ ಸರ್ಕಾರಕ್ಕೆ ಕೊಡಬೇಕಾದ ಹಣಕೊಡದೆ, ವೃತ್ತಿಯ ಜಮೀನುಗಳನ್ನೆಲ್ಲಾ ಕ್ವಿಟ್‌ರೆಂಟು ಬಾಕಿಗಾಗಿ ಹರಾಜಿಗೆ ತರುವುದು ; ಹರಾಜಿನಲ್ಲಿ ಖದೀಮರೆಂದು ಹೇಳುವ ರೈತರುಗಳ ಜಮೀನನ್ನು ತಮ್ಮವರ ಕಡೆಯಿಂದ ಛಡಸವಾಲು ಮಾಡಿಸಿ ಕೊಂಡುಕೊಳ್ಳುವುದು. ಸರ್ಕಾರದ ಹರಾಜಿನಲ್ಲಿ ರೈತರ ಹಿಡುವಳಿ ಹಕ್ಕುಗಳೆಲ್ಲಾ ತೊಳೆದುಹೋಗುತ್ತವೆ. ಆಮೇಲೆ ಅವರ ವಾದಕ್ಕೆ ಬುಡವಿಲ್ಲದೇಲೇ ಹೋಗುತ್ತದೆ. ಈ "ಕುಂಸಲಿ"ನ ಅನುಸಾರವಾಗಿ ಸರ್ಕಾರಕ್ಕೆ ಬಾಕಿದಾರರುಗಳಾಗಿ ವೃತ್ತಿಗಳ ಜಮೀನುಗಳನ್ನೆಲ್ಲಾ ಹರಾಜಿಗೆ ಕೆಡವಿದರು. ಭಾರಿ ಬೆಲೆ ಬಾಳತಕ್ಕ ಜಮೀನುಗಳು, ಸಾವಿರಾರು ರೂಪಾಯಿಗಳ ಬಾಕಿ ; ಸಬ್‌ಡಿವಿಜನ್ ಆಫೀಸರೇ ಹರಾಜು ನಡಸುವುದಕ್ಕೆ ಬಂದರು. ನಾನು ಮಾಮೂಲಿನಂತೆ ಅವರ ಕುಮ್ಮಕ್ಕಿಗೆ ಹಾಜರಿದ್ದೆ.

ಗ್ರಾಮಚಾವುಡಿಯಲ್ಲಿ ಹರಾಜು ಪ್ರಾರಂಭವಾಯಿತು. "ಮೊದಲನೇ ಖಾತೆ, ವೃತ್ತಿದಾರ್ ಪಲಾನೆ ಶಾಸ್ತ್ರಿಗಳು. ಬಾಕಿ 500 ರೂಪಾಯಿಗಳು. ಪಲಾನೆ ಸರ್ವೆ ನಂಬರು" ಹೀಗೆಂದು ಹರಾಜು ಪಟ್ಟಿ. ಆ ಸರ್ವೆ ನಂಬರನ್ನು ಹರಾಜಿಗೆ ಕೂಗಿಸಿದರು. ಕೂಗಿಸುವುದೆಂದರೆ ಹೀಗೆ —

"ಪಲಾನೆ ಸರ್ವೆ ನಂಬರು – 3 ಏಕರೆ 10 ಗುಂಟೆ, 26 ರೂ. ಕಂದಾಯ, ಸರ್ಕಾರದ ಸವಾಲು 1000 ರೂ." ಎಂದು ಶೇಕದಾರರು ಕೂಗುತ್ತಾರೆ. ಕೊಂಡುಕೊಳ್ಳಲು ಇಷ್ಟಪಡುವರು, ತಮ್ಮ ಇರಾದೆಯ ಮೊಬಲಗನ್ನು ಬಿಡ್ಡುಮಾಡುತ್ತಾರೆ. ಅದರಮೇಲೆ ಬಿಡ್ಡುದಾರರುಗಳ ಪೈಪೋಟಿ. ಕೊನೆಗೆ ಛಡಸವಾಲುದಾರ – ಅಂದರೆ ಎಲ್ಲರಗಿಂತ ಹೆಚ್ಚು ಮೊಬಲಗು ಕೊಡುವುದಾಗಿ ಕೂಗಿದವನಿಗೆ, ಆ ಜಮೀನು ನಿಲ್ಲಿಸಲಾಗುತ್ತದೆ.

ಹರಾಜು ಪ್ರಾರಂಭವಾದ ಕೂಡಲೆ, ಒಬ್ಬ ರೈತ ಎದ್ದು— "ಬುದ್ಧಿ, ಆ ನಂಬರು ನನ್ನದು, ನಮ್ಮ ತಾತ, ಮುತ್ತಾತ, ಇನ್ನೂ ಹಿಂದಲ ಹಿರೇರ ಕಾಲದಿಂದ ನಮ್ಮದೇ ಆಗಿ ಬಂದಿದೆ. ವೃತ್ತಿದಾರ್ರಿಗೆ ಬೇಬಾಕಾಗಿ ಕಂದಾಯ ಪಾವತಿಮಾಡಿ ರಸೀದಿಪಡೆದಿದ್ದೇನೆ. ಅವರು ಸರಕಾರಕ್ಕೆ ಜೋಡಿ ಕೊಡದಿದ್ದರೆ, ಅವರ ಸ್ವಂತ ಅನುಭವದಲ್ಲಿರುವ ಜಮೀನುಗಳನ್ನು ಹರಾಜುಮಾಡಿ—" ಎಂದು ರಸೀದಿಗಳನ್ನು ಹಾಜರ್ಮಾಡಿದ.

ಜೋಡಿದಾರರು— ಇವನಿಗೇ ಸರ್ಕಾರಕ್ಕೇ ಸಂಬಂಧವೇನು ಸ್ವಾಮಿ? ಖಾತೆದಾರ್ರನಾದ ನನಗೆ ಈ ನಂಬರು ಹರಾಜಾಗುವುದೇ ಸಮ್ಮತಿ — ಎಂದರು.

ಬಹಳ ಉದ್ರೇಕದಿಂದ ವಾದವಿವಾದಗಳು ನಡೆದವು. ಜೋಡಿದಾರರ ಕಡೆಯವರು ಜಮೀನುಗಳನ್ನು ಹರಾಜಿನಲ್ಲಿ ಛಡಸವಾಲಿಗೆ ಪಡೆಯಲು ಸಿದ್ಧರಾಗಿ ಮೈಸೂರು, ಬೆಂಗಳೂರು, ಹಾಸನ, ಈ ಸ್ಥಳಗಳಿಂದ ಅನೇಕರು ಬಂದಿದ್ದರು. ರೈತರ ಕಡೆ ನೆಂಟರು, ಇಷ್ಟರು, ಮಂತ್ರಿಗಳು, ಅನೇಕರು ಬಂದಿದ್ದರು. ಚರ್ಚೆ– ಪ್ರತಿಯೊಬ್ಬನೂ ಘಟ್ಟಿಯಾಗಿ ಮಾತನಾಡುವುದು, ಯಾರೊಬ್ಬನೂ ಕಿವಿಗೊಡದಿರುವುದು– ಆಗಿ ದೊಡ್ಡ ಗೊಂದಲಕ್ಕಿಟ್ಟುಕೊಂಡಿತು. ಸಬ್‌ಡಿವಿಜರ್ಆಫೀಸರು– ಬೇಸರಪಟ್ಟು–ಇದೇನು ಅಮಲ್ದಾರರೇ, ಇವತ್ತು ಹರಾಜು ನಡೆಯುವಂತಿಲ್ಲ ; ಲೆಖ್ಖವನ್ನು ನೀವೇ ಚೆನ್ನಾಗಿ ಪರಿಶೀಲಿಸಿ, ಈ ವಿವಾದವನ್ನು ಫೈಸಲ್ಮಾಡಿ ; ಆಮೇಲೆ ಹರಾಜು ಮಾಡಿಸೋಣ– ಎಂದರು.

ನಾನು ಅಲ್ಲಿ ನೆರೆದಿದ್ದ ಜನವನ್ನು—ಗಲಭೆ ಮಾಡಬೇಡಿ, ಕುಳಿತುಕೊಳ್ಳಿ– ಎಂದು ಜಬರುದಸ್ತಿಯಿಂದಕುಳ್ಳಿರಿಸಿ, ವೃತ್ತಿದಾರರ ಕಡೆಯವರು ಒಬ್ಬರು, ರೈತರ ಕಡೆ ಒಬ್ಬರು, ಬುದ್ಧಿವಂತರು ಪ್ರತಿನಿಧಿಗಳಾಗಿ ಮುಂದೆ ಬರಲಿ ; ಪ್ರತಿನಿಧಿಗಳನ್ನು ನೀವುಗಳೇ ಚುನಾಯಿಸಿ. ಅವರ ವಾದಗಳನ್ನು ಕೇಳಿ, ಹಿಂದಿನ ಲೆಖ್ಖಗಳನ್ನೂ ನೋಡಿ, ಸಬ್‌ಡಿವಿಜರ್ ಸಾಹೇಬರು ತೀರ್ಮಾನಕ್ಕೆ ಬರುತ್ತಾರೆ. ಏತನ್ಮಧ್ಯೆ ಯಾರಾದರೂ

ತಾರಾತಂಟ್ಲೆ ಮಾಡಿದರೆ, ಅವರನ್ನು ಲಾಕಪ್ಪಿಗೆ ಕಳಿಸುತ್ತೇನೆಂದು ಹೇಳಿದೆ. ಗಲಭೆ ಶಮನವಾಯಿತು. ಪ್ರತಿನಿಧಿಗಳೂ ಮುಂದೆ ನಿಂತರು. ಹೊರಪಟ್ಟ ಸಂಗತಿಗಳು—1. ವೃತ್ತಿಗಳಲ್ಲಿನ ಎಲ್ಲ ಸರ್ವೆ ನಂಬರುಗಳೂ ವೃತ್ತಿದಾರರ ಹೆಸರಿಗೆ ಖಾತೆ ಇವೆ. ಆ ಖಾತೆಯು ಜಮಾಬಂದಿ ಕ್ವಿಟ್ ರೆಂಟಿನ ದಾಮಾಷ ಹಿಸ್ಸೆ 2. ಪ್ರತಿ ಖಾತೆಯಲ್ಲೂ ಅನೇಕ ಸರ್ವೆ ನಂಬರುಗಳಿವೆ. ಇವುಗಳಲ್ಲಿ ಕೆಲವನ್ನು ಪ್ರತ್ಯೇಕ ಪ್ರತ್ಯೇಕವಾಗಿ ಕಂದಾಯ ಠರಾಯಿಸಿ ಸಾಗುವಳಿದಾರರಿಗೆ ಕಂದಾಯಕ್ಕೆ ಹಿಂದಿನ ವೃತ್ತಿದಾರರು ಕೊಟ್ಟಿದ್ದಾರೆ. ಇನ್ನು ಕೆಲವನ್ನು ತಮ್ಮ ಸ್ವಂತ ಸಾಗುವಳಿಯಲ್ಲೇ ಉಳಿಸಿಕೊಂಡಿದ್ದಾರೆ, 3. ಸಾಗುವಳಿದಾರರು ಬಹುಶಃ ತಲೆತಲಾಂತರದಿಂದಲೂ ತಮ್ಮ ಸಾಗುವಳಿ ಜಮೀನುಗಳನ್ನು ವೃತ್ತಿದಾರರಿಗೆ ಕಂದಾಯ ಕೊಟ್ಟುಕೊಂಡು ಅನುಭವಿಸಿಕೊಂಡು ಬಂದಿರತಕ್ಕವರಾಗಿರುತ್ತಾರೆ. ಈ ವರುಷವೂ ಅದೇ ರೀತಿ ಕೊಟ್ಟಿರುತ್ತಾರೆ.

ವೃತ್ತಿದಾರರು ತಾವು ಇಟ್ಟಿರತಕ್ಕ ಕುಳಗಳ ಲೆಖ್ಖವನ್ನು ಯಾವ ನೆಪದಿಂದಲೋ ಹಾಜರ್ಮಾಡದೇ ಹೋದರು. ಕುಳಗಳು ತಮ್ಮಲ್ಲಿರುವ ರಸೀದಿಗಳನ್ನು ಹಾಜರ್ಮಾಡಲು ಸಿದ್ಧಪಡಿಸಿಕೊಂಡಿರುವುದಾಗಿ ಹೇಳಿದರು.

ಸಬ್‌ಡಿವಿಜನ್ ಆಫೀಸರೂ ನಾನೂ ರಹಸ್ಯವಾಗಿ ಈ ಸನ್ನಿವೇಶವನ್ನು ಚರ್ಚೆಮಾಡಿ, ಬಂದ ತೀರ್ಮಾನ ಹೀಗೆ—

ಜಮೀನುಗಳನ್ನು ಖಾತೆಯಲ್ಲಿನ ಕ್ರಮದಂತೆ ಹರಾಜಿಗೆ ಕೂಗಿಸುವುದು. ಯಾವುದಾದರೂ ಜಮೀನು ರೈತನ ಹಿಡುವಳಿಯಲ್ಲಿದ್ದುದ್ದಾಗಿ, ರೈತ ಅದುವರಿಗಿನ ಕಂದಾಯವನ್ನು ವೃತ್ತಿದಾರನಿಗೆ ಬೇಬಾಕಾಗಿ ಪಾವತಿಮಾಡಿದ ರುಜುವಾತು ಬಂದರೆ ಆ ಜಮೀನಿನ ಹರಾಜನ್ನು ಆ ಸದ್ಯಕ್ಕೆ ಅಮಾನತ್ತಿನಲ್ಲಿಟ್ಟು ಮುಂದಿನ ನಂಬರನ್ನು ಕೂಗಿಸುವುದು. ಹೀಗೆ ಮಾಡಿದರೆ ಕಂದಾಯ ಪಾವತಿ ಮಾಡಿರುವ ಕುಳಗಳ ಜಮೀನುಗಳನ್ನು ಮುಟ್ಟುವ ಮುಂಚೆ, ಕಂದಾಯವನ್ನು ಬಾಕಿಯಲ್ಲಿಟ್ಟುಕೊಂಡಿರುವ ರೈತರ ಜಮೀನುಗಳು, ವೃತ್ತಿದಾರರ ಸ್ವಂತ ಹಿಡುವಳಿಯಲ್ಲಿರುವ ಜಮೀನುಗಳು, ಹರಾಜಿಗೆ ಬರುತ್ತವೆ. ಇವುಗಳಿಂದ ಸರ್ಕಾರದ ಬಾಕಿ

ಪೂರ್ತಾ ಏಳದಿದ್ದಲ್ಲಿ ನಂತರ ಒಟ್ಟು ಖಾತೆ ಜವಾಬ್ದಾರಿಯನ್ನು ಅಮಲಿಗೆ ತಂದು, ಮೊದಲು ಅಮಾನತ್ತಿಗೆ ಬಿಟ್ಟಿದ್ದ ಜಮೀನುಗಳನ್ನೂ ಹರಾಜಿಗೆ ತರುವುದು.

ಈ ತೀರ್ಮಾನವನ್ನು ನಾನೇ ಸ್ಪಷ್ಟವಾಗಿ ಬಿಡಿಸಿ ಹೇಳಿದೆ. ಜೋಡಿದಾರರುಗಳು ಮುಖಕೆಟ್ಟು ಒಬ್ಬರ ಕಡೆ ಒಬ್ಬರು ನೋಡಿಕೊಂಡರು. ಅವರ ಪೈಕಿ ಒಬ್ಬರು —

" ಇದು ಲಾಕ್ಕೆ ವಿರೋಧ. ಹಿಂದಿನ ಮಹಾಸ್ವಾಮಿಗಳು ಕೊಟ್ಟ ಬ್ರಹ್ಮಾದಾಯವನ್ನು ತಾವು ಈಗ ನಾಶಮಾಡುತ್ತೀರಿ " ಎಂದರು.

" ಜೋಕೆ. ಮಾರ್ಯಾದೆ ಮೀರಿ ಮಾತನಾಡಿದರೆ ಶಿಕ್ಷೆಯಾದೀತು" ಎಂದು ಎಚ್ಚರಿಸಿದೆ.

ಸರಿ, ಒಂದೆರಡು ಸರ್ವೆ ನಂಬರುಗಳನ್ನು ಕೂಗಿಸಿ, ಅವುಗಳ ಹಿಡುವಳಿದಾರರಿಂದ ಬರಮಾಡಿಕೊಂಡ ರಸೀದಿಗಳನ್ನೆಲ್ಲಾ ನೋಡಿ, ಆ ನಂಬರುಗಳ ಹರಾಜನ್ನು ತುರ್ತು ನಿಲ್ಲಿಸಿದ್ದಾಯಿತು. ವೃತ್ತಿದಾರರುಗಳು ಗ್ರಹಬಡಿದವರಂತೆ ಸ್ತಬ್ಧರಾಗಿ ನಿಂತಿದ್ದರು.

ಅನಂತರ ನಾನು ಚಾವುಡಿ ಹಿಂದಿನ ಪಾಳುಪ್ರದೇಶಕ್ಕೆ ಜಲಬಾಧೆಗಾಗಿ ಹೋದೆ. ನಾನು ನನ್ನ ಬಾಧೆ ತೀರಿಸಿಕೊಂಡು ಏಳುವಾಗ ಒಬ್ಬ ವೃತ್ತಿದಾರರು ನನ್ನ ಹಿಂದೆ ನಿಂತಿದ್ದರು. ಅವರು ಕೈಮುಗಿದು —

" ಬ್ರಾಹ್ಮಣ ಪ್ರಭು, ಬ್ರಾಹ್ಮಣರನ್ನು ಉದ್ಧಾರಮಾಡಬೇಕು. ಈಗ ಆಗುತ್ತಿರುವ ಹರಾಜಿನ ರೀತಿಯಲ್ಲಿ ನಾವುಗಳು ನಿರ್ಮೂಲವಾಗಿ ಹೋಗುತ್ತೇವೆ " ಎಂದು, ತಮ್ಮ ಶಾಲಿನ ಮುಡಿಯಿಂದ ನೂರು ನೂರು ರೂಪಾಯಿನ ಕೆಲವು ಕರೆನ್ಸಿ ನೋಟುಗಳನ್ನು – ಎಷ್ಟು ನೋಟುಗಳಿದ್ದವೋ, ನಾನು ಚೆನ್ನಾಗಿ ನೋಡಲಿಲ್ಲ, ಮೂರು ನಾಲ್ಕು ಇದ್ದಂತೆ ಇತ್ತು – ತೆಗೆದು ನನಗೆ ಕೊಡಲಿಕ್ಕೆ ಬಂದರು. ನನಗೆ ಬಂದ ಕೋಪದಲ್ಲಿ ಅವರು ನನಗಿಂತ ವಯಸ್ಸಾದವರು ಎನ್ನುವದನ್ನೂ ಯೋಚಿಸದೆ ಅವರಿಗೆ ಎರಡು ಬಲವಾದ ಥಪರಾಕು ಹೊಡೆದು ಬಂದುಬಿಟ್ಟೆ. ಅವರು ಹರಾಜು ನಡೆಯುತ್ತಿದ್ದ ಜಾಗಕ್ಕೆ ತಿರುಗ ಬರಲಿಲ್ಲ. ಸಂಜೆಯೊಳಗಾಗಿ ಯಾವ ಜಮೀನೂ ಹರಾಜಿಲ್ಲದೆಯೇ ಕೆಲವು ವೃತ್ತಿದಾರರು

ತಮ್ಮ ಬಾಕಿಯನ್ನೆಲ್ಲಾ ಪಾವತಿಮಾಡಿದರು; ಉಳಿದವರು ಸ್ವಲ್ಪ ಕಾಲವಾಯಿದೆ ಮಾಡಿಕೊಂಡು ತಾವು ಕೊಡಬೇಕಾದ್ದನ್ನು ಕೊಟ್ಟರು.

೨೩

ನನ್ನ ಸರ್ವೀಸಿನಲ್ಲೆಲ್ಲಾ ಈ ರೀತಿಯ ನನ್ನ ಸತ್ವಪರೀಕ್ಷೆ ಇದೊಂದೆ—ಆದರೆ ಅಕ್ರಮವಾದ ಪ್ರಯೋಜನದ ಸಲಹೆಗಳೇನೋ ನನ್ನ ಹಿತ ಚಿಂತಕರೆಂಬುವರಿಂದ ಒಂದೆರಡು ಸಲ ಬಂದವು. ಒಬ್ಬರು ದೊಡ್ಡ ಮನುಷ್ಯರು ಅಮೃತಮಹಲ್ ಇಲಾಖೆಯಿಂದ ಬಿಡುಗಡೆ ಮಾಡಲ್ಪಟ್ಟ ಒಂದು ಕಾವಲು ಜಮೀನನ್ನು ತಮಗೆ ದರ್ಖಾಸ್ತಿಗೆ ಕೊಡಿಸಲು ಕೇಳಿದರು. ಅದರ ಸನ್ನಿಕರ್ಷ ನೋಡಿದರೆ ಅದು ಎಂದಿಗಾದರೂ ಒಂದು ನಾಲಾ ಬಡಾವಣೆಯ ಅಚ್ಚುಕಟ್ಟಿಗೆ ಸೇರಿ, ಉತ್ತಮ ದರ್ಜೆ ಗದ್ದೆ ಆಗುವಂಥದ್ದೆಂದು ನನಗೆ ತೋರಿತು. ಆ ದೊಡ್ಡಮನುಷ್ಯರದೂ ಇದೇ ನಿರೀಕ್ಷಣೆ—ಅವರು ಅದನ್ನು ಮರೆಮಾಡಲೂ ಇಲ್ಲ. ಅವರು ಹೇಳಿದ್ದು—“ಈ ಜಮೀನು ಮುಂದೆ ಬಹಳ ಬೆಲೆ ಬಾಳತಕ್ಕದ್ದಾಗಿದೆ ಸ್ವಾಮಿ. ಅದನ್ನು ರೂಪಿಗೆ ತರುವುದಕ್ಕೆ ಬಹಳ ಬಂಡವಾಳವೂ ಬೇಕು. ಅದನ್ನು ನಾನು ಹಾಕಲು ಸಿದ್ಧವಾಗಿದ್ದೇನೆ. ಮುಂದೆ—ಈಗ ಏನೂ ಅವಸರವಿಲ್ಲ; ತಾವು ಬೇರೇ ತಾಲ್ಲೂಕಿಗೆ ವರ್ಗವಾದ ಮೇಲೆ, ಅಥವ ಇನ್ನೂ ಭಾರಿ ಹುದ್ದೆಗೆ ಏರಿದ ಮೇಲೆ, ತಮಗೆ ಇಷ್ಟ ಬಂದಾಗ ತಮಗಾಗಲಿ ತಮ್ಮ ಇರಾದೆಯಂತೆ ಇನ್ಯಾರಿಗಾಗಲಿ ಅರ್ಧ ಜಮೀನನ್ನು ಒಪ್ಪಿಸುತ್ತೇನೆ—ದರ್ಖಾಸ್ತಿಗೆ ಯಾರ ತಕರಾರೂ ಇಲ್ಲದಂತೆ ಆಸುಪಾಸು ಗ್ರಾಮಸ್ಥರ ಒಪ್ಪಿಗೆ ಮಹಜರೂ ಮಾಡಿಸುತ್ತೇನೆ” ಹೀಗೆಂದು—ನಾನು ಭಾಗ್ಯವಂತನಲ್ಲ; ನನಗೆ ಜಮೀನು, ವ್ಯವಸಾಯವೆಂದರೆ ಮೋಹ. ರಿಟೈರಾದಮೇಲೆ ನಮ್ಮ ಹಿರಿಯರಂತೆ ನಾನೂ ಜಮೀನು ಜೀವನದ ಸಾಧುವೃತ್ತಿಯಲ್ಲಿ ಆಯುಸ್ಸಿನ ಶೇಷವನ್ನು ಕಳೆಯಬೇಕೆಂಬುದೇ ನನ್ನ ಕನಸು. ಈ ಸಲಹೆಯನ್ನು ಕೊಟ್ಟವರು ನಮ್ಮ ಮನೆತನದ ಸ್ನೇಹಿತರು, ನನ್ನಲ್ಲಿ ನಿಜವಾದ ಪ್ರೇಮವುಳ್ಳವರು, ಈ ಸಲಹೆಯಿಂದ ನನಗೆ ಉಂಟಾದ ತೀವ್ರವಾದ ಮನೋವಿಕಾರವನ್ನು ನಾನು ದೇವರ ದಯೆಯಿಂದಲೇ ಶಮೆಗೆ ತಂದು ಜಯಸಿದೆನೆಂದು ತಿಳಿದಿದ್ದೇನೆ.

ನಾನು ಯಡತೊರೆ ಛಾರ್ಜಿನಲ್ಲಿದ್ದಾಗ ಪುನಃ ಸಿವಿಲ್ ಸರ್ವಿಸ್‌ಗಾಗಿ ಸ್ಪರ್ಧೆ ಪರೀಕ್ಷೆ ನಡಸುವುದನ್ನು ಆಗ ದಿವಾನಗಿರಿಗೆ ಬಂದಿದ್ದ ವಿ. ಪಿ. ಮಾಧವರಾಯರ ಸರ್ಕಾರ ನಿಶ್ಚಯಿಸಿತು. ಹಿಂದಿನ ಸ್ಪರ್ಧೆಯಲ್ಲಿ ಅಗ್ರಪದವಿ ಸಿಕ್ಕದಿದ್ದರೂ ಯಶಸ್ಕರವಾಗಿ ಪ್ಯಾಸುಮಾಡಿ, ಪರೀಕ್ಷಕರ ಮೆಚ್ಚುಗೆಯನ್ನು ಪಡೆದಿದ್ದ ಕೆಲವರಿಗೆ ಆಗಿನ ಸರ್ಕಾರದವರು ಪ್ರೊಬೇಷನ್ನರ್ ಕೆಲಸಗಳನ್ನು ಕೊಟ್ಟರು; ಅವರ ಪೈಕಿ ನಾನೊಬ್ಬನೆಂದು ಹೇಳಿದ್ದೇನಷ್ಟೆ. ನಮಗೆ ನೌಕರಿಗೆ ಸೇರಿಸಿಕೊಳ್ಳುವಾಗ ಸರ್ಕಾರದವರು ನಮಗೆಲ್ಲರಿಗೂ ಗೆಜೆಟೆಡ್ (ಆಗಿನ ಅರ್ಥದಲ್ಲಿ ಅಸಿಸ್ಟೆಂಟ್ ಕಮಿಷನ್‌ರ್ ಮತ್ತು ಮೇಲ್ಪಟ್ಟ ದರ್ಜೆ) ಹುದ್ದೆಗಳನ್ನು ದೊರಕಿಸುವವರಿಗೆ ಸ್ಪರ್ಧೆ ಪರೀಕ್ಷೆಗಳನ್ನು ಮನ್ನಮಾಡುವುದಾಗಿ ತೀರ್ಮಾನಿಸಿದ್ದರಂತೆ. ಆಗಿನ ದಿವಾನರು ನಮ್ಮನ್ನು ಒಂದೆರಡು ವರುಷಗಳೊಳಗಾಗಿ ಅಸಿಸ್ಟೆಂಟ್ ಕಮಿಷನರ್ ಪದವಿಗೆ ಏರಿಸುವ ಉದ್ದೇಶವಿರುವುದಾಗಿ ಆಶೆ ತೋರಿಸಿದ್ದರು. ಇದು—ಪ್ರಾಮಿಸ್ (ಕರಾರು, ಪ್ರತಿಜ್ಞೆ) ಅಲ್ಲ, ಈಗಿನ ನಮ್ಮ ಉದ್ದೇಶವೆಂದು ಹೇಳಿದ್ದರು. ಹೀಗಿರುವಲ್ಲಿ ಹಿಂದಿನ ನೆಲೆಯನ್ನು ಮರೆತು, ನ್ಯಾಯವಾಗಿ ಉದಿಸಿದ ಆಸೆಗಳನ್ನು ಭಂಗಪಡಿಸಿ, ಪುನಃ ಹಟಾತ್ತಾಗಿ ಸ್ಪರ್ಧೆ ಪರೀಕ್ಷೆಯನ್ನು ನಿರ್ಧರಿಸಿದ್ದು, ಹಿಂದಿನ ದಿವಾನರಿಂದ ಕೆಲಸಪಡೆದವರು ಅವರ ಪಕ್ಷದವರು, ಅವರಿಗೆ ಕೆಡಕು ಮಾಡಬೇಕೆಂಬ ಸಂಕಲ್ಪದಿಂದಲೇ ಎಂದು ನಮಗೆ ತೋರಿದ್ದು ಸಹಜವೇ. ಇದು ಸಾಲದೆ "ಗಂಡಸ್ಯೋಪರಿ ಪಿಂಡಕಃ ಸಂವೃತ್ತಃ" ಎಂಬುವಂತೆ ಸಿವಿಲ್ ಸರ್ವೀಸ್ ಪರೀಕ್ಷೆಯ ಉಮೇದುವಾರಿಕೆ ರೂಲ್ಸನ್ನು ನಮ್ಮ ಉಮೇದುವಾರಿಕೆ ಹಕ್ಕನ್ನು ರದ್ದುಮಾಡುವ ಉದ್ದೇಶದಿಂದಲೋ ಎಂಬಂತೆ ಬದಲಾಯಿಸಿದರು. ಹಿಂದಿನ ನಿಯಮದಲ್ಲಿ ಡಬ್ಬಲ್ ಗ್ರಾಜ್ಯುಯೇಟರೂ (ಅಂದರೆ ಎರಡು ಪದವಿದಾಯಕ ಪರೀಕ್ಷೆಗಳನ್ನು ಪ್ಯಾಸು ಮಾಡಿದವರೂ) ಅಥವ ಸರ್ಕಾರಿ ನೌಕರಿಯಲ್ಲಿರತಕ್ಕವರೂ ಮೂವತ್ತು ವರುಷಗಳ ವಯಸ್ಸಿನವರಿಗೂ ಪರೀಕ್ಷೆಯಲ್ಲಿ ಸ್ಪರ್ಧಿಸಬಹುದಿತ್ತು. ಹೊಸ ರೂಲ್ಸಿನಲ್ಲಿ ಈ ವಯಸ್ಸಿನ ಮಟ್ಟವನ್ನು ಇಪ್ಪತ್ತೈದಕ್ಕೆ ತಗ್ಗಿಸಿದರು. ನನಗೆ ಆಗ ಇಪ್ಪತ್ತೇಳು ವರ್ಷ ವಯಸ್ಸು, ಇದರಿಂದ

ಹಾನೂ ಸ್ಪರ್ಧೆಯಲ್ಲಿ ಜಯಸೇವೆಂದು ನನ್ನ ಹಾಗೇ ಹುಮ್ಮಸ್ಸುಳ್ಳ ನನ್ನ ಸ್ನೇಹಿತರು ಮೂರು ನಾಲ್ಕು ಮಂದಿ ಮೈಸೂರಿನವರೂ ಸ್ಪರ್ಧೆಯಿಂದ ಹೊರಗಾದೆವು.

ಆ ಬದಲಾವಣೆಯ ಮುಖ್ಯ ಉದ್ದೇಶ ಮೈಸೂರಿನವರಲ್ಲದವರನ್ನು ನಮ್ಮ ತಲೆಯ ಮೇಲೆ ಮುಂದೆ ದೊಡ್ಡ ಪದವಿಗಳಿಗೆ ತರಬೇಕೆಂಬುದೆಂದು ನಾನು ಈಗಲೂ ತಿಳಿದಿದ್ದೇನೆ. ಮೈಸೂರಿನವರ ಕಣ್ಣು ಒರಸುವುದಕ್ಕಾಗಿ—ಲೋಕೋವಿಶಾಲಕ್ಕೆ ಎರಡು ಹುದ್ದೆ ಸ್ಪರ್ಧೆಗೆ ಕೊಟ್ಟರೆ, ಏಳು ಹುದ್ದೆಗಳನ್ನು ಬಡತಿಯಿಂದ ಮೈಸೂರಿನವರಿಗೆ ಮೀಸಲಿಡುತ್ತೇವೆ, ಹಿಂದಿನ ಪರೀಕ್ಷೆಗಳಲ್ಲಿ ಯಶಸ್ವಿಯಾಗಿ ತೇರ್ಗಡೆಯಾದವರು, ಮನೆತನಸ್ಥರು, ಅಮಲ್ದಾರಿಯಲ್ಲಿ ಶಕ್ತರಾಗಿ ಕೆಲಸ ಮಾಡಿದವರು, ಇಂಥವರುಗಳಿಗೆ ಈ ಕೆಲಸಗಳನ್ನು ಕೊಡುತ್ತೇವೆಂದು ಪ್ರಕಟಿಸಿದರು.

ಆಗ Sparkesರಿಗೆ ಬೇರೆ ಹುದ್ದೆಗೆ ವರ್ಗವಾಗಿ ಸರದಾರ್ ಕಾಂತರಾಜೇ ಅರಸಿನವರು ಪುನಃ ಡೆಪ್ಯುಟಿ ಕಮೀಷನರಾಗಿದ್ದರು. ನಾನು ಅವರಲ್ಲಿ ನನ್ನ ಅಹವಾಲನ್ನು ಹೇಳಿಕೊಂಡೆ. ನಾನು ಸ್ಪರ್ಧಿಸಬಹುದಾಗಿದ್ದರೆ ಯಾಚನೆಗೆ ಬರುತ್ತಿರಲಿಲ್ಲ, ಮೊದಲು ಸ್ಪರ್ಧೆಯ ಮಾರ್ಗವನ್ನೇ ಹಿಡಿಯುತ್ತಿದ್ದೆ; ಹಿಂದಿನ ಪರೀಕ್ಷೆಯಲ್ಲಿ ನಾನು ಅದುವರಿಗೆ ವ್ಯಾಸಂಗ ಮಾಡದ ಹೊಸ ಶಾಸ್ತ್ರಗಳನ್ನು ತೆಗೆದುಕೊಂಡು ನಿಂತರೂ ಹತ್ತು ಹನ್ನೆರಡು ಮಾರ್ಕುಗಳಿಂದ ಮಾತ್ರ ಪದವಿ ತಪ್ಪಿತು; ನನ್ನ ಶಕ್ತಿಯಲ್ಲಿ ನನಗೆ ಸಂಪೂರ್ಣ ನಂಬಿಕೆಯಿದೆ; ಸ್ಪರ್ಧೆಗೆ ಅವಕಾಶ ಕೊಡದಿದ್ದರಿಂದ ನ್ಯಾಯವಾಗಿ ನನಗೆ ಪ್ರವೋರ್ಷ ರೂಪವಾಗಾದರೂ ಅಸಿಸ್ಟೆಂಟ್ ಕಮೀಷನರ್ ಹುದ್ದೆ ಕೊಡಬೇಕು—ಎಂದು ಕೇಳಿಕೊಂಡೆ.

ಅರಸಿನವರು ಬಹಳ ಆದರದಿಂದ "ನಿಮಗಲ್ಲದೆ ಇನ್ಯಾರಿಗೆ ಕೊಡಬೇಕರಿ? ಅವರು ಬಡ್ತಿಗೆ ನಮೂದಿಸಿರುವ ಅರ್ಹತೆಗಳು (qualifications) ನಿಮ್ಮಲ್ಲಿ ಎಲ್ಲವೂ ಸಂಪೂರ್ಣವಾಗಿ ಒಟ್ಟುಕೂಡಿವೆ. ನಾನು ನಿಮ್ಮನ್ನು ನಾಮಿನೇಟು ಮಾಡಬೇಕೆಂದು ಬಲವಾಗಿ ಶಿಪಾರ್ಸು ಮಾಡುತ್ತೇನೆ" ಎಂದು ಹೇಳಿದರು. ಶಿಪಾರ್ಸನ್ನೂ ಮಾಡಿ, ಅವರ ಪತ್ರದ ಪ್ರತಿಯನ್ನು ನನಗೆ ಗೋಪ್ಯವಾಗಿ ಕಳುಹಿಸಿದರು. ದಿವಾನರು ಮೈಸೂ

ರಿಗೆ ಬಂದಾಗೆಲ್ಲ ನನ್ನ ವಿಚಾರ ನನ್ನ ಪಕ್ಷವಹಿಸಿ ಮಾತನಾಡಿದರು. ಕೊನೆಗೆ,

"ನಿಮ್ಮ ಮೇಲೆ ಅವರಿಗೆ ಏನೋ ಅಸಮಾಧಾನವಿರುವಂತೆ ನನಗೆ ತೋರುತ್ತೆ. ನನಗೆ ಕಾರಣ ತಿಳಿಯದು. ನಾನು ಹೇಳುವಷ್ಟು ಹೇಳಿದ್ದೇನೆ– ನೀವೂ ಅವರನ್ನು ನೋಡಿ ಕೇಳಿಕೊಳ್ಳಿ"

ಎಂದು ನನಗೆ ಹೇಳಿದರು,

ದಿವಾನ ಮಾಧವರಾಯರಿಗೆ ನನ್ನ ಮೇಲೆ ಅಸಮಾಧಾನಕ್ಕೆ ಕಾರಣ, ನಾನು ದಿವಾನ ಕೃಷ್ಣಮೂರ್ತಿಗಳ ಪಂಗಡದವನು ಎಂದಿದ್ದಿರಬಹುದು. ತಾವು ನನಗೆ ನೌಕರಿಗೆ ಸೇರಬೇಡವೆಂದು ಹೇಳಿದರೂ. ನಾನು ಸೇರಿದೆನೆಂದಿದ್ದರೂ ಇದ್ದಿರಬಹುದು. ಅದಾದ ಮೇಲೆ ಒಂದೆರಡು ವೇಳೆ ಒದಗಿದ ಸನ್ನಿವೇಶಗಳಲ್ಲಿ ನಾನು ಅಹಂಕಾರದಿಂದ ನಡೆದೆನೆಂಬ ಭಾವನೆಯಿಂದಲಾದರೂ ಇರಬಹುದು. ಆ ಕಥೆಯನ್ನೂ ಹೇಳುತ್ತೇನೆ–

ಮಾಧವರಾಯರು ದಿವಾನಗಿರಿಗೆ ಬಂದ ಕೆಲವು ದಿನಗಳಲ್ಲಿಯೇ ಮೈಸೂರು ನಗರದಲ್ಲಿ ಒಂದು ಅಖಿಲಭಾರತ ಪ್ರದರ್ಶನ (Exhibition) ಏರ್ಪಾಡಾಯಿತು. ಆ ಪ್ರದರ್ಶನಕ್ಕಾಗಿ ವಿಶೇಷ ಸೇವೆಗೆ ನೇಮಿಸಲ್ಪಟ್ಟ ಆಫೀಸರುಗಳಲ್ಲಿ ನಾನೂ ಒಬ್ಬ. ನನ್ನನ್ನು ಜಾನುವಾರುಗಳ ಶಾಖೆಯ ಮುಖ್ಯ ಅಧಿಕಾರಿಯಾಗಿ ನೇಮಿಸಿದ್ದರು. ಪ್ರದರ್ಶನದ ಏರ್ಪಾಡುಗಳು ಸಿದ್ಧವಾಗುತ್ತಿದ್ದಾಗ ದಿವಾನ್ ಸಾಹೇಬರು ಮೈಸೂರಿನಲ್ಲಿದ್ದರೆ ಆ ಕಡೆಗೆ ಸವಾರಿ ಬೆಳೆಸುವ ವಾಡಿಕೆಯಿತ್ತು. ಅವರ ಸಂಗಡ ಥಳಥಳಾಯಿಸುವ ಅವರ ಪರಿವಾರ — ಅವರ ಅನುಗ್ರಹಕ್ಕೆ ಪಾತ್ರರಾದ ಖಾಸಗಿ ದೊಡ್ಡ ಮನುಷ್ಯರೂ ಮತ್ತು ಹುದ್ದೇದಾರರುಗಳು, ಅವರ ಅಜಮಾಯಿಷೆಯ ಕಾಲದಲ್ಲಿ ಹಾಜರಿರುವ ಕರ್ತವ್ಯವುಳ್ಳ ಅಧಿಕಾರಿ ವರ್ಗದವರೂ, ಇರುತ್ತಿದ್ದರು. ಅವರ ಪೈಕಿ ಕೆಲವರು ದೊಡ್ಡವರ ಕಟಾಕ್ಷವನ್ನು ಸೆಳೆದು ಅವರ ಶಾಬಾಷ್‌ಗಿರಿಯನ್ನು ಪಡೆಯುವುದಕ್ಕೋ, ಅಥವ ಸ್ವಾಭಾವಿಕ ಬಲವದಾಶ್ರಯಜನಿತಮದದಿಂದಲೋ, ಪ್ರದರ್ಶನ ಶಾಲೆಯಲ್ಲಿ ಕೆಲಸ ಮಾಡುತ್ತಿದ್ದ ಸಿಬ್ಬಂದಿಯ ಮೇಲೆ ದರ್ಪವನ್ನು ಬೀರುವ ವಾಡಿಕೆ. ಒಂದು ದಿನ ಬೆಳಿಗ್ಗೆ ನಾನು ಜಾನುವಾರು ಪ್ರದರ್ಶನಕ್ಕೆ ಮೀಸಲಾಗಿದ್ದ

ಭೂಮಿಯಲ್ಲಿ ಸ್ಥಳವನ್ನು ವಿಂಗಡಿಸಿ ಅಳತೆ ಮಾಡಿ ಸ್ಟಾಲು (ದನಗಳನ್ನು ಕಟ್ಟುವ ನಿವೇಶನ)ಗಳನ್ನು ಗುರುತುಮಾಡಿಸುತ್ತಿದ್ದೆ. ಆಗ ದಿವಾನ್ ಸಾಹೇಬರ ಸವಾರಿ ದಯಮಾಡಿಸಿತು. ಸಾಹೇಬರು ಅಲ್ಲಲ್ಲಿ ನಿಂತು ಜರಗುತ್ತಿದ್ದ ಕೆಲಸಗಳನ್ನು ನೋಡುತ್ತಿದ್ದರು. ಒಂದೊಂದುವೇಳೆ ಏನಾದರೂ ಸಲಹೆಯನ್ನು ಕೊಡುವರಾದರೂ ಸಾಮಾನ್ಯವಾಗಿ ಗಂಭೀರವಾದ ಮೌನದಿಂದ ಮುಂದುವರಿಯುವರು. ನನ್ನ ಭಾಗದ ಕೆಲಸವನ್ನೂ ಪರಾಂಬರಿಸಿದರು ನಾನು ಬಗ್ಗಿಕೊಂಡು ಟೇಪು ಹಿಡಿದು ಅಳತೆಮಾಡಿ ಸ್ಟೈಟುಗಳನ್ನು ವಿಂಗಡಿಸುತ್ತಿದ್ದವನು ಎದ್ದು ಕೈಮುಗಿದು, ತಿರುಗ ನನ್ನ ಕೆಲಸಕ್ಕೆ ಬಾಗಿದೆ ಅವರು ಮುಂದೆ ಸಾಗಿ ಹೋದರು ಆದರೆ ಅವರ ಪರಿವಾರದ, ಅವರ ಕೃಪೆಗೆ ವಿಶೇಷವಾಗಿ ಪಾತ್ರರಾದ, ಒಬ್ಬ ದೊಡ್ಡ ಮನುಷ್ಯರು ತಮ್ಮ ದಕ್ಷತೆ, ವ್ಯಕ್ತಿತ್ವದ ದರ್ಪಗಳನ್ನು ದೊಡ್ಡವರಿಗೆ ಪ್ರದರ್ಶಿಸಲಿಕ್ಕೆ, ತಮಗೆ ಸಂಬಂಧಪಡದೇ ಇದ್ದ ಈ ವಿಷಯಕ್ಕೆ ದುಡುಂ ಪ್ರವೇಶಮಾಡಿ—

"What is it you are doing?" (ಏನನ್ನಾದರೂ ನೀವು ಮಾಡುತ್ತಾ ಇರೋದು?)

ಎಂದರು. ನಾನು ಕೆಲಸದಿಂದ ತಲೆ ಎತ್ತದೆ—

"I am marking out parallel lines" (ಸಮಾನಾಂತರ ರೇಖೆಗಳನ್ನು ಗುರುತುಮಾಡಿಸುತ್ತಿದ್ದೇನೆ.) ಎಂದು ಉದಾಸೀನ ರೂಪವನ್ನು ತಾಳಿದ ತಿರಸ್ಕಾರದಿಂದ ಹೇಳಿದೆ.

"Now look here, that is no way to answer me! Do you know what parallel lines are?" (ಇನ್ನೋಡಿ, ಇದು ನನಗೆ ಜವಾಬು ಕೊಡುವ ತರವಲ್ಲ! ಸಮಾನಾಂತರ ರೇಖೆಯೆಂದರೆ ಏನು ಎಂಬುದನ್ನಾದರೂ ಬಲ್ಲಿರಾ?)

ನಾನು ಎದ್ದು, ನಕ್ಕು

"My name is Navaratna Rama Rao, and I can put a few letters after my name. I have also passed the Mysore Civil Service Examination You may safely come to me if

you wish to learn about parallel lines—and I shall be glad to teach you when I have leisure. You see I am busy now.''

(ನನ್ನ ಹೆಸರು ನವರತ್ನ ರಾಮರಾವ್, ನನ್ನ ಹೆಸರಿಗೆ ಕೆಲವು ಡಿಗ್ರಿ ಸೂಚಕ ಅಕ್ಷರಗಳನ್ನೂ ಸೇರಿಸಬಲ್ಲೆ. ಮೈಸೂರು ಸಿವಿಲ್ ಸರ್ವೀಸು ಪರೀಕ್ಷೆಯನ್ನೂ ಪ್ಯಾಸು ಮಾಡಿದ್ದೇನೆ. ತಮಗೆ ಪ್ಯಾರಲೆಲ್ ರೇಖೆಗಳ ವಿಚಾರ ಕಲಿಯಲು ಆಶೆಯಿದ್ದರೆ ನನ್ನಲ್ಲಿ ಧೈರ್ಯವಾಗಿ ಬರಬಹುದು, ನನಗೆ ಪುರಸತ್ತು ಇದ್ದಾಗ ಸಂತೋಷವಾಗಿ ಹೇಳಿಕೊಡುತ್ತೇನೆ. ಈಗ ಕೆಲಸದಲ್ಲಿದ್ದೇನೆ, ನೋಡಿ)

ಎಂದೆ. ಅಲ್ಲಿದ್ದವರು—ಅವರ ಪೈಕಿ ದಿವಾನರ ಪರಿವಾರದವರೂ ಘೊಳ್ಳೆಂದು ನಕ್ಕರು. ಆವರು ಅದೃಷ್ಟದಿಂದಲೂ ಶಿಪಾರ್ಶಿಸಿಂದಲೂ ಸಾವಿರ ರೂಪಾಯಿ ಸಂಬಳದ ಹುದ್ದೆಗೆ ಬಂದಿದ್ದರೂ ಅಷ್ಟೇನೂ ವಿದ್ಯಾವಂತರಲ್ಲವೆಂದು ಎಲ್ಲರಿಗೂ ಗೊತ್ತು.

ಅವರು ಕೆಂಪು ಮುಖದ ಸ್ಥೂಲಕಾಯದ ಎಡಪ್ರಾಯದ ಮನುಷ್ಯ. ತಲೆಗೆ ನೆತ್ತರೇರಿ ಕೆಳಕ್ಕೆ ಬಿದ್ದುಬಿಡುತ್ತಾರೆಂದಿದ್ದೆ. ಆದರೆ ಘಟ್ಟಿ ಆಯುಸ್ಸು. ಮಾತನಾಡದೆ ಮುಂದೆ ಹೋದರು. ಈ ಪ್ರಸಂಗವು ದಿವಾನ್ ಸಾಹೇಬರಿಗೆ ಕೇಳಿಸಿರಬೇಕು. ಅವರು ಅರೆ ಬಿಟ್ಟ ಕಣ್ಣುಗಳನ್ನು ನನ್ನ ಕಡೆಗೆ ಒಂದು ಕ್ಷಣಮಾತ್ರ ತಿರುಗಿಸಿದ್ದನ್ನು ನೋಡಿದೆ. ಅವರ ಖಾತೆಯಲ್ಲಿ ಇದು ನನ್ನ ಲೆಖ್ಖಕ್ಕೆ ಅಮಲು ಆಗಿದೆಯೆಂದ ತಿಳಿದುಕೊಂಡೆ.

ಕೆಲವು ದಿನಗಳಲ್ಲಿಯೇ ನನ್ನ ಲೆಕ್ಕಕ್ಕೆ ಇನ್ನೊಂದು ಅಂಶ ದಾಖಲಾಯಿತು. ಯಡತೊರೆ ತಾಲ್ಲೂಕಿನಲ್ಲಿ ಗಂಧನಹಳ್ಳಿ ಎಂಬ ಒಂದ್ಯ ಜಹಗೀರು ಇದೆ. ಅದು ಮೈಸೂರು ಸೈನ್ಯದಲ್ಲಿ ಕುದುರೆ ಫೌಜಿನ ನಾಯಕರಾಗಿದ್ದು ಮಹಿದ್‌ಪುರ ಲಡಾಯಿನಲ್ಲಿ ಶೌರ್ಯದಿಂದ ಕಾದಿದ ಒಬ್ಬ ದೇಶಸ್ಥ ಬ್ರಾಹ್ಮಣ ಸರದಾರರಿಗೆ ರಕ್ತಕೊಡಿಗೆಯಾಗಿ ಕೊಟ್ಟದ್ದು. ಆ ಮನೆತನದವರು ಕಾರಣಾಂತರದಿಂದ ಬಡತನಕ್ಕೆ ಬಂದು, ಜಹಗೀರಿನ ಆಧಾರದಮೇಲೆ ಭಾರಿಸಾಲಗಳನ್ನು ಮಾಡಿ, ಆ ಸಾಲಗಳಿಗಾಗಿ ಜಹಗೀರನ್ನೇ ಕಳೆದುಕೊಳ್ಳುವ ಅವಸ್ಥೆಗೆ ಬಂದಿದ್ದರು. ಇನ್ನೇನು,

ಜಹಗೀರು ಹೋಗಬೇಕು ಎಂಬುವಷ್ಟರಲ್ಲಿ, ಜಹಗೀರದಾರರ ಮಕ್ಕಳು ಕೃಷ್ಣರಾಯರೆಂಬ ಯುವಕರು ಆಗ ರೆವೆನ್ಯೂ ಕೌನ್ಸಿಲರ್ ಪದವಿಯಲ್ಲಿದ್ದ ಶ್ರೀ ಮಾಧವರಾಯರನ್ನು ಮೊರೆಹೊಕ್ಕು, ಹಿರೇರು ರಕ್ತ ಬಸಿದು ಸಂಪಾದಿಸಿ ವಂಶಪಾರಂಪರ್ಯವಾಗಿ ಬಂದ ಜಹಗೀರು, ರಕ್ತ ಹೀರುವ ಚುಂಗಡಿ ಸಾಹುಕಾರರ ಪಾಲಾಗದಂತೆ ಉದ್ಧಾರ ಮಾಡಬೇಕೆಂದು ಕೇಳಿಕೊಂಡರಂತೆ. ಮಾಧವರಾಯರು ಶರಣಾಗತ ವತ್ಸಲರು. ಉದಾರಭಾವದವರು. ಕೀರ್ತಿವಂತ ಮನೆತನಗಳೆಂದರೆ ಅವರಿಗೆ ಅಭಿಮಾನ. ಒಳ್ಳೆಯ ವಂಶಪಾರಂಪರ್ಯವಾಗಿದ್ದ ಹಕ್ಕನ್ನು ಕಳೆದುಕೊಳ್ಳುವ ದೆಸೆಯಲ್ಲಿದ್ದ, ನಮ್ರಸ್ವಭಾವದ ಯುವಕನ ಮೇಲೆ ಅವರಿಗೆ ದಯೆಯುಂಟಾದದ್ದು ಸಹಜವೇ. ಅವರು ಜಹಗೀರಿನ ಸ್ಥಿತಿಯನ್ನು ಚೆನ್ನಾಗಿ ವಿಚಾರ ಮಾಡಿ ತಿಳಿದು, ಆ ಜಹಗೀರನ್ನು ಉಳಿಸಿ ಸರಿಯಾಗಿ ಮ್ಯಾನೇಜು ಮಾಡಿದರೆ, ಸಾಲಗಳ ಮೊತ್ತವೇನೂ ಅಷ್ಟು ದೊಡ್ಡ ಹೊರೆಯಲ್ಲವೆಂದು ನಿಶ್ಚಯಿಸಿ, ಸರ್ಕಾರದಿಂದ ಸಾಲಗಳನ್ನೆಲ್ಲ ತೀರಿಸುವಷ್ಟು ಹಣ ಲೋನ್ ಆಗಿ ಕೊಟ್ಟು, ಜಹಗೀರನ್ನು ಲೋನ್ ತೀರುವವರಿಗೂ ಸರ್ಕಾರದ ವಹಿವಾಟಿಗೆ ತೆಗೆದುಕೊಳ್ಳುವಂತೆ ಹುಕ್ಕುಂ ಮಾಡಿದರು. ಜಹಗೀರದಾರರ ಜೀವನಕ್ಕೆ ವರಮಾನದ ಪೈಕಿ ಕೆಲವು ಭಾಗವನ್ನು ಸಲ್ಲಿಸತಕ್ಕ ಏರ್ಪಾಟನ್ನೂ ಮಂಜೂರ್ಮಾಡಿದರು. ನಾನು ತಾಲ್ಲೂಕು ಛಾರ್ಜನ್ನು ತೆಗೆದುಕೊಂಡಾಗ ಈ ಏರ್ಪಾಡು ಜಾರಿಯಲ್ಲಿತ್ತು; ಗಂಧನಹಳ್ಳಿ ಜಹಗೀರನ ವಹಿವಾಟು ಸರ್ಕಾರಿ ಗ್ರಾಮಗಳದರಂತೆಯೇ ನಡೆಯುತ್ತಿತ್ತು. ಜಹಗೀರದಾರರು ಶ್ರೀ ವೆಂಕಟರಾಯರೆಂಬುವರು; ಅವರ ಮಕ್ಕಳು—ಜಹಗೀರನ್ನು ಉಳಿಸಿಕೊಂಡವರು—ಶ್ರೀಕೃಷ್ಣರಾಯರು ಕುಟುಂಬ ಸಮೇತ ಜಹಗೀರಿ ಗ್ರಾಮಗಳಲ್ಲೊಂದಾದ ದಗ್ಗನಹಾಳು ಎಂಬುದರಲ್ಲಿ ವಾಸವಾಗಿದ್ದರು.

ನನಗೂ ಜಹಗೀರದಾರರುಗಳಿಗೂ ಬಹಳ ಬೇಗ ನಿಬಿಡಸ್ನೇಹ ಬೆಳೆಯಿತು. ನಾವು ಒಂದೇ ಜನ— ದೇಶಸ್ಥ ಬ್ರಾಹ್ಮಣರು — ನಮ್ಮ ಮನೆತನಗಳಿಗೆ ಹಿಂದಿನ ಅನುಬಂಧಗಳಿದ್ದದ್ದೂ ಗೊತ್ತಾಯಿತು. ಕೃಷ್ಣರಾಯರೂ ನಾನೂ ಒಂದೇ ವಯಸ್ಸಿನವರು; ಬಹು ಜಾಗ್ರತೆ

ಯಾಗಿ ನಮ್ಮ ಬಳಕೆ, ಮೈತ್ರಿಯಾಗಿ, ಅಭಿವೃದ್ಧಿಯಾಯಿತು. ಅವರ ಜಹಗೀರಿ ಗ್ರಾಮಗಳ ವಿಚಾರದಲ್ಲಿ ಹೆಚ್ಚು ಮುತವರ್ಜಿ ವಹಿಸಿ, ಅವರನ್ನು ಜಾಗ್ರತೆಯಾಗಿ ಋಣವಿಮುಕ್ತರನ್ನಾಗಿ ಮಾಡಬೇಕೆಂದು, ನಾನು ಹಿಂದೆ ಸಡಿಲವಾಗಿದ್ದ ವಹಿವಾಟನ್ನು ಬಿಗಿಮಾಡಿ, ಮೊಂಡರ ಬಾಕಿಗಳನ್ನೆಲ್ಲಾ ಖುದ್ದು ವಸೂಲ್ಮಾಡಿ, ಮಾಧವರಾಯರ ಉದಾರ ಉದ್ದೇಶವನ್ನು ಸಾರ್ಥಕಗೊಳಿಸಲು ಯತ್ನಮಾಡುತ್ತಿದ್ದೆ. ಜಹಗೀರ್ದಾರ ಕೃಷ್ಣರಾಯರಿಗೆ ನನ್ನಲ್ಲಿ ನಿಜವಾದ ಪ್ರೇಮ; ನನ್ನನ್ನು ಹಿರಿಯ ಅಣ್ಣನೆಂದು ಭಾವಿಸುತ್ತಿದ್ದರೆಂದು ತಿಳಿದಿದ್ದೆ.

ಆಗಿನ ಕಾಲದಲ್ಲಿ ನವರಾತ್ರಿಯಲ್ಲಿ ಸರ್ಕಾರದ ಲಾಗೋಡಿನಲ್ಲಿ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಿಗೂ, ಮೈಸೂರಿಗೆ ಬಂದಿರುವ ಆಫೀಸರುಗಳಿಗೂ, ಖಾಸಗಿ ದೊಡ್ಡ ಮನುಷ್ಯರುಗಳಿಗೂ, ಒಂದು ಭಾರಿ ಔತನ ಜರಗುತ್ತಿತ್ತು. ಮೃಷ್ಟಾನ್ನಭೋಜನ, ನಂತರ ತಾಂಬೂಲ, ಸಂಗೀತ, ವಿನೋದವಾದ ಮಾತೂಕತೆ— ಇವೆಲ್ಲವೂ ಆ ಹಬ್ಬದ ಅಂಗಗಳು. ದಿವಾನ್ ಸಾಹೇಬರು ಈ ಆತಿಥ್ಯದ ಯಾಜಮಾನ್ಯವನ್ನು ವಹಿಸಿ, ಬಂದವರ ಸತ್ಕಾರವನ್ನು ಕ್ರಮವಾಗಿ ನಡೆಯುವ ಏರ್ಪಾಡನ್ನು ಸೆಕ್ರೆಟೇರಿಯಟ್ ಸಿಬ್ಬಂದಿಯ ಮೂಲಕ ಮಾಡಿ, ಅತಿಥಿಗಳ ಸಂಗಡ ಬೆರೆತು, ಲಲಿತವಾಗಿ ಒಂದು ಮಧ್ಯಾಹ್ನವನ್ನು ಕಳೆಯುತ್ತಿದ್ದರು. ಆ ವರುಷದ ಭೋಜನಕೂಟಕ್ಕೆ ಜಹಗೀರದಾರ ಕೃಷ್ಣರಾಯರನ್ನೂ ನನ್ನನ್ನೂ ಕರೆದಿದ್ದರು. ಊಟವಾದಮೇಲೆ ಮಹಡಿಯ ಮೇಲೆ ಆತಿಥಿಗಳ ಸಂತೋಷಕೂಟ ಸೇರಿ, ತಾಂಬೂಲ, ಸಂಗೀತ, ವಿನೋದವಾದ ಸಂಭಾಷಣೆ— ಇವುಗಳು ನಡೆಯುತ್ತಿದ್ದಾಗ ನಾನು ದಿವಾನ್ ಸಾಹೇಬರ ದೃಷ್ಟಿಗೋಚರದಲ್ಲಿ ಕುಳಿತಿದ್ದೆ. ಊಟಕ್ಕೋಸ್ಕರ ಅಂಗರೇಖಾ ತೆಗೆದವನು ಹಾಗೇ ಬಂದು ಷರಟು ಮಾತ್ರ ಹಾಕಿಕೊಂಡು ಕುಳಿತಿದ್ದೆ. ನನ್ನ ಕೋಟು ಪೇಟ ಅದೇ ಹಜಾರದಲ್ಲಿದ್ದ ಬಟ್ಟೆಗಳ ನಿಲುವಿನ ಮೇಲಿದ್ದುವು. ಅತ್ತಲಿಂದ ನಾವಿದ್ದ ಕಡೆಗೆ ಬರುತ್ತಿದ್ದ ಜಹಗೀರದಾರ್ ಕೃಷ್ಣರಾಯರು ಅವುಗಳನ್ನು ಎತ್ತಿ ತೆಗೆದು ನನಗೆ ತಂದುಕೊಟ್ಟರು. ನಾನು— ಇದೇನು ಸ್ವಾಮಿ, ತಾವು ತರಬೇಕೆ?

ಬಹಳ ಥ್ಯಾನ್ಕ್ಸ್—ಎಂದೆ. "ಹಿರಿಯಮಿತ್ರರ ಸೇವೆ" ಎಂದರು, ನಗುತ್ತ. ದಿವಾನರು ಇದನ್ನೆಲ್ಲಾ— ಜಹಗೀರದಾರರು ಕುಡುತಗಳನ್ನು ತೆಗೆದು ನನಗೆ ಒಪ್ಪಿಸುವುದರವರಿಗೂ— ಅಸಮಾಧಾನ ದೃಷ್ಟಿಯಿಂದ ನೋಡುತ್ತಿದ್ದರು. ಅನಂತರ ಅವರ ಹೋಂ ಆಫೀಸು ಕ್ಲಾರ್ಕ್ ಸಿ. ಇ. ರಾಮರಾಯರೆಂಬುವರ ಮೂಲಕ ಜಹಗೀರದಾರ್ ಕೃಷ್ಣರಾಯರಿಗೆ— ನೀವು ಮಾಡಿದ ಕೆಲಸ ನಿಮ್ಮ ಗೌರವಕ್ಕೆ ತಕ್ಕದ್ದಲ್ಲ; ಹಾಗೆ ಮಾಡಲಿಕ್ಕೆ ಬಿಟ್ಟದ್ದು ನಿಮ್ಮ ಅಮಲ್ದಾರರ ದುರಹಂಕಾರವನ್ನು ತೋರಿಸುತ್ತೆ— ಎಂದು ಹೇಳಿ ಕಳಿಸಿದರಂತೆ. ಅವರು ಹೇಳಿ ಕಳಿಸಿದರೋ ಇಲ್ಲವೋ, ರಾಮರಾಯರಂತೂ ಆ ಮಾತನ್ನು ಜಹಗೀರದಾರರಿಗೆ ಹೇಳಿದರು; ಜಹಗೀರದಾರರು ನನಗೆ ತಿಳಿಸಿದರು. ದಿವಾನರಿಗೇನೋ ನನ್ನ ಮೇಲಿನ ವೈಮನಸ್ಯ ಇದರಿಂದ ವೃದ್ಧಿಗೊಂಡಿತೆಂದು ನಂಬಿದ್ದೇನೆ. ಬಹು ದಿನಗಳಾದ ಮೇಲೆ, ಶ್ರೀ ಆನಂದರಾಯರ ದಿವಾನ್‌ಗಿರಿಯಲ್ಲಿ, ನನಗೆ ಬಡತಿಕೊಟ್ಟು ಸೆಕ್ರೆಟೇರಿಯಟಿಗೆ ಕರೆಸಿಕೊಳ್ಳುವುದಕ್ಕೆ ಮುನ್ನ, ಆಗ ಛೀಫ್ ಸೆಕ್ರೆಟರಿಯಾಗಿದ್ದ ಶ್ರೀ ಕೆ. ಎಸ್. ಚಂದ್ರಶೇಖರಯ್ಯನವರು ನನ್ನನ್ನು ನೋಡಲಪೇಕ್ಷಿಸಿ ಬೆಂಗಳೂರಿಗೆ ಬರಮಾಡಿಕೊಂಡರು. ಭೇಟಿಯ ತರುಣದಲ್ಲಿ ಸ್ವಲ್ಪ ಪೆಡಸಾಗಿದ್ದು, ಮಾತನಾಡುತ್ತಾ ಆಡುತ್ತ ಮೆದುವಾಗಿ, ಕೊನೆಗೆ ಬಹಳ ಅಭಿಮಾನ ಗೌರವಗಳನ್ನು ವ್ಯಕ್ತಪಡಿಸಿದರು. ಬೀಳ್ಕೊಡುವಾಗ ಆದರದಿಂದ ಕೈ ಅಲ್ಲಾಡಿಸಿ, ಹಾಗೆಯೇ ಮುಗುಳುನಗೆಯಿಂದ, "ನಿಮ್ಮನ್ನು ನೋಡಬೇಕೆಂದು ಕರೆಸಿದ್ದೇಕೆ, ಗೊತ್ತೆ?" ಎಂದು ಕೇಳಿದರು.

"ತಾವು ನನ್ನನ್ನು ಹಿಂದೆ ಗಮನಿಸಿ ನೋಡುವ ಸಂದರ್ಭವಿರಲಿಲ್ಲ. ಈಗ ತಮ್ಮ ಆಫೀಸಿಗೇ ಕರೆದುಕೊಳ್ಳೋಣವೆಂದಿರುವುದರಿಂದ, ಈ ಮನುಷ್ಯನ ವ್ಯಕ್ತಿತ್ವ ಎಂಥದ್ದು, ನೋಡೋಣವೆಂದು ಕರೆಸಿದಿರೆಂದು ನನ್ನ ಊಹೆ" ಎಂದೆ. ನನ್ನ ಕೈಯನ್ನು ಕುಲುಕಿ ನಕ್ಕರು.

"ಹೌದು, ಅಲ್ಲ. ನಿಮ್ಮ ವ್ಯಕ್ತಿತ್ವದ ವಿಚಾರ ನನಗೆ ಬಂದಿರತಕ್ಕ ಅಭಿಪ್ರಾಯ ನಿಜವೇ ಎಂದು ಪ್ರತ್ಯಕ್ಷ ತಿಳಿಯುವುದಕ್ಕೆ. ನೀವು ಬಹಳ ದುರಹಂಕಾರಿಗಳು, ಸರ್ವಜ್ಞಮಾನಿಗಳು ಎಂದು ಒಬ್ಬರು ಹೇಳಿದ್ದರು.

ನೋಡೋಣವೆಂದು ಅನ್ನಿಸಿತು, ಏನು ಹೇಳುತ್ತೀರಿ? ಅದು ಸತ್ಯವೇ?"

ನನಗೆ ಏರುತ್ತಿದ್ದ ಕೋಪವನ್ನು ನುಂಗಿಕೊಂಡು, ನಗುವನ್ನು ಹೊರಕ್ಕೆ ತಳ್ಳಿ,

"ಹಾಗಂದರೆ ನನಗೆ ಅರ್ಥವಾಗಲಿಲ್ಲ. ಯಾವದು ಸತ್ಯವೇ ಎಂದು ಕೇಳೋಣಾಗುತ್ತೆ?"

"ನಿಮ್ಮ ಸ್ವಂತ ವಿಚಾರದಲ್ಲಿ ನಿಮಗೆ ಬಹಳ ಒಳ್ಳೇ ಅಭಿಪ್ರಾಯ ವಿರುವುದು ಸತ್ಯವೇ?"

"ಸತ್ಯ, ಸ್ವಾಮಿ, ಸತ್ಯ. ನಾನು ಬೇಕೂಫನಲ್ಲ. ನಾನು ಶುದ್ಧ ಅಪ್ರಯೋಜಕ, ನನ್ನಲ್ಲಿ ಕರುಣೆಯಿಟ್ಟು ಪ್ರೊಮೋಷನ್ ಕೊಡಿ—ಎಂದು ಕೇಳಿಕೊಳ್ಳುವ ದೀನಯಾಚಕನಲ್ಲ. ನನಗೆ ದೇವರು ಎಲ್ಲರಂತೆ ಬುದ್ಧಿಯನ್ನೂ ಸಾಮಾರ್ಥ್ಯವನ್ನೂ ಕೊಟ್ಟಿದ್ದಾರೆ. ನನಗೆ ವಹಿಸಿದ ಜವಾಬ್ದಾರಿಯನ್ನು ಯಶಸ್ವಿಯಾಗಿ ನಿರ್ವಹಿಸಬಲ್ಲೆನೆಂಬ ನಂಬಿಕೆ ಯಿದೆ" ಎಂದೆ.

ಅವರು ನಕ್ಕು, 'ಹಾಗಾದರೆ ನಿಮಗೆ ನನಗೇ ಸರಿಹೋಗುತ್ತೆ. ಜಾಗ್ರತೆಯಾಗಿ ಇಲ್ಲಿಗೆ ಬರುವುದಕ್ಕೆ ಸಿದ್ಧರಾಗಿ' ಎಂದರು.

ಇದು ಆ ದಸರ ಮೇಜವಾನಿಯಲ್ಲಿ ಜಹಗೀರದಾರರು ನನಗೆ ಕುದುಕ ತಂದುಕೊಟ್ಟ ನಾದದ ಪ್ರತಿಧ್ವನಿ. ಆ ದಸರದ ತರುವಾಯ ನಾನು ದಿವಾನ್ ಸಾಹೇಬರನ್ನು ಭೇಟಿಮಾಡಿದಾಗ ಹಾಡಿದ ರಾಗದ ಸ್ವರಗಳೂ ಬೆರೆತಿರಬಹುದು. ಸರದಾರ ಕಾಂತರಾಜೆ ಅರಸಿನವರು—ನಾನೇ ದಿವಾನರನ್ನು ನೋಡಿ ನನ್ನ ಪ್ರೊಮೋಷನ್ ವಿಚಾರ ಕೇಳಿಕೊಳ್ಳ ಬೇಕೆಂದು—ಕೊಟ್ಟ ಸಲಹೆಯಂತೆ ನಾನು ದಿವಾನ್ ಸಾಹೇಬರು ಮೈಸೂರಿನಲ್ಲಿ ಮೊಕ್ಕಾಂ ಮಾಡಿದ್ದಾಗ ಮೂರುದಿನ ಕ್ಯಾಜುಯಲ್ ರಜ ತೆಗೆದುಕೊಂಡು ಅಲ್ಲಿಗೆ ಹೋಗಿ ಯತ್ನ ಮಾಡಿದೆ. ಅವರು ಶೇಷಾದ್ರಿ ಹೌಸಿನಲ್ಲಿ ಬಿಡಾರ ಮಾಡುತ್ತಿದ್ದರು. ನಾನು ಬೆಳಿಗ್ಗೆ ಏಳು ಘಂಟೆ ಹೊತ್ತಿಗೆ ಅಲ್ಲಿಗೆ ಹೋಗಿ ಜಗಲಿಮೇಲೆ, ಅಥವ, ವಿಜಿಟರ್ಸ್ ರೂಮಿನಲ್ಲಿ ನನ್ನ ಹಾಗೇ ದರ್ಶನಕ್ಕೆ ಹಂಬಲಿಸುತ್ತಿರುವ ಯಾತ್ರಿಕರ ಗುಂಪಿಗೆ ಸೇರಿ ಕಾಯುವುದು. ಅಲ್ಲಿ—ಅದರಲ್ಲೂ ವಿಜಿಟರ್ಸ್ ರೂಮಿನಲ್ಲಿ—ದಿವಾನ್

ಸಾಹೇಬರ ಅನುಗ್ರಹದ ಅನುಯಾಯಿಗಳು ಬರುವುದೂ ಉಂಟು. ಅವರುಗಳಿಗೆ ಪ್ರತ್ಯೇಕ ದರ್ಬಾರುಗಳು ಕೂಡಲೆ ಏಂಗಡುವವು. ಈ ಉಪದೇವತೆಗಳ ದರ್ಪ, ಗತ್ತುಗಳನ್ನು ನೋಡಿದರೆ ನನ್ನ ಮೈಯೆಲ್ಲ ಬೆಂಕಿಯಾಗುವುದು. ನನ್ನನ್ನು ಕಂಡರೆ, ನಾನು ಬಹಳ ಆತ್ಮಪ್ರತಿಷ್ಠೆಯವನೆಂದು ಅವರಿಗೂ ಅಭಿಪ್ರಾಯವಿದ್ದಿರಬಹುದು. ಅವರಲ್ಲಿ ಒಬ್ಬರು, ಹೊಸದಾಗಿ ಅಸಿಸ್ಟೆಂಟ್‌ರಾದವರು, ನನ್ನ ಹತ್ತಿರ ಬಂದು, ತಮ್ಮ ಸ್ನೇಹಿತರ ಕಡೆ ಕಣ್ಣು ಮಿಟುಕಿಸಿ, 'ಏನು ರಾಯರೇ, ದಿನವಹಿ ಗುಡಿ ಬಾಗಿಲು ಕಾಯುತ್ತಿದ್ದೀರಲ್ಲ, ಏನು ಸಮಾಚಾರ?' ಎಂದರು. ನಾನು, 'ಸ್ವಾಮಿ, ತಮಗೆ ಗುಡಿಯಲ್ಲಿ ದೊರೆತ ಪ್ರಸಾದ ನಮಗೂ ದೊರೆಯುತ್ತೇನೋ ಅಂತ ಕಾದಿದ್ದೇನೆ' ಎಂದೆ. ಇನ್ನೊಬ್ಬರು— ಸ್ವಲ್ಪ ವೃದ್ಧರು, ಆಗತಾನೆ ಕಕ್ಷಿಬಲದಿಂದ ದೊಡ್ಡ ಹುದ್ದೆಗೆ ಏರಿದವರು —'ಏನ್ರಿ, ನಿಮ್ಮ ತಾಲ್ಲೂಕಿನಲ್ಲಿ ಕೆಲಸ ಬಹಳವಿಲ್ಲವೆಂದು ಕಾಣುತ್ತೆ: ಇಲ್ಲೇ ಬಾಗಿಲು ಕಾಯುತ್ತೀರಲ್ಲ' ಅಂದರು. ನಾನು, 'ತಮ್ಮನ್ನೂ ಇಲ್ಲಿ ದಿನವಹಿ ನೋಡುತ್ತೇನೆ. ನಾನು ಚಿಕ್ಕವನು, ಕಳೆಯಲಿಕ್ಕೆ ತಮಗಿಂತಲೂ ನನ್ನ ಹತ್ತಿರ ಕಾಲ ಹೆಚ್ಚು ದಾಸ್ತಾನಿದೆ'— ಎಂದೆ. ಅವರು ಬಣ್ಣ ಹಾಕಿದ ಮೀಸೆಯನ್ನು ಸವರುತ್ತ ಅತ್ತಲಾದರು.

ಮೂರು ದಿವಸವಾಯಿತು, ದಿವಾನ ಸಾಹೇಬರ ಸಂಗಡ ಮಾತನಾಡಲು ಅವಕಾಶ ದೊರೆಯಲಿಲ್ಲ. ಬೆಳಿಗ್ಗೆ ಎಂಟು ಘಂಟೆಗೆ ಸವಾರಿ ಪೋಷಾಕು ಹಾಕಿಕೊಂಡು ಈಚೆಗೆ ಹೊರಡುವರು— ವಿಗ್ರಹ— ಗಂಭೀರವಾದ ನೋಟದಿಂದ, ಸುತ್ತಲೂ ನೋಡಿ ಕೈಮುಗಿದು, ಸವಾರ ಇಲಾಖೆಯಿಂದ ತಯಾರಾಗಿ ಬಂದಿದ್ದ ಕುದುರೆಯ ಮೇಲೆ ಹತ್ತಿ, ಕುದುರೆಯ ಸಂಗಡ ಬಂದಿದ್ದ ರಿಸಾಲ್ದಾರನ ಕೂಡೆ, ಕುಕ್ಕಲು ಓಟ ಬಿಟ್ಟುಕೊಂಡು ಹೋಗುವರು. ಹತ್ತು ಘಂಟೆಗೆ ವಾಪಸು, ಕುದುರೆಗೆ ಒಂದು ಹಿಡಿ ಲೂಸರನ್ ಸೊಪ್ಪು ತಿನಿಸಿ, ಮನೆಯೊಳಕ್ಕೆ ಪ್ರವೇಶ— ನೋಡಲು ಕಾದಿರುವ ನನ್ನಂಥವರಿಗೆ, ಈಗ ಅವಕಾಶವಿಲ್ಲವೆಂದು ಸಂದೇಶ. ಮಧ್ಯಾಹ್ನ ವಿಶ್ರಾಂತಿ, ಆಫೀಸು ಕೆಲಸ, ರಾಜಕೀಯ ಭೇಟಿಗಳು, ಅರಮನೆ, ಇತ್ಯಾದಿ, ಇತ್ಯಾದಿ. ಹೀಗೆ ಮೂರು ದಿನಗಳು ಕಳೆದವು.

ನಾಲ್ಕನೆಯ ದಿನ ರಜ ಹೆಚ್ಚಿಸಿಕೊಂಡು ನಾನು ದಿವಾನ್ ಸಾಹೇಬರ ಖಾಸ ಸೆಕ್ರೆಟರಿ ಶ್ರೀ ನಾನಾಸ್ವಾಮಿರಾಯರನ್ನು ನೋಡಿ, 'ಹ್ಯಾಗಾದರೂ ದಿವಾನ್ ಸಾಹೇಬರ ಸಂಗಡ ಮಾತನಾಡಲಿಕ್ಕೆ ಅವಕಾಶ ಮಾಡಿ ಕೊಡಿ' ಎಂದು ಬೇಡಿದೆ. ನಾನಾಸ್ವಾಮಿಯವರಿಗೂ ನನಗೂ ಸ್ನೇಹದ ಬಳಕೆ ಇತ್ತು. ಅವರು,

"ನೋಡಿ ರಾಮರಾವ್, ನಾನು ಅವಕಾಶ ಮಾಡ ಬಲ್ಲೆ, ಅಷ್ಟೆ. ಮಾತನಾಡಿದ್ದರ ಫಲಿತಾಂಶಕ್ಕೆ ನಾನು ಹೊಣೆಯಲ್ಲ. ಯಜಮಾನರು ಭೋಜನವಾದ ಕೂಡಲೆ ಬಂದು ಡ್ರಾಯಿಂಗ್‌ರೂಂನಲ್ಲಿ ಒಂದು ಅರ್ಧ ಘಂಟೆ ಚಿತ್ರಸಮಾಚಾರ ಪತ್ರಿಕೆಗಳನ್ನು ನೋಡುತ್ತಾ ಕುಳಿತುಕೊಳ್ಳು ತ್ತಾರೆ. ಆಗ ನಾನು ನಿಮ್ಮನ್ನು ಕರೆದುಕೊಂಡು ಹೋಗುತ್ತೇನೆ. ನೀವು ಬೇಕಾದ್ದನ್ನು ಧೈರ್ಯವಾಗಿ ಹೇಳಿಕೊಳ್ಳಬಹುದು" ಎಂದರು.

"ಧೈರ್ಯವಿದೆಯೋ, ನನಗೆ? ನನ್ನನ್ನು ತಿಂದುಬಿಡಲಾರರಲ್ಲ. ಅದೂ ಅಲ್ಲದೆ, ಹೊಟ್ಟೆ ತುಂಬ ಊಟವೂ ಮಾಡಿ ಬಂದಿರುತ್ತಾರೆ, ಮಹರಾಯರು, ದೇವರ ದಯದಿಂದ!" ಎಂದುಕೊಂಡೆ. ನಾನು ಸ್ವಲ್ಪ ಮುಗುಳು ನಗೆ ನಕ್ಕಿರಬೇಕೆಂದು ಕಾಣುತ್ತೆ. ನಾನಾಸ್ವಾಮಿ ಯವರು ,

"ಹೌದು, ಕಾಣಿರಿ, ಸಂತೋಷವಾಗಿರುತ್ತಾರೆ. ಧೈರ್ಯವಾಗಿ ಮಾತನಾಡಿ" ಎಂದರು.

ಅದೇ ರೀತಿ ಕಾದಿದ್ದೆ. ಹನ್ನೆರಡು ಹನ್ನೆರಡೂವರೆಗೆ ನಾನಾ ಸ್ವಾಮಿಯವರು ನನ್ನನ್ನು ಡ್ರಾಯಿಂಗ್ ರೂಂಗೆ ಕರೆದುಕೊಂಡು ಹೋಗಿ

"ರಾಮರಾವ್ ಆಲಾ ಆಹೆ" ಎಂದರು (ರಾಮರಾವ್ ಬಂದಿ ದ್ದಾನೆ)

"ಬರ್‍ರೆ, ಏವುಂದೇ" ಎಂದು ಅಪ್ಪಣೆ (ಒಳ್ಳೇದು, ಬರಲಿ) ಯಾಯಿತು. ಸಾಹೇಬರು ಒಂದು ದೊಡ್ಡ, ದಪ್ಪ ದಿಂಬುಗಳಿದ್ದ ಸೋಪಾದ ಮೇಲೆ ಕೈಕಾಲುಗಳನ್ನು ಸಡಿಲಬಿಟ್ಟುಕೊಂಡು ಆರಾಮ ವಾಗಿ ಕುಳಿತಿದ್ದರು.

ನಾನು ಎದುರಿಗೆ ಹೋಗಿ, ಬಹಳ ನಮ್ರತೆಯಿಂದ ಕೈಮುಗಿದೆ.

ಅವರು ಪ್ರಸನ್ನ ಮುಖದಿಂದ ತಲೆಕುಲುಕಿ, ನನಗೆ ಒಂದು ಆಸನವನ್ನು ಸನ್ನೆಯಿಂದ ತೋರಿದರು, ಕುಳಿತೆ.

"ಸರಿ, ಏನು?" ಇಂಗ್ಲಿಷಿನಲ್ಲಿ ಅವರು.

"ಸ್ವಾಮಿ, ನಾನು ಯಡತೊರೆ ಅಮಲ್ದಾರನಾಗಿರುವ ನವರತ್ನ ರಾಮರಾಯ," ಅದೇ ಭಾಷೆಯಲ್ಲಿ ನಾನು,

"ಚನ್ನಾಗಿ ಬಲ್ಲೆ. ನವರತ್ನ ಬಾಲಕೃಷ್ಣರಾಯರ ಮಗ. ಗೋತ್ರ, ಪ್ರವರ ಬೇಡ. ಬಂದ ವಿಷಯ ಹೇಳಿದರೆ ಸಾಕು. ದೀರ್ಘ ರಜಾದ ಮೇಲಿದ್ದೀರ? ದಿನವಹಿ ನಿಮ್ಮನ್ನು ನೋಡುತ್ತಿರುವಂತೆ ಜ್ಞಾಪಕ."

"ಮೂರು ದಿನಗಳ ಕ್ಯಾಜುಯಲ್ ರಜ ಪಡೆದು ಬಂದೆ, ಇವತ್ತು ಇನ್ನೊಂದು ದಿನ ಅದನ್ನು ವಿಸ್ತರಿಸಿಕೊಂಡೆ. ತಮ್ಮ ದರ್ಶನಕ್ಕಾಗಿಯೇ ಸಮಯ ಕಾಯುತ್ತಿದ್ದೆ"

"ಯಾಕೆ?"

ನಾನು ಕಾಂತರಾಜೆ ಅರಸಿನವರಲ್ಲಿ ಹೇಳಿಕೊಂಡ ರೀತಿಯಲ್ಲೇ ನನ್ನ ಅಹವಾಲನ್ನು ಹೇಳಿಕೊಂಡು ಕೊನೆಗೆ—

"ಸ್ವಾಮಿ ಸ್ಪರ್ಧೆಗೆ ಅವಕಾಶವಿದ್ದಿದ್ದರೆ, ಅದಕ್ಕೂ ಯತ್ನ ಮಾಡುತ್ತಿದ್ದೆ. ಕೆಲವು ಹುದ್ದೆಗಳನ್ನು ಪ್ರಮೋಷನ್‌ನಿಂದ ಭರ್ತಿಮಾಡುವುದಾಗಿ ಸರ್ಕಾರದ ಭರವಸೆ ಇದೆ. ಪ್ರೊಮೋಷನ್ನಿಗೆ ಅವಶ್ಯಕವಾದ ಅರ್ಹತೆಯನ್ನೂ ಸೂಚಿಸಲಾಗಿದೆ ವಿದ್ಯೆ, ಮನೆತನ, ಹಿಂದಿನ ಸಿವಿಲ್ ಸರ್ವೀಸ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವಿಕೆ; ಈಗ ಸರ್ವೀಸಿನಲ್ಲಿದ್ದರೆ, ಕೆಲಸದಲ್ಲಿ ಕಂಡುಬರುವ ದಕ್ಷತೆ, ಸಾಮರ್ಥ್ಯ—ಇವುಗಳಿಂದು. ಈ ಅರ್ಹತೆಗಳೆಲ್ಲ ನನ್ನಲ್ಲಿವೆಯೆಂದು ವಿನಯದಿಂದ ಹೇಳಬಲ್ಲೆ. ದಯವಿಟ್ಟು ನನ್ನ ಹಕ್ಕನ್ನು ಪುರಸ್ಕರಿಸಬೇಕು" ಎಂದು ಹೇಳಿದೆ.

ಅವರು

"ಬೇಷ್, ನಿಮ್ಮ ತುತ್ತೂರಿಯನ್ನು ನೀವೇ ಚನ್ನಾಗಿ ಊದುತ್ತೀರಿ" ಎಂದರು.

"ನನ್ನ ಯೋಗ್ಯತೆಯನ್ನು ಕುರಿತು ತಮ್ಮ ಡೆಪ್ಯೂಟಿ ಕಮಿಷನ್ನರ

ಅಭಿಪ್ರಾಯವನ್ನು ಕೇಳಬಹುದು. ಸಾಮಾನ್ಯವಾಗಿ ನನ್ನ ವಿಚಾರ ನಾನೇ ಹೇಳಿಕೊಳ್ಳಬಾರದು, ಖರೆ; ಆದರೆ ಮೌನಕ್ಕೂ ಅಸ್ಥಾನ ಉಂಟು. ಅಳದ ಮಗು ಹಸುವಿನಿಂದ ಸತ್ತಿತಂತೆ"

"ಆ ಗಾದೆಯನ್ನು ಕೇಳಿದ್ದೇವೆ. ಅಸಿಸ್ಟೆಂಟ್ ಕಮಿಷನರ್ ಕೆಲಸಗಳು ಖಾಲಿ ಇವೆಯೋ?"

"ಅದು ನನಗಿಂತಲೂ ಚನ್ನಾಗಿ ಸರ್ಕಾರಕ್ಕೆ ಮಂದಟ್ಟಿರಬೇಕು. ಏಳು ಕೆಲಸಗಳು ಖಾಲಿ ಇರುವುದಾಗಿ ಜಾಹಿರಾತಿಯಲ್ಲಿತ್ತು."

"ಇದ್ದವು. ಈಗ ಇಲ್ಲ ಇನ್ನೇನು?"

"ಇನ್ನೇನು ಹೇಳಲಿ, ಸ್ವಾಮಿ? ಇಲ್ಲವೆಂದು ಹೇಳಿದಮೇಲೆ, ಕೊಡಿ ಎಂದು ಪುನಃ ಕೇಳುವುದು ಅವಿವೇಕ ಮಾತ್ರವೇ ಅಲ್ಲ, ಅಧಿಕಪ್ರಸಂಗವೂ ಆಗುತ್ತೆ. ತಮ್ಮ ಅನುಗ್ರಹ ನನ್ನ ಮೇಲೆ ಇರಲಿ, ಅಷ್ಟೆ ನನ್ನ ಬೇಡಿಕೆ. ಏನು ಅಪರಾಧ ಮಾಡಿದ್ದೇನೋ, ಗೊತ್ತಿಲ್ಲ. ಏನೇ ಇದ್ದರೂ ಕ್ಷಮಿಸಿ."

"ಸರಿ. ಜ್ಞಾಪಕವಿರುತ್ತೆ. ಬನ್ನಿ"

"ನಮಸ್ಕಾರ"

"ನಮಸ್ಕಾರ"

ಈಚೆಗೆ ಬಂದಮೇಲೆ ನಾನಾಸ್ವಾಮಿಯವರು—

"ಬಹಳ ಹೊತ್ತು ಮಾತನಾಡುತ್ತಿದ್ದಿರಲ್ಲ, ಏನಾಯಿತರೀ? ಚನ್ನಾಗಿ ಮಾತನಾಡಿದರೋ?"

"ಸೋಪು ಘಾಟಿದ್ದರೂ ಸೊಗಸಾಗಿತ್ತು. ತಲೆ ನುಣ್ಣಗಾಯಿತು" ಎಂದೆ.

ಈ ದಿವಾನಗಿರಿಯಲ್ಲಿ ನನಗೆ ಪ್ರೊಮೋಷನ್ ಇಲ್ಲವೆಂದು ನಿರ್ಧರಿಸಿಕೊಂಡೆ.

## ೨೪

ನನ್ನ ಯಡತೊರೆ ತಾಲ್ಲೂಕಿನ ಮಾಮಲೆಯ ಕೊನೆಯ ಭಾಗದಲ್ಲಿ, ನನ್ನ ತಾಲ್ಲೂಕಿನ ಉತ್ತರದ ಬಾಜೂ ತಾಲ್ಲೂಕಾದ ಹೊಳೆನರಸಿಪುರದಲ್ಲಿನ

ಬಿದರಕ್ಕವೆಂಬ ಗ್ರಾಮದಲ್ಲಿ ನಡೆದ ಖೂನಿ ಸಹಿತವಾದ ದೊಂಬಿ ಕೇಸಿನ ವಿಚಾರಣೆ ಮತ್ತು ಅಮಲುಗಳಲ್ಲಿ ಭಾಗವಹಿಸುವ ಸಂಭವ ನನಗೆ ಬಂತು. ಈ ಬಿದರಕ್ಕ ಸಾಲಿಗ್ರಾಮದಿಂದ ಬಹಳ ದೂರವಿಲ್ಲ—ಈಗ ನನಗೆ ಚನ್ನಾಗಿ ಜ್ಞಾಪಕವಿಲ್ಲ, ಆದರೆ ಎಂಟು ಹತ್ತು ಮೈಲುಗಳ ಪಾಸಲೆಯಲ್ಲಿದೆ ಎಂದು ನೆನಪು.

ನಾನು ಸಾಲಿಗ್ರಾಮದಲ್ಲಿ ಮೊಕ್ಕಾಂ ಮಾಡಿದ್ದೆ. ಆಗ ನನ್ನ ಆರ್ಡರ್ಲಿ ಷೇಖ್‌ಮೊಹರ್ದಿ ಬಂದು— ಖಾವಿಂದ್, ಪೋಲಿ ಸಾಂಬಾ ತಲವಾರ್‌ಪೆಟ್ಟು ತಿಂದು ಗೌಡರಕೇರಿ ತಾಲಿಂನಲ್ಲಿ ಸಾಯುತಾ ಬಿದ್ದಿದ್ದಾನೆ—ಎಂದು ಹೇಳಿದ. ತಲವಾರ್ ಪೆಟ್ಟು ಅಪರೂಪವಾದ ಬಿರದು, ಸಾಹಸಮಾಡದೆ ಸಿಕ್ಕತಕ್ಕದ್ದಲ್ಲ; ಅದರಿಂದ ಸಾಯುವುದೆಂದರೆ ಒಂದು ತಕ್ಸೀರಿನ ಕತೆಯ ಮುಕ್ತಾಯ, ಮತ್ತೊಂದು ಪತ್ತೇದಾರಿ ಕತೆಯ ಪ್ರಾರಂಭ. ಈ ಸುದ್ದಿಯನ್ನು ಕೇಳಿದ ಕೂಡಲೆ ನಾನು ಸಾಲಿಗ್ರಾಮದ ಲೋಕಲ್ ಫಂಡ್ ಡಾಕ್ಟರನ್ನು ಕರೆದುಕೊಂಡು ಗೌಡರ ಬೀದಿ ತಾಲಿಂಗೆ ಹೋದೆ. ಎಷ್ಟು ಗುಟ್ಟಾಗಿ ಹೊರಟರೂ ಸಂಬಂಧಪಟ್ಟ ಜನಗಳಿಗೆ ಹ್ಯಾಗೋ ವರ್ತಮಾನ ಮುಟ್ಟಿರಬೇಕೆಂದು ಕಾಣುತ್ತದೆ. ಸಾಮಾನ್ಯವಾಗಿ ಆಗಿನ ಕಾಲದಲ್ಲಿ ಅಮಲ್ದಾರರ ರಹಸ್ಯವೆಂದರೆ ಬೆಕ್ಕಿನ-ಕಣ್ಣುಮುಚ್ಚಿದ-ಕತ್ತಲೆ; ಈ ಸಂದರ್ಭದಲ್ಲಂತೂ ತಲವಾರು ಪೆಟ್ಟಿನ ವಿದ್ಯಮಾನಕ್ಕೆ ಸಂಬಂಧಪಟ್ಟವರು ಅಮಲ್ದಾರರ ಚಲನೆಯನ್ನು ಹೊಂಚು ಕಾಯುತ್ತಿದ್ದಿರಬೇಕು. ನಾವು ತಾಲಿಂನ ಹತ್ತಿರ ಹೋದಾಗ ತಾಲಿಂ ಬಾಗಿಲು ಬೀಗ ಹಾಕಿತ್ತು. ಅಲ್ಲಿ ಯಾರೂ ಇರಲಿಲ್ಲ. ತಾಲಿಂ ವಸ್ತಾದಿಯನ್ನು ಕರೆಯ ಕಳಿಸಿದೆ. ಅವನು ತಲೆ ತಪ್ಪಿಸಿಕೊಂಡ. ಗೌಡನನ್ನು —ಅಂದರೆ ದೇವರಸೇಗೌಡನನ್ನು, ಬರಮಾಡಲು ಯತ್ನಿಸಿದೆ. ಅವನೂ ಮನೆಯಲ್ಲಿಲ್ಲವೆಂದು ಸುದ್ದಿ ಬಂತು. ಗೂಢವಾಗಿ ವಿಚಾರಿಸಲಾಗಿ ನಾನು ಅಲ್ಲಿಗೆ ಬರುವ ಕಾಲು ಘಂಟೆಯ ಮುಂಚೆ ತಾಲಿಂ ಬಾಗಿಲು ತೆಗೆದಿತ್ತೆಂದು ತಿಳಿಯಬಂತು. ಕೆಲವು ಜನಗಳನ್ನು ಪಂಚಾಯಿತುದಾರರನ್ನಾಗಿ ಬರಮಾಡಿಕೊಂಡು, ಗರಡಿಯ ಬಾಗಿಲು ಬೀಗವನ್ನು ಒಡೆಯಲು ಸಿದ್ಧತೆಯನ್ನು ತೋರಿಸಿದೆ. ಅಷ್ಟರಲ್ಲೇ ಗರಡಿಯವನು

ಒಬ್ಬನು ಎಲ್ಲಿಂದಲೋ ಓಡಿ ಬಂದು — ವಸ್ತಾದರು ತನ್ನಲ್ಲಿ ಬೀಗದ ಯಸಳು ಕೊಟ್ಟು ಗದ್ದೆಕಡೆ ಹೋದರೆಂದು ಬಾಗಿಲನ್ನು ತೆಗೆದ. ಆಗಿನ ಕಾಲದ—ಯಾಕೆ, ಈಗಿನ ಕಾಲದ, ಕೂಡ — ಗರಡಿಯೊಳಕ್ಕೆ ಪ್ರವೇಶ ಮಾಡಿರುವರಿಗೆ ನಾನು ಕೊಡುವ ಒಳಗಿನ ಸನ್ನಿವೇಶದ ವರ್ಣನೆ ಕೇವಲ ಸಪ್ಪೆಯಾಗಿ ಕಾಣಬಹುದು. ಕತ್ತಲು, ಬೆವರು ಮತ್ತು ಎಣ್ಣೆ ಗವುಟಿನಿಂದ ಭಾರವಾದ ಗಾಳಿ, ಅದೂ ಕಿಟಕಿಯ ಅಭಾವದಿಂದ ನಿಶ್ಚಲ. ಅದರ ಒಳ ವಿಸ್ತೀರ್ಣ ಎರಡು ಎರಡೂವರೆ ಮಾರು ಅಗಲ, ಐದೂವರೆ ಆರು ಮಾರು ಉದ್ದ; ಇದರಲ್ಲಿ ಮೂರನೆಯೊಂದು ಭಾಗ ಕೆಂಪು ಮಟ್ಟಿ ಅಖಾಡ, ಲಡತ್ತು (ಖುಸ್ತಿ) ಮಾಡುವ, ಮತ್ತು ಸಾಮು ನಂತರ ಮಟ್ಟಿ ತೆಗೆದುಕೊಳ್ಳುವ ಜಾಗ. ಉಳಿದ ಸ್ಥಳದಲ್ಲಿ ಖಸರತ್ತಿನ ಸಾಮಾಗ್ರಿಗಳು — ಕರೇಲ, ಸರಪಳಿ, ಸಾಂದ್ರಾಣಿಕಲ್ಲು, ಮೊದಲಾದವು. ಒಂದು ಮೂಲೆಯಲ್ಲಿ ಮಲಕಂಬ—ಅಂದರೆ, ತೊಡೆಗಾತ್ರದ, ಒಂದು ಆಳು ಎತ್ತರದ ನುಣುಪಾದ ನಿಲುಕಂಬ, (ಇದರ ಸಾಧನೆ ಬಹಳ ಕಠಿಣ; ಸಾಧಕನು ಕಂಬವನ್ನು ಏರಿ ಅದನ್ನು ತನ್ನ ತೋಳು ತೊಡೆಗಳಿಂದ ಕಟ್ಟಿ, ತಾನು ಜಾರಿ ನೆಲಕ್ಕೆ ಬೀಳದಂತೆ ತನ್ನ ತೂಕವನ್ನೆಲ್ಲಾ ಅವಯವಗಳ ಬಲದಿಂದ ಹೊತ್ತು, ತಾನು ಕಂಬದಿಂದ ಜಾರಿದ ಹಾಗೆಲ್ಲ ಘರಟೆ ಮೂಲಕ ಮೇಲೆ ಸೆಳೆದುಕೊಳ್ಳಬೇಕು). ಪ್ರಕೃತ ಗರಡಿಯಲ್ಲಿ ದೀಪವಿರಲಿಲ್ಲ—ಒಂದು ಪೋಲೀಸು ಲಾಂದ್ರವನ್ನು ತರಸಿ ನೋಡಲಾಗಿ ಮಲ ಗಂಬದ ಮೂಲೆಯಲ್ಲಿ ಗಲೀಜು ಬಟ್ಟೆಗಳ ಸುರಳಿಯೊಂದು ಬಿದ್ದಿದ್ದಂತೆ ಕಾಣಿಸಿತು. ಅದನ್ನು ತಟ್ಟಿ ನೋಡಲಾಗಿ ಅದು ಒಬ್ಬ ವ್ಯಕ್ತಿಯಾಗಿ ಪರಿಣಮಿಸಿತು. ಇನ್ನೆರಡು ದೀಪಗಳನ್ನು ತರಿಸಿದೆ; ಡಾಕ್ಟರಿಗೆ ಆ ಮನುಷ್ಯನನ್ನು ಪರೀಕ್ಷಿಸಿರೆಂದು ಹೇಳಿದೆ. ರಕ್ತದಿಂದ ಮಲಿನವಾಗಿ ನಾತ ಹೊಡೆಯುತ್ತಿದ್ದ ಹಚ್ಚಡದ ಮುಸುಕನ್ನು ತೆಗೆಯಲಾಗಿ, ಅವನು ಸಾಂಬಾ — ಪೋಲಿ ಸಾಂಬನೆಂಬ ಬಿರುದಾಂಕಿತನಾದ ದಾಂಡಗ ಆಳು — ಆಗಿದ್ದ. ಹಾಕಿದ್ದ ಜುಬ್ಬ ರಕುತದಿಂದ ಮೈಗೆ ಅಂಟಿಕೊಂಡಿತ್ತು. ತಲೆಗೆ ಇದ್ದಲುಪುಡಿ ಮೆತ್ತಿ ಅದರ ಮೇಲೆ ಒಂದು ಚೌಕ ಕಟ್ಟಿದ್ದರು. ಮೈಮೇಲೆ ಪ್ರಜ್ಞೆ ಇಲ್ಲದವನಂತೆ ಕುಣಿಗಣ್ಣು

ಮುಚ್ಚಿಕೊಂಡಿದ್ದ. ಡಾಕ್ಟರು ತಲೆಯ ಕಟ್ಟನ್ನು ಬಿಚ್ಚಿ, ಆಸ್ಪತ್ರೆ ದ್ರಾವಕ ಹಾಕಿದ ನೀರಿನಿಂದ ತೊಳೆದು ನೋಡಲಾಗಿ, ಅವನ ನೆತ್ತಿಯ ಮೇಲೆ ಸುಮಾರು ಕಾಲು ಅವಿಯುದ್ದದ ಸೀಳುಗಾಯ ಕಂಡಿತು. ಡಾಕ್ಟರು ಅದನ್ನು ನಿರ್ಮಲವಾಗಿ ತೊಳೆದು, ತಲೆಬುರಡೆಯನ್ನು ಕೈಯಿಂದ ಅಮುಕಿ ನೋಡಿ, ನನಗೆ ಇಂಗ್ಲಿಷಿನಲ್ಲಿ—ಬುರಡೆ ಒಡೆದಿಲ್ಲ, ಬರಿ ಚರ್ಮ ಗಾಯವೆಂದು ಕಾಣುತ್ತೆ; ರಕ್ತವನ್ನೇನೋ ಬಹಳ ಕಳೆದುಕೊಂಡಿದ್ದಾನೆ; ಆದರೆ ಬಲವಾದ ಜವಾನ ಆದ್ದರಿಂದ, ಇವರು ತಗಲಿಸಿರುವ ಗಲೀಜಿನಿಂದ ಟಿಟಾನಸ್ ಅಥವ ಎರ್ಸಿಪಿಲಾಸ್ ಬಾರದಿದ್ದರೆ, ಪ್ರಾಣ ಭಯವೇನೂ ಇಲ್ಲ—ಎಂದು ಹೇಳಿದರು. ಅವನನ್ನು ಸ್ಟ್ರೆಚರ್ ತರಿಸಿ ಆಸ್ಪತ್ರೆಗೆ ಕಳುಹಿಸಿಕೊಟ್ಟೆ. ಅವನನ್ನು ಹುಷಾರಾಗಿ ನೋಡಿಕೊಳ್ಳಬೇಕು; ಯಾರಿಗೂ ಅವನ ಹತ್ತಿರ ಹೋಗಲಿಕ್ಕೆ ಅವಕಾಶ ಕೊಡಕೂಡದು; ಪ್ರಜ್ಞೆಬಂದ ಕೂಡಲೆ ನನಗೆ ತಿಳಿಸಬೇಕೆಂದು ಆಜ್ಞೆಮಾಡಿ, ಆಜ್ಞೆಯ ಸಾರ್ಥಕತೆಗೂ ತಕ್ಕ ಪೋಲೀಸು ಬಂದೋಬಸ್ತನ್ನೂ ಮಾಡಿದೆ. ಸ್ವಲ್ಪ ಕಾಲನಂತರ ಅವನಿಗೆ ಜ್ಞಾನ ಬಂದದ್ದನ್ನು ಕೇಳಿ, ಅವನ ಹೇಳಿಕೆ ರಿಕಾರ್ಡು ಮಾಡಲು ಹೋದೆ. ಡಾಕ್ಟರು—ಅವನ ಜೀವಕ್ಕೇನೂ ಅಪಾಯವಿಲ್ಲ, ಅಂದರೆ, ಸಾಯುತ್ತೇನೆಂಬ ಘಾಬರಿ ಬಹಳವಾಗಿದೆ—ಎಂದು ಹೇಳಿದರು. ಇರಲಿ, ಒಳ್ಳೇದು; ಆ ದಿಗಲಿನಿಂದಲಾದರೂ ನಿಜವನ್ನು ಹೇಳಬಹುದು—ಎಂದುಕೊಂಡು ಅವನ ತನಿಖೆ ಮಾಡಿದೆ. ಅವನ ತನಿಖೆಯ ಸಾರಾಂಶವಿದು:

ಹೊಳೆನರಸಿಪುರದ ಬಿದರಕ್ಕ ಗ್ರಾಮದಲ್ಲಿ ಸಾಲಿಗ್ರಾಮದ ದೇವರಸೇಗೌಡರ ಹತ್ತಿರ ಅನುಬಂಧಿ (ಬೀಗರೋ, ಮೈದುನರೋ, ಜ್ಞಾಪಕವಿಲ್ಲ) ಬೋರೇಗೌಡರೆಂಬುವ ಜಮೀನುದಾರರು ಇದ್ದಾರೆ. ಅವರು ಅಲ್ಲಿ ಚಕ್ಕಲದ ವ್ಯಾಪಾರ ಮಾಡುವ ಒಬ್ಬ ಲಬ್ಬೇ ಸಾಹುಕಾರರಿಂದ ಜಮೀನಿನ ಆಧಾರದ ಮೇಲೆ ಸಾಲ ತೆಗೆದುಕೊಂಡಿದ್ದರು. ವಾಯಿದೆಯಲ್ಲಿ ಹಣ ಬಾರದ ಸಲುವಾಗಿ, ಲಬ್ಬೆ ಸಾಹುಕಾರರು ದಾವಾಕ್ರಮ ನಡೆಸಿ ಡಿಕ್ರಿ ಪಡೆದು, ಜಾರಿ ಹರಾಜಿನಲ್ಲಿ ಜಮೀನನ್ನು ಛಡಸವಾಲು ಮಾಡಿಕೊಂಡು, ಕೋರ್ಟು ಮೂಲಕ ಸ್ವಾಧೀನ ಪಡೆದರು. ಬೋರೆ

ಗೌಡರು ಮಧ್ಯಸ್ಥರನ್ನು ಬಿಟ್ಟು ಸಾಹುಕಾರರನ್ನು ಹಣ ತೆಗೆದುಕೊಂಡು ಸ್ವತ್ತನ್ನು ಬಿಡುವುದಕ್ಕೆ ಒಡಂಬಡಿಸಲು ಯತ್ನಮಾಡಿದರು, ಸಾಗಲಿಲ್ಲ. ಜಮೀನಿನಲ್ಲಿ ಪ್ರವೇಶಿಸಲು ಸಾಹುಕಾರರಿಗೆ ಅವಕಾಶ ಕೊಡುವುದಿಲ್ಲವೆಂದು ಶಪಥಮಾಡಿದರು. ಸಾಹುಕಾರರು ನಕ್ಕರು. ನನ್ನನ್ನು ತಡೆದರೆ ನೀವೇ ಗಂಡು, ನಿಜವಾಗೂ ಗೌಡರ ಮಕ್ಕಳು, ಅಂತ ಮಾತು ಉಚಾಯಿಸಿ ಗಡ್ಡ ನೀವಿದರಂತೆ ಇದನ್ನು ಕೇಳಿದ ಬೋರೆಗೌಡರು ತಮ್ಮ ನಂಟರೂ, ಗೆಳೆಯರೂ ಆದ ದೇವರಸೇ ಗೌಡರ ಬಳಿಗೆ ಬಂದು, ತಮ್ಮ ಮಾನವನ್ನೇ ಕಾಪಾಡಲು ಕುಮ್ಮಕ್ಕು ಕೇಳಿದರು ದೇವರಸೇಗೌಡರು ತಮ್ಮ ಊಳಿಗದ ಹತ್ತು ಜನರನ್ನ ಬೋರೆಗೌಡರ ಸಹಾಯಕ್ಕಾಗಿ ಬಿದರಕ್ಕಕ್ಕೆ ಕಳುಹಿಸಿದರು. ಲಬ್ಬೆ ಸಾಹುಕಾರರು ಕೋವಿ, ದೊಣ್ಣೆ, ಕತ್ತಿ, ಮೊದಲಾದ ಆಯುಧಗಳನ್ನು ಕಟ್ಟಿಕೊಂಡು ಜಮೀನನ್ನು ಉಳುವ ಯತ್ನಮಾಡಿದರು. ಬೋರೆಗೌಡರ ಕಡೆಯವರೂ, ಅವರ ಸಹಾಯಕ್ಕೆ ಬಂದಿದ್ದ ಸಾಲಿಗ್ರಾಮದ ಆಳುಗಳೂ ಅವರನ್ನು ಎದುರಿಸಿ, ಜಮೀನಿನ ಮೇಲೆ ನುಗ್ಗಿದರು. ಸಾಲಿಗ್ರಾಮದವರ ಕೈಮೇಲಾಗುತ್ತಿರುವಾಗ, ಒಬ್ಬ ಲಬ್ಬೆಯವನು ಕೋವಿ ಹಾರಿಸಿ ಒಬ್ಬನನ್ನು ಕೊಂದ. ಲಬ್ಬೆಯಾಳುಗಳೂ, ಕತ್ತಿ, ಕೊಡಲಿಯಾಳುಗಳೂ, ಮುಂದು ಬಿದ್ದು ಬಂದು; ಸಂಕುಲ ದೊಂಬಿಯಾಯಿತು ಕೆಲವರು ಸತ್ತಿರಬಹುದು; ಅನೇಕರಿಗೆ ಘಾಯವಾಯಿತು. ಜಗಳದ ತರುಣದಲ್ಲೇ ಸಾಂಬನಿಗೆ ಮೊದಲು ಒಂದು ದೊಣ್ಣೆಯ ಪೆಟ್ಟು, ಅದರಿಂದ ಚೇತರಿಸಿಕೊಳ್ಳುವುದರೊಳಗಾಗಿ ಒಂದು ಕತ್ತಿಯದೋ, ಕೊಡ್ಲಿಯದೋ, ಪೆಟ್ಟುಬಿದ್ದು, ಕೆಳಕ್ಕೆ ಉರುಳಿದ. ಅವನನ್ನು ಅವನ ಕಡೆಯವರು ಹಚ್ಚಡದಲ್ಲಿ ಸುತ್ತಿ ಸಾಲಿಗ್ರಾಮಕ್ಕೆ ಸಾಗಿಸಿದರು. ಇದು ನಡೆದು ಮೂರು ನಾಲ್ಕು ದಿನಗಳಾದವು.

ಈ ಕತೆ ಕೇಳಿ ನನಗೆ ಆಶ್ಚರ್ಯವಾಯಿತು. ಇದೇನು, ಈ ಕಾಲದಲ್ಲೂ, ನಾಲ್ವಡಿ ಕೃಷ್ಣರಾಜರ ಆಳ್ವಿಕೆಯಲ್ಲೂ, ನಡುಹಗಲಲ್ಲಿ ಇಂಥ ಅವ್ಯವಸ್ಥೆಯುಂಟೇ! ಆ ತಾಲ್ಲೂಕಿನ ಅಧಿಕಾರಿಗಳೇ ಆಗಲಿ, ಜಿಲ್ಲಾ ಅಧಿಕಾರಿಗಳೇ ಆಗಲಿ, ಈ ವಿಚಾರದಲ್ಲಿ ಏನೂ ಅಮಲೇ ನಡಿಸಿಲ್ಲವಲ್ಲ. ನಡಸಿದ್ದರೆ ನಮಗೆ ಸುದ್ದಿಬಂದಿರಬೇಕಲ್ಲ. ತಕ್ಸೀರುದಾರರ ಪೈಕಿ ಕೆಲ

ವರು ಈ ಊರಿನಲ್ಲೇ ಇದ್ದಾರಲ್ಲ, ಎಂದುಕೊಂಡೆ. ಈ ಸಂದರ್ಭದಲ್ಲಿ ನನ್ನ ಕರ್ತವ್ಯವೇನೆಂದು ಯೋಚಿಸಿದೆ. ನಾನು ಮ್ಯಾಜಿಸ್ಟ್ರೇಟು, ಪೋಲೀಸು ಅಧಿಕಾರಿ; ಮುಖ್ಯವಾಗಿ ಮಹಾರಾಜರ ಸರ್ಕಾರದ ಹುದ್ದೆದಾರ; ನಾನು ಉದಾಸೀನನಾಗಿರುವುದು ಸರಿಯಲ್ಲ; ಎಂದು ಗೊತ್ತು ಮಾಡಿಕೊಂಡು, ಆ ಕಡೂಲೆ ಕಾರ್ಯದ ಅಮಲು ಕೈಗೊಂಡೆ. ಸಾಲಿಗ್ರಾಮದಿಂದ ಒಟ್ಟುಗೂಡಿ ಬಿದರಕ್ಕಕ್ಕೆ ಹೋದರೆಂದು ಸಾಂಬನಿಂದ ತಿಳಿಯಬಂದ ಜನಗಳಪೈಕಿ ಏಳು ಎಂಟು ಜನಗಳನ್ನು ದಸ್ತಗಿರಿ ಮಾಡಿ ಲಾಕಪ್ಪಿನಲ್ಲಿಟ್ಟೆ. ಅವರ ನಾಯಕನೆಂದು ಹೇಳಲ್ಪಟ್ಟ ಕಾಳೇಗೌಡ, ಇನ್ನೊ ಒಬ್ಬಿಬ್ಬರು, ಕೈಗೆ ಸಿಕ್ಕಲಿಲ್ಲ. ಕಾಳೇಗೌಡ "ಮೂಡಸೀಮೆಗೆ" ಅಂದರೆ ಮಂಡ್ಯ, ನಾಗಮಂಗಲದ ಕಡೆಗೆ, ಹೋಗಿದ್ದಾನೆಂದು ಅವನ ಮನೆಯವರು ಹೇಳಿದರು. ಆಗ ದೇವರಸೇಗೌಡನನ್ನು ದಸ್ತಗಿರಿ ಮಾಡಲಿಲ್ಲ; ಅವನ ಮನೆಯ ಮೇಲೆ ಮಾತ್ರ ಉಸ್ತುವಾರಿಯನ್ನಿಟ್ಟೆ. ಅದೇ ದಿವಸ ಹಾಸನದ ಡೆಪ್ಯುಟಿ ಕಮಿಷನ್ನರಿಗೂ ಹೊಳೆನರಸೀಪುರದ ಆಮಲ್ದಾರರಿಗೂ ನನಗೆ ತಿಳಿದುಬಂದಿರುವ ವಿದ್ಯಮಾನಗಳನ್ನು ವಿವರಿಸಿ ಪತ್ರಗಳನ್ನು ಜರೂರು ಮುದ್ದಾಂ ರವಾನಿಸಿದೆ. ನಮ್ಮ ಡೆಪ್ಯುಟಿ ಕಮಿಷನ್ನರಿಗೆ ಒಂದು ಕಾನ್‌ಫಿಡೆನ್‌ಸಿಯಲ್ (ಗುಪ್ತ) ವರದಿಯನ್ನು ಬರೆದು ನನ್ನ ಕರ್ತವ್ಯ ಕುರಿತು ಅವರ ಸಲಹೆಯನ್ನೂ ಆಜ್ಞೆಯನ್ನೂ ಬೇಡಿದೆ. "ಇಂಥ ಅನಾಯಕ ಚಲನೆಗಳನ್ನು ತುರ್ತು ಗಮನಕ್ಕೆ ತೆಗೆದುಕೊಂಡು, ತಪ್ಪಿತಸ್ಥರನ್ನು ಜಾಗ್ರತೆಯಾಗಿ ದಂಡಿಸದಿದ್ದರೆ ಸರ್ಕಾರವೇ ಲಾಘವಕ್ಕೆ ಬರುತ್ತೆ; ಈ ದೊಂಬಿ ನಡೆದು ಮೂರು ನಾಲ್ಕು ದಿನಗಳಾದರೂ ಹೇಳುವರು ಕೇಳುವರಿಲ್ಲವಾಗಿದೆ. ಇದು ನನ್ನ ತಿಳುವಳಿಕೆಗೆ ಅಕಸ್ಮಾತ್ತಾಗಿ ಬಂತು. ಪಲಾನೆ ರೀತಿಯಲ್ಲಿ ನಾನು action (ಕಾರ್ಯಕ್ರಮ) ಕೈಗೊಂಡಿದ್ದೇನೆ. ಕೃತ್ಯನಡೆದದ್ದೇನೋ ಬೇರೆ ಡಿಸ್ಟ್ರಿಕ್ಟಿನಲ್ಲಾದರೂ, ಅದರ ಸಂಬಂಧವಾದ ಮಸಲತ್ತಿನ ಕೆಲವು ಭಾಗ ನನ್ನ ತಾಲ್ಲೂಕಿನಲ್ಲೇ ಜರುಗಿದೆಯೆಂದು ಬಾತ್ಮಿ, ಮತ್ತು ರುಜುವಾತ್ತು ಬಂದಿವೆ. ಈ ಕೇಸನ್ನು ವಿಚಾರಿಸುವ ಅಧಿಕಾರ ನನಗಿದೆ ಎಂದು ನನ್ನ ಅಭಿಪ್ರಾಯವಾದರೂ, ತನಿಖೆಯ ಬಹು ಭಾಗ ಹೊಳೆನರಸಿಪುರದ ತಾಲ್ಲೂಕಿನಲ್ಲಿ ನಡೆಯಬೇ

ಕಾದ್ದರಿಂದ, ಕೇಸನ್ನು ಹಾಸನ ಜಿಲ್ಲಾಧಿಕಾರಿಗಳು ವಿಚಾರಮಾಡುವುದಾದರೆ, ಅವರ ಸಂಗಡ ಸಹಕರಿಸಲು ಸಿದ್ಧವಾಗಿದ್ದೇನೆ; ಇಲ್ಲವಾದರೆ ನಾನೇ ಈ ತನಿಖೆಯ ಎಲ್ಲಾ ಜವಾಬ್ದಾರಿಯನ್ನೂ ವಹಿಸಲು ತಯಾರಿದ್ದೇನೆ" ಎಂದು ಬರೆದೆ. ಡೆಪ್ಯುಟಿ ಕಮಿಷನರು (ಸರದಾರ ಕಾಂತರಾಜೇ ಅರಸಿನವರು) ನಾನು ಅದುವರಿಗೆ ಮಾಡಿದ ಕಾರ್ಯಗಳಿಗೆಲ್ಲ ಮಂಜೂರಾತಿ ಕೊಟ್ಟು—"ತನಿಖೆಯನ್ನು ನಿಮ್ಮ ತಾಲ್ಲೂಕಿನಲ್ಲಿ ಸಾಧ್ಯವಿರುವಷ್ಟು ನೀವೆ ಮುಂದುವರಿಸಿ; ಆ ಜಿಲ್ಲೆಯವರು ಮುಂದೆ ಬಂದರೆ ಅದುವರಿಗೂ ನೀವು ಮಾಡಿರಬಹುದಾದ ರಿಕಾರ್ಡು ಸಹಿತವಾಗಿ ಕೇಸನ್ನು ಅವರಿಗೆ ವಹಿಸಿಕೊಡಿ; ಅವರಿಗೂ ನಾವು ಈ ವಿಚಾರದಲ್ಲಿ ಬರೆದಿದ್ದೇವೆ"—ಎಂದು ಅಪ್ಪಣೆಕೊಟ್ಟರು. ನನ್ನನ್ನು ನೋಡಿದಾಗ—ಬೇಷ್ ಕೆಲಸಮಾಡಿದಿರಿ. ಡಿಸ್ಟ್ರಿಕ್ಟು ಬೇರೆಯಾದರೂ ಅದೂ ಮಹಾರಾಜರ ಆಳ್ವಿಕೆಯ ಪ್ರದೇಶವಲ್ಲವೆ? ಹೇಳೋರು ಕೇಳೋರಿಲ್ಲವೆ? ಇದೇನು, ಹುಡುಗಾಟವಾಯಿತಲ್ಲ!—ಎಂದರು. ತಂತಿ, ಟಪ್ಪಾಲು, ಮುದ್ದಾಂಗಳ ಮೂಲಕ ವಾರ್ತೆ ಕಾಗದ, ಪತ್ರಗಳ ಓಡಾಟ ಚುರುಕಾಗಿ ನಡೆದಿರಬೇಕು. ನಾನು ಸಾಲಿಗ್ರಾಮ ಮೊಕ್ಕಾಂನಲ್ಲಿದ್ದ ಹಾಗೆ ಹೊಳೇನರಸಿಪುರದ ಅಮಲ್ದಾರ್ (ಕೃಷ್ಣಯ್ಯರ್) ಮತ್ತು ಹಾಸನದ ಡಿಸ್ಟ್ರಿಕ್ಟು ಪೋಲೀಸು ಸೂಪರಿನ್‌ಟೆನ್‌ಡೆನ್‌ಟ್ (ಸಾಲಿಗ್ರಾಮ ನಾರಾಯಣರಾವ್) ನಾನಿದ್ದಲ್ಲಿಗೆ ಬಂದರು. ನಾನು ಕೈಗೊಂಡಿದ್ದ ಕ್ರಮ ತಮ್ಮ ಪ್ರತಿಷ್ಠೆಗೆ ಕುಂದಕ ತಂದಿತೆಂಬ ಭಾವನೆಯಿಂದ ನನ್ನ ಮೇಲೆ ಅವರಿಗೆ ಅಸಮಾಧಾನ. ನಾರಾಯಣರಾಯರು ನನ್ನನ್ನು ಚಿಕ್ಕಂದಿನಿಂದಲೂ ಬಲ್ಲ ನನ್ನ ಸ್ನೇಹಿತರು, ಹಿತಚಿಂತಕರು, ಹೌದು; ಆದರೂ ನಾನು ಅವರ ಅಧಿಕಾರ ಎಲ್ಲೆಯಲ್ಲಿ ದುಡಂಪ್ರವೇಶಮಾಡಿ, ಅವರು ಕರ್ತವ್ಯ ಪ್ರಮತ್ತರಾಗಿದ್ದಾರೆಂಬ ಭಾವನೆಗೆ ಅವಕಾಶಕೊಟ್ಟೆನೆಂದು ಅವರ ಅಭಿಪ್ರಾಯ.

ನಾನು ಅದುವರಿಗೆ ಮಾಡಿದ್ದ ವಿಚಾರಣೆಯ ರಿಕಾರ್ಡನ್ನೆಲ್ಲಾ ನಾನು ಹಾಸನದ ಡಿಸ್ಟ್ರಿಕ್ಟಿನಿಂದ ಬಂದ ಅಧಿಕಾರಿಗಳಿಗೆ ತೋರಿಸಿ,

"ಸಾಲಿಗ್ರಾಮದಲ್ಲಿ ನಡೆದ ಮುಸಲತ್ತು ಬಿದರಕ್ಕದಲ್ಲಿ ನಡೆದ ದೊಂಬಿ, ಒಂದೇ ಕೃತ್ಯ. ಇದರ ತನಿಖೆ ಮಾಡಲು ನನಗೆ ಅಧಿಕಾರ

ವಿದ್ದರೂ, ದೊಂಬಿ ನಡೆದ ಸ್ಥಳವೂ, ಬಹುಜನ ಅಪರಾಧಿಗಳೂ ಸಾಕ್ಷಿಗಳೂ ವಾಸವಾಗಿರುವುದೂ, ಹಾಸನ ಡಿಸ್ಟ್ರಿಕ್ಟಿನಲ್ಲಿರುವುದರಿಂದ ನೀವು ಈ ಕೇಸನ್ನು investigate (ವಿಚಾರಣೆ) ಮಾಡುವಿರಾದರೆ ನನ್ನ ಅಭ್ಯಂತರವೇನೂ ಇಲ್ಲ. ಅದುವರಿಗೆ ನಡೆಸಿರುವ ಕಾಗದ ಪತ್ರಗಳನ್ನು ನಿಮ್ಮ ಸುಪರ್ದುಮಾಡುವೆನಲ್ಲದೆ, ನನ್ನಿಂದ ಸಾಧ್ಯವಾದ ಸಹಕಾರವನ್ನು ಹೃತ್ಪೂರ್ವಕವಾಗಿ ಮಾಡುತ್ತೇನೆ. ಆದರೆ ವಿಚಾರಣೆಯಲ್ಲಿ ನನಗೂ ಸ್ಥಾನವಿರಬೇಕು, ಕಾರ್ಯಕ್ರಮದಲ್ಲಿ ನನ್ನ ಅಭಿಪ್ರಾಯವನ್ನು ಕೇಳಬೇಕು. ಭಿನ್ನಾಭಿಪ್ರಾಯದ ಸಂಭವದಲ್ಲಿ, ಚರ್ಚೆಗೆ ಅವಕಾಶವಿರಬೇಕು" ಎಂದು ಹೇಳಿದೆ.

ಇದಕ್ಕೆ ಹೆಚ್ಚು ಪ್ರಸನ್ನತೆ ಇಲ್ಲದೆ ಒಪ್ಪಿದರು. "ಈ ಕೂಡಲೆ ಇರುವ ಮುಂದಿನ ಕ್ರಮವಾದರೂ ಏನು? ಬಿದರಕ್ಕದಲ್ಲಿ ದೊರೆತ ದೊಂಬಿಕೋರರನ್ನೆಲ್ಲ — ಅಂದರೆ ಪರಾರಿಯಾದವರ ಹೊರತು ಎಲ್ಲರನ್ನೂ — ದಸ್ತಗಿರಿ ಮಾಡಲಾಗಿದೆ, ಲಾಷ್ ಮಹಜರುಗಳೂ, ಮೆಡಿಕಲ್ ಸರ್ಟಿಫಿಕೇಟುಗಳು, ಇವೆಲ್ಲ ಆಗಿವೆ ಸಾಲಿಗ್ರಾಮದಲ್ಲಿ ಆಗಬೇಕಾದ್ದೇನು? ನಿಮ್ಮ ಸಹಾಯ ನಮಗಾಗ ಬೇಕಾದ್ದೇನು?" ಎಂದು ಕೇಳಿದರು.

"ನಿಮಗೆ ಬೇಕಾಗಿರುವ ಸಹಾಯ ನನಗಿಂತಲೂ ನಿಮಗೆ ಚನ್ನಾಗಿ ಗೊತ್ತಿರಬೇಕು. ಆದರೆ ಒಂದು ಸಲಹೆ. ಲಬ್ಬೆ ಸಾಹುಕಾರರ ಕಕ್ಷಿಮುಖಂಡರು ಯಾರೋ ನನಗೆ ತಿಳಿಯದು. ನಿಮಗೆ ತಿಳಿದಿರಬೇಕು, ನೀವು ಅವನನ್ನು ದಸ್ತಗಿರಿ ಮಾಡಿರ ಬೇಕು. ಪ್ರತಿಕಕ್ಷಿಯ ನಾಯಕನಂತೂ ದೇವರಸೇಗೌಡನೆಂದು ನನಗೆ ಖಾತರಿ. ನಾನು ಇದುವರಿಗೆ ಮಾಡಿರತಕ್ಕ ತನಿಖೆಯ ಪ್ರತಿಯೊಂದು ಹೆಜ್ಜೆಯಲ್ಲೂ ಅವನ ಪ್ರಭಾವದ ಅಡಚಣೆ ನನಗೆ ಕಂಡುಬಂದಿದೆ. ಅವನ ಭಯದಿಂದಲೇ ಸಾಕ್ಷಿಗಳು ಮುಂದು ಬರುವದಕ್ಕೆ ಸಂಕೋಚಪಡುತ್ತಾರೆ, ಬಂದವರು ಧಾರಾಳವಾಗಿ ಸಾಕ್ಷ್ಯ ನುಡಿಯುವುದೂ ಇಲ್ಲ. ಅವನೂ ಲಬ್ಬೇ ಸಾಹುಕಾರನೂ ರಾಜಿಯಾಗಿ ಒಂದಾದರೆ, ಖೂನಿ ಸಹಿತವಾದ ದೊಂಬಿಗೆ ರುಜುವಾತ್ತು ಒದಗಿಸುವುದು ಕಷ್ಟವಾಗಿ ನಾವು ನಗೆಗೇಡಾಗ

ಬಹುದು. ಅಥವ ಅವನನ್ನು ದಸ್ತಗಿರಿಮಾಡದೆ ಬಿಟ್ಟು ನೀವು ಲಬ್ಬೆ ಸಾಹುಕಾರನನ್ನು ಮಾತ್ರ ಹಿಡಿದರೆ ನೀವು ಪಕ್ಷಪಾತದ ಆರೋಪಣೆಗೆ ಗುರಿಯಾಗುತ್ತೀರಿ "

ಸಾಲಿಗ್ರಾಮ ನಾರಾಯಣರಾಯರಿಗೆ ಕೋಪಬಂತು.

"ಪಕ್ಷಪಾತವೆಂದರೆ ಎಂಥ ಮಾತು? ಸಾಲಿಗ್ರಾಮದವನೆಂಬ ಹೆಸರಿರುವ ಮಾತ್ರಕ್ಕೇ, ನಮ್ಮಣ್ಣ ಈ ಊರ ಗಣ್ಯ ಜನಗಳಲ್ಲಿ ಒಬ್ಬ ರಾಗಿರುವ ಮಾತ್ರಕ್ಕೇ, ನನ್ನಮೇಲೆ ಆಪಾದನೆಯೇ? ಇದೇನು, ರಾಮ ರಾವ್, ಇಂಥಾ ಮಾತನಾಡುತ್ತಿ? ಆದರೆ ಅವನ ಮೇಲೆ ಏನೂ ರುಜುವಾತ್ತೇ ಇಲ್ಲವಲ್ಲ!" ಎಂದರು.

"'ನೀವು' ಅಂದರೆ ಸಾಲಿಗ್ರಾಮದ ನಾರಾಯಣರಾಯರೆಂಬ ಅರ್ಥವಲ್ಲ, ಕಾಣ್ರಿ! ನಿಮ್ಮ ಜತೆಗೆ ಸೇರಿ ನಾನೂ ಇದ್ದೇನೆ. ಸಾಲಿ ಗ್ರಾಮದ ಪಟೇಲನನ್ನೂ ಅವನ ಕಡೆಯವರನ್ನೂ ಯಡತೊರೆ ಅಮ ಲ್ದಾರರು ಬಚಾಯಿಸಿಕ್ಕೊಂಡರೆಂದು ನನ್ನಮೇಲೂ ಆರೋಪಣೆಯಾಗುತ್ತೆ. ಅವನನ್ನು ದಸ್ತಗಿರಿ ಮಾಡಬೇಕು. ಆ ಮೇಲೆ ಬೇಕಾದರೆ ಮ್ಯಾಜಿ ಸ್ಟ್ರೇಟರು ಜಾಮೀನಿನ ಮೇಲೆ ಬಿಡಲಿ."

"ನಾನು ಅದಕ್ಕೆ ಒಡಂಬಡದಿದ್ದರೆ?"

"ನಾನೇ ಅವನನ್ನು ದಸ್ತಗಿರಿ ಮಾಡಿ, ಇದುವರಿಗೆ ದಸ್ತಗಿರಿ ಯಾಗಿರುವ ಇತರರೊಂದಿಗೆ ಅವನನ್ನು ನಿಮ್ಮ ವಶಕ್ಕೆ ಕೊಡುತ್ತೇನೆ. ಆಮೇಲೆ ನಿಮ್ಮಪ್ಪನ ಆಣೆ— ನನ್ನ ಜವಾಬ್ದಾರಿ ಮುಗಿಯಿತು. ನಮ್ಮ ಡೆಪ್ಯುಟಿ ಕಮಿಷನ್ನರಿಗೆ ರಿಪೋರ್ಟುಮಾಡಿ, ಕೈ ಒದರಿಕೊಂಡುಬಿಡು ತ್ತೇನೆ" ಎಂದೆ.

ಹೊಳೆನರಸಿಪುರದ ಅಮಲ್ದಾರರು ತಮ್ಮ ಸೂಪರಿನ್‌ಟೆನ್‌ಡೆನ್‌ಟರ ಮತ್ತು ಪೋಲೀಸು ಇನ್‌ಸ್ಪೆಕ್ಟರ ಸಂಗಡ ರಹಸ್ಯವಾಗಿ ಮಾತನಾಡಿ, ನಂತರ,

"ನಾವೇ ದೇವರಸೇಗೌಡನನ್ನು ದಸ್ತಗಿರಿ ಮಾಡುತ್ತೇವೆ. ಆದರೆ ನಮ್ಮಲ್ಲಿ ಸಿಬ್ಬಂದಿ ಸಾಲದು. ಅವನು ಬಹಳ ಪ್ರಬಲ ಮನುಷ್ಯನಂತೆ.

ದೊಂಬಿ ಗಿಂಬಿಯಾಗದಂತೆ ನೀವು ನೋಡಿಕೊಳ್ಳಬೇಕು. ಇದೇ ನಿಮ್ಮಿಂದ ಬೇಕಾದ ಕುಮ್ಮಕ್ಕು" ಎಂದು ಹೇಳಿದರು.

ನಾನು ನಕ್ಕು

"ಆಗಲಿ ಸ್ವಾಮಿ. ತಾವು ಇಷ್ಟಪಟ್ಟು ಅಪ್ಪಣೆ ಮಾಡಿದರೆ, ನಾನೇ ಬೆಟ್ಟ ಎತ್ತಿ ತಮ್ಮ ಭುಜದಮೇಲೆ ಹೊರಿಸುತ್ತೇನೆ. ನಡೆಯಿರಿ ಹೋಗೋಣ" ಎಂದೆ.

ಈ ಮಾತುಗಳೆಲ್ಲಾ ನಡೆದದ್ದು ಊರ ಮಧ್ಯದ ಪೋಲೀಸು ಸ್ಟೇಷನ್ನಿನಲ್ಲಿ. ಊರಿನಲ್ಲಿ ಪಿಸಿಪಿಸಿ ಮಾತು ಕಿವಿಯಿಂದ ಕಿವಿಗೆ ಬಿದ್ದು ಹರಡಿ, ಜನಗಳ ಗುಂಪು ಬೀದಿತುಂಬ ಸೇರಿತ್ತು. ನಾವು ಸ್ಟೇಷನ್ನಿಂದ ಇಳಿದು ಗೌಡನಮನೆಯ ಬೀದಿಗೆ ಹೋದೆವು, ಗುಂಪು ಹಿಂದೇ ಬಂತು. ನಾನು ಗೌಡನ ಮನೆಯೊಳಕ್ಕೆ ಪ್ರವೇಶ ಮಾಡಿ ವಿಚಾರಿಸಲಾಗಿ, ಮೊದಲು ಗೌಡನಿಲ್ಲವೆಂದು ಯಾರೋ ಹೇಳಿದರು. ಅವರು ಹೇಳುತ್ತಿರುವಷ್ಟರಲ್ಲೇ ಗೌಡ ಒಂದು ಹಚ್ಚಡ ಹೊದ್ದುಕೊಂಡು ಈಚೆಗೆ ಬಂದು,

"ಯಾಕರವ್ವ ಮುಚ್ಚೀರಿ? ಏನು ಮಾಡಿವನಿ ಅಂಥ ಕತ್ತೆಹಾದರ? ಇಕ್ಕೋ, ಇಲ್ಲವನಿ, ಬುದ್ದಿ" ಎಂದ. ಅವನಿಗೆ ಮೈನಲ್ಲಿ ಚನ್ನಾಗಿರಲಿಲ್ಲವೆಂದು ನನಗೆ ಕಾಣಿಸಿತು. ಆ ವಯಸ್ಸಾದ, ದರ್ಪವಂತನಾದ, ಆ ದೊಡ್ಡ ಸಂಸಾರಿಯ ಅವಸ್ಥೆಯನ್ನು ನೋಡಿ ನನಗೆ ಬಹಳ ಕನಿಕರವಾಯಿತು.

"ಕೂತುಕೊಳ್ಳಿ ಗೌಡರೆ, ಸ್ವಲ್ಪ ಮಾತಾಡುವುದಿದೆ" ಎಂದು ಹೇಳಿ, ಅಲ್ಲಿದ್ದ ಒಂದು ನಾಲ್ಕುಕಾಲು ಮಣೆಯ ಮೇಲೆ ನಾನು ಕುಳಿತೆ. ಅಷ್ಟರಲ್ಲಿ ಹಾಸನದ ಡಿಸ್ಟ್ರಿಕ್ಟಿನ ಅಧಿಕಾರಿಗಳೂ ಒಳಕ್ಕೆ ಬಂದರು. ಗೌಡನಿಗೆ ನಾನು,

"ನಿಮಗೆ ಬಹಳ ಭಂಗದ ಕಾಲವದಗಿದೆ. ಆದರೆ ನೀವು ತಪ್ಪಿತಸ್ಥರಲ್ಲದಿದ್ದರೆ ಏನು ಭಯಪಡಬೇಡಿ. ನನಗೆ ನಿಮ್ಮ ಮೇಲೆ ದ್ವೇಷವಿಲ್ಲವೆಂಬೋದು ನಿಮಗೇ ಗೊತ್ತಿದೆ. ನೀವು ತಪ್ಪಿತಸ್ಥರಲ್ಲದಿದ್ದರೆ, ನಿಮಗೆ ಅನ್ಯಾಯವಾಗದಂತೆ ನೋಡಿಕೊಳ್ಳುತ್ತೇನೆ. ಇದು ಸತ್ಯ,

ನಂಬಿ. ಆದರೂ ಭಾರಿ ಕೇಸು ನಿಮ್ಮ ಮೇಲೆ ಬಂದಿರುವಾಗ ವಿಚಾರಣೆ ತಪ್ಪದೇ ತಪ್ಪದು. ಗ್ರಹಚಾರಕ್ಕೆ ಯಾರೇನು ಮಾಡ್ತ್ಯಾರು. ಬಿದರಕ್ಕದಲ್ಲಿ ನೀವು ಇಲ್ಲಿಂದ ನಿಮ್ಮ ಕಾಳೇಗೌಡನ ಬೋರೆಗೌಡನ ಕುಮ್ಮಕ್ಕಿಗಾಗಿ ಪಿತೂರಿ ನಡೆಸಿ ಕಳಿಸಿದಿರೆಂದು ಸುದ್ದಿ ಬಂದಿದೆ. ಹಾಸನದ ಸೂಪರಿಂಟೆಂಡೆಂಟ್ ಸಾಹೇಬರು, ಹೊಳೇನರಸೀಪುರದ ಅಮಲ್ದಾರರೂ ಬಂದಿದ್ದಾರೆ. ಅವರು ನಿಮ್ಮನ್ನು ದಸ್ತಗಿರಿ ಮಾಡಲಿಕ್ಕೆ ಬಂದಿದ್ದಾರೆ."

ಅವನ ಮುಖದ ಮೇಲೆ ಬೆವರು ಕಿತ್ತು ಹರಿಯಲು ಪ್ರಾರಂಭವಾಯಿತು ಅವನು ಏನು ಮಾತನ್ನೂ ಆಡಲಾರದೆ ಮಂಕಾಗಿ ಸ್ವಲ್ಪ ಕಾಲವಿದ್ದು—ಕೊನೆಗೆ,

"ಏನುಮಾಡಲಿ, ಬುದ್ಧಿ? ನಾನು ಹೇಳಿದ ಹಂಗೆ ಕೇಳ್ತಾರಾ ಹುಡುಗರು? ನನಗೆ ಹೇಳದೇಲೇ ಮಣ್ಣುತಿನ್ನೋ ಕೆಲಸಮಾಡಿಕೊಂಡಿದ್ದಾರೆ, ಕೊಬ್ಬಿದ ಮುಂಡೇಗಂಡಂದ್ರು!"

ಎಂದು ಹಚ್ಚಡದ ಮೂಲೆಯಿಂದ ಮುಖವನ್ನು ವರಿಸಿಕೊಂಡ ನಾನು

"ನಿಮಗೆ ತಿಳಿಯದೇಯೋ ಈ ಕೆಲಸ ನಡೆದಿದ್ದರೆ ನೀವು ನಿಮ್ಮ ಮನೆಯನ್ನಾಳೋ ವಯಸ್ಸು ಮೀರಿದ ಮುದುಕರಾದಿರಿ. ಎಲ್ಲರೂ ಮುದುಕರಾಗೋರೆ, ಬಿಡಿ, ಭಗವಂತ ಆಯುಸ್ಸು ಕೊಟ್ಟರೆ. ನಿಮ್ಮ ತಿಳುವಳಿಕೆ ಇಲ್ಲದೆ ಈ ಕೆಲಸ ನಡೆದಿದ್ದರೆ ಅದರಿಂದ ನಿಮಗೇನೂ ಭಯವಿಲ್ಲ—ಆದರೆ ನಿಮಗೆ ತಿಳಿದಿರಲಿಲ್ಲವೆಂದು ರುಜುವಾತ್ತು ಬರಬೇಕು. ಅಪಾದನೆ ಬಂದಮೇಲೆ ಕೇಸು ಆಗಲೇಬೇಕು. ನೀವು ಈಗ ಏನಾದರೂ ದುಡುಕಿದರೆ—ನೀವು ಏನು ದುಡುಕೀರಿ? ನಿಮ್ಮ ಕಡೆಯವರು ದುಡುಕಿದರೆ, ತನಿಖೆ, ವಿಚಾರಣೆ ಮಾರ್ಗಕ್ಕೆ ಅಡ್ಡಬಂದರೆ, ನಿಮ್ಮ ಕಾಲಿಗೆ ನೀವೇ ಕೋಳ ಹಾಕಿಕೊಂಡ ಹಾಗಾಗುತ್ತೆ. ನಿಮ್ಮನ್ನು ಅವರು ದಸ್ತಗಿರಿ ಮಾಡಲೇಬೇಕು. ಅದು ದ್ವೇಷದಿಂದಲ್ಲ—ಅವರ ಡ್ಯೂಟಿ—ಕರ್ತವ್ಯವಾದ್ದರಿಂದ. ನಿಮಗೆ ಅನ್ಯಾಯವಾಗದಂತೆ ನೋಡಿಕೊಳ್ಳುವುದಕ್ಕೆ ನಾನು ಜವಾಬ್ದಾರ ಇದೋ, ನಾನು ಭಾಷೆಕೊಡುತ್ತೇನೆ."

ಇಷ್ಟು ಮಾತು ನಡೆಯುತ್ತಿರುವಲ್ಲಿ ಮನೆತುಂಬ ಜನ ತುಂಬಿ ಕೊಂಡರು. ಮನೆ ಮುಂದಿನ ಬೀದಿ ತುಂಬ ಜನವಿರುವುದನ್ನು ಒಬ್ಬ ಪೋಲೀಸು ಜವಾನ ಹೇಳಿದ: ನಾನು "ನೋಡಿ ಗೌಡರೆ, ನಿಮ್ಮ ಕ್ಷೇಮಕ್ಕೇ ಸತ್ಯವಾಗಿ ಹೇಳುತ್ತೇನೆ. ನಿಮ್ಮ ಜನಗಳಿಗೆ ದುಡುಕದ ಹಾಗೆ ಹೇಳಿ. ನಮ್ಮ ಸಂಗಡ ನಿಮ್ಮ ಖುದ್ದು ಖುಷಿಯಿಂದಲೇ ಬಂದ ಹಾಗೆ ಬನ್ನಿ. ನಿಮ್ಮವರು ಗಲಾಟೆ ಮಾಡಿದ್ದೇ ಆದರೆ ಅವರಿಗೆ ಕೆಟ್ಟದು, ನಿಮಗಂತೂ ಕೂಡಲೇ ಕೇಡು, ಕೊನೆಗೆ ನಿಮ್ಮ ಕೇಸು ನ್ಯಾಯಸ್ಥಾನ ದಲ್ಲೂ ಹಾಳಾಗಿ ಹೋಗುತ್ತೆ. ನೀವು ಈಚೆಗೆ ಬಂದು—ಏನೂ ಹೆದರ ಬೇಡಿ, ವರಟಾಟ ಮಾಡಬೇಡಿ, ನನ್ನ ರಾಜಿಯಿಂದಲೇ ನಾನು ನಡೆದಿರ ತಕ್ಕ ಸಂಗತಿಯನ್ನು ಪೋಲೀಸಿನವರಿಗೆ ಒಪ್ಪಿಸಲಿಕ್ಕೆ ಹೋಗ್ತೀನಿ— ಎಂದು ನಿಮ್ಮ ಕಡೆಯವರಿಗೆ ಹೇಳಿ. ಏನಾದರೂ ಗಲಾಟೆ ಮಾಡಿ ಕೊಂಡರೆ ನಿಮ್ಮ ಮಾನಕ್ಕೆ ಮೊದಲು—ನಿಮ್ಮ ಪ್ರಾಣಕ್ಕೂ—ಅಪಾಯ; ಹೇಳಿದ ಹಾಗೆ ಬುದ್ಧಿವಂತರಾಗಿ ಬಂದರೆ, ನಿಮ್ಮನ್ನು ಯಾರೂ ಮುಟ್ಟು ವುದಿಲ್ಲ. ಇಲ್ಲವಾದರೆ ಕೈಕೋಳಹಾಕುತ್ತಾರೆ" ಎಂದೆ—

ಇಂಗ್ಲಿಷಿನಲ್ಲಿ ಹೊಳೆನರಸಿಪುರದ ಅಮಲ್ದಾರರು:

How can you promise him that? I think we must handcuff him. (ಅದು ಹ್ಯಾಗರಿ, ಮಾತು ಕೊಡುತ್ತೀರಿ? ಅವನಿಗೆ ಕೈಕೋಳ ಹಾಕಲೇಬೇಕೆಂದು ನನ್ನ ಎಣಿಕೆ) ಎಂದರು. ನಾನು ಅದೇ ಭಾಷೆಯಲ್ಲಿ

"For God's sake dont do anything foolish. It is hard enough as it is, dont make it any harder. He is a sort of uncrowned king here, dont you see? And if once roughness starts, where are we? And after all, he is an old man and a sick man at that. Are you afraid he will fight or run if not cuffed or chained? '(ಅವಿವೇಕ ಮಾಡಬೇಡಿ, ನಿಮ್ಮ ಧರ್ಮಕ್ಕೆ. ಮೊದಲೇ ಕಷ್ಟ—ಇನ್ನಿಷ್ಟು ಕಷ್ಟಮಾಡಿಕೊಳ್ಳಬೇಡಿ. ಅವನು ಇಲ್ಲಿ ಪಾಳ್ಯಗಾರ. ಕಾಣೋದಿಲ್ಲವೆ? ದೊಂಬಿ ಪ್ರಾರಂಭ ವಾದರೆ ನಮ್ಮ ಪಾಡೇನು? ಅಲ್ಲದೆ, ನೋಢಿ, ಅವ ಮುದುಕ, ಖಾಯಿಲೆ

ಬೇರೆ, ಕೈಗೆ ಕಾಲಿಗೆ ಬೇಡಿ ಹಾಕದಿದ್ದರೆ ಹೊಡೆದಾನು, ಓಡ್ಯಾನು, ಅಂತ ಹೆದರಿಕೆಯೇ ?)

ಹಾಸನದ ಪೋಲೀಸು ಸೂಪರ್ಇಂಟೆಂಡೆಂಟರು ನನ್ನ ಮಾತನ್ನು ಅನುಮೋದಿಸಿದರು. ಅವರು ಸಾಲಿಗ್ರಾಮದವರು, ದೇವರಸೇಗೌಡ ನನ್ನ ಚಿಕ್ಕಂದಿನಿಂದ ಬಲ್ಲವರು, ಮುಪ್ಪಿನಲ್ಲಿ ಅವನಿಗೆ ಬಂದಿರುವ ಕಷ್ಟಕ್ಕೆ ಸ್ವಾಭಾವಿಕವಾಗಿ ಮರುಕಗೊಂಡವರು.

ದೇವರಸೇಗೌಡ ಕೈಗಳನ್ನು ಜೋಡಿಸಿಕೊಂಡು—

"ನಿಮ್ಮ ಮಾತನ್ನು ನಂಬುತ್ತೇನೆ, ನನ್ನ ಒಡೆಯ, ನಿಮಗೂ ನನ್ನ ಹಂಗೇ ತಲೆನರೆತ ತಂದೆ ಇದ್ದಾರೆ, ನೀವೂ ಸಂಸಾರಿಗಳು, ಧರ್ಮ ಅಧರ್ಮ ನಿಮ್ಮದು, ನನ್ನ ಮಾನ ನಿಮ್ಮ ಕೈಲಿರಲಿ—" ಎಂದು, ಘಟ್ಟಿಯಾಗಿ "ಬರ್ರಿ, ಸೋಮಿಗಳಿರಾ, ಓಗೋಣ—ಎಲೋ ಲಚುಮಾ, ಎಲೋ ಪೂಜಾರಿ—ಈ ಊರಿಗೆ ಗ್ರಾಚಾರ ಚನ್ನಾಗಿಲ್ಲ. ಏನೇನೋ ಕೆಟ್ಟ ದೂರೆಲ್ಲ ಬಂದದೆ. !ಅದನ್ನೆಲ್ಲಾ ತಪ್ಪಿಸಿ, ನಾವೂ ಗ್ರಾಸ್ತರು ಅಂತ ತಲೇ ಎತ್ತಿಕೊಂಡು ಇರೋ ಹಂಗೆ ಮಾಡಿಕೋಬೇಕು" ಎಂದನು. ಅಷ್ಟುಹೊತ್ತಿಗೆ ಹಟ್ಟಿಬಾಗಿಲ ಬಳಿಗೆ ಜನಗಳ ಗುಂಪು ಬಂದು, ಒಳಕ್ಕೆ ಪ್ರವೇಶಮಾಡಲು ನೂಕು ನುಗ್ಗಲು ಮಾಡುತ್ತಿತ್ತು. ಗೌಡ ಕೈಗಳನ್ನು ಮೇಲಕ್ಕೆ ಎತ್ತಿ, ಘನವಾದ ಅನುಭಾವದಿಂದ—ನಾಯಕನು ಅನುಯಾಯಿಗಳಿಗೆ ಅಪ್ಪಣೆಮಾಡುವ ದರ್ಪದಿಂದ—

"ಗೌಡಗಳಿರ, ಮಕ್ಕಳಿರ—ನಾವು ಸರಕಾರದ ಮಕ್ಕಳು, ಸರಕಾರ ನಮ್ಮ ತಾಯಿ. ಈಗ ಬಿದರಕ್ಕದ ಗಲಾಟೇನಾಗೆ ಈ ಊರೋರು ಯಾರೋ ತುಂಟರು ಸೇರಿದ್ದರೆಂದು ಸುದ್ದಿ ಬಂದದಂತೆ. ಈ ಊರಿನ ಮಾನ ನನ್ನದು. ಊರು ಕೆಟ್ಟರೆ ನಾನು ಬದುಕಿ ಏನು ? ಮಾನ ಬಚಾಯಿಸೋಕೆ ಹೋಗ್ತೀನಿ. ನೀವು ಹೈಲಾಟಕ್ಕೆ ಶುರುಮಾಡಿ ತಲೆ ಮೇಲೆ ಮನೆ ಕೆಡವಿಕೋ ಬೇಡಿ. ನಮ್ಮ ದಣಿ ಸುಬೇದಾರರು ಧರ್ಮರಾಯ. ನಮಗೇನೂ ಅನ್ಯಾಯ ಮಾಡೋಲ್ಲ—ನಿಮ್ಮ ನಿಮ್ಮ ಮನೆಗಳಿಗೆ ಹೋಗಿ; ನನ್ನ ಮಕ್ಕಳು ಊರಿಗೆ ಬಂದರೆ ಅವರಿಗೂ ಇದೇ ಮಾತು ಹೇಳ್ದಿ ಅಂತ ಹೇಳಿ. ದೇವರು ದೊಡ್ಡವ"

ಹೀಗೆಂದು, ಯಾರೋ ಹೆಂಗಸರು ಒಳಗಿನಿಂದ ತಂದುಕೊಟ್ಟ ರುಮಾಲನ್ನು ತಲೆಗಿಟ್ಟುಕೊಂಡು ನಮ್ಮ ಸಂಗಡ

—ನಡೀರಿ ಬುದ್ಧಿ—.

ಅಂತ ಟ್ರಾವೆಲರ್ಸ್ ಬಂಗಲೆಗೆ ಬಂದ—ನಮ್ಮ ಹಿಂದೇ ನೂರಾರು ಜನದ ಗುಂಪು ಬಂತು. ಗೌಡ,

"ಎಲಾ ಮಗ, ಎಲೆಯಡಿಕೆ ಚೀಲ ತತ್ತಾರೆಲ ಮನೆಗೆ ಹೋಗಿ," ಅಂತ ಯಾರನ್ನೋ ಕಳಿಸಿ ತಾಂಬೂಲ ತರಿಸಿ ಹಾಕಿಕೊಳ್ಳುತ್ತಾ ಬಂಗಲೆ ವರಾಂಡಾದಲ್ಲಿ ನಾವು ಹಾಕಿಸಿದ ಒಂದು ಜಮಖಾನೆ ಮೇಲೆ ಕುಳಿತ. ಬಂಗಲೇ ಕಾಂಪೌಂಡಿನಲ್ಲಿ ಕೆರೆನೀರಿನ ಅಲೆಗಳಂತೆ ತಂಡತಂಡವಾಗಿ ವಿರಾಮವಿಲ್ಲದೆ ಬರುತ್ತಾ ಹೋಗುತ್ತಾ, ಇದ್ದ ಜನಗಳ ಚಲನೆ ಮತ್ತು ಸದ್ದು ತುಂಬಿದ್ದವು. ನಾನು ನಾರಾಯಣರಾಯರ ಸಂಗಡ ಮಾತ ನಾಡುತ್ತಿದ್ದೆ. ಗೌಡ ಭರವಸೆಯಾದ ಜಾಮೀನು ಕೊಟ್ಟರೆ ಬಾಂಡು ತೆಗೆದುಕೊಂಡು ಬಿಡಬಹುದೆಂದು ನಮ್ಮ ಅಭಿಪ್ರಾಯ. ಇದಕ್ಕೆ ಹೊಳೆ ನರಸಿಪುರದ ಅಮಲ್ದಾರರು ಒಪ್ಪಲಿಲ್ಲ. ಈ ಚರ್ಚೆ ನಡೆಯುತ್ತಿದ್ದ ಹಾಗೇ. ಸಾಲಿಗ್ರಾಮದ ಸ್ಟೇಷನ್ ಜಮಾದಾರರು—

"ನೋಡಿ ಮಹಸ್ವಾಮಿ, ಕಾಳೇಗೌಡ" ಅಂತ ಸನ್ನ ಕಿವಿಯಲ್ಲಿ ಹೇಳಿ ಕೈತೋರಿಸಿದರು. ನಾನು ತಿರುಗಿ ನೋಡುವಲ್ಲಿ ಕಾಳೇಗೌಡ —ದೇವರಸೇ ಗೌಡನ ಮಗ—ಇರಲಿಲ್ಲ. ಎಲ್ಲಿಯೋ ಗುಂಪಿನಲ್ಲಿ ಮರೆ ಯಾದನೆಂದು ಕಾಣುತ್ತೆ; ಅಂತೂ ನನ್ನ ಕಣ್ಣಿಗೆ ಬೀಳಲಿಲ್ಲ—

"ಈಗಿದ್ದ ಸ್ವಾಮಿ" ಎಂದರು ಜಮೇದಾರರು.

"ನೀವು ನೋಡಿದಿರಾ?" ಎಂದು ನಾರಾಯಣರಾಯರನ್ನು ಕೇಳಿದೆ. ಇಲ್ಲವೆಂದರು. ಹೊಳೆನರಸಿಪುರದ ಅಮಲ್ದಾರರಂತೂ ಗುಂಪಿನ ಕಡೆಗೆ ಬೆನ್ನುಮಾಡಿ ಕುಳಿತಿದ್ದರು. ಮುಂದೆ ನಡೆದ ಕೇಸಿನಲ್ಲಿ ಕಾಳೆಗೌಡನ ಬಚಾವು, ತಾನು ಕೃತ್ಯ ನಡೆಯುವುದಕ್ಕೆ ಹತ್ತು ದಿವಸದ ಮುಂಚೆ ಮೂಡಸೀಮೆಗೆ ಹೋದವನು, ಕೃತ್ಯ ನಡೆದ ಹದಿನೈದು ದಿನ ವಾದಮೇಲೆ ವಾಪಸು ಬಂದನೆಂದು; ಆದ್ದರಿಂದ ಅವನು ಅವರ ತಂದೆ ದಸ್ತಗಿರಿಯಾದ ದಿನ ಸಾಲಿಗ್ರಾಮದಲ್ಲಿದ್ದನೆಂಬುದು ಬಹಳ ಐನಾತಿ

ಪಾಯಿಂಟಾಗಿ, ಮುಂದೆ ವಿಚಾರಣೆ ಕಾಲದಲ್ಲಿ ಜಿಜ್ಞಾಸೆಗೆ ಬಂತು. ಅವೊತ್ತಿನ ಸ್ಟೇಷನ್ ಡೈರಿಯಲ್ಲಿ ಜಮಾದಾರರು—"ಕಾಳೆಗೌಡ ಬಂಗಲೆಗೆ ಬಂದಿದ್ದ; ನಾನು ಅವನನ್ನು ಅಮಲ್ದಾರ್ ಸಾಹೇಬರಿಗೆ ತೋರಿಸಿದೆ" ಎಂದು ಬರೆದಿದ್ದರು. ಅಮಲ್ದಾರರು ತಿರುಗಿ ನೋಡುವುದರೊಳಗಾಗಿ ಅವನು ಕಣ್ಮರೆಯಾಗಿದ್ದನೆಂಬುದನ್ನು ಮಾತ್ರ ಬರೆಯಲಿಲ್ಲ. ಇದನ್ನು ಬರೆಯದೆ ಬಿಟ್ಟದ್ದು ಪ್ರಮಾದದಿಂದಲೋ, ಉದ್ದೇಶದಿಂದಲೋ, ನನಗೆ ತಿಳಿಯದು. ಅಂತೂ ಕೇಸು ವಿಚಾರಣೆಯಾಗುವಾಗ, ನಾನು ಕಾಳೆಗೌಡನನ್ನು ನೋಡಿದೆನೆಂದು ಹೇಳಬೇಕೆಂದು ಸಲಹೆ ಸ್ವಲ್ಪ ಪ್ರಬಲವಾದ ಕಡೆಯಿಂದಲೇ ಬಂತು. ನಾನು ಒಪ್ಪದಿದ್ದರಿಂದ ನನಗೂ ನನ್ನ ಒಬ್ಬ ಸ್ನೇಹಿತರಿಗೂ ಕೆಲವು ಕಾಲ ಮನಸ್ತಾಪವೂ ಸಂಭವಿಸಿತು.

ಈ ಕೇಸಿನ ಮುಂದಿನ ವಿಚಾರಣೆಯಲ್ಲಿ ನಾನು ಪ್ರವೇಶಿಸಲಿಲ್ಲ. ಅದುವರಿಗೆ ವಹಿಸಿದ ಭಾಗಕ್ಕೇ ಹಾಸನ ಡಿಸ್ಟ್ರಿಕ್ಟಿನ ಸಂಬಂಧಪಟ್ಟ ಅಧಿಕಾರಿಗಳು ಖೇದಿತರಾದಂತೆ ನಮ್ಮ ಡೆಪ್ಯುಟಿ ಕಮಿಷನರವರ ಸೂಕ್ಷ್ಮ ಸಲಹೆಯಿಂದ ತಿಳಿದೆ. ಈ ಕೇಸಿನ ಪ್ರಥಮ ಕೋರ್ಟು ವಿಚಾರಣೆ (preliminary enquiries) ಯನ್ನು ಹಾಸನ ಡೆಪ್ಯುಟಿ ಕಮಿಷನರ್ ಜಿಲ್ಲಾ ಮ್ಯಾಜಿಸ್ಟ್ರೇಟರಾಗಿದ್ದ ಶ್ರೀಯುತ ಕೆ. ಆರ್. ಶ್ರೀನಿವಾಸಯ್ಯಂಗಾರರೇ ಮಾಡಿ ಸೆಷನ್ಸಿಗೆ ಕೇಸನ್ನು ಕಮ್ಮಿಟ್ ಮಾಡಿದರು. ವಿಮರ್ಶೆ ಮಾಡಿದ ಸೆಷನ್ ಜಡ್ಜರು ದಿವಂಗತ ಟಿ. ಪರಮಶಿವಯ್ಯರವರು. ಉಭಯ ಕೋರ್ಟುಗಳಿಗೂ ನಾನು ಸಾಕ್ಷ್ಯ ನುಡಿಯಲು ಹೋದೆ. ಹೊಳೆನರಸೀಪುರ ಮಾರ್ಗವಾಗಿ ರಸ್ತೆಯಲ್ಲಿ ಎತ್ತಿನಗಾಡಿಯಲ್ಲಿ ಹಾಸನಕ್ಕೆ ಹೋದೆ. ಆ ದಾರಿಯನ್ನೂ, ಅದೇ ಮೊದಲು ನಾನು ನೋಡಿದ್ದು. ಆ ಪ್ರಯಾಣ, ಆ ಮೊಕ್ಕಾಂ, ಅಲ್ಲಿನ ಹಳೇ ಸ್ನೇಹಿತರ ಭೇಟಿ, ಹೊಸ ಪರಿಚಯಗಳು ಬಹಳ ಆನಂದದಾಯಕವಾಗಿದ್ದವು. ಹಾಸನದಲ್ಲಿ ನನ್ನ ಮದರಾಸು ಕಾಲೇಜು ಕಾಲದ ಮಿತ್ರರು ಪ್ರಸಿದ್ಧ ಅಡ್ವೋಕೇಟರಾದ ಸಕಲೇಶಪುರದ ವೆಂಕಟೇಶಯ್ಯನವರ ಸಹವಾಸ ದೊರಕಿತು. ಡೆಪ್ಯುಟಿ ಕಮಿಷನರ್ ಕೆ. ಆರ್. ಶ್ರೀನಿವಾಸಯ್ಯಂಗಾರರವರ ಪ್ರಥಮ ಭೇಟಿಯೂ ಆ ಸಂದರ್ಭದಲ್ಲೇ ಲಭಿಸಿತು. ಅವರು ಬಹಳ ಮೇಧಾವಿಗಳು,

ಕಮಿಷನ್ ಕಾಲದ ದರ್ಪದಿಂದ ಡಿಸ್ಟ್ರಿಕ್ಟನ್ನು ಆಳುತ್ತಾರೆ, ಕೆಲಸದಲ್ಲಿ ಬಹಳ ನಿಪುಣರೆಂದು ಅವರಲ್ಲಿ ಕೆಲಸಮಾಡಿ ಕಲಿತ ನನ್ನ ಪ್ರಿಯ ಸ್ನೇಹಿತರೊಬ್ಬರು ಹೇಳಿದ್ದರು. ಅವರನ್ನು ನೋಡಬೇಕೆಂದು ನನಗೆ ಕುತೂಹಲವಿತ್ತು. ಕೋರ್ಟಿನಲ್ಲಿ ನೋಡುವುದಕ್ಕೆ ಮುಂಚೆ ಅವರನ್ನು ಕ್ಲಬ್ಬಿನಲ್ಲಿ ಪರಿಚಯ ಮಾಡಿಕೊಂಡೆ. ತಮ್ಮ ಜಿಲ್ಲೆಯ ಕೇಸಿನಲ್ಲಿ ಕೈಹಾಕಿದೆನೆಂದು ಅವರಿಗೆ ಆಗ ನನ್ನಲ್ಲಿ ಸ್ವಲ್ಪ ಅಸಮಾಧಾನವಿದ್ದಿರಬಹುದು. ನನ್ನ ಆಗಿನ ಅಂದಾಜಿನಲ್ಲಿ, ಬುದ್ಧಿವಂತರೇನೋ ಹೌದು, ಆದರೆ ನನಗಿಂತಲೂ ಹೆಚ್ಚು ಬುದ್ಧಿವಂತರಲ್ಲವೆಂದು, ನನಗೆ ತೋರಿತು; ದರ್ಪವೆಂದರೆ, ಯೌವನ, ಪದವಿ ಉತ್ತರೋತ್ತರಾಭಿವೃದ್ಧಿಯ ಸಿದ್ಧತೆ ಎಲ್ಲವೂ ಒದಗಿರುವಾಗ ಯಾಕೆ ದರ್ಪವಿರಬಾರದು? ಅಮಲ್ದಾರ ಮಾತ್ರನಾದ ನನಗೇ ಎಷ್ಟು ಅಹಂಕಾರವಿದೆ ಎಂಬುದು ನನಗೆ ತಿಳಿದಿತ್ತು. ಉತ್ತರೋತ್ತರ ನೌಕರಿ ಸಂಸ್ಕೃತಿಯಲ್ಲಿ ನನಗೂ ಶ್ರೀನಿವಾಸಯ್ಯಂಗಾರರವರಿಗೂ ಪದೇಪದೇ ಸಂಸೃಷ್ಟಿಗೆ ಅವಕಾಶಗಳು ಸಂಭವಿಸಿದವು. ನಾನು ಸುಮಾರು ನಲ್ವತ್ತು ವರುಷಗಳು ಅವರ ತಾಬೆಯಲ್ಲಿ, ಸಹಕಾರದಲ್ಲಿ, ಸಮತೆಯಲ್ಲಿ ಕೆಲಸಮಾಡಿ, ಅವರ ಗುಣವತೆಯನ್ನು ಕ್ರಮೇಣ ಅರಿತು, ಅವರ ಸ್ನೇಹವನ್ನೂ ಬಯಸಿ, ಪಡೆದೆ. ಈಗ ನನ್ನ ಜೀವನದ ಸಂಜೆಯಲ್ಲಿ ಅವರ ಮೈತ್ರಿ ನನಗಿದೆ ಎಂಬುದು ನನ್ನ ಹೆಮ್ಮೆ.

ಸರಿ, ಕೇಸು ನಡೆದು ಕೆಲವರಿಗೆ ಶಿಕ್ಷೆಯಾಯಿತು. ಯಾರಿಗಾದರೂ ಫಾಸಿಯಾಯಿತೋ ಇಲ್ಲವೊ, ಜ್ಞಾಪಕವಿಲ್ಲ—ಕೆಲವರಿಗೆ ಖುಲಾಸೆಯಾಯಿತು. ಹೀಗೆ ಖುಲಾಸೆಯಾದವರಲ್ಲಿ ದೇವರಸೇಗೌಡ, ಅವನ ಮಗ ಕಾಳೆಗೌಡ ಇದ್ದರು. ನಾನು ದುಡುಕಿ ದೇವರಸೇಗೌಡನನ್ನೂ, ಇನ್ನೂ ನಿರಪರಾಧಿಗಳಾದ ಕೆಲವರನ್ನೂ ಅನವಶ್ಯಕವಾಗಿ ಹಿಡಿದು, ಹಾಸನದವರ ತನಿಖೆಗೆ ತೊಡಕುಗಳನ್ನುಂಟುಮಾಡಿದನೆಂಬ ಭಾವನೆಯನ್ನು ಹುಟ್ಟಿಸುವುದಕ್ಕೆ ಪ್ರಾಸಿಕ್ಯೂಷನ್ ಯತ್ನಮಾಡಿದರೆಂದು ಕಾಣುತ್ತದೆ. ಸೆಷನ್ ಜಡ್ಜಿಯವರು—ತಕ್ಸೀರು ನಡೆದ ಮೂರು ನಾಲ್ಕು ದಿನಗಳಾದರೂ ಯಡತೊರೆ ಅಮಲ್ದಾರರು ಗಲಾಟೆ ಪ್ರಾರಂಭಿಸುವವರಿಗೂ ಯಾರೂ ಏನೂ ಮಾಡಲಿಲ್ಲ; ದುಡುಂಪ್ರವೇಶ ದೊಡ್ಡತಪ್ಪೇ? ಅಥವ

ಭಾರಿ ತರ್ಕ್ಸೀರು ನಡೆದರೂ ಜಡನಿದ್ರೆ ದೊಡ್ಡ ತಪ್ಪೆ? — ಎಂದು ಟೀಕಿಸಿದರು. ಆದರೂ ಜಡ್ಜ್‌ಮೆಂಟಿನಲ್ಲಿ—

Mr. N. Rama Rao, the highly intelligent and energetic Amildar of Yedatore, has the tactless impetuosity of youth, and precipitated matters —

(ಇದು ನನಗೆ ಜ್ಞಾಪಕವಿರುವಮಟ್ಟಿಗೆ ಸರಿಯಾಗಿದೆ; ನನ್ನನ್ನು ತಾರೀಫ್ ಮಾಡುವ ಪದಗಳನ್ನು ನಾನು ಮರೆತಿಲ್ಲ, ನನ್ನ ಖಂಡನೆಯನ್ನು ತೀಲಿಸಿದ್ದೇನೋ, ಏನೋ. ಇದರ ಅರ್ಥ: "ಮೇಧಾವಿಗಳೂ ಶಕ್ತರೂ ಆದ ಯಡತೊರೆ ಅಮಲ್ದಾರರು ಎನ್. ರಾಮರಾಯರು ಯೌವನದ ಅಲೌಕಿಕ ರಭಸದಿಂದ ದುಡುಕಿದ್ದಾರೆ")

ಈ ಟೀಕೆಯು ನನ್ನ explanation ಗಾಗಿ (ಅಂದರೆ ಸಮಾಧಾನವಾದಕ್ಕಾಗಿ) ನನಗೆ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರ ದ್ವಾರ ಬಂತು. ನಾನು—ಏನು "explanation ಕೊಡಬೇಕೆಂಬುದು ಗೊತ್ತಾಗುವುದಿಲ್ಲ." (1) "ಯೌವನ"—ಉಂಟು, ಆದರೆ ಅದಕ್ಕೆ ನನ್ನ ಜವಾಬ್ದಾರಿಯಲ್ಲ. (2) "ಬುದ್ಧಿ" "ಶಕ್ತಿ"—ಇವುಗಳಿದ್ದರೆ ದೇವರ ಕೃಪೆ; ಇವೆ ಎಂಬ ಆಪಾದನೆಗೆ ನನ್ನ ಕೃತಜ್ಞತೆಯೇ ಹೊರತು, ಉದಾಹರಣೆ ಇಲ್ಲ. (3) "ರಭಸ" "ದುಡುಕು". ಘನವುಳ್ಳ ಜಡ್ಜಿಯವರು ನಾನು ಈ ಕೇಸಿನಲ್ಲಿ ಪ್ರವರ್ತಿಸಿದಮೇಲೆ ಇದರ ತನಿಖೆ ಪ್ರಾರಂಭವಾಯಿತೆಂದು ಟೀಕಿಸಿದ್ದಾರೆ. ಸ್ಥಾವರವಾದದ್ದನ್ನು ಜರುಗಿಸಬೇಕಾದರೆ ಸ್ವಲ್ಪ ರಭಸವನ್ನು ಪ್ರಯೋಗಿಸಲೇಬೇಕಾಗುತ್ತೆಂಬುದು ನನ್ನ ಅನುಭವ. ತಪ್ಪಿದ್ದರೆ ಕ್ಷಮಾಪಣೆಯನ್ನು ಬೇಡುತ್ತೇನೆ" ಎಂದು ಬರೆದೆ. ಈ ಬರವಣಿಗೆ ಉಚಿತ ಕಾಲದಲ್ಲಿ ಜಡ್ಜಿ ಪರಮಶಿವಯ್ಯನವರಿಗೆ ತಲಪಿತು. ಅವರೂ ನಾನೂ ಮೈಸೂರು ಕಾಸ್ಮಾಪಾಲಿಟನ್ ಕ್ಲಬ್ ಸದಸ್ಯರು. ಒಂದು ದಿವಸ ನಾನು ಆ ಕ್ಲಬ್ಬಿನಲ್ಲಿ ಇಸ್ಪೆಟ್ಟು ಆಡುತ್ತ ಕೂತಿದ್ದಾಗ, ಅವರು ಬಂದು ನನ್ನ ಬೆನ್ನು ತಟ್ಟಿ, ನಗುತ್ತಾ—

"ಶಾಬಾಸ್, ಈಗಲೂ ನಿನ್ನಂಥ ಹುಡುಗರಿದ್ದಾರಲ್ಲ! ನಮ್ಮ ತಲೆಗೇ ಇಂಥ ಅಧಿಕ ಪ್ರಸಂಗಿಗಳ ಸೃಷ್ಟಿ ಮುಗಿಯಿತು ಅಂತ ಇದ್ದೆ.

ನನ್ನ ಶಾಭಾಸುಗಿರಿಗೆ ನಿನ್ನ ಥ್ಯಾನ್ ಕ್ಸ್ ಬಂತು. ನಿನ್ನ ಥ್ಯಾನ್ ಕ್ಸ್‌ಗೆ ನನ್ನ ಥ್ಯಾನ್ ಕ್ಸೋ? " ಎಂದರು.

೨೫

ನನಗೆ ಯಡತೊರೆಯಿಂದ ತಿರಮುಕೂಡ್ಲು ನರಸಿಪುರಕ್ಕೆ ವರ್ಗವಾಯಿತು. ಈ ವರ್ಗದ ಸಮಾಚಾರ ತಿಳಿದ ಕೂಡಲೆ ಯಡತೊರೆ ತಾಲ್ಲೂಕು ಅಮುಳೆ ಎಲ್ಲ ಬಗೆಯ ಜನಗಳು ವ್ಯಕ್ತಪಡಿಸಿದ ಪ್ರೇಮ, ಮೆಚ್ಚುಗೆ, ನಾನು ಹೊರಟುಹೋಗುತ್ತೇನಲ್ಲ ಎಂದು ತೋರಿಸಿದ ಅಗಲಿಕೆಯ ವ್ಯಸನ ನನಗೆ ಸಂತೋಷವನ್ನೂ ಒಂದು ಬಗೆಯ ಆಶ್ಚರ್ಯವನ್ನೂ ಉಂಟುಮಾಡಿದವು. ಅದರಲ್ಲೂ ಬಡವರು, ಗ್ರಾಮದ ರೈತಾಪಿ ಜನಗಳು ನನ್ನಲ್ಲಿ ತೋರಿಸಿದ ನಿಜವಾದ ಪ್ರೀತಿ ನನ್ನನ್ನು ವಿಸ್ಮಯಗೊಳಿಸಿ, ನಾನು ಮಾತನಾಡಬೇಕೆಂದು ಬಯಸಿದಾಗಲೂ ನನ್ನ ಬಾಯಿಯನ್ನು ಕಟ್ಟಿ, ನನ್ನ ಅಂತಃಕರಣವನ್ನು ಕರಗಿಸಿತು ನಾನು ನನ್ನ ಮನಸ್ಸಿನಲ್ಲೇ–ನಾನು ಇಷ್ಟು, ಪ್ರೇಮಕ್ಕೂ ಗೌರವಕ್ಕೂ ನಿಜವಾಗೂ ಅರ್ಹನೇ? ನಾನು ಯಾರೂ ಮಾಡದ ದೊಡ್ಡ ಕೆಲಸವನ್ನೇನು ಮಾಡಿದ್ದು ? ನನ್ನ ಅಧಿಕಾರತಾನೆ ಎಷ್ಟರದು? ನಾನು ಅದನ್ನು ಹುಟ್ಟಿಸುತ್ತಾ ತಂದೆನೆ? ನಾನು ಯಾರನ್ನ ಉದ್ಧಾರ ಮಾಡಿದೆ? ದೇವರ ಕೃಪೆಯಿಂದ ನನಗೆ ತಿಳಿದಮಟ್ಟಿಗೆ ಯಾರಿಗೂ ಅನ್ಯಾಯಮಾಡಲಿಲ್ಲ; ಅಷ್ಟೆ. ಇದೂ ಅಹಂಕಾರದ ಮಾತೆ! ಒಳ್ಳೇದೇ ಆಗಲಿ ಕೆಟ್ಟದೇ ಆಗಲಿ ಮಾಡಲಿಕ್ಕೆ ನಾನು ಕರ್ತನೆ?—

ಹೀಗೆಂದುಕೊಂಡು, ಈ ಜನಗಳ ವಂದನೆ, ಪ್ರೇಮ ಕಾಣಿಕೆ, ಇವುಗಳು ಜಗದೀಶ್ವರನಿಗೆ ಸಲ್ಲತಕ್ಕದ್ದೆಂದು ದೈನ್ಯದಿಂದ ಭಾವಿಸಿದೆ. ನಮ್ಮ ಜನ ಎಷ್ಟು ಒಳ್ಳೆಯವರು, ಸ್ವಲ್ಪ ಉಪಕಾರ, ಸ್ವಲ್ಪ ಮಮತೆ, ಸ್ವಲ್ಪ ಒಳ್ಳೆಯಮಾತನ್ನು, ಎಷ್ಟು ದೊಡ್ಡದೆಂದು ಭಾವಿಸಿ ಎಷ್ಟು ಉದಾರವಾದ ಪ್ರೀತಿ ಕೃತಜ್ಞತೆಗಳನ್ನು ಪ್ರತಿಯಾಗಿ ಕೊಡುತ್ತಾರೆ, ಎಂದು ಹಿಗ್ಗಿದೆ.

ಆಗಿನ ಸಂದರ್ಭದಲ್ಲಿನ ಒಂದು ಸಂಗತಿ ನನ್ನ ಹೃದಯವನ್ನು

ತೀವ್ರವಾಗಿ ತಟ್ಟಿ ಆದರಲ್ಲಿ ಅಳಿಸಿ ಹೋಗದ ಅಂಕನವನ್ನು ಮಾಡಿತು. ನಾನು ಯಡತೊರೆಯನ್ನು ಬಿಡುವ ಒಂದೆರಡು ದಿನಗಳ ಮುಂಚೆ ಮನೆಯಲ್ಲಿ ಸಾಮಾನುಗಳನ್ನು ಪ್ರಯಾಣಕ್ಕಾಗಿ ಪ್ಯಾಕು ಮಾಡುತ್ತಿರುವಾಗ ಪಟೇಲ ದೇವರಸೇಗೌಡರು ನನ್ನನ್ನು ನೋಡಲು ಬಂದಿದ್ದಾರೆಂದು ನನ್ನ ವಾಲೇಕಾರನೊಬ್ಬನು ತಿಳಿಸಿದ. ನಾನು ದೇವರಸೇಗೌಡನನ್ನು ಬಿದರಕ್ಕದ ಮೊಕದ್ದಮೆಯಾದಾಗಿನಿಂದ ನೋಡಿರಲಿಲ್ಲ. ಅವನು ಒಂದುವೇಳೆ ತಕ್ಸೀರುದಾರನಲ್ಲವೆಂದು ನಂಬಿದರೂ ತಕ್ಸೀರು ನಡೆದದ್ದು ಅವನಿಗೆ ತಿಳಿದೇ ಇದ್ದಿರಬೇಕು; ಅದನ್ನು ರಿಪೋರ್ಟು ಮಾಡುವುದು ಅವನ ಕರ್ತವ್ಯವಾಗಿತ್ತು; ಊಹಿಸಲು ಸುಲಭವಾದ ಉದ್ದೇಶದಿಂದ ರಿಪೋರ್ಟು ಮಾಡದೆ ಇದ್ದ— ಎಂಬ ಕಾರಣದಿಂದ ಅವನನ್ನು ಪಟೇಲಿ ಕೆಲಸದಿಂದ ವಜಾಮಾಡಿಸಿದ್ದೆ. ಇವನು ನನ್ನನ್ನು ನೋಡಲಿಕ್ಕೆ ಬಂದನೆಂದರೆ, ನಾನು ಹೊರಟು ಹೋಗುತ್ತೇನೆಂಬ ಧೈರ್ಯದಮೇಲೆ ಇದೇ ಸಮಯವೆಂದು, ಬೈದಾದರೂ ತನ್ನ ಸೇಡು ತೀರಿಸಿಕೊಳ್ಳುವುದಕ್ಕೆ ಬಂದಿರಬಹುದೆಂದು ತೋರಿತು. ಆದರೂ, ಭೇಟಿಗಾಗಿ ನನ್ನ ಮನೆಗೆ ಬಂದ ಮುದುಕನನ್ನು, ನೋಡಲಿಕ್ಕಾಗುವುದಿಲ್ಲ ಹೋಗೆಂದು ಭಂಗಪಡಿಸಿ ಕಳುಹಿಸುವುದು ನನಗೆ ಒಪ್ಪಲಿಲ್ಲ. ನನ್ನ ಬೈಠಕ್ಕು ಕೋಣೆಗೆ ಹೋಗಿ, ಆತನನ್ನು ಕರೆಸಿಕೊಂಡೆ. ಆತ ಒಳಕ್ಕೆ ಬಂದು ನನಗೆ ನೆಲಮುಟ್ಟಿ ನಮಸ್ಕಾರ ಮಾಡಿ, ಕೈಕಟ್ಟಿಕೊಂಡು ಎದುರಿಗೆ ನಿಂತ. ಆತನನ್ನು ನೋಡಿದ ಕೂಡಲೆ ನನ್ನ ಹೃದಯ ಕರುಣದಿಂದ ಕರಗಿಹೋಯಿತು. ಕಳೆದ ಮೂರು ನಾಲ್ಕು ತಿಂಗಳುಗಳಲ್ಲಿ ಅವನು ಪುಷ್ಟಿಯಾದ ನಡು ಪ್ರಾಯದಿಂದ ತೀರ ಮುಪ್ಪಿಗೆ ಧುಮ್ಮಿಕ್ಕಿಬಿಟ್ಟಿದ್ದ. ನಮ್ಮ ತೀರ್ಥರೂಪರ ಸಮ ವಯಸ್ಸಿನ ಮನುಷ್ಯ; ಕಷ್ಟಕ್ಕೆ ಸಿಕ್ಕಿ ಬಳಲಿ ಬೆಂಡಾಗಿದ್ದ ಆತ ನನಗೆ ನಮಸ್ಕಾರ ಮಾಡಿದ್ದು ನನಗೆ ನೋಯಿಸಿತು. ನಾನು ಆತನ ಕೈಯನ್ನು ಹಿಡಿದು ಅಲ್ಲಿದ್ದ ಕುರ್ಚಿಯ ಮೇಲೆ ಬಲವಂತವಾಗಿ ಕೂಡಿಸಿ

"ಏನ್ರಿ ಗೌಡರೆ, ಬಂದದ್ದು ?" ಎಂದೆ. ಸ್ವಲ್ಪ ಹೊತ್ತು ಸುಮ್ಮನಿದ್ದು, ಗಂಟಲನ್ನು ಸರಿಮಾಡಿಕೊಂಡ—

"ತಾವು ಇಲ್ಲಿಂದ ಬಿಜಮಾಡ್ತೀರಿ. ನಾನು ಇನ್ನು ಬಾಳ ದಿನ

ದ್ದೋನಲ್ಲ, ಹಣ್ಣಾಗಿವನಿ, ತಿರುಗ ನಿಮ್ಮನ್ನ ನೋಡೋದೆಲ್ಲೋ— ನಮ್ಮಪ್ಪನ್ನ ನೋಡಿ, ಸುಕವಾಗಿ ಬಾಳಿ ನನ್ನ ಒಡೆಯ ಅಂತ ಹೇಳಿ ಆಶೀರ್ವಾದ ಪಡೆದು ಹೋಗೋಣ ಅಂತ ಬಂದೆ" ಅಂದ.

"ಗೌಡರೆ, ನೀವು ಬಹಳ ದೊಡ್ಡೋರು, ನಿಮ್ಮ ದೊಡ್ಡ ಮಾತು ನನ್ನನ್ನ ಬಹಳ ಚಿಕ್ಕವನನ್ನು ಮಾಡಿಬಿಟ್ಟಿದೆ. ನಾನು ನಿಮಗೆ ಏನು ಉಪಕಾರ ಮಾಡಿದ್ದೇನೆ? ನನಗೆ ನಿಜವಾಗೂ ನಿಮ್ಮನ್ನ ಕಂಡರೆ ಅನೇಕ ವಿಚಾರದಲ್ಲಿ ವಿಶ್ವಾಸ, ಮೆಚ್ಚಿಕೆ—ಆದರೂ ಗ್ರಹಚಾರವಶಾತ್ತು ನಿಮ್ಮಲ್ಲಿ ಕಠಿಣವಾಗೇ ನಡೆಯಬೇಕಾಯಿತು ಏನು ಮಾಡೋದು? ದೇವರು ನಿಮ್ಮನ್ನು ಕಷ್ಟದಿಂದ ಪಾರುಮಾಡಿದ; ಅದು ನನಗೆ ನಿಜವಾಗೂ ಸಂತೋಷ"

"ನಮ್ಮ ಗ್ರಹಚಾರಕ್ಕೆ ನೀವೇನು ಮಾಡೀರಿ? ಆದರೆ ನೀವು (ಆತ ಆಡಿದ ಮಾತನ್ನು ಹೇಳಿದರೂ ಆತ್ಮಸ್ತುತಿಯಾಗುತ್ತದೆ.) ದೇವರು ನಿಮ್ಮನ್ನ ನಿಮ್ಮ ಹೆಂಡರು ಮಕ್ಕಳನ್ನ ಸುಖವಾಗಿಡಲಿ. ನಾನು ವೀಳ್ಯ ತಂದಿದ್ದೇನೆ, ನಿಮ್ಮ ಅಪ್ಪಣೆಯಾದರೆ ಕೊಡುತ್ತೇನೆ, ಒಪ್ಪಿಸಿಕೋಬೇಕು—ಎಲಾ, ತನ್ನಿರೆಲಾ" ಅಂದ

ಅವನ ಮಗ ಒಂದು ದೊಡ್ಡ ತಟ್ಟೆಯಲ್ಲಿ ಬಾಳೆಹಣ್ಣು, ವೀಳ್ಯದೆಲೆ ಅಡಿಕೆ, ತೆಂಗಿನಕಾಯಿ, ಒಂದು ಬುಟ್ಟಿಯಲ್ಲಿ ಹೂವಿನಹಾರ, ಇವುಗಳನ್ನು ತಂದು ಮೇಜಿನ ಮೇಲಿಟ್ಟು, ನಮಸ್ಕಾರ ಮಾಡಿದ. ನಾನು ಅವುಗಳನ್ನು ತೆಗೆದುಕೊಂಡು, ಹೆಚ್ಚು ಮಾತನಾಡುವುದಕ್ಕೂ ಶಕ್ತಿ ಇಲ್ಲದೆ ಅವರುಗಳನ್ನು ಕಳುಹಿಸಿಕೊಟ್ಟೆ.

ಯಡತೊರೆಯಲ್ಲಿ ನಾನು ಇದ್ದ ಎರಡೂವರೆ ವರ್ಷಗಳು ನನ್ನ ಜೀವನದ ಕುಸುಮಾಕರ ಕಾಲಕ್ಕೆ ಸೇರಿದವೆಂದು ಈಗ ನನಗೆ ಚನ್ನಾಗಿ ಮಂದಟ್ಟಾಗಿದೆ. ಆ ಕಾಲದಲ್ಲಿ ನಾನು ಹೃದಯಭೇದಕವಿಯೋಗಗಳನ್ನಾಗಲಿ, ಬಾಳನ್ನೇ ನಿರರ್ಥಕಮಾಡುವ ವ್ಯಸನಗಳನ್ನಾಗಲಿ ಅನುಭವಿಸಿರಲಿಲ್ಲ. (ಈಚೆಗೂ ದೇವರ ಕೃಪೆಯಿಂದ ನನ್ನ ಜೀವನವು ಎಲ್ಲರ ಜೀವನದಂತೆಯೇ ಬೇವು ಬೆಲ್ಲ ಬೆರತದ್ದಾಗಿದೆ; ಆದರೆ ಆ ಅಂಕದಲ್ಲಿ ಸಿಹಿಯೇ ಪ್ರಾಧಾನ್ಯವಾದ ರಸವಾಗಿತ್ತು. ಈಗಲೂ,

ಜೀವನದ ಇರುಳಿನಲ್ಲಿ ಯಡತೊರೆ ತಿರುಮಕೂಡ್ಲು ನರಸಿಪುರದ ನೆನಪು ಮನಸ್ಸಿಗೆ ವಸಂತದ ತೋಟದಂತೆ, ಸುಗ್ಗಿಯ ಬೆಳುದಿಂಗಳಂತೆ ಒಂದು ಹೇಳಲಾಗದ ಶಾಂತ ಸಂತೋಷವನ್ನು ತರುತ್ತದೆ.)

೨೬

ನಾನು ಯಡತೊರೆ ಛಾರ್ಜಿನಿಂದ ಬಿಡುಗಡೆಯಾದ ಮೇಲೆ ಮೈಸೂರಿನಲ್ಲಿ ನಮ್ಮ ತೀರ್ಥರೂಪರ ಸನ್ನಿಧಿಯಲ್ಲಿ ಜಾಯನಿಂಗ್ ಟೈಂ (ಒಂದು ಛಾರ್ಜಿನಿಂದ ಇನ್ನೊಂದು ಛಾರ್ಜಿಗೆ ವರ್ಗವಾಗುವ ನಡುವಿನ ಅವಕಾಶ) ವಿನಿಯೋಗಿಸಿ, ನಂತರ ನಂಜನಗೂಡು ಮಾರ್ಗವಾಗಿ ಟಿ. ನರಸಿಪುರಕ್ಕೆ ಪ್ರಯಾಣಮಾಡಿದೆ. ನಂಜನಗೂಡಿನಲ್ಲಿ ಶ್ರೀ ನಂಜುಂಡೇಶ್ವರಸ್ವಾಮಿಯ ದರ್ಶನ, ಸೇವೆಯನ್ನು ಮಾಡಬೇಕೆಂಬುದು ನಮ್ಮ ಮುಖ್ಯ ಉದ್ದೇಶ; ಅದು ನಮ್ಮ ಸಬ್‌ಡಿವಿಜ಼ರ್ ಆಫಿಸರ್ ವೈದ್ಯ ನಾಥಯ್ಯರವರ ಹೆಡ್‌ಕ್ವಾರ್ಟರ್ಸ್. ಹೊಸ ತಾಲ್ಲೂಕಿನ ಛಾರ್ಜು ತೆಗೆದು ಕೊಳ್ಳುವದಕ್ಕೆ ಮುನ್ನ ತಮ್ಮನ್ನು ನೊಡಬೇಕೆಂದು ಅವರು ಅಪೇಕ್ಷಿಸಿದ್ದರು ಬೇರೆ. ನಾನು ಸಂಸಾರ ಸಮೇತ ನಂಜನಗೂಡು ಅಮಲ್ದಾರರಾದ ನನ್ನ ಮಿತ್ರರು ಎಸ್. ಧರ್ಮರಾಯರ ಅತಿಥಿಯಾಗಿದ್ದೆ. ನಮ್ಮ ಸ॥ ಡಿ॥ ಆ॥ನ್ನು ನೋಡುವುದಕ್ಕೆ ಹೋದೆ ಅವರು ಪ್ರಸಿದ್ಧ ದಿವಾನ್ ಸರ್. ಕೆ. ಶೇಷಾದ್ರಯ್ಯರವರ ಮೈದುನರು. ಆ ಅನುಬಂಧದ ಬಲದ ಮೇಲೇ ನೌಕರಿಯಲ್ಲಿ ಏರಿ ಸೀನಿಯರ್ ಅಸಿಸ್ಟೆಂಟು ಕಮಿಷನರಾಗಿ, ನಂಜನಗೂಡು ಸ॥ ಡಿ॥ ಛಾರ್ಜಿಗೆ ಬಂದಿದ್ದರು. ನಾನು ಅವರನ್ನು ಮೈಸೂರಿಗೆ ಮೀಟಿಂಗುಗಳಿಗೆ ಹೋದಾಗ ಒಂದೆರಡು ಸಲ ನೋಡಿದ್ದೆ, ಆದರೆ ಅವರ ಪರಿಚಯಕ್ಕೆ ಯತ್ನಮಾಡಿರಲಿಲ್ಲ ಅವರು ಐವತ್ತು ಮೂರು ಐವತ್ತುನಾಲ್ಕು ವರುಷಗಳ ಹಳೆಯ ಸಂಪ್ರದಾಯದ ಅಯ್ಯರು. ಹಳೆಯ ಸಂಪ್ರದಾಯದ ಅಧಿಕಾರಿಗಳು. ಬಹಳ ನಿಷ್ಠರು. ಸ್ನಾನ, ಸಂಧ್ಯಾವಂದನೆ, ಪಾರಾಯಣ, ಜಪ ಇವುಗಳಲ್ಲಿ ನಿತ್ಯವೂ ಪ್ರಾತಃಕಾಲದ ಬಹುಭಾಗವನ್ನು ವಿನಿಯೋಗಿಸುತ್ತಿದ್ದವರು. ಶಾಕ್ತೇಯರೆಂದು ತಿಳಿದಿದ್ದೆ. ಸರಕಾರಿ ಕೆಲಸದಲ್ಲಿ ಅಷ್ಟು ಶಕ್ತರಲ್ಲ. ಸುಲಭವಾಗಿ ಇತರರ

ಪ್ರಭಾವಕ್ಕೆ ಸೋತು ಇತರರ ಸಲಹೆಗಳಂತೆ ನಡೆಯುವವರು. ಇವರ ಆಫೀಸಿನಲ್ಲಿ ಹಳೇ ಹೆಗ್ಗಣಗಳಂತೆ ಸೇರಿಕೊಂಡಿದ್ದ ಒಬ್ಬಿಬ್ಬ ಗುಮಾಸ್ತರುಗಳ ಭರಾಟೆ ಬಹಳವೆಂದು ಕತೆ; ಅವರುಗಳೇ ಅಧಿಕಾರ ಚಲಾಯಿಸುತ್ತಾರೆಂಬ ಪ್ರತೀತಿ. ನಾನು ಸಾಹೇಬರನ್ನು ನೋಡುವುದಕ್ಕೆ ಹೋದಾಗ ಈ ಸಚಿವರುಗಳು ಇದ್ದರು— ಇವರುಗಳು ನನ್ನಲ್ಲಿ ಬಹಳ ಗೌರವ ಮರ್‍ಯಾದೆಗಳನ್ನು ತೋರಿಸಿದರು. ಸಾಹೇಬರು ನನ್ನನ್ನು ಆದರದಿಂದ ಕಂಡು— ನರಸಿಪುರ ತಾಲ್ಲೂಕು ಬಹಳ ಪುಂಡುಕೊಂಪೆ, ದುರ್ಬಲರಾದ ಅಧಿಕಾರಿಗಳು ಅದನ್ನು ಬಹಳಮಟ್ಟಿಗೆ ಕೆಡಿಸಿಬಿಟ್ಟಿದ್ದಾರೆ. ಅದನ್ನು ಹತೋಟಿಗೆ ತಂದುಕೊಳ್ಳುವುದು ನಿಮ್ಮ ಮುಖ್ಯ ಕೆಲಸ; ಎಲ್ಲ ವಿಚಾರದಲ್ಲೂ ನಮ್ಮ ಒತ್ತಾಸೆಯನ್ನು ನೀವು ಧೈರ್‍ಯವಾಗಿ ನಿರೀಕ್ಷಿಸಬಹುದು— ಎಂದು ಹೇಳಿದರು. ಈ ಭರವಸೆಯನ್ನು ಅವರ ಗುಮಾಸ್ತರೂ ತಲೆದೂಗಿ ಮಂಜೂರ್ಮಾಡಿದರು. ನಾನು ಉಚಿತ ರೀತಿಯಲ್ಲಿ ನನ್ನ ಧನ್ಯವಾದವನ್ನು ಅರ್ಪಿಸಿದೆ. ನಂತರ ಸಾಹೇಬರು 'ನಾಳೆ ರಾತ್ರಿ ಎಂಟೂವರೆ ಘಂಟೆಗೆ ನಮ್ಮಲ್ಲೇ ಭೋಜನಕ್ಕೆ ಬರಬೇಕು' ಎಂದು ಆದರದಿಂದ ಕೊಟ್ಟ ಆಹ್ವಾನಕ್ಕೆ ಒಪ್ಪಿದೆ.

ನನ್ನ ಪ್ರೀತಿಗೂ, ಕೃತಜ್ಞತೆಗೂ ಪಾತ್ರರಾದ ಮಾಜಿ ದಿವಾನ್ ಶ್ರೀಮಂತ ಸರ್ ಪಿ. ಎನ್. ಕೃಷ್ಣಮೂರ್ತಿಗಳು, ತಮ್ಮ ಜಹಗೀರಾದ ಯಳಂದೂರಿಗೆ ಹೋಗುವ ಸಲುವಾಗಿ ನಂಜನಗೂಡಿಗೆ ಬಂದು ಅವರ ಅನುಬಂಧಿಗಳೂ ಆಶ್ರಿತರೂ ಆದ ಗುರುರಾಯರೆಂಬುವರ ಮನೆಯಲ್ಲಿ ತಂಗಿರುವುದಾಗಿ ತಿಳಿಯಬಂದು, ಅವರ ದರ್ಶನಕ್ಕಾಗಿ ಹೋದೆ.

ಸರ್ ಪಿ. ಎನ್. ಕೃಷ್ಣಮೂರ್ತಿಗಳು ಗುರುರಾಯರ ಮನೆ ಹಜಾರದಲ್ಲಿ ಒಂದು ಮೆತ್ತೆಹಾಕಿದ ದೊಡ್ಡ ಕುರ್ಚಿಯಮೇಲೆ, ಶಾಲು ಹೊದ್ದುಕೊಂಡು ಕುಳಿತಿದ್ದರು. ನಾನು ಅವರನ್ನು ಎರಡು ಮೂರು ವರುಷಗಳಿಂದ ನೋಡಿರಲಿಲ್ಲ. ಆ ಎರಡು ಮೂರು ವರುಷಗಳಲ್ಲಿ ಅವರು ಬಹಳ ಜೀರ್ಣರಾಗಿದ್ದಂತೆ ತೋರಿತು. ಅಧಿಕಾರದ ಉಲ್ಲಾಸ ಮುಖದಲ್ಲಿ ಇಲ್ಲದಿದ್ದದ್ದೇನೋ ಸಹಜ, ಆದರೆ ಅವರ ಭಾವದಲ್ಲಿ ಜಿಗುಪ್ಸೆ, ಜೀವನದಲ್ಲಿ ಬೇಸರ, ಕಾಣುತ್ತಿದ್ದುವು. ಅವರ ದೇಹಸ್ಥಿತಿ

ಚನ್ನಾಗಿರಲಿಲ್ಲವೆಂದು ಕೇಳಿದ್ದೆ; ಅದು ನಿಜವೆಂದು ತಿಳಿದೆ ಅವರನ್ನು ನೋಡಿದಕೂಡಲೆ—ಹಿರಿಯರು, ದೊಡ್ಡವರು, ಪೂಜಾರ್ಹರು—ಎಂಬ ಭಾವವೂ, ಒಂದು ಬಗೆಯ ಕನಿಕರವೂ ನನ್ನ ಹೃದಯದಲ್ಲಿ ನೆಲೆಗೊಂಡು, ನಾನು ಅವರಿಗೆ ನಮ್ಮ ತಂದೆಯವರಿಗೆ ಮಾಡುವಂತೆ ಸಾಷ್ಟಾಂಗ ನಮಸ್ಕಾರ ಮಾಡಿದೆ ಈಗ ನಾನು ತೋರಿಸುವ ಗೌರವ ಆಷಾಢಭೂತಿ ತನವೆಂದು ಯಾರೂ ಅನುಮಾನಿಸಲಾರರೆಂಬ ಧೈರ್ಯದಿಂದ ಈ ರೀತಿ ಮಾಡಿದೆ. ಅದನ್ನು ನೆನೆದರೆ ನನಗೆ ಈಗಲೂ ಸಮಾಧಾನವಾಗುತ್ತದೆ, ಯಾಕೆಂದರೆ ನಾನು ತಿರುಗ ಅವರನ್ನು ನೋಡಲಿಲ್ಲ.

ನಾನು ನಮಸ್ಕಾರ ಮಾಡಿದ್ದನ್ನು ಅವರು ತೇವದ ಕಣ್ಣುಗಳಿಂದ ನೋಡಿ, ಗದ್ಗದ ಧ್ವನಿಯಿಂದ—

"ಊಹೂ, ನವರತ್ನದ ರಾಮರಾಯರೆ—ಬೇಡಿ, ಬೇಡಿ. ನೀವು ಚಿಕ್ಕವರಾದರೂ ಗುರುವಂಶದವರು; ಶ್ರೀಪಾದ ಪುತ್ರರು ಏಳಿ—ಏಳಿ—" ಎಂದರು. (ನಮ್ಮ ಪೂರ್ವಿಕರಲ್ಲಿ ಹಲವರು ಉತ್ತರಾಧಿ ಮಠದ ಸ್ವಾಮಿಗಳಾಗಿದ್ದರು.) ನಾನು ಎದ್ದು, ನಮ್ರಹಾಸ್ಯವನ್ನು ನಟಿಸಿ,

"ತಾವು ತಮ್ಮ ಹಿರಿಯರಂತೆ ದಿವಾನಗಿರಿ ಮಾಡಿದಿರಿ. ಆದರೆ ನಾನು ನಮ್ಮ ಹಿರಿಯರಂತೆ ಸನ್ಯಾಸಿಯಾಗಲಿಲ್ಲ. ನಮ್ಮ ತಂದೆಯವರಿಗೆ ತಮ್ಮಲ್ಲಿ ಬಹಳ ಪ್ರೇಮ, ಮತ್ತು ಗೌರವ; ನಮ್ಮ ಹಿರೇರು ತಮ್ಮ ಹಿರೇರಿಂದ ಬಹಳ ಉಪಕಾರ ಪಡೆದರೆಂಬುದು ನಮ್ಮ ಮನೆಯಲ್ಲಿ ವಾಡಿಕೆಯ ಕತೆ; ನನಗೆ ತಾವು ಜೀವನೋಪಾಯವನ್ನು ಮಾಡಿಕೊಟ್ಟಿರಿ, ನನಗೆ ತಮ್ಮಲ್ಲಿ ಪಿತ್ರಾರ್ಜಿತವಾದ, ಸ್ವಯಾರ್ಜಿತವಾದ ಭಕ್ತಿ ಕೃತಜ್ಞತೆ ಇವೆ"

ಎಂದೆ. ಇದು ನನ್ನ ಹೃದಯದಿಂದ ಹೊರಟ ಮಾತು,

ಯೋಗಕ್ಷೇಮ, ಲೋಕಸಮಾಚಾರ, ಮಾತುಕತೆಯಾದಮೇಲೆ, ಶ್ರೀಮಂತರು ನನಗೆ

"ಯಳಂದೂರಿಗೆ ಅಮಲ್ದಾರರಾಗಿ ಬರುವುದಕ್ಕೆ ಒಪ್ಪುತ್ತೀರ? ನಮಗೆ ಒಬ್ಬ ನಮ್ಮವನಾದ ಘಟ್ಟಿಗನಾದ ಅಮಲ್ದಾರ ಬೇಕಾಗಿದೆ.

ನಾನು ಕೇಳಿದವರನ್ನು ಕೊಡುವುದಾಗಿ ಸರ್ಕಾರದವರು ಹೇಳಿದಾರೆ” ಎಂದರು

ನಾನು ಯೋಚನೆ ಮಾಡಿ ಕಾಗದ ಬರೆಯುತ್ತೇನೆಂದು ಹೇಳಿ, ಪುನಃ ನಮಸ್ಕಾರ ಮಾಡಿ ಅಪ್ಪಣೆ ಪಡೆದು ಬಂದುಬಿಟ್ಟೆ.

ನಾನು ಯಳಂದೂರಿಗೆ ಹೋಗಲು ಒಪ್ಪಲಿಲ್ಲ. ಯಳಂದೂರು ಬಹಳ ಸಣ್ಣ, ಕಣ್ಮರೆಯಾದ ತಾಲ್ಲೂಕು; ಅಲ್ಲಿಗೆ ದಾಖಲಾದವನಿಗೆ ವಿಲೇಬಿದ್ದ ಕಾಗದದ ಹಾಗೆ ಭವಿಷ್ಯವೇ ಇಲ್ಲ. ಅಲ್ಲದೆ, ಆ ಹಂಡಿಯಲ್ಲಿ ಚಂಡಮಾರುತಗಳು ಬೇರೆ ದೈವಾಸುರ ಕಕ್ಷಿಗಳು, ಅತಿ ಚಾಣಕ್ಯ ತಂತ್ರಗಳು. ಜಹಗೀರುದಾರರ ಬಂಧುಬಳಗದವರು ಅನೇಕರು ಅಲ್ಲಿನ ಮಾತುಬರ ಮುಖಂಡರು — ಅಮಲ್ದಾರರು ಇವರಿಗೆ ಅನುಕೂಲರಾಗದಿದ್ದಲ್ಲಿ ಜಹಗೀರುದಾರರಲ್ಲಿ ದೂರು ಹೋಗುವರು ನನಗೆ ಗೌರವವಿರುವ ಸ್ಥಾನದಲ್ಲಿ ಈ ಸಂಭವಕ್ಕೆ ಗುರಿ ಯಾಗುವುದು ಅವಿವೇಕ. ಈ ಕಾರಣಗಳಿಂದ ನಾನು ಯಳಂದೂರಿಗೆ ಹೋಗುವುದನ್ನು ತಪ್ಪಿಸಿಕೊಂಡೆ

ನಮ್ಮ ಸ|| ಡಿ|| ಆಫೀಸರು ನನ್ನನ್ನು ಮಾರನೆಯ ರಾತ್ರಿ ಊಟಕ್ಕೆ ಖರಾರು ವಾಕ್ಯು ಎಂಟೂವರೆ ಘಂಟೆಗೆ ಬರಬೇಕೆಂದು ಹೇಳಿದ್ದರಷ್ಟೆ. ಧರ್ಮರಾಯರು ಅದೇ ಹೊತ್ತಿಗೆ ನಮಗೆ ಮೇಜವಾನಿಗೆ ಏರ್ಪಡಿಸಿದ್ದರಂತೆ. ಅದು ನನಗೆ ಗೊತ್ತಿರಲಿಲ್ಲ. ಮೇಜವಾನಿ ಮುಂದಿನ ದಿನಕ್ಕೆ ಅಡ್ಜರ್ನ್ ಮಾಡಿ ಎಂದು ನಾನು ಧರ್ಮರಾಯರನ್ನು ಬೇಡಿಕೊಂಡೆ. ಅವರು, “ಸರಿ ಸ್ವಾಮಿ; ನಮ್ಮ ಮನೆ ಲಾಡು ಚಿರೋಟಿ ಇವತ್ತು ಲಭ್ಯವಿಲ್ಲ; ಸಾಹೇಬರ ಮನೆ ಗೊಡ್ಡುಸಾರು, ಗೊಡ್ಡುಹುಳಿ, ಇವೇ ಹಣೇಲಿ ಬರೆದಿದ್ದರೆ ನೀವೇನು ಮಾಡ್ತೀರಿ” ಎಂದು ನಗುತ್ತಾ ಹೇಳಿದರು. ರಾತ್ರೆ ಎಂಟೂವರೆ ಘಂಟೆಗೆ ಸಾಹೇಬರ ಮನೆಗೆ ಅಪ್ಪಣೆಯಂತೆ ಹೋದೆ. ಬಾಗಿಲಲ್ಲಿದ್ದ ಜವಾನ ‘ಸಾಹೇಬರು ಮಲಗಿಕೊಂಡುಬಿಟ್ಟರು ಬುದ್ಧಿ; ಏಳಿಸಲೇ?’ ಎಂದ.

ನಾನು ಘಾಬರಿಯಾಗಿ ‘ಯಾಕಪ್ಪ? ಅವರಿಗೆ ಖಾಯಿಲೆ ಏನಪ್ಪ?’ ಎಂದು ಕೇಳಿದೆ.

ಐದ್ಹೈದು ನಿಮಿಷ ಇಟ್ಟುಕೊಳ್ಳಿ. ನೀವು ಲೆಖ್ಖಾಚಾರಸ್ತರು" ಎಂದು, ಆಟೋಪದಿಂದ ತೇಗಿದೆ.

ಆದರೆ ನಿಜವಾದ ಕತೆಯನ್ನು ವೈದ್ಯನಾಥಯ್ಯರೆ ಧರ್ಮರಾಯ ರಿಗೆ ಮರುದಿನವೇ ಹೇಳಿದರಂತೆ.

೨೭

ಟಿ ನರಸೀಪುರ ತಾಲ್ಲೂಕಿಗೆ ನನಗೆ ವರ್ಗವಾದದ್ದು ಗೊತ್ತಾದ ವೇಲೆ ನಾನು ಸ್ವಾಭಾವಿಕವಾಗಿ ಅಲ್ಲಿಯ ಸನ್ನಿವೇಶವನ್ನು ಸಾಧ್ಯವಾದ ಮಟ್ಟಿಗೆ ತಿಳಿದುಕೊಳ್ಳೋಣವೆಂದು ಅಲ್ಲಿ ಹಿಂದೆ ನೌಕರಿಮಾಡಿದವರ, ಮತ್ತು ಅಲ್ಲಿನ ಅನುಭವವುಳ್ಳ ಇತರರ ಸಂಪರ್ಕ ಮಾಡಿ ವಿಚಾರ ಮಾಡಿದೆ. ಫಲಿತಾಂಶವು ವಿನೋದಕರವಾಗಿತ್ತೇ ಹೊರತು ಅಷ್ಟೇನು ದ್ಯೋತನವಾಗಿರಲಿಲ್ಲ ನಡುವಯಸ್ಸು ಮೀರಿದಮೇಲೆ ಅಲ್ಲಿ ಮಾಮಲೆ ಮಾಡಿದ ಒಬ್ಬ ರಸಿಕರು — ನೀವೆ ಅದೃಷ್ಟವಂತರು ಕಾಣ್ರಿ, ಒಳ್ಳೆಯ ಪ್ರಾಯದಲ್ಲೇ ಆ ತಾಲ್ಲೂಕಿಗೆ ಹೋಗ್ತೀರಲ್ಲ — ಅಂದರು. ಮತ್ತೊಬ್ಬರು — ಪುಂಡ-ಕೊಂಪೆ ಕಾಣ್ರಿ, ಮಾತಿಗೆ ಮುಂಚೆ ಖೂನಿ ; ಬೇನಾಂ ಅರ್ಜಿಮಯ ; ಗ್ರಾಮ ಗ್ರಾಮದಲ್ಲೂ ಕಕ್ಷಿಗಳು ; ಮಾನದಿಂದ ಅಲ್ಲಿಂದ ಬಿಟ್ಟು ಬಂದರೆ ಸಾಕು ಅನಿಸಿತು — ಅಂದರು. ಮತ್ತೊಬ್ಬರು — ಅಲ್ಲಿ ಕೆಲಸವೇ ಇಲ್ಲ ; ಸುಖವಾಗಿ ನದಿ ಸ್ನಾನ ಮಾಡಿಕೊಂಡು, ದೇವಸ್ಥಾನ ಗಳಲ್ಲಿ ದೇವರದರ್ಶನ ಮಾಡಿಕೊಂಡು, ಸಂಗೀತ, ಪುರಾಣ ಕೇಳಿ ಕೊಂಡು, ಋಷ್ಯಾಶ್ರಮದಲ್ಲಿದ್ದಂತೆ ಇರಬಹುದು — ಅಂದರು (ಋಷ್ಯಾ ಶ್ರಮದಲ್ಲಿ ಅಪ್ಸರೆಯರ ಸೇವೆ ಇತ್ತೆಂದು ಅನುಮಾನ) ಮತ್ತೊಬ್ಬರು— ಕಾಗದಗಳು, ಕಾಗದದಾಳು, ಇತ್ತಿಲ್ಲೆಗಳು, ರಿಕಾರ್ಡುಗಳು, ಬಾಕಿ ಕ್ರಮಗಳು, ಸರಸ್ವತಿ ವಿಲಾಸ ನೋಡಿ ; ಕೆಲಸ ಮಾಡುವುದಕ್ಕೇ ಟೈಂ ಇಲ್ಲ ಮತ್ತೊಬ್ಬರು — ಒಳ್ಳೆ ಖದೀಂ ಗುಮಾಸ್ತರುಗಳು ; ಕರೆಸ್- ಪಾಂಡೆನ್ಸನ್ನೆಲ್ಲ ಅವರೂ ಶಿರಸ್ತೆದಾರರೂ ನೋಡಿಕೊಳ್ಳುತ್ತಾರೆ. ನಾವು ಸುಮ್ಮನೆ ಜಬರ್ದಸ್ತಿನಿಂದ ಮೇಲುವಿಚಾರಣೆ ನೋಡಿಕೊಂಡು, ಎದ್ದರೆ ಆಳಲ್ಲ, ಅಂತ ಇದ್ದರೆ, ಕೆಲಸ ಸಲೀಸಾಗಿ ಬೇಫುಕಾರ್ ನಡೆದು

ಹೋಗುತ್ತೆ, ನೋಡಿ — ಹೀಗೆ ಹೇಳಿದ ಅನುಭವಸ್ಥರು ತಾಬೇದಾರರುಗಳ ಪ್ರೀತಿಗೆ ಪಾತ್ರರಾಗಿ, "ಒಳ್ಳೇ ಧಣಿ, ಧರ್ಮರಾಯ" ಅನ್ನಿಸಿಕೊಂಡವರು. ನನ್ನ ನಿರಂತರ ಹಿಂದಿದ್ದ — ನನಗೆ ಛಾರ್ಜು ಕೊಟ್ಟ — ಅಮಲ್ದಾರರು — ಬಹಳ ಕಿರಕುಳದ ಛಾರ್ಜು; ದೊಡ್ಡದೊಡ್ಡ ಗ್ರಾಮಗಳಲ್ಲಿ ಅಹಂಕಾರಿಗಳೂ ಪಿತೂರಿಗಾರರೂ ಬಹಳ ಜನಗಳಿದ್ದಾರೆ; ಪ್ರತಿಯೊಂದು ಕೇಸಿಗೂ ನಂಜನಗೂಡಿಗೆ, ಮೈಸೂರಿಗೆ ನಿಯೋಗಗಳು ಹೋಗುತ್ತವೆ, ತಾಲ್ಲೂಕು ಆಡಳಿತದಲ್ಲಿ ಸಬ್ ಡಿವಿಜನ್ ಪ್ರವೇಶ ಬಹಳ ಉಂಟು — (ಒಂದು ಗ್ರಾಮದ ಹೆಸರು ಹೇಳಿ) ಆ ಗ್ರಾಮದ ಪಟೇಲ (ಅವನ ಹೆಸರೂ ಹೇಳಿ) ಅವನು ನಂಜನಗೂಡಿನಲ್ಲಿ ಬಹಳ ಪ್ರಬಲ, ಬಹಳ ಪಿತೂರಿಗಾರ; ಅವನನ್ನು ಎದುರುಹಾಕಿಕೊಂಡರೆ ಬಹಳ ಬೇಗನೆ ಬದ್ನಾಮಿ ಬರುತ್ತೆ, ಬಹಳ ಹುಷಾರಿಯಿಂದ ಉಪಾಯದಿಂದ ಕೆಲಸ ಸುಧಾರಿಸಬೇಕು — ಎಂದರು.

ಇದರಿಂದ "ಶ್ರೋತ್ರಪರಂಪರಯಾ" ಮಂದಟ್ಟಾದದ್ದು, ಟಿ. ನರಸೀಪುರ ತಾಲ್ಲೂಕು ವಸಂತದಂತೆ ಲಲಿತ, ಬೇಸಿಗೆಯಂತೆ ಕಾವು, ಶರದೃತುವಿನಂತೆ ಶಾಂತವೆಂದು. ಎಲ್ಲ ಪ್ರಾಂತಗಳಲ್ಲೂ ಅರಸುವವನಿಗೆ ಈ ಗುಣಗಳೆಲ್ಲ ಉಂಟು. ಇತರರಿಂದ ನಾವು ಯಾವ ವಸ್ತುವಿನ ವಿಚಾರವನ್ನು ಕೇಳುತ್ತೇವೋ ಆ ವಸ್ತುವಿನ ಭಾವವು ನಮಗೆ ಹೇಳುವವನ ಅನುಭವದ ವಾಸನೆಯನ್ನು ಕೂಡಿಯೇ ಬರುತ್ತದೆ. ನಾನು ಮದ್ರಾಸಿನಲ್ಲಿ ವಿದ್ಯಾರ್ಥಿಯಾಗಿದ್ದಾಗ ಅಲ್ಲಿಗೆ ವ್ಯಾಪಾರಕ್ಕಾಗಿ ದಕ್ಷಿಣದಿಂದ ಬಂದಿದ್ದ ಒಬ್ಬ ಸೆಟ್ಟಿ ಯುವಕನು ಬಹಳ ಜುಗುಪ್ಸೆಯಿಂದ, 'ಏನೋ ಮದ್ರಾಸು ಮದ್ರಾಸು ಅಂತಾರೆ, ಅಷ್ಟೇ ಇದೆ ಮದ್ರಾಸಿನ ಹಣೆಬರಹ' ಎಂದ. ಯಾಕಪ್ಪ; ಎಂದು ಕೇಳಿದ್ದಕ್ಕೆ — ನಮ್ಮೂರೋರು ಹೇಳಿದರು, ಉಪ್ಪರಿಗೆ ಮನೆ ಕಿಡಕಿಗಳಿಂದ ಚಿನ್ನದಂಥ ಸ್ತ್ರೀಯರು ತಲೆ ಈಚೆಗೆ ಇಟ್ಟುಕೊಂಡು ನೋಡುತ್ತಿರುತ್ತಾರೆ, ಬೀದಿಯಲ್ಲಿ ಹೋಗುವ ಯುವಕರನ್ನು ಅವರೆ ಮಾತನಾಡಿಸುತ್ತಾರೆ ಎಂದು. ಇಲ್ಲಿ ಮೂರು ದಿವಸ ಬೀದಿ ಬೀದಿ ಅಲೆದರೂ ನೀನೇ ಅಂತ ಕೇಳೋರೇ ದಿಕ್ಕಿಲ್ಲವಲ್ಲ! — ಎಂದು ತನ್ನ ಆಶಾಭಂಗವನ್ನು ಹೊರಪಡಿಸಿದ.

ಮದ್ರಾಸಿನ ಚಿತ್ರ ಅವನಿಗೆ ಅವನ ಊರಿನ ಶೃಂಗಾರರಸಿಕನಿಂದ ಬಂದಿತ್ತು.

ಟಿ. ನರಸೀಪುರ ತಾಲ್ಲೂಕು ಮೈಸೂರಿನ ಎಲ್ಲ ತಾಲ್ಲೂಕುಗಳಂತಿದ್ದಿತೆ ಹೊರತು ವಿಜಾತೀಯವಾಗೇನೂ ಕಾಣಲಿಲ್ಲ. ಆದರೆ — ಇದು ನಾನು ಸಂಕೋಚದಿಂದ ಹೇಳಬೇಕಾದ ಮಾತು— ಹಿಂದೆ ಕೆಲವು ವರ್ಷಗಳಿಂದ ತಾಲ್ಲೂಕು ಮತ್ತು ಸಬ್ ಡಿವಿಜನ್ ಆಡಳಿತ ಸ್ವಲ್ಪ ಸಡಿಲವಾಗಿದ್ದದ್ದರಿಂದ, ಅನೇಕ ಗ್ರಾಮಗಳಲ್ಲಿ "ಪಾಳೇಗಾರರುಗಳೂ" "ಫ್ಯೂಡಲ್ ಲಾರ್ಡುಗಳೂ" ಹುಟ್ಟಿಕೊಂಡು ಸ್ಥಳ ಸರಕಾರಗಳನ್ನೂ ಒಳಕೋರ್ಟುಗಳನ್ನೂ ಏರ್ಪಡಿಸಿಕೊಂಡಿದ್ದರು. ತಾಲ್ಲೂಕಿನ ಕಾವೇರಿ ಕಪಿಲಾನದಿಗಳ ಉತ್ತರವಾದ ಭಾಗದಲ್ಲಿನ ಜನ ಬಹುಭಾಗ ಒಕ್ಕಲಿಗರು, ಅವರು ನನಗೆ ಬಳಕೆಯಾಗಿದ್ದ ಯಡತೊರೆ ಒಕ್ಕಲಿಗರನ್ನು ಹೋಲತಕ್ಕವರು. ತಾಲ್ಲೂಕಿನ ದಕ್ಷಿಣ ಭಾಗದಲ್ಲಿ ಶಿವಾಚಾರದವರ ಸಂಖ್ಯೆ ಮತ್ತು ಪ್ರಾಬಲ್ಯ ಹೆಚ್ಚು. ಈ ಎರಡು ದೊಡ್ಡ ಕೋಮುಗಳ ಚಾಲು, ಸ್ವಭಾವ, ನಡವಳಿಕೆಗಳಲ್ಲಿ ನನ್ನ ಅನುಭವದಲ್ಲಿ— ಇದು ಕೇವಲ ನನ್ನ ವೈಯ್ಯಕ್ತಿಕಾನುಭವ-ಆ ಕಾಲದ್ದು ಮತ್ತು ಆ ತಾಲ್ಲೂಕು ಮಾತ್ರದ ವ್ಯಾಪ್ತಿಯದು ಇರಬಹುದು— ಆದರೂ ನನ್ನ ಅನುಭವದಲ್ಲಿ ಕೆಲವು ವ್ಯತ್ಯಾಸಗಳು ಕಂಡು ಬಂದವು. ಇಬ್ಬರೂ ಧೀರರು, ಕೆಲಸವಂತರು, ಆದರೆ ಒಕ್ಕಲಿಗರಿಗೆ ನ್ಯಾಯದಲ್ಲಿ ಭಕ್ತಿ, ಸರಕಾರವೆಂದರೆ ಭಯ ಗೌರವ; ಏನು ಮಾಡಬೇಕಾದರೂ ಮುಚ್ಚುಮರೆ ಇಲ್ಲದೆ ಬಹಿರಂಗವಾಗಿ ಮಾಡತಕ್ಕವರು— ಕಷ್ಟಜೀವಿಗಳು, ಮಿತವ್ರಯದವರು, ಊಟ, ಉಡುಗೆ, ತೊಡುಗೆಗಳಲ್ಲಿ ಡಂಭಾಚಾರ ಅಟ್ಟಹಾಸಗಳಿಲ್ಲ. ಲೆಕ್ಕಾಚಾರ, ಶಿಸ್ತು, ಕೆಲವು ಸಾಮಾನ್ಯವಾದ ಧರ್ಮಭಾವನೆಗಳಿಗೆ ಒಳಪಟ್ಟ ಜೀವನದವರು. ಇವರಿಗೆ ಬ್ರಾಹ್ಮಣರೆಂದರೆ— ಆಗಿನ ಕಾಲದ ಮಾತನ್ನೇ ನಾನು ಹೇಳುತ್ತಿರುವುದು— ಜಾತಿ ಸಂಬಂಧವಾದ ಗೌರವವಿತ್ತು; ಜಾತಿ ಸಂಬಂಧವಾದ ಜಿದ್ದಂತೂ ಇಲ್ಲ; ಮುಕ್ಕಾಲು ಮೂರುವೀಸಪಾಲು ಶ್ಯಾನುಭೋಗರುಗಳು ಬ್ರಾಹ್ಮಣರೇ ಆಗಿದ್ದದ್ದರಿಂದಲೂ, ಅವರುಗಳ ಕಸಬೇ ಸರಕಾರದ ನಿಬಂಧನೆಗಳನ್ನು ತಿಳಿಯುವುದಾದ್ದರಿಂದಲೂ, ಸಾಮಾನ್ಯವಾದ ವ್ಯವ

ಹಾರಗಳಲ್ಲಿ ಒಂದೊಂದು ವೇಳೆ ಗೃಹಕೃತ್ಯದ ವ್ಯವಹಾರಗಳಲ್ಲೂ ಕೂಡ —ಜನಗಳು ಅವರ ಸಂಗಡ ಆಲೋಚನೆಮಾಡಿ ಅವರ ಸಲಹೆಗಳನ್ನು ಮನ್ನಿಸುತ್ತಿದ್ದರೂ, ತಾಲ್ಲೂಕಿನ ದಕ್ಷಿಣದವರು— ಅಂದರೆ ಶಿವಾಚಾರ ಬಾಹುಳ್ಯದ ಪ್ರದೇಶದವರು— ಒಟ್ಟಿನ ಮೇಲೆ ಉತ್ತರದವರಗಿಂತ ಐಶ್ವರ್ಯವಂತರು. ಇದಕ್ಕೆ ಕಾರಣವೇನೆಂದರೆ, ಈ ಪ್ರದೇಶ ರೇಷ್ಮೆ ಕೈಗಾರಿಕೆಯ ತವರುಮನೆ. ಇಲ್ಲಿ ಸಾಮಾನ್ಯವಾಗಿ ಪ್ರತಿಯೊಂದು ಗ್ರಾಮದಲ್ಲೂ, ಪ್ರತಿಯೊಂದು ಮನೆಯಲ್ಲೂ, ರೇಷ್ಮೆ ಹುಳುಗಳನ್ನು ಸಾಕುವ ಪದ್ಧತಿ; ದೊಡ್ಡ ಗ್ರಾಮಗಳಲ್ಲಿ ರೇಷ್ಮೆಗೂಡನ್ನು ಬಿಚ್ಚುವುದು, ರೇಷ್ಮೆ ವ್ಯಾಪಾರ, ಇವುಗಳೂ ಉಂಟು. ಒಕ್ಕಲಿಗರ ಗ್ರಾಮಗಳು ಸಾಮಾನ್ಯವಾದ ಹಳ್ಳಿಕೊಂಪೆಯೆಂದರೆ, ಶಿವಾಚಾರ ಗ್ರಾಮಗಳು ಪುರಿ ಪಟ್ಟಣಗಳು. ಜನಗಳ ಉಡುಪು, ತೊಡುಗೆ, ಇವುಗಳು ಮೈಸೂರು ನಂಜನಗೂಡು ತರಹದ ಷಹರು ಮಾದರಿಯವು. ಒಂದೊಂದು ಗ್ರಾಮವೂ ಒಂದು ಸಣ್ಣ ಸಂಸ್ಥಾನದಂತೆ. ದೊಡ್ಡ ಗ್ರಾಮಗಳಲ್ಲಿ ಒಬ್ಬಿಬ್ಬರು ಹಣಗಾರರು ಹುಳಸಾಕುವ ಜಿರಾಯಿತುದಾರರಿಗೆ ಸಾಲ ಸೋಲ ಕೊಟ್ಟುಕೊಂಡು ಸಾಹುಕಾರರು ಎಂಬ ಬಿರುದನ್ನು ಪಡೆದು ಗ್ರಾಮವನ್ನೇ ಆಳುವರು. ಅವರಲ್ಲೂ ಕೆಲವರು ಬೆಂಗಳೂರು, ಕೊಳ್ಳೇ ಗಾಲ, ಇಂಥ ವ್ಯಾಪಾರ ಕೇಂದ್ರಗಳಲ್ಲಿ ರೇಷ್ಮೇ ವ್ಯಾಪಾರವನ್ನು ಮಾಡಿ ಅಭಿವೃದ್ಧಿಗೆ ತಂದು ಲಕ್ಷಾಧಿಕಾರಿಗಳಾಗಿದ್ದರು. ಈ ಪ್ರಾಂತ್ಯದಲ್ಲಿ ಬ್ರಾಹ್ಮಣರ ಪ್ರಾಬಲ್ಯ ಬಹಳ ಕಡಮೆ. ಇದಕ್ಕೆ ಮುಖ್ಯಕಾರಣ ಇಲ್ಲಿನ ನಿವಾಸಿಗಳಲ್ಲಿ ಸಂಖ್ಯೆಯಲ್ಲಿಯೂ, ಸಂಪತ್ತಿನಲ್ಲೂ ಶಿವಾಚಾರದ ಭಾಗವೇ ಬಹಳ ಹೆಚ್ಚು. ಈ ಭಾಗಕ್ಕೆ ಬ್ರಾಹ್ಮಣರೆಂದರೆ ಔದಾಸೀನ್ಯ ಮಾತ್ರವೇ ಅಲ್ಲ, ಮತ ಸಂಬಂಧವಾದ ಪ್ರತಿಭಟನೆಯೂ ಉಂಟು. ಲಿಂಗಾಯತ ಮತವೇ ಬ್ರಾಹ್ಮಣರ ಪ್ರಾಬಲ್ಯದ ಪ್ರತಿಭಟನೆಗಾಗಿ ಜನಿಸಿದ್ದಾದ್ದರಿಂದ ಈ ಮತದ ಮಾತಬರ ಜನಗಳಿಗೆ ಬ್ರಾಹ್ಮಣರೆಂದರೆ ಮತತ್ಯಾಗಿಗಳಿಗೆ ತಮ್ಮ ಪೂರ್ವಮತದವರ ಮೇಲಿರುವ ಸ್ವಾಭಾವಿಕ ವೈಷಮ್ಯವಿದ್ದೇ ಇರುತ್ತಿತ್ತು. ನಾನು ಇದನ್ನು ತಪ್ಪೆಂದಾಗಲಿ, ಅನೈಸರ್ಗಿಕವೆಂದಾಗಲಿ ಹೇಳುವುದಿಲ್ಲ. ಇದರ ಸಲುವಾಗಿ ಪಟೇಲ ಶ್ಯಾನುಭೋಗರುಗಳಿಗೆ

ಅನ್ಯೋನ್ಯಭಾವವಿಲ್ಲದೆ ಪ್ರತಿಗ್ರಾಮದಲ್ಲೂ ಕಕ್ಷಿಗಳಿಗೆ ಅವಕಾಶವಾಗಿತ್ತು. ನಾನು ಆ ತಾಲ್ಲೂಕಿಗೆ ಹೋಗುವುದಕ್ಕೆ ಮುಂಚೆ ಈ ಪ್ರದೇಶದಲ್ಲಿ ಲಿಂಗಾಯತ ಜಂಗಮರ ಪ್ರಭಾವ ಬಹಳ ಹೆಚ್ಚು; ಅವರ ಹಾವಳಿ ಬಹಳ ವಿಚಿತ್ರವಾದ್ದು; ಹಳ್ಳಿಯ ಜನರು ಅವರನ್ನು ಓಡಾಡುವ ದೇವರೆಂದು ಭಾವಿಸಿ ಅವರನ್ನು "ತನುಮನ ಧನ"ಗಳಿಂದ ಪೂಜಿಸುತ್ತಾರೆ—ಎಂದು ಬಗೆ ಬಗೆಯಾಗಿ ಕೇಳಿದ್ದೆ. ಜಂಗಮರಲ್ಲಿ ಬಹು ಭಾಗ ಕಪಟ ಸನ್ಯಾಸಿಗಳೆಂತಲೂ ಕೇಳಿದ್ದೆ. ಅವರು ಸ್ತ್ರೀಯರ ಮೂಢಭಕ್ತಿಯನ್ನು ಅತಿಥಿಸತ್ಕಾರದ ವ್ಯಾಜದಮೇಲೆ ತಮ್ಮ ಸ್ವಾರ್ಥಕ್ಕಾಗಿ ದುರಪಯೋಗಿಸಿಕೊಳ್ಳುತ್ತಾರೆಂತಲೂ ಕೇಳಿದ್ದೆ. ನನಗೆ ಇದರಲ್ಲಿ ಸಂಪೂರ್ಣ ನಂಬಿಕೆ ಇರಲಿಲ್ಲ; ಯಾಕೆಂದರೆ ಆ ಕಥೆಗಳು ನಿಜವಾಗಿದ್ದರೆ ಆ ಸನ್ಯಾಸಿಗಳು ರಾಕ್ಷಸರಾಗಿಯೂ ಆ ಜನಗಳು ಮೂಢರಾಗಿಯೂ ಇದ್ದಿರಬೇಕು. ಹಾಗಿರಲಾರದು. ಇದು ಕೇವಲ ವಿಕಟ ಚಿತ್ರ. ನಮ್ಮ ಹಾಗೇ ಅವರು, ನಮ್ಮ ಧರ್ಮದಂತೆಯೇ ಅವರ ಧರ್ಮ, ನಮ್ಮಲ್ಲಿ ನಂತೆಯೇ ಅವರಲ್ಲೂ ಒಳ್ಳೆಯವರು, ಕೆಟ್ಟವರು, ಸಂತರು, ಕಪಟಿಗಳು, ಎಲ್ಲ ಬಗೆಯವರೂ ಇರಬೇಕೆಂದು ತೋರಿತು. ಅಬ್ಬೆ ದೂಬ್ವಾ (Abbe Dubois) ಎಂಬೊಬ್ಬ ಕ್ರಿಸ್ತಪಾದ್ರಿ ಹಿಂದೂ ಜನಗಳ ಸಾಮಾಜಿಕ ಜೀವನ, ನಡವಳಿಕೆ, ಆಚಾರಗಳ ವರ್ಣನೆಯೊಂದನ್ನು ಮಾಡಿ ಒಂದು ಪ್ರಸಿದ್ಧ ಪುಸ್ತಕವನ್ನು ಬರೆದಿದ್ದಾನೆ. ಅದರಲ್ಲಿ ಮುಡಕತೊರೆ ಜಾತ್ರೆಯ ವಿಚಾರದಲ್ಲಿ ಅವನು ಬರೆದಿದ್ದ ಅಶ್ಲೀಲ ವರ್ಣನೆಯನ್ನು ಓದಿ ನನಗೆ—ಹೀಗೂ ಯಾವದಾದರೂ ಮನುಷ್ಯ ಸಮಾಜದಲ್ಲಿದ್ದೀತೆ? ಅಥವ ಇದು ಊರ್ಧ್ವರೇತಸ್ಸುವ್ರತದ ಕ್ರಿಸ್ತ ಸನ್ಯಾಸಿಯ ನಿರುದ್ಧ ಕಾಮಪಿಶಾಚದ ವಿಕಾರ ಸ್ವಪ್ನವೋ? ಎಂಬ ಸಂದೇಹ ತೋರಿತು. ಆಮೇಲೆ ನಾನು ಮುಡುಕತೊರೆ ಜಾತ್ರೆಯ ವಹಿವಾಟು, ಉಸ್ತುವಾರಿಗೆ ಎರಡು ಮೂರು ಸಲ ಹೋಗಬೇಕಾಯಿತು. ಆಗ ನನಗೆ— ಅಯ್ಯೋ ಪಾಪಿ ಡುಬ್ವಾ ಸಾಹೇಬನೆ! ನಮ್ಮ ಬಡ, ಮುಗ್ಧ, ಹಳ್ಳಿಯವರ ನಡುವೆ ನಿನ್ನ ಅಂತರ್ಲೀನವಾದ ರೊಚ್ಚನ್ನು ದಬಾಯಿಸಿಕೊಂಡು ಎಷ್ಟು ವ್ಯಥೆಪಟ್ಟೆಯೋ! ನಿಮ್ಮ ದೇಶಕ್ಕೆ ಹೋಗಿ, ನಿಮ್ಮ ಜಾತಿ ಜನದ ಕಾರ್ನಿವಲ್ (Carnival)

ಮೊದಲಾದ ಮಹೋತ್ಸವಗಳಲ್ಲಿ ಭಾಗ ವಹಿಸಿ ನಿನ್ನ ತಾಪವನ್ನು ಶಮಿಸಿ ಕೊಳ್ಳಬಾರದಾಗಿತ್ತೆ !— ಎನ್ನಿಸಿತು. ನಮ್ಮ ಮುಡುಕತೊರೆ ಜಾತ್ರೆಗೆ ಬರುವ ಯಾತ್ರಿಕರು ನಿಜವಾದ ಭಕ್ತಿಯಿಂದ ತುಂಬಿ ತುಳುಕಿ ಮೈಮರೆತು ತಮ್ಮ ಹೃದಯದಲ್ಲಿ ತಮ್ಮ ಇಷ್ಟ ದೇವತೆಯನ್ನು ಕಾಣುವ ಮುಗ್ಧ ಹೃದಯದ ಜನಗಳು. ನಾನು ನೋಡಿದ ಜಂಗಮರು— ಸಾಮಾನ್ಯ ವಾಗಿ ಬಹಳ ಸರಳಸ್ವಭಾವದ, ಅನಕ್ಷರಸ್ಥ ಭಿಕ್ಷುಗಳು. ಇವರು ಲೋಕ ವ್ಯವಹಾರದ ನಿಪುಣರಲ್ಲ— ಮಂತ್ರಾಲೋಚನೆಗೆ ಇವರಗಿಂತಲೂ ಅನರ್ಹರಾದವರನ್ನು ನಾನು ನೋಡಿಯೇ ಇಲ್ಲ. ಇವರ ಪ್ರಭಾವವೂ ಊಟದ ವೇಳೆಗೆ ಬಂದರೆ ಒಂದು ಮುದ್ದೆ, ಬಾಕಿ ವೇಳೆಯಲ್ಲಿ ಒಂದಾ ಣೆಯೋ, ಒಂದು ಬೊಗಸೆ ಧಾನ್ಯವೋ ತೆಗೆದುಕೊಂಡುಹೋಗುವಷ್ಟ ರದ್ದು. ಇವರನ್ನು ಕಂಡರೆ ಜನಕ್ಕೆ ಪ್ರೀತಿ, ಭಕ್ತಿ, ಒಂದು ರೀತಿಯಾದ ಕರುಣ, ಹೊರತು, ಹೆಚ್ಚು ಗೌರವವಿಲ್ಲ. ನಿಜವಾಗಿ ಈ ಜನಗಳ ದುರ್ಮಂತ್ರಿಗಳೂ ಅಕ್ಷರಸ್ಥರೂ, ಕೂಡಿದಮಟ್ಟಿಗೆ ಅನುಕೂಲಸ್ಥರೂ, ಬೆಂಗಳೂರು, ಮೈಸೂರು, ನಂಜನಗೂಡು ಕೋರ್ಟು ಕಛೇರಿಗಳಿಗೆ ತಿರುಗಾಡಿ, ವ್ಯವಹಾರ ಸಮುದ್ರದ ಕೀಳುಮಟ್ಟದ ಜಲಚರರು ಆದ ಕೆಲವು ಸ್ಥಳದ ಬುದ್ಧಿವಂತರು. ಗ್ರಾಮದ ರೈತರು ಬಹಳ ಒಳ್ಳೆಯ ಜನ; ಬಲವಾದ ಮೈಗಟ್ಟಿನವರು, ಸ್ಫುರದ್ರೂಪಿಗಳು ಅವರ ಆಹಾರದ ಕಾರ್ಯವೋ, ಅಥವಾ ಅವರ ರಕ್ತದಲ್ಲಿ ಬಂದಿರುವ ಗುಣವೋ, ಕಾಣೆ— ಸುಲಭಕೋಪಿಗಳು, ಕೋಪದ ಕಾವಿನಲ್ಲಿ ಪರಿಣಾಮ ಜ್ಞಾನಶೂನ್ಯರು. ಇತರರು ಕೋಪ ಬಂದರೆ ಥಪರಾಕು ಹೊಡೆಯುವ ಹಾಗೆ ಇವರು ಕೊಡಲಿ ಅಥವ ಮಚ್ಚುಕತ್ತಿಯಿಂದ ಹೊಡೆದುಬಿಡುವರು. ನನಗೆ ಜ್ಞಾಪಕವಿದೆ—ಒಬ್ಬ ಸಾಧು ಮುಖದ ಯುವಕ ಏನೋ ಮಾತಿಗೆ ರೇಗಿ ಇಬ್ಬರನ್ನು ಕೈಕೊಡಲಿಯಿಂದ ಕಡಿದುಬಿಟ್ಟು, ತಾನಾಗೆ ಪೋಲೀಸು ಸ್ಟೇಷನಿಗೆ ಬಂದು ಹೀಗೆ ಮಾಡಿದ್ದೇನೆ ಶಿಕ್ಷೆಮಾಡಿ, ಎಂದು ತಾನೆ ಅವರ ಅಧೀನನಾದ. ಲಾಪು ಮಹಜರು ಕಾಲದಲ್ಲಿ—ಏನೋ, ಇಂಥ ಕೆಲಸ ಮಾಡಿದೆ? ಎಂದು ಕೇಳಿದ್ದಕ್ಕೆ— ಉದಾಸೀನ ಭಾವದಿಂದ—ಏನೋ ಬುದ್ಧಿ, ಕ್ಯಾಪ ಬಂತೇಳಿ, ವಡದಿ —ಎಂದು ಹೇಳಿದ. ತಾನು ಮಾಡಿದು

ಯಾರಾದರೂ ಸ್ವಾಭಾವಿಕವಾಗಿ ಮಾಡಬಹುದಾದ ಸಾಮಾನ್ಯ ಕೆಲಸ ವೆಂದು ಭಾವನೆ. ಆ ಭಾವನೆ ಆ ದರ್ಜೆಯ ಹಳ್ಳಿ ಜನರಲ್ಲಿ ಅನೇಕರಿ ಗಿತ್ತು. ಈ ಪ್ರದೇಶದಲ್ಲಿನ ಇತರ ಕೋಮುಗಳವರು, ಅಂದರೆ, ಕುರು ಬರು, ಪರಿವಾರದವರು, ಆದಿಕರ್ನಾಟಕರು, ಶಿವಾಚಾರದವರ ಶ್ರೇಷ್ಠ ತೆಗೆ ಅನುಮೋದಿಸಿ, ಅವರ ಅನುಯಾಯಿಗಳಾಗಿ ವರ್ತಿಸತಕ್ಕವರೇ. ಈ ಸಾಮಾಜಿಕ ಸ್ಥಿತಿಯು ಒಟ್ಟಿನಮೇಲೆ ಟಿ. ನರಸೀಪುರದ ಕಾವೇರಿ ಕಪಿಲೆಗಳ ದಕ್ಷಿಣದ ಕಸಬ, ಮೂಗೂರು, ಮತ್ತು ಕಾವೇರಿಯ ಪೂರ್ವದ ತಲಕಾಡು ಹೋಬಳಿಗಳಲ್ಲಿದ್ದಂತೆಯೇ ಚಾಮರಾಜನಗರ, ನಂಜನ ಗೂಡು, ಯಳಂದೂರು ಮತ್ತು ಮದರಾಸು ಅಧಿಪತ್ಯಕ್ಕೆ ಸೇರಿದ ಕೊಳ್ಳೇಗಾಲ ತಾಲ್ಲೂಕುಗಳಲ್ಲೂ ಇತ್ತು. ಈ ಜನಗಳನ್ನು ಕಂಡರೆ ನನಗೆ ಬಹಳ ಮೆಚ್ಚಿಗೆ ಇದು ಒಳ್ಳೆಯ ವೀರಭೂಮಿ, ಇವರು ಶೂರ ಪ್ರಜೆಗಳು ಎಂದು ನನ್ನ ಭಾವ. ಆರೋಗ್ಯ, ರಕ್ತಸಂಪತ್ತಿಯಿಂದ ಬರುವ ಉಲ್ಲಾಸ ಇವರ ಜೀವನವನ್ನು ಒಂದು ಸಾಮಾನ್ಯ ಹಬ್ಬ ವನ್ನಾಗಿ ಮಾಡುವಂತೆ ನನಗೆ ತೋರಿತು. ಸ್ವಾಭಾವಿಕವಾಗಿ ಇವರಿಗೆ ಹಾಸ್ಯರಸವಿಜ್ಞತೆ ಇತ್ತು. ಇದರಿಂದ ಅನಾಹುತಕ್ಕೆ ಕಾರಣವಾದ ಸನ್ನಿವೇಶಗಳು ಕೂಡ ಒಂದುವೇಳೆ ಪ್ರಹಸನ ರೂಪಕ್ಕೆ ತಿರುಗಿ ನಗುವಿ ನಲ್ಲಿ ಕೊನೆಗಾಣುತ್ತಿದ್ದವು. ಇದಕ್ಕೆ ಉದಹರಣೆಗಾಗಿ ಒಂದು ಕತೆ :

ಹುಜೂರು ಜಮಾಬಂದಿ ಕಾಲದಲ್ಲಿ ಸಬ್ ಡಿವಿಜನ್ ಆಫೀಸರೂ ನಾನೂ ಒಂದು ಗ್ರಾಮದಲ್ಲಿ (ಅದರ ಹೆಸರು ಬೇಡ) ಮೊಕ್ಕಾಂ ಮಾಡು ತ್ತಿದ್ದೆವು. ಸಾಹೇಬರು ಊರ ಹೊರಗಿನ ತೋಪಿನಲ್ಲಿ ಡೇರ ಹಾಕಿ ಕೊಂಡಿದ್ದರು. ನಾನು ಊರ ಮಧ್ಯದ ಸ್ಕೂಲ ಮನೆಯಲ್ಲಿ ಬಿಡಾರ ಮಾಡಿದ್ದೆ. ರಾತ್ರಿ ಸುಮಾರು ಎರಡು ಘಂಟೆಯಲ್ಲಿ ಭಾರಿ ಗಲಾಟೆಯ ಸದ್ದಿನಿಂದ ನನಗೆ ಎಚ್ಚರವಾಗಿ, ನಾನು ನನ್ನ ಆರ್ಡರ್ಲಿ (orderly)ಗೆ, 'ಅದೇನೋ, ನೋಡೋ' ಎಂದು ಕಳಿಸಿದೆ. ಆ ಬೀದಿಯಲ್ಲೇ— ಊರಲ್ಲಿ ಒಂದೇ ಮುಖ್ಯ ಬೀದಿ— ಬೊಬ್ಬೆ ಎದ್ದಿದ್ದದ್ದು. ಆಳು ವಿಚಾರಿಸಿಕೊಂಡು ಬಂದು— ಆ ಪೋಲಿ ಹುಡುಗ, ಸಾಹೇಬರ ಜವಾನ (ಅವನ ಹೆಸರು ಮರೆತೆ ; ಅವನು ಪೋಕೀಲ ಸಣಕಲ ತಿರೀವಿಾಶೆ,

ರಾಜೀವಾರರ ಸುಮಾರು ಇಪ್ಪತ್ತೆರಡು ವರುಷದ ಹುಡುಗ) ಗೌಡರ ಸಿದ್ದಮಲ್ಲಪ್ಪನವರ ಯಜಮಾನಿಯುವರನ್ನ (ಹೆಸರು ಬದಲಾಯಿಸಿದ್ದೇನೆ) ಕೆಣಕಿ ಸಿಕ್ಕಿಬಿದ್ದವನೆ— ಎಂದು ಹೇಳಿದ. ಈ ಕೆಡಕಿನ ಕೇಡಿಗತನ ವನ್ನೂ, ಈ ಜನಗಳ ಸ್ವಾಭಾವಿಕ ಆತ್ಮಗೌರವ, ಮುಂಗೋಪವನ್ನೂ ನೆನೆದು ನಾನು ಅನಾಹುತದ ಭೀತಿಯಿಂದ ಕೂಡಲೆ ಶಾಲನ್ನು ಹೊದ್ದು ಈಚೆಗೆ ಹೊರಟೆ. ಅಷ್ಟರಲ್ಲೇ ಕೋಲಾಹಲ ಉಕ್ಕಿ ಏಕಾಏಕಿ ಜನ ಸಮುದಾಯದ ಘೊಳ್ಳೆಂಬ ಘಟ್ಟಿ ನಗುವಾಗಿ ಪರಿಣಮಿಸಿತು. ನಾನು ಸಮೀಪಕ್ಕೆ ಹೋಗಿ ಮರೆಯಾಗಿ ನಿಂತು ನೋಡಲಾಗಿ ನಾನೂ ನಗು ವುದಕ್ಕೆ ಪ್ರಾರಂಭಿಸಿದೆ. ತಡೆಯಲಿಕ್ಕಾಗಲಿಲ್ಲ— ನಾನು ನೋಡಿದ್ದು, ಈ ದೃಶ್ಯ. ಗೌಡನ ಮನೆಯ ಮುಂದೆ, ಲಾಟೀನ್ ಪಂಜುಗಳ ಬೆಳಕಿ ನಲ್ಲಿ ಇಪ್ಪತ್ತು ಮೂವತ್ತು ಜನ ಪಕ್ಕೆ ಹಿಡಿದು ನಗುತ್ತಿರುವ ಕಂಬಳಿ, ಹಚ್ಚಡ, ರಾತ್ರೆ ಬಟ್ಟೆಗಳನ್ನು ಹೊದ್ದ ಜನಗಳ ಗುಂಪು. ಅವರೆಲ್ಲರ ಗಿಂತಲೂ ಗೌಡ ಘಟ್ಟಿಯಾಗಿ ನಗುತ್ತಾನೆ. ಶ್ರೀ ಚಾಮುಂಡಾಂಬಿಕೆಯ ವಿಗ್ರಹವೋ ಎಂಬಂತೆ ಎತ್ತರ, ಶರೀರ ಸಂಪತ್ತು, ಮುಖದ ಅನುಭಾವ ವುಳ್ಳ ನಡುಪ್ರಾಯದ ಹೆಂಗಸು ಸಣಕಲ ತಬ್ಬಿಪ್ಪೆ ಮುಖದ ಬೊಬ್ಬಿಬ್ಬೆ ಮಾತಿನ, ಆದುರು ವ್ಯೈಯ್ಯ ಕದರು ಕೂದಲಿನ, ತರುಣನನ್ನು ಎರಡು ಮಣಿಗಟ್ಟುಗಳನ್ನೂ ಸೇರಿಸಿ ಒಂದೇ ಕೈಯಿಂದ ಹಿಡಿದು, ನೋಗ ತೋರಿ ಸೋ, ನನ್ನ ಹಳಮಗನೆ—ಎಂದು ಹೇಳುತ್ತಾ ಇನ್ನೊಂದು ಕೈಯಿಂದ ಅವನ ಗಡ್ಡವನ್ನು ಎತ್ತುತ್ತಾಳೆ. ಅವಳು ಅಲ್ಲಿ ಸೇರಿದ್ದ ಅಭಿಜನ ಭೂಯಿಷ್ಠವಾದ ಪರಿಷದಿಗೆ ಹೇಳಿದ ಕತೆಯಿದು:

"ಸರ್ರಾತ್ರಾಗೆ ಯಾರೋ ಕದ ತಟ್ಟಿ ಕದ ತೆಗೆ— ಅಂದ ಹಾಗಾ ಯಿತು. ನಾನು ಮೂಗೂರಿಗೆ ಹೋಗಿದ್ದ ಯಜಮಾನರು ಬಂದ ರೇನೋ—ಅಂತ ಕದ ತೆಗದೆ; ಈ ಹೈದ ಒಳಕ್ಕೆ ಬಂದು ಕದಮುಚ್ಚು, ಕದಮುಚ್ಚು—ಅಂದ. ಆವ ಹಿಂದೆ ಹಾಲಿಗೆ, ಬೆಣ್ಣೆಗೆ, ಸಾಹೇಬರಿಗೆ ಅಂತ ಎರಡು ಮೂರು ಸಲ ಬಂದಿದ್ದ. ಅದೇನಪ್ಪ, ಇಷ್ಹೊತ್ತಿನಾಗ ಬಂದ್ರಿ— ಅಂದಿ; ಮಾತಾಡದೇನೆ ನನ್ನ ಎದೆಗೆ ಕೈಯಾಕೋಕೆ ಬಂದ. ನಾನು ಅವನ ಕೈಹಿಡಿದು— ಅಯ್ಯೋ ನನ್ನ ಹಳಮಗನೇ? ಇಷ್ಟಕ್ಕೆ

ಬಂದ್ಯಾ? ಆಯ್ಯೋ! ಕಾವೂಲಿ ಕೂಸೆ! ನನ್ನ ಒಂದು ಮೊಲೆ ಅಲು ಉಂಡ್ರೆ ಕಟ್ರ್ರಯಾಗಿ ಸಾಯ್ತಿ—ಅಂತವನು ನನ್ನ ಕೆಣಕೋಕೆ ಬಂದ್ಯಾ — ಅಂತ, ಅವಗೆ ನಾಲ್ಕು ಮಟ್ಟು ಗುಮಕಿ, ಈಚೆಗೆ ದೂಡಿಕೊಂಡು ಬಂದಿ. ಅವ ಅರಚಿದ್ದು ಕೇಳಿ ನಾಲ್ಕು ಜನ ಸೇರಿದರು. ಅವರಿಗೆ ಒಪ್ಪಿಸೋ ಅಷ್ಟರಲ್ಲೇ ನಮ್ಮ ಗೌಡರೂ ಬಂದರು ಈ ತಿಗಣೆ, ಈ ಏನು, ಈ ಉಳ, ಏಳಿ, ಈ ಉಳ— ಇಂತೇ ಕೆಲಸಕ್ಕೆ ಬರಬೈದೇ ನೋಡಿ ”

ಆ ಹೆಣ್ಣು ಮಗಳ ಯಜಮಾನರು ಆರು ಅಡಿಯ, ತುಂಬಿದ ಮೈಯ, ಗಿರಿಜೆ ಮೀಸೆಯ ಆಳು. ಅವನನ್ನೂ, ಅವನ ಹೆಂಡತಿಯನ್ನೂ, ಅವಳ ಲಾವಣ್ಯಕ್ಕೆ ಆಹುತಿಯಾಗಿ ಶಿಖಿಯಲ್ಲಿ ಬಿದ್ದ ಚಿಟ್ಟೆಯಂತಿರುವ ಆ ಬಡಪಾಯಿ ಪೋಕರಿಯನ್ನೂ ಆ ಸನ್ನಿವೇಶದಲ್ಲಿ ನೋಡಿದರೆ ಯಾರಾದರೂ ನಗುವದೇ ಸರಿ.

ಆಮೇಲೆ?

“ಈ ಬಡ್ಡಿಮಗನಿಕೆ ಹಿಡಮಾಡಿ ಬಿಡೋಣ್ರೋ” ಎಂದು ಒಬ್ಬನ ಸಲಹೆ. ಹಾಗೇ “ತಲೆ, ಹುಬ್ಬು, ಮೀಶೆ ಬೋಳಿಸಿಬಿಡೋಣ” “ಕತ್ತೆಯ ಮೇಲೆ ಕೂಡಿಸಿ ಎಕ್ಕಡದಸರ ಹಾಕಿ ಮೆರವಣಿಗೆ ಮಾಡ್ಸಿದರೋ?” ವಗೈರೆ, ವಗೈರೆ. ಕೊನೆಗೆ ಒಬ್ಬ—ಪಟೇಲನ ಧ್ವನಿಯಂತೆ ನನಗೆ ತೋರಿತು—“ಇದೇನು ಮಾತು? ಸುಬೇದಾರರು, ಸಬ್ ಡಿವಿಜನ್ ಸಾಹೇಬರೂ ಇಲ್ಲೇ ಅವರೆ. ನಮಗೆಲ್ಲ ಕೂಡ್ಲೆ ಜೈಲಿಗೆ ಕೂಡಬೇಕೂಂತಲೆ, ನೀವು ಏಳೋದಾದ್ರೂ? ಆ ಸಂಪನ್ನೇನ ಕೋರ್ಟಿಗೆ ಎಳೀಬೇಕೂ ಅಂತ್ಲೇ? ನಾಲ್ಕು ವದೇವದ್ದು ಬಿಟ್ಟು ಬಿಡಿರಿ ಸಾಕು. ಪೋಗಿ ಮಲಗೋಣ” ಸಿದ್ದಮಲ್ಲಪ್ಪ ಆ ಬಿಚಾರಿ ಭುಜಂಗನನ್ನು ಕತ್ತಿನ ಹಿಂಭಾಗದಿಂದ ಬೆಕ್ಕಿನಮರಿಯನ್ನು ಹಿಡಿಯುವಂತೆ ಹಿಡಿದು ಎತ್ತಿ ರಸ್ತೆ ಕಡೆಗೆ ಅವನ ಮುಖವನ್ನು ತಿರುಗಿಸಿ ಅವನ ಪೃಷ್ಠದಮೇಲೆ ಫುಟ್ ಬಾಲನ್ನು ವದೆಯುವಂತೆ ಎರಡು ವದೆ ತಾ ವದ್ದು ಕೈಬಿಟ್ಟ. ಅವನು ವದೆಯ ಬಲುಮೆಯಿಂದ ಲಭಿಸಿದ ವೇಗವನ್ನು ಕಳೆದು

ಕೊಳ್ಳದೆ ಸತ್ತೆನೋ ಕೆಟ್ಟೆನೋ ಅಂತ ಓಡಿಹೋದ. ಎಲ್ಲರೂ ಹೊರಟುಹೋದರು.

ಟಿ. ನರಸೀಪುರದ ತಾಲ್ಲೂಕಿನ ಶಿವಾಚಾರ ಪ್ರಜೆಗಳಿಗೆ, ನನಗೆ, ಕೆಲವು ದಿನಗಳಲ್ಲೇ ಬಹಳ ಅನ್ಯೋನ್ಯ ಅನುರಾಗ ಉಂಟಾಗಿ ಅದು ದಿನೆ ದಿನೆ ಅಭಿವೃದ್ಧಿಗೆ ಬಂದಿತು. ನನ್ನನ್ನು ಕಂಡರೆ ಅವರಿಗೆ ಬಹಳ ಮೆಚ್ಚಿಗೆ, ಪ್ರೇಮ. ನಾನು ಹೇಳಿದ ಮಾತನ್ನು ಶ್ರದ್ಧೆಯಿಂದ ನಡಸುವರು. ಪಂಚಲಿಂಗ ದರ್ಶನದ ಕತೆ ನಾನು ಮುಂದೆ ಹೇಳುತ್ತೇನೆ. ಆ ಸಂದರ್ಭದಲ್ಲಿ ನನ್ನ ಕೋರಿಕೆಯಂತೆ ಪ್ರತಿಯೊಂದು ಗ್ರಾಮದಿಂದಲೂ ಸರದಿ ಮಾಡಿಕೊಂಡು ಒಟ್ಟು ಐದು — ಆರು ಸಾವಿರ ಆಳುಗಳು ತಲಕಾಡು ಮರಳಿನಲ್ಲಿ ಹೂಳಿಹೋಗಿದ್ದ ದೇವಸ್ಥಾನಗಳ ಮೇಲಿನ ಮರಳನ್ನು ತೋಡುವುದಕ್ಕಾಗಿ ಸುಮಾರು ತಿಂಗಳ ಕಾಲ ಭಕ್ತಿಯಿಂದ ಕೆಲಸಮಾಡಿದರು. ಇದು ದೇವರ ಮೇಲಿನ ಭಕ್ತಿಯಿಂದ, ನನ್ನ ಮೇಲಿನ ಆದರದಿಂದ, ವಹಿಸಿಕೊಂಡ ಪ್ರೇಮಶ್ರಮವೇ ಹೊರತು, ಮಜೂರಿ, ಬಲವಂತಗಳ ಸಲುವಾಗಿ ಮಾಡಿದ ಕೆಲಸವಲ್ಲ. ಇವರ ಸೇವೆಯಿಂದ ನೂರಾರು ವರುಷಗಳಿಂದ ಮರಳಿನಲ್ಲಿ ಮಗ್ನವಾಗಿ ಈಚೆಗೆ ಗೋಪುರ ಕೂಡ ಗೋಚರವಿಲ್ಲದಿದ್ದ ಕೆಲವು ಪುರಾಣ ಪ್ರಸಿದ್ಧ ದೇವಸ್ಥಾನಗಳು ಪುನಃ ಬೆಳಕನ್ನು ಕಂಡು, ಭಕ್ತಾದಿಗಳ ಸಂಚಾರಕ್ಕೆ ಸೇವೆಗೆ ಅನುವಾದವು. ಅವುಗಳಲ್ಲಿ ಪುನಃ ಅರ್ಚನೆ, ಸೇವೆ, ರಾಜಾಶೀರ್ವಾದಗಳಿಗೆ ಅವಕಾಶವಾಯಿತು.

ಜನಗಳಿಗೆ ನನ್ನಲ್ಲಿರತಕ್ಕ ಪ್ರೇಮಾತಿಶಯವನ್ನು ನೋಡಿ, ನನ್ನ ಅತಿಥಿಗಳಾಗಿ ಬಂದಿದ್ದ ಒಬ್ಬ ದೊಡ್ಡಮನುಷ್ಯರು — ಪೂರ್ವಕಾಲವಾಗಿದ್ದರೆ ನೀವು ಈ ತಾಲ್ಲೂಕನ್ನು ನಿಮ್ಮ ಪಾಳ್ಯಪಟ್ಟಾಗಿ ಮಾಡಿಕೊಂಡು ಆಳಬಹುದಾಗಿತ್ತು—ಎಂದು ನಗುತ್ತಾ ಹೇಳಿದರು. ನಾನೂ ನಕ್ಕು— ಈ ಪ್ರೇಮ ರಾಜರಿಗೆ ಸಲ್ಲುವ ಕಂದಾಯ; ಇತರ ಕಂದಾಯಗಳಂತೆಯೇ ಇದನ್ನೂ ನಮ್ಮ ಧಣಿಪರವಾಗಿ ಪಡೆದು ಅವರಿಗೇ ಒಪ್ಪಿಸುತ್ತಿದ್ದೇನೆ. ಅವರ ಅನ್ನಪ್ರಭಾವದಿಂದಲೇ ಇದೆಲ್ಲ ಲಭಿಸುತ್ತಿರುವುದು—ಎಂದೆ. ಒಂದೊಂದುವೇಳೆ ನನ್ನಲ್ಲಿ ಜನಗಳಿಗಿದ್ದ ಪ್ರೇಮ

ವನ್ನು ಎಣಿಸಿದರೆ ನನಗೇ ಆಶ್ಚರ್ಯವಾಗುತ್ತಿತ್ತು. ಪ್ರೇಮವು ಐಶ್ವರ್ಯ ದಂತೆಯೇ ದೇವರ ಕಟಾಕ್ಷದಿಂದ ಬರುತ್ತದೆ; ಅರ್ಹತೆ ಇಲ್ಲದೆ ಬರ ಬಹುದು, ತಪ್ಪಿತವಿಲ್ಲದೆ ಹೋಗಬಹುದು. ಜನಗಳಿಗೆ ನನ್ನಲ್ಲಿ ಒಳ್ಳೆಯ ಅಭಿಪ್ರಾಯ ಬರಲಿಕ್ಕೆ ನನಗೆ ತಿಳಿದ ಕಾರಣಗಳು—ನನಗೆ ಜಾತಿ ಸಂಬಂಧವಾದ ಪಕ್ಷಪಾತ ಈಷತ್ತೂ ಇಲ್ಲ; ವೀರಶೈವರೆಂದರೆ ಅವರ ಮತದ ಜನ್ಮಕಾಲದಲ್ಲಿದ್ದ ಸಾಮಾಜಿಕ ದೋಷಗಳನ್ನು ತೊಳೆದು ಮಾನವ ಹೃದಯವನ್ನು ಶುದ್ಧಿಗೊಳಿಸಿ, ಬಾಳಿನಲ್ಲಿನ ಹಲವು ಅನ್ಯಾಯ ಗಳನ್ನು ಸರಿಪಡಿಸಿದ ಸುಧಾರಣೆಯ ಸಮಾಜದವರೆಂದು ನನ್ನ ನಂಬಿಕೆ. ಅವರ ಕ್ಷೇತ್ರಗಳೆಂದರೆ ನನಗೆ ಗೌರವ, ಅವರ ಸನ್ಯಾಸಿಗಳೆಂದರೆ ನನಗೆ ಮರ್ಯಾದೆ ನನಗೆ ಸಾಮಾನ್ಯವಾಗಿ ಸರಳ ಹೃದಯದ ಜನಗಳೆಂದರೆ ನೈಸರ್ಗಿಕ ಪ್ರೀತಿ ನನಗೆ ದೇವರು ಬುದ್ಧಿ ಕೊಟ್ಟಿರುವುದನ್ನು ದೇವರ ಮೇಲೆ ಭಕ್ತಿಯಿಂದ ಭಾರವಿಟ್ಟು ನಿರ್ಭಯವಾಗಿ, ನಿರ್ದಾಕ್ಷಿಣ್ಯದಿಂದ ನನ್ನ ಕರ್ತವ್ಯ ಮಾಡುವುದರಲ್ಲಿ ಉಪಯೋಗಿಸಬೇಕೆಂಬುವು ನನ್ನ ಗುರುಗಳ ಅನುಗ್ರಹದಿಂದ ಬಂದ ನನ್ನ ಜೀವನದ ತತ್ವ. ನಾನು ಬಲ್ಲೆ, ಇದೇ ತತ್ವದಿಂದ ಸತ್ಯವಾಗಿ ಕೆಲಸ ಮಾಡಿದ ಕೆಲವರು ಜನಗಳ ದ್ವೇಷಕ್ಕೂ ಪಾತ್ರರಾಗಿದ್ದಾರೆ. ನಾನು ಅದೃಷ್ಟಶಾಲಿ ಎಂದು ಹೇಳ ಬೇಕಷ್ಟೆ.

ಮೇಲೆ ಹೇಳಿರುವುದು ಆ ತಾಲ್ಲೂಕಿನ ಜನಸಾಮಾನ್ಯದ ಮಾತು. ಈ ಪ್ರದೇಶದಲ್ಲಿ ತುಂಟರು, ಪಿತೂರಿಗಾರರು, ದೊಂಬಿಕೋರರು ಇರ ಲಿಲ್ಲವೆಂದಲ್ಲ ನಾನು ಟಿ ನರಸೀಪುರಕ್ಕೆ ಬರುವುದಕ್ಕೆ ಮುಂಚೆಯೇ ಇವರುಗಳ ಪೈಕಿ ಅನೇಕರು ನನ್ನ ಮರ್ಜಿಯನ್ನು ತಿಳಿಯಬೇಕೆಂಬ ಕುತೂಹಲದಿಂದ ಯಡತೊರೆಯವರನ್ನೂ, ಮೈಸೂರು ಲಾಯರುಗ ಳನ್ನೂ ವಿಚಾರಿಸುತ್ತಿದ್ದರೆಂದು ಕಾಣುತ್ತದೆ. ನಾನು ನಿಸ್ಪೃಹ, ಕೋಪಿಷ್ಠ, ದಾಕ್ಷಿಣ್ಯಕ್ಕೆ ಒಳಪಡತಕ್ಕವನಲ್ಲ, ಹಟವಾದಿ, ಧೈರ್ಯಶಾಲಿ, 'ಕ್ರೂರ, ಸ್ತೋತ್ರಪ್ರಿಯ; ನಾನು ಡೆಪ್ಯುಟಿ ಕಮಿಷನ್ನರವರ ಮೆಚ್ಚಿನ ಅಮಲ್ದಾರ, ನನಗೆ ಸರ್ಕಾರದಲ್ಲೂ ಬೆಂಬಲವಿದೆ, ನಾನು ಬಹಳ ಅಹಂಕಾರಿ, ಸರ್ವಜ್ಞಮಾನಿ, ವಗೈರೆ ವಗೈರೆ ಗುಣಗಳ ಮಿಲನವಾದ

ನನ್ನ ಕೀರ್ತಿ ಮೊದಲೇ ಹೋಗಿ ನನ್ನ ಕೆಲಸದ ವಾತಾವರಣವನ್ನು ಪ್ರೇರೇಪಿಸಿತ್ತು. ಆದರೆ ನನ್ನ ಸ್ವಭಾವದಲ್ಲಿ ಒಂದು ಭೇದ್ಯವಾದ ಸ್ಥಾನವಿದೆಯೆಂದು ಜನಗಳು ತಿಳಿದಿದ್ದರಂತೆ ; ಅದು ನನ್ನಗಾನಲೋಲತೆ —ಆದರಿಂದ ಜನಿತವಾದ ಗಾಯಕ, ಗಾಯಕಿ—ಮುಖ್ಯವಾಗಿ ಗಾಯಕಿ ಯರ ಮೇಲಿನ ಪಕ್ಷಪಾತ. ನನಗೇನೋ ಸಂಗೀತದಮೇಲೆ ಬಹಳ ಪ್ರೇಮ, ನಿಜ ; ನಾನು ಹುಡುಗನಾಗಿದ್ದಾಗ ಯಾವಾಗಲೂ ಘಟ್ಟಿಯಾಗಿ ಹಾಡಿ ಅದರ ನಿಮಿತ್ತವಾಗಿ ಸಂಗೀತಪ್ರಿಯರಲ್ಲದ ನನ್ನ ಒಡನಾಡಿಗಳ ಸಂಗಡ ಎಷ್ಟೋ ಸಲ ವಾರಾಮಾರಿ ಮಾಡಿದ್ದೆ ; ಕ್ರಮೇಣ ನನ್ನ ಧ್ವನಿಯ ಶ್ರವಣ ನನಗೇ ತಿಳಿದು ಹಾಡುಗಾರಿಕೆಯನ್ನು ಬಿಟ್ಟು ಪಿಟೀಲು ನುಡಿಸುವುದನ್ನು ಅಭ್ಯಾಸಮಾಡಿದೆ. ನನ್ನ ರೂಂ—ಮೇಟ್ ಆದ ರಾಜಾಜಿಯವರು ಆ ನನ್ನ ಸಾಧನೆಯ ಸಾಹಸದಿಂದ ಎಷ್ಟು ನೊಂದರೋ ನನಗೆ ತಿಳಿಯದು. ಅವರು ನನ್ನ ಪಿಟೀಲನ್ನು ಒಡೆಯದಿದ್ದದ್ದು, ನನ್ನನ್ನು ಬಿಟ್ಟು ದೂರವಾದ ಬೇರೆ ರೂಮಿಗೆ ಹೋಗದಿದ್ದದ್ದು, ಅವರಿಗೆ ನನ್ನ ಮೇಲಿದ್ದ ಅಪಾರ ಪ್ರೇಮದ ನಿದರ್ಶನ. ನಾವು ಮದರಾಸಿನಲ್ಲಿ ತಂಬುಚೆಟ್ಟಿ ಬೀದಿಯಲ್ಲಿ ಗುರುಮೂರ್ತಿ ಅಯ್ಯರೆಂಬ ಒಬ್ಬರ ಮನೆ ಯಲ್ಲಿ ಕೊಠಡಿಯನ್ನು ಮಾಡಿಕೊಂಡಿದ್ದೆವು. ನಾನು ಒಂದು ದಿವಸ ಭೈರವಿ ರಾಗದ "ವೀರಿಬೋಣಿ" ವರ್ಣವನ್ನು ಅಭ್ಯಾಸ ಮಾಡುತ್ತಾ ಇದ್ದೆ. ಆ ಅಂತಸ್ತಿನ ರೂಮುಗಳಲ್ಲಿದ್ದ ನನ್ನ ಸ್ನೇಹಿತರೆಲ್ಲರೂ ಒಬ್ಬ ರಾದ ಮೇಲೊಬ್ಬರು ಅಲ್ಲಿಂದ ಪಲಾಯನ ಮಾಡಿದರು. ನಾನು ಹೆದರ ಲಿಲ್ಲ. ಇನ್ನೂ ಜೋರಾಗಿ, ಇನ್ನೂ ರಭಸದಿಂದ ಕಮಾನು ಹೊಡೆಯ ಲಾರಂಭಿಸಿದೆ. ಉತ್ಸಾಹದಲ್ಲಿ ಮೈಮರೆತೆ. ಮನೆತುಂಬ ಸದ್ದು, ಮೈ ಎಲ್ಲ ಬೆವರು. ಸಂಗೀತಗಾರನ ಶರೀರದ ಆಯಾಸದಿಂದ ಸಂಗೀತ ವಿರಸವಾಯಿತು. ಆಗ ಮನೆ ಮಾಲೀಕರ ಕಡೆ ಒಕ್ಕಲಗಿತ್ತಿ ಬಂದು — ಪಿಟೀಲು ಬಹಳ ಚೆನ್ನಾಗಿದೆ, ಸ್ವಲ್ಪ ಇಸುಕೊಂಡು ಬರಹೇಳಿದರು ಅಮ್ಮಾವರು—ಎಂದು ಕೇಳಿದಳು. ನನ್ನ ಪಿಟೀಲನ್ನು ಯಾರಾದರೂ ಮೆಚ್ಚಿದರೆ ನನಗೆ ಎಷ್ಟು ಮೈಯುಬ್ಬು ನೋಡಿ — ಪಿಟೀಲನ್ನು ಕೊಟ್ಟೆ. ಆ ಮಹರಾಯಗಿತ್ತಿ ಅದನ್ನು ಪೆಟ್ಟಿಗೆಯಿಂದ ತೆಗೆಯದೆಯೇ ಎರಡು

ತಿಂಗಳು ತನ್ನಲ್ಲೇ ಇಟ್ಟುಕೊಂಡಿದ್ದು — ಅಷ್ಟು ಹೊತ್ತಿಗೆ ರಜ ದಿನ ಬಂದು ನಾನು ಊರಿಗೆ ಹೋಗುವ ಸಮಯ ಸಮೀಪಿಸಿತು — ಕೊನೆಗೆ ವೀರಿಬೋಣಿ ವರ್ಣವನ್ನೇ ಪಂಡಿತರು ನುಡಿಸುವಂತೆ ತಾನೇ ನುಡಿಸಿ— ಪಿಟೀಲನ್ನು ನನಗೆ ಈ ಸಂದೇಶದೊಂದಿಗೆ ವಾಪಸು ಮಾಡಿದರು—

"ಈಗ ನಾನು ನುಡಿಸಿದ ಮಟ್ಟಿಗೆ ನುಡಿಸುವುದಕ್ಕೆ ಬರುವ ವರಿಗೂ ಸಮುದ್ರತೀರ ಅಥವ ಅಂಥ ನಿರ್ಜನ ಪ್ರದೇಶದಲ್ಲಿ ಅಭ್ಯಾಸ ಮಾಡುವುದು ಸಜ್ಜನರ ಸ್ವಭಾವ, ರಜ ದಿವಸದಲ್ಲಿ ಮೈಸೂರು ಬೆಟ್ಟದ ತುದಿ (ಪಾಪ, ಆಕೆಗೆ ಚಾಮುಂಡಿ ಬೆಟ್ಟದ ಹೆಸರು ಮಂದಟ್ಟಿಲ್ಲ) ಪಿಟೀಲು ಸಾಧನೆಗೆ ಒಳ್ಳೇ ಸ್ಥಳ"

ಈ ಉಪನೆನಪನ್ನು ಕ್ಷಮಿಸಿ; ಪಿಟೀಲೆಂದರೆ ಜ್ಞಾಪಕ ಬಂತು. ಇದು ನಾನು ಸಂಗೀತದ ಸ್ವಯಮಾಚಾರ್ಯಪುರುಷನಾಗಿದ್ದಾಗಿನ ನೆನಪು. ನಾನು ಸಂಪಾದಿಸುವುದಕ್ಕೆ ಪ್ರಾರಂಭಿಸಿದಮೇಲೆ ಮೇಷ್ಟರುಗಳನ್ನಿಟ್ಟು ಕೊಂಡು ಕಲಿತೆ. ನನಗೆ ಸಂಬಳವೂ, ಅಧಿಕಾರವೂ, ಹೆಚ್ಚಾದ ಹಾಗೆಲ್ಲ ನನ್ನ ನೈಪುಣ್ಯ — ಅಥವ ಅದಕ್ಕೆ ಸಲ್ಲುತ್ತಿದ್ದ ತಾರೀಫು—ಹೆಚ್ಚಾಗುತ್ತ ಬಂತು. ಆದರೆ ಒಂದು ಕಾಲದಲ್ಲಿ ಯೋಗಿಗಳಿಗೆ ಆತ್ಮದರ್ಶನವಾಗು ವಂತೆ ನನಗೆ ನನ್ನ ವಾದನಶ್ರವಣವಾಗಿ, 'ನಾನು ಚನ್ನಾಗಿ ನುಡಿಸುತ್ತೇ' ನೆಂಬ ಮೋಹದಿಂದ ಬಿಡುಗಡೆಯಾಯಿತು. ಆದರೂ, ನಾನು ಅಷ್ಟು ದಿನ ಶ್ರಮಪಟ್ಟಿದ್ದರ ಫಲವಾಗಿ ಸಂಗೀತದಲ್ಲಿ ಸಂಪೂರ್ಣ ಪ್ರೇಮ, ಕೂಡಿದ ಮಟ್ಟಿಗೆ ಜ್ಞಾನ, ಇವುಗಳಿಂದ ಜನಿತವಾದ ರಸಿಕತೆ ನನ್ನಲ್ಲಿ ನೆಲೆಯಾಗಿ ನಿಂತವು. ಒಳ್ಳೆ ಸಂಗೀತವೆಂದರೆ ಸಾಧ್ಯವಾದರೆ ಕೇಳ ಹೋಗುತ್ತಿದ್ದೆ; ನಾನಿದ್ದ ಕಡೆಗೆ ಒಳ್ಳೆ ಸಂಗೀತಗಾರರು ಬಂದರೆ, ಕಛೇರಿ ಮಾಡಿಸಿ ಅವರಿಗೆ ಪ್ರೋತ್ಸಾಹ ಕೊಡುತ್ತಿದ್ದೆ. ಭರತಶಾಸ್ತ್ರ, ನಾಟ್ಯವೆಂದರೂ ನನಗೆ ಬಹಳ ಇಷ್ಟ. ಅದರಲ್ಲೂ ಗೀತಗೋವಿಂದದ ಅಷ್ಟಪದಿಗಳ ಅಭಿನಯ ಸಹಿತ ಗಾಯನವೆಂದರೆ ನನಗೆ ಬಹಳ ಪ್ರೇಮ.

ನಾನು ಟಿ ನರಸಿಪುರಕ್ಕೆ ಬಂದಾಗ ನಾನು ಮೇಲೆ ವಿವರಿಸಿರುವ ಬಣ್ಣರೇಖೆಗಳ ನನ್ನ ಭಾವಚಿತ್ರ ಅನೇಕರಲ್ಲಿತ್ತೆಂದು ನನಗೆ ಕ್ರಮೇಣ ನನ್ನ ಸ್ನೇಹಿತರಾದ ಶ್ರೀ ಧರ್ಮರಾಯರು, ಶ್ರೀ ವೆಂಕಟರಮಣಶ್ರೌತಿ

ಗಳೆಂಬ ನನ್ನ ನೆರೆಯ ಅಮಲ್ದಾರರುಗಳಿಂದ ನಾನು ಉಪಾಯವಾಗಿ, ಸೂಕ್ಷ್ಮವಾಗಿ ವಿಚಾರಿಸಿ ತಿಳಿದೆ.

ಟಿ. ನರಸೀಪುರದ ತರಲೇ ಮುಖಂಡರಿಗೂ, ಯಡತೊರೆಯ ವರಿಗೂ ಒಂದು ದೊಡ್ಡ ವ್ಯತ್ಯಾಸ. ಯಡತೊರೆಯವರು ಎದುರುಬಿದ್ದು ತಮ್ಮ ಮನೋಭಾವವನ್ನು ಬೈಲುಮಾಡುವರು. ನರಸೀಪುರದವರು ಪಿತೂರಿಗಾರರು—ಅಧಿಕಾರಿಗಳ ಸ್ವಭಾವವನ್ನೂ ಇಂಗಿತವನ್ನೂ ಪರೀಕ್ಷಿಸಿ ತಿಳಿದು ಅವರನ್ನು ವಶಪಡಿಸಿಕೊಳ್ಳುವುದಕ್ಕೋ, ಹಳ್ಳಕ್ಕೆ ತಳ್ಳುವುದಕ್ಕೋ, ಯತ್ನ ಮಾಡತಕ್ಕವರು. ಈ ಉದ್ದೇಶವನ್ನು ಸಾರ್ಥಕಪಡಿಸಿಕೊಳ್ಳುವುದಕ್ಕೆ ಬಹಳ ಬುದ್ಧಿಯನ್ನು ಉಪಯೋಗಿಸುವರು. ಇದಕ್ಕೆ ನಿದರ್ಶನವಾಗಿ ಒಂದು ನಿಜವಾದ ಉಪಾಖ್ಯಾನವನ್ನು ಹೇಳುತ್ತೇನೆ, ಕೇಳಿ ಇದೇ ತಾಲ್ಲೂಕಿನಲ್ಲಿ ಒಂದು ದೊಡ್ಡ ಗ್ರಾಮ—ಅದರ ಹೆಸರು ಏಕೆ? ಅದರಲ್ಲಿ ಮುಖಂಡನಾದವನು ಒಬ್ಬ ಪ್ರಖ್ಯಾತನಾದ ಪಟೇಲ. ಅವನ ಹೆಸರೂ ಬೇಡ. ಆಗಿನ ಅಮಲ್ದಾರರು ಯುವಕರು ರಸಿಕರು—ಅವರೂ ಅನಾಮಧೇಯರಾಗೇ ಇರಲಿ. ಪಟೇಲನ ಪ್ರತಿಕಕ್ಷಿಯ ನಾಯಕನು ಆ ಗ್ರಾಮದ ಶ್ಯಾನುಭೋಗ. ಪಟೇಲ ಷೋಕೀಲ; ಸಂಗೀತ, ನರ್ತನ, ನರ್ತಕಿ—ಇವುಗಳ ಭೋಜ ಸದೃಶ ವಿಮರ್ಶಕ, ವ್ಯವಸ್ಥಾಪಕ, ಪ್ರೋತ್ಸಾಹಕ ಧಣಿ. ಆ ಗ್ರಾಮವು ಕಲಾನಿಪುಣೆಯರಾದ ವೇಶ್ಯೆಯರ ತವರೂರು. ಅಲ್ಲಿ ಹುಟ್ಟಿದ ಕಲಾಸಂಪನ್ನೆಯರು ಮೈಸೂರು ಮದರಾಸು ಪ್ರಾಂತ್ಯಗಳ ಅನೇಕ ಕಡೆಗಳಲ್ಲಿ ತಮ್ಮ ಕಸಬಿನಲ್ಲಿ ಅಭಿವೃದ್ಧಿಗೆ ಬಂದು, ತಮ್ಮ ಊರಿನ ಹೆಸರನ್ನು ಪ್ರಸರಿಸಿರುವರು. ಇವರೆಲ್ಲರೂ ನಾನು ಹೇಳಿದ ಪಟೇಲರ ಶಿಷ್ಯವರ್ಗಕ್ಕೆ, ಮತ್ತು ಊಳಿಗಕ್ಕೆ ಸೇರಿದವರೆಂದು ಪ್ರತೀತಿ. ಶ್ಯಾನುಭೋಗರಾದರೋ, ಈ ಅಪ್ಸರ ಸೈನ್ಯ ವರ್ಜಿತರಾದರೂ ಬೇರೇ ರೀತಿಯಲ್ಲಿ ಜನಗಳನ್ನು ಗಂಟುಹಾಕಿಕೊಳ್ಳುತ್ತಿದ್ದರು. ಹಾಗೂ ಕೋರ್ಟು ಕಛೇರಿ ಕೆಲಸಗಳಲ್ಲಿ ಅವರಿಗೆ ಸಹಾಯ್ಯ ಮಾಡುವುದು; ಲಾಯರುಗಳ ಹತ್ತಿರ ಕರೆದುಕೊಂಡು ಹೋಗುವುದು, ತಮ್ಮ ಅಮೋಘವಾದ ವ್ಯವಹಾರ ಜ್ಞಾನದ ಬಲದಿಂದ ಕಾಗದಪತ್ರಗಳ ಘೋರಣೆಯಿಂದಲೂ, ಇತರ ರೀತಿಗಳಿಂದಲೂ ತಮ್ಮ ಪಕ್ಷದವರಿಗೆ

ಅನುಕೂಲವನ್ನೂ, ಪ್ರತಿಪಕ್ಷದವರಿಗೆ ಪ್ರತಿಕೂಲವನ್ನೂ ಮಾಡುವುದು; ಮುಖ್ಯವಾಗಿ ಪಟೇಲ "ಓ" ಅಂದರೆ "ರೋ" ಅನ್ನುವುದು, ಪಟೇಲನ ಮೇಲೆ ಜಿದ್ದು ಇದ್ದವರಿಗೆ ತಮ್ಮ ಉದಾರ ಆಶ್ರಯವನ್ನು ಕೊಡುವುದು— ಇವೇ ಅವರಲ್ಲಿದ್ದ ಆಕರ್ಷಣ ಮತ್ತು ಬಂಧನ ಉಪಾಯಗಳು. ಅಲ್ಲದೆ, ಇವರು ಪೂರ್ವಕಾಲದ ಪದ್ಧತಿಯಂತೆ ಊಟದ ವೇಳೆಗೆ ಎಷ್ಟು ಜನ ಬಂದರೂ, :ಆದರದಿಂದ ಅನ್ನಹಾಕುತ್ತಿದ್ದರು. ಅಮಲ್ದಾರರು ಆ ಗ್ರಾಮದಲ್ಲಿ ಮೊಕ್ಕಾಂ ಮಾಡಿದಾಗೆಲ್ಲ ತಾಲ್ಲೂಕು ಕಛೇರಿಯ ಶಿಬ್ಬಂದಿ ಸಾಮಾನ್ಯವಾಗಿ ಬ್ರಾಹ್ಮಣರೇ ಆದ್ದರಿಂದ (ನಾನು ಆ ಕಾಲದ ಮಾತು ಹೇಳುತ್ತಿದ್ದೇನೆ, ಜ್ಞಾಪಕವಿರಲಿ) ಅವರೆಲ್ಲರೂ ಶ್ಯಾನುಭೋಗರ ಅತಿಥಿಗಳೇ ಆಗಿರುತ್ತಿದ್ದರು. ಇದರಿಂದ ಅವರಿಗೆ ತಾಲ್ಲೂಕು ಕಛೇರಿಯ ಬಹಳ ಒಳಸಂಚು ಮಾಹಿತಿ, ಮತ್ತು ಸಹಾಯವಿದೆ ಎಂಬ ಬಲ ಬೇರೆ. ಈ ಗ್ರಾಮದಲ್ಲಿ ಶಿವಾಚಾರದವರು, ಪರಿವಾರದವರೆಲ್ಲ ಪಟೇಲರ ಕಡೆ; ಕುರುಬರು, ಬ್ರಾಹ್ಮಣರು ಶ್ಯಾನುಭೋಗರ ಕಡೆ. ಹರಿಜನರಲ್ಲಿ "ಬಲಗೈ" ಯುವರಿಗೆ "ಎಡಗೈ"ಯುವರಿಗೆ ಒಂದು ಕೊಳದ ನೀರಿನ ವಿಚಾರ ವಿವಾದ ಬಂತು. ಬಲಗೈಯುವರ ಪಂಗಡ ದೊಡ್ಡದು, ಆದರೆ ಎಡಗೈಯುವರ ವಾದ ಸ್ವಲ್ಪ ಸಲ್ಲುವದಾಗಿ ಬಲಗೈಯುವರಿಗೆ ಶಂಕೆ. ಬಲಗೈಯುವರು ತಮಗೆ ಸರ್ಕಾರದಲ್ಲಿ ಯಾರಿಂದ ಹೆಚ್ಚು ಸಹಾಯವಾದೀತೋ ಅವರ ಒತ್ತಾಸೆಪಡೆಯಬೇಕೆಂದು ನಿಶ್ಚಯಿಸಿದರು. ಸರ್ಕಾರವೆಂದರೆ ತಾಲ್ಲೂಕು ಅಮಲ್ದಾರರು ಶ್ಯಾನುಭೋಗರಿಗೆ ತಾಲ್ಲೂಕು ಕಛೇರಿಯಲ್ಲಿ ಅನೇಕ ಮಿತ್ರರಿದ್ದದ್ದರಿಂದ, ಮೇಲೆ ನೋಡುವರಿಗೆ ಇವರಿಂದಲೇ ಹೆಚ್ಚು ಸಹಾಯ ದೊರೆಯಬಹುದಾದ ಡೌಲು, ಅಲ್ಲವೇ? ಆದರೆ ನಮ್ಮ ಪಟೇಲರಿಗೆ ತೋರಿತಲ್ಲ—ಶ್ಯಾನುಭೋಗರಿಗೆ ಗುಮಾಸ್ತೆಗಳ ಸ್ನೇಹವಾದರೆ, ನಾನು ಅಮಲ್ದಾರರ ಸ್ನೇಹವನ್ನು ಯಾಕೆ ಸಂಪಾದಿಸಬಾರದು? ಅಥವ ಸಂಪಾದಿಸಿದೇನೆಂಬ ಭರವಸೆ ಕಕ್ಷಿಗಾರರಲ್ಲಿ ಯಾಕೆ ಹುಟ್ಟಿಸಬಾರದು?

ಸರಿ, ಅಮಲ್ದಾರರ ಹತ್ತಿರ ಹಾಜರುಭಾಷಿ ಮಾಡಹತ್ತಿದ. ಅವರು ಆ ಊರಿಗೆ ಬಂದಾಗೆಲ್ಲ ಪಟೇಲನೋ ಅವನ ಮನೆಯವರೋ ಹಣ್ಣು, ಹೂಗಳ ತಟ್ಟೆಯೊಡನೆ ಹಾಜರು. ಆ ಊರ ಪ್ರಸಿದ್ಧ ದೇವಾಲಯಗಳಲ್ಲಿ

ಪಟೀಲನ ಸೇವೆ, ಉತ್ಸವ; ಸೇವೆಯ ಅಂಗವಾದ ಸಂಗೀತ. ಮುಖ್ಯ ದೇವಸ್ಥಾನ ಅಲ್ಲಿನ ನರ್ತಕಿಯರ ಮನೆದೇವರ ಸ್ಥಾನವಾದ್ದರಿಂದ, ಅವರ ಸಂಗೀತ; ಇವುಗಳ ಸಂದರ್ಭದಲ್ಲಿ ಅಮಲ್ದಾರರಿಗೆ ಆಹ್ವಾನ—ಇದೊಂದು ಆಜೂಬಾಜಾರಿ ಮಾರ್ಗ. ಹಬ್ಬ, ಹಾಡಿ, ಮದುವೆ, ಇಂಥ ವೇಳೆಗಳಲ್ಲಿ ಪಾಟುಕಛೇರಿ, ತಾಫೆ; ಇಂಥವುಗಳಿಗೆ ಅಮಲ್ದಾರರನ್ನು ಬರಮಾಡಿಕೊಂಡು, ಅವರಿಗೆ ಆದರಪೂರ್ವಕವಾದ ಭಕ್ತಿಯ ಪ್ರದರ್ಶನ—ಇದೊಂದು ಉಪಾಯ. ಆದರೆ ಅಮಲ್ದಾರರು ಬಹು ಬೇಗ ಈ ತಂತ್ರವನ್ನು ಶಂಕಿಸಿ, ಉಪಚಾರಗಳಿಗೆ ಅವಕಾಶ ಕೊಡುವುದನ್ನು ನಿರಾಕರಿಸಿದರು. ಅಲ್ಲಿಗೆ ಪಟೀಲ ಬೇರೆ ಉಪಾಯವನ್ನು ಹುಡುಕಬೇಕಾಯಿತು.

ಆ ಉಪಾಯದ ಅಮಲು, ಪರಿಣಾಮಗಳನ್ನು ತಿಳಿಯಬೇಕಾಗಿದ್ದರೆ, ಆ ಊರಿಗೆ ಅಮಲ್ದಾರರು ಹೋದಾಗ ಮೊಕ್ಕಾಂ ಮಾಡುತ್ತಿದ್ದ ಸ್ಥಳದ ಮಾಹಿತಿ ಬೇಕು. ಅದು ಹಿಂದೆ ಅಲ್ಲಿನ ಒಡೆಯರಾಗಿದ್ದ ಅರಸರ ಮಹಡಿ ಮನೆ. ಈಗ ಅನೇಕ ತಲಾಂತರದಿಂದಲೂ ಆ ಮನೆ ಖಾಲಿಯಾಗಿ, ಅರಸುಮನೆತನದವರ ಹಾಲಿ ಗುಮಸ್ತೆಯ ಸುಪರ್ದಿನಲ್ಲಿರುತ್ತಿತ್ತು. ಬಹಳಮಟ್ಟಿಗೆ ಅನಾಯಕಸಹಜವಾದ ನಾದುರಸ್ತಿಯಲ್ಲಿದ್ದರೂ ಮಹಡಿ ಮೇಲಿನ ಒಂದು ದೊಡ್ಡಕೊಠಡಿ ವಿಶಾಲವಾಗಿ ಬೇಕಾದ ಹಾಗೆ ಗಾಳಿ ಬೆಳಕುಗಳುಳ್ಳದಾಗಿತ್ತು. ಆ ಕೊಟಡಿಗೆ ವಿಸ್ತಾರವಾದ ದೇವಸ್ಥಾನದ ಆವರಣದ ಕಡೆಗೆ ಕಿಡಕಿಗಳಿದ್ದದ್ದರಿಂದ ಉಷಃಕಾಲದಲ್ಲೂ, ಸಂಜೆ ವೇಳೆಯಲ್ಲೂ ದೇವರ ಸೇವೆಯ ವಾದ್ಯಗಳ ಗಾನವು ಅಲ್ಲಿಗೆ ದೂರದಿಂದ ಮೃದುಮಧುರವಾಗಿ ಕೇಳಿ ಬರುತ್ತಿತ್ತು. ಆ ಊರಲ್ಲಿ ಆಗ ಮುಸಾಫರಖಾನೆ ಇರಲಿಲ್ಲವಾದ್ದರಿಂದ, ಅಮಲ್ದಾರರು ಅಲ್ಲಿ ಮೊಕ್ಕಾಂ ಮಾಡಬೇಕಾದರೆ, ಅರಸು ಮನೆತನದವರ ಮುಲಾಜದಿಂದ ಅಲ್ಲೇ ತಂಗುತ್ತಿದ್ದರು. ಮಹಡಿ ಮೇಲಿನ ಕೊಠಡಿಗೆ ಹೋಗಬೇಕಾದರೆ ತಲೆಬಾಗಿಲಿನಿಂದ ಬಂದು ಕೈಸಾಲೆಗೆ ಪ್ರವೇಶಿಸಿ, ಅದರ ಒಂದು ಭಾಗದಲ್ಲಿನ ಮೆಟ್ಟಿಲುಗಳನ್ನು ಹತ್ತಬೇಕು. ಆ ಮೆಟ್ಟಿಲುಗಳ ತಲೆಗೂ, ಕೊಠಡಿ ಬಾಗಿಲಿಗೂ ನಡುವೆ ಸುಮಾರು ಆರು ಅಡಿ ಚದುರ ಸಮಪ್ರದೇಶ

(landing) ಉಂಟು. ಅಮಲ್ದಾರರು ಮಹಡಿಯ ಮೇಲೆ ವಾಸ ಮಾಡುವ ವೇಳೆ ಅವರ ದಫೇದಾರ, ಮತ್ತು ತೈನಾತಿಯ ಆಳುಗಳು ಕೆಳಗಿನ ಕೈಸಾಲೆಯಲ್ಲಿ ಇರುತ್ತಿದ್ದರು.

ಈಗ ನಾನು ಹೇಳಬೇಕೆಂದಿರುವ ಕತೆಯ ಸಂದರ್ಭದಲ್ಲಿ, ಅಮಲ್ದಾರರು ಅಲ್ಲಿಗೆ ಆ ಊರಿನ ದೇವರ ಜಾತ್ರೆಗೋಸ್ಕರ ಹೋಗಿದ್ದರು. ಅಲ್ಲಿನದು ಪ್ರಸಿದ್ಧವಾದ ದೇವಸ್ಥಾನ; ಸರ್ಕಾರದ ಮುಜರಾಯಿ ಆಡಳಿತಕ್ಕೆ ಒಳಪಟ್ಟದ್ದು. ತಾಲ್ಲೂಕಿನ ಎಲ್ಲ ಕಡೆಗಳಿಂದಲೂ, ಮೈಸೂರು, ನಂಜನಗೂಡು, ಚಾಮರಾಜನಗರ, ಯಳಂದೂರು, ಕೊಳ್ಳೆಗಾಲ, ಈ ಪ್ರಾಂತಗಳಿಂದಲೂ, ಯಾತ್ರಿಕರು ಹೇರಳವಾಗಿ ಬರುತ್ತಾರೆ ಉತ್ಸವಗಳು ಬಹಳ ವಿಜೃಂಭಣೆಯಿಂದ ನಡೆಯುತ್ತವೆ. ಮುಖ್ಯವಾಗಿ ಅಲ್ಲಿನ ವೈವಾಳಿಗೆ (ಬಯಲು ಮಾಳಿಗೆ ?) ಉತ್ಸವವೆಂದರೆ ಹೆಸರುವಾಸಿ ಆ ಊರಿನಲ್ಲಿ ಹುಟ್ಟಿದ, ಅಥವ ಆ ಊರಿನ ಹೆಸರು ಹೇಳಿದ, ವೇಶ್ಯೆಯರೆಲ್ಲ ಆ ದಿನ ಬಂದು ತಮ್ಮ ಸಂಗೀತ, ನರ್ತನ, ಇವುಗಳನ್ನು ದೇವರ ಸೇವೆಗಾಗಿ ಪ್ರದರ್ಶಿಸುವರು. ಈ ಸೇವೆಗೆ ಭಕ್ತರ ಸಂದಣಿಯೂ ಸ್ವಾಭಾವಿಕವಾಗಿ ಹೆಚ್ಚು. ಅಮಲ್ದಾರರೂ ಬಹುಶಃ ತಮ್ಮ ಕರ್ತವ್ಯ ದೀಕ್ಷೆಯಿಂದಲೇ ಹಾಜರಿದ್ದರು. ಆಗ ಆ ಊರಿನಲ್ಲಿ ಬಹಳ ಪ್ರಭಾವಶಾಲಿಯಾದ ಒಬ್ಬ ಪಿಟೀಲುವಾದಕರಿದ್ದರು. ಅವರು ಹಾಗೆಯೇ ಇತರ ಊರುಗಳಲ್ಲೂ ಇದ್ದದ್ದರಿಂದ ಅವರ ಹೆಸರು ಹೇಳುವುದರಿಂದ ನಾನು ಮರೆಯಾಗಿಡಬೇಕೆಂದಿರುವ ಊರಿನ ಹೆಸರು ಬಯಲುಮಾಡಿದಂತಾಗುವುದಿಲ್ಲ ನಾನು ಬಹುಶಃ ದಕ್ಷಿಣದೇಶದ ಪ್ರಸಿದ್ಧ ಪಿಟೀಲುವಾದಕರನ್ನೆಲ್ಲ ಕೇಳಿದ್ದೇನೆ, ಪ್ರಸಿದ್ಧ ಸಂಗೀತಗಾರರನ್ನೂ— ಅವರುಗಳ ಉತ್ತಮ ಕಾಲದಲ್ಲಿ—ಕೇಳಿದ್ದೇನೆ. ನನ್ನ ಅಭಿಪ್ರಾಯದಲ್ಲಿ—ಮನೋವೃತ್ತಿ, ವಾದ್ಯದ ಮೇಲಿನ ಈಶ್ವರತೆಗಳಲ್ಲಿ ಮಳವಳ್ಳಿ ಸುಬ್ಬಣ್ಣನಿಗಿಂತಲೂ ಉತ್ಕೃಷ್ಟರಾದವರು ಬಹಳ ವಿರಳ. ನಮ್ಮ ಅಮರರಾದ ವೀಣೆ ಶೇಷಣ್ಣನವರು, ಇನ್ನೊಬ್ಬಿಬ್ಬರೂ, —ದ್ವಾರಂ ವೆಂಕಟಸ್ವಾಮಿನಾಯುಡು, ನಮ್ಮ ಚೌಡಯ್ಯ— ಇರಬಹುದು. ರಾಗದ ಸಂಚಾರ, ಭಾವನೆ, ಚಿನ್ನದ ತಂತಿಯಂತೆ ನವುರು,

ಬಿಸಿಲಿನಲ್ಲಿನ ಮಳೆಯ ಧಾರೆಯಂತೆ ಹೊಳಪು, ತಿಳಿಪು, ವೇಳೆಯರಿತು ತುತೂರಿಯು ಕರೆಯಂತೆ ಉದ್ರೇಕ ಕರ,—ಇವುಗಳು ಅವನ ವಾದನದ ಲಕ್ಷಣ—ಇವನ ಪಿಟೀಲು ಇವನ ಕೈನಲ್ಲಿ ಜೀವವುಳ್ಳ ಶಕ್ತಿ. ಸಂಗೀತ ದಲ್ಲಿ ಅದ್ವಿತೀಯ ಪಂಡಿತರಾದ ಶ್ರೀ ವಾಸುದೇವಾಚಾರ್ಯರು ಸುಬ್ಬಣ್ಣನ ವಿಚಾರವಾಗಿ—ಪಾಪ, ಅದೃಷ್ಟವಿಲ್ಲ ಮುಂಡೇದಕ್ಕೆ, ದೇವರು ಕೊಟ್ಟ ಮನೋಗತಿ, ಅಮೃತ ತೊಟ್ಟುವ ಬೆರಳು—ಈ ಅಂಡಲತೆಯ ಜೀವನ —ಎಂದು ಒಂದು ಸಲ ನನಗೆ ಮರುಕದಿಂದ ಹೇಳಿದ್ದು ಜ್ಞಾಪಕವಿದೆ. ಸರಿ, ಈ ಸುಬ್ಬಣ್ಣನ ಪಿಟೀಲು, ಯಾರೋ ಒಬ್ಬ ವೇಶ್ಯೆಯ ಹಾಡಿಕೆ, ಇವು ಎರಡೂ ಬೆರೆತು ಬಹಳ ಚನ್ನಾಗಿತ್ತಂತೆ—ಅಮಲ್ದಾರರು ಸುಬ್ಬಣ್ಣನನ್ನು—"ಬಹಳ ಚನ್ನಾಗಿತ್ತು ನಿನ್ನ ವಾದನ ಸುಬ್ಬಣ್ಣ; ಒಂದು ದಿನ ನಮ್ಮಲ್ಲೂ ಆಗಲಿ ನಿನ್ನ ಕಛೇರಿ. ಆಕೆ ಯಾರು, ಚನ್ನಾಗಿ ಹಾಡಿದಳಲ್ಲ?" ಎಂದು ಕೇಳಿದರು. ಆತ—"ಗುರುಗಳ ಪ್ರಭಾವ, ತಮ್ಮ ಅನುಗ್ರಹ. ತಮ್ಮ ಸೇವೆಗೆ ಯಾವಾಗಲೂ ಸಿದ್ಧವಾಗಿದ್ದೇನೆ. ಆಕೇನೋ?—ಆಕೆ (ಮೆಲ್ಲನೆ, ಪಿಸಿಮಾತಿನಲ್ಲಿ) ಗೌಡರ ರಖಾವು, ಮೈಸೂರಿಂದ ಕರೆದುಕೊಂಡು ಬಂದಿದ್ದಾರೆ; ವೀಣೆ ಸುಬ್ಬಣ್ಣನವರಲ್ಲಿ ಪಾಠ" ಎಂದು ಹೇಳಿದನು. ಇದಾದ ಎರಡು ಮೂರು ದಿನಗಳ ನಂತರ ಅಮಲ್ದಾರರಿಗೆ ಅಲ್ಲಿದ್ದ ತಮ್ಮ ಸುತ್ತುಮುತ್ತಲ ಜನಗಳ ನಡತೆಯಲ್ಲಿ—ತಮ್ಮ ವಿಚಾರದ ಅವರ ನೋಟದಲ್ಲಿ, ಚಹರೆಯಲ್ಲಿ ಏನೋ ಒಂದು ವಿಲಕ್ಷಣವಾದ, ಇಂಥದ್ದು ಎಂದು ಹೇಳಲಿಕ್ಕಾಗದ, ಬದಲಾವಣೆ ಕಂಡಿತು. ಅವರ ಕಡೆ ಏನೋ ಹಾಸ್ಯ ಬೆರಿಕೆಯಾದ ಕುತೂಹಲ ದಿಂದ ಮುಚ್ಚುಮರೆಯಾಗಿ ಜನಗಳು ನೋಡುತ್ತಿರುವಂತೆಯೂ, ತಾವು ತಿರುಗಿ ಅವರ ಕಡೆ ನೋಡಿದ ಕೂಡಲೆ, ಅವರು ದೃಷ್ಟಿಯನ್ನು ಬೇರೆಕಡೆ ತಿರುಗಿಸಿ, ಅಸಹಜವಾದ ಮುಗ್ಧಭಾವವನ್ನು ಮುಖದಮೇಲೆ ಧರಿಸು ವಂತೆಯೂ, ಅವರಿಗೆ ತೋರಿತು. ಪಟೇಲರ ಬಹಿರಂಗ ಹಾಜರು ಬಾಷಿ, ಮತ್ತು ತಜವೀಜುದಾರಿ ಹೆಚ್ಚಾದವು. ಶ್ಯಾನುಭೋಗರು ಮುಖದಲ್ಲಿ ನಿರ್ವಿಣ್ಣಭಾವವನ್ನೂ ಅಸಮಾಧಾನವನ್ನೂ ತೋರಿಸುತ್ತಿ ದ್ದಂತೆ ಕಂಡಿತು. ಅಮಲ್ದಾರರು ಗ್ರಾಮ ಗಸ್ತುಮಾಡುವಾಗ ಊರ

ದೊಡ್ಡ ಬೀದಿಯಲ್ಲಿ ವಾಸವಾಗಿರುವ ನಾಯಕಸಾನಿಯರ ಮನೆಯವರು ಕಿಟಕಿಯಲ್ಲಿ ಮುಖವಿಟ್ಟು ಅವರನ್ನು ನಸುನಗೆಯಿಂದ ನೋಡಿ, ತಮ್ಮ ತಮ್ಮಲ್ಲೇ "ಕಿಸಿಕಿಸಿ" ಅಂತ ನಕ್ಕು ಮಾತನಾಡಿಕೊಳ್ಳುತ್ತಿದ್ದಂತೆ ಅವರಿಗೆ ತೋರಿತು. ನೀವು ಕೇಳಬಹುದು — ಅಮಲ್ದಾರರಾದರೂ ಯಾಕೆ ಅವರಕಡೆ ನೋಡಬೇಕಾಗಿತ್ತು? ಅಂತ. ಯಾಕೆ ನೋಡ ಬಾರದಿತ್ತು? ಕಣ್ಣುಮುಚ್ಚಿಕೊಂಡೇನೊ, ಗ್ರಾಮಗಸ್ತಿಗೆ ಹೋ ಗೋದು?

ಇದೆಲ್ಲ ಅಮಲ್ದಾರರಿಗೆ ಅರ್ಥವಾಗಲಿಲ್ಲ, ಆದರೂ ಚಿಂತೆ ಜೆರಿಕೆಯ ಕುತೂಹಲವನ್ನುಂಟುಮಾಡಿತು. ಆದರೆ ಇದನ್ನು ತಿಳಿಯುವ ಬಗೆ ಹೇಗೆ? ಈ ಕತ್ತಲೆಯಲ್ಲಿ ಬೆಳಕು ತಾನಾಗೆಯೇ ಕೆಲವು ದಿವಸ ಗಳಲ್ಲೇ ಬಿದ್ದು ಅವರಿಗೆ ಬಹಳ ಆಶ್ಚರ್ಯವನ್ನುಂಟುಮಾಡಿತು.

ಪಿಟೀಲಿನ ಸುಬ್ಬಣ್ಣನ ವಾದನವನ್ನು ತಾರೀಫು ಮಾಡಿ ಅಮ ಲ್ದಾರರು ತಮ್ಮಲ್ಲಿ ಒಂದು ದಿನ ಅವನ ಕಛೇರಿಯಾಗಲೆಂದು ಸೂಚಿಸಿದ್ದ ರಷ್ಟೆ? ಆ ಸುಬ್ಬಣ್ಣ ಒಂದು ದಿನ ತಿರಮಕೂಡ್ಲು ನರಸಿಪುರಕ್ಕೆ ಅಮಲ್ದಾರರ ದರ್ಶನಕ್ಕಾಗಿಯೇ ಬಂದ.

"ಕಛೇರಿಗೆ ಅಪ್ಪಣೆಯಾಗಿತ್ತಲ್ಲ, ಎಂದು ಬರಲಿ ಎಂದು ವಿಚಾರಿ ಸೋಣೆಂದು ಬಂದೆ" ಎಂದ.

ಅಮಲ್ದಾರರು ಯಾವದೋ ಒಂದು ತಾರೀಖು ಕೊಟ್ಟು, ಅವೊತ್ತು ತಮ್ಮ ಸ್ನೇಹಿತರ—ಬಹಳ ರಸಿಕರು—ಒಬ್ಬಿಬ್ಬರು ಮೈಸೂರಿಂದ ಬರುವ ರಿದ್ದಾರೆಂದು ಹೇಳಿದರು. ಸುಬ್ಬಣ್ಣ ಆನಂದವನ್ನು ಸೂಚಿಸಿ — ತನಿ ಪಿಟೀಲೋ, ಸ್ನೇಹಿತರು ಬರುವಹಾಗಿದ್ದರೆ, ಸ್ವಲ್ಪ ಹಾಡುಗಾರಿಕೆಗೂ ಏರ್ಪಾಡು ಮಾಡಲೋ—ಅಂದ. ಸುಬ್ಬಣ್ಣನ ಕಂಠ "ಕೋಕಿಲೆಯ ಇನ್‌ಚರ"ವಲ್ಲ. ಅಮಲ್ದಾರರು — ಯಾರನ್ನ ಕರೆಕೊಂಡು ಬರೋಣ ವೆಂತಿ? ಅಂದರು. ಆಗ ಆತ ಮೆಲ್ಲನೆ, ಬಹುಭಕ್ತಿ ಬೆರಕೆಯಾದ ಮಿತ ಹಾಸ್ಯವನ್ನು ತೋರಿ—ತಾವು ಅವತ್ತು ವೈಮಾಳಿಗೆ ಉತ್ಸವದ ದಿನ ಮೆಚ್ಚೋಣಾಯಿತಲ್ಲ, ಆಕೆಯನ್ನೇ, ಮತ್ಯಾರನ್ನ?—ಎಂದ.

ಅಮಲ್ದಾರರು ಕೋಪದಿಂದ,

"ಇದೇನು ಮಾತು, ಮೆಚ್ಚಿದೆ ಎಂಬೋದು? ನಿನ್ನನ್ನು ಹತ್ತಿರ ಕರದೆನೆಂಬುವುದರ ಮೇಲೆ ಇಷ್ಟು ಸಲಿಗೆಯಿಂದ ಮಾತನಾಡಬೇಡ."

ಸುಬ್ಬಣ್ಣ ಕೈಮುಗಿದು, ವಿನಯದಿಂದ,

"ಸ್ವಾಮಿ, ಕ್ಷಮಿಸಬೇಕು ಆ ಊರಲ್ಲಿನ ಜನಗಳ ಬಾಯಲ್ಲಿನ ಮಾತನ್ನು ನಾನು ಹೇಳಿದೆ. ಪಟೇಲರು— ತಮಗೆ ಅವರಲ್ಲಿ ಬಹಳ ಅಭಿಮಾನ, ಅವರ ಮಾತು ತಮ್ಮಲ್ಲಿ ನಡೆಯುತ್ತೆಂದು ಎಲ್ಲಾ ಕಡೆಯಲ್ಲೂ ಸಾರುತ್ತಿದ್ದಾರೆ. ಶ್ಯಾನುಭೋಗರೂ ತಾವು ಪಟೇಲನ ಬಲೆಗೆ ಬಿದ್ದಿರೆಂದು ಹೇಳುತ್ತಾರೆ" ಎಂದು ಹೇಳಿದ.

ಅಮಲ್ದಾರರಿಗೆ ಬಹಳ ವ್ಯಾಕುಲ ಉಂಟಾಯಿತು ಸುಬ್ಬಣ್ಣ ಶ್ಯಾನುಭೋಗರ ಸೆಲಹೆ ಇಲ್ಲದೆ ತಮ್ಮಲ್ಲಿ ಈ ಮಾತನ್ನು ಆಡಿರಲಾರ. ಇದು ಏನೋ ಪಿತೂರಿ

"ಸುಬ್ಬಣ್ಣ, ನೀನು ಇಷ್ಟು ಹೇಳಿದವನು ಇನ್ನು ಮಾತು ನುಂಗಬೇಡ ಜನದ ಬಾಯಿಮಾತೆಂದು ಹೇಳಿದೆ. ಏನು ಅದು ಮಾತು? ಸ್ಪಷ್ಟವಾಗಿ ಹೇಳು"

"ಜನ ಹೇಳುತ್ತಾರೆ— ವೈಮಾಳಿಗೆ ಉತ್ಸವದ ಮಾರನೆ ರಾತ್ರೆ, ತಾವು ಅವಳನ್ನು ತಮ್ಮಲ್ಲಿಗೆ ಕರೆಸಿಕೊಂಡಿದ್ದರಂತೆ ಪಟೇಲ ಕಳಿಸಿದ ನಂತೆ ದೇವಸ್ಥಾನದ ಪಾರಪತ್ತೇಗಾರ ಕರೆದುಕೊಂಡು ಬಂದು ತಮ್ಮ ಬಿಡಾರದಲ್ಲಿ ಬಿಟ್ಟನಂತೆ ಇದರ ಸಂಚು ತಿಳಿದು ಶ್ಯಾನುಭೋಗರ ಕಡೆಯುವರೂ ಹೊಂಚುಕಾದು ಕಂಡರಂತೆ".

"ಛೇ, ಇದು ಎಂಥ ಕಥೆ! ನನ್ನ ಆಳುಗಳು ಒಳಕ್ಕೆ ಸಾಲೆಯಲ್ಲಿ ಕಾವಲಿರುತ್ತಾರೆ. ಅವರು ನೋಡದೆ ಯಾರಾದರೂ ಒಳಕ್ಕೆ ಬರುವುದಕ್ಕಾಗುತ್ತೆಯೇ? ನಾನು ಮುಹಡಿ ಬಾಗಿಲು ಹಾಕಿಕೊಂಡು ಮಲಗುತ್ತೇನೆ. ನನಗೆ ತಿಳಿಯದೆ ಇದು ಸಾಧ್ಯವೇ?"

"ಇದು ಬುದ್ಧಿಯಿಲ್ಲದ ಮಾತು." ಸುಬ್ಬಣ್ಣ, "ಧಣಿ ಮಾಡೋದಕ್ಕೆ ಆಳುಗಳು ಅಡ್ಡಬರ್ತಾರೆಯೇ? ತಾವೇ ಕರೆಸಿದ್ದುಂಟಾದರೆ, ತಮ್ಮ ಕೋಣೆ ಬಾಗಿಲು ಬಂದ ಮಾಡ್ತೀರಾ? ಹ್ಯಾಗಾದರೂ ಇರಲಿ, ನನಗ್ಯಾಕೆ ಈ ಮಾತು. ತಮ್ಮ ಆಜ್ಞಾಧಾರಕ, ಅಷ್ಟೆ" ಎಂದು ಸುಮ್ಮನಾದ.

ನಂತರ ಅಮಲ್ದಾರರು ತಮ್ಮ ತೈನಾತಿ ದಫೇದಾರ ಶಜಾಹುಸ್ಸೇನ್ ಎಂಬುವನನ್ನು ಗೋಪ್ಯವಾಗಿ ವಿಚಾರಿಸಿದರು. ಅವನು ಬಹಳ ಘಾಬರಿ ಬಿದ್ದು ಹೇಳಿದ, "ಪಟೇಲರು ನನಗೆ ಬಹಳ ಗುಟ್ಟಾಗಿ ಕರೆದು ಹೇಳಿದರು: "ಹುಸ್ಸೇನ್ ಸಾಬರೆ ಇವತ್ತು ರಾತ್ರಿ ಬಾಕಿ ಜವಾನರನ್ನೆಲ್ಲಾ ಬೇರೆ ಎಲ್ಲಿಯಾದರೂ ಮಲಗುವುದಕ್ಕೆ ಕಳಿಸಿ ನೀವು ಒಬ್ಬರೇ ಅಮಲ್ದಾರರ ಬಿಡಾರದಲ್ಲಿರಬೇಕು. ಅವರ ಅಪ್ಪಣೆಯಾಗಿದೆ. ಅವರಿಗೆ ಬೇಕಾದವರು ಬರುತ್ತಾರೆ ಸದ್ದಿಲ್ಲದೆ, ಮಾತಿಲ್ಲದೆ, ಯಾರಿಗೂ ತಿಳಿಯದ ಹಾಗೆ ಅವರನ್ನು ಒಳಗೆ ಬಿಡಬೇಕು" ಅಂತ. ನಾನು ಖಾವಿಂದರನ್ನು ಈ ಮಾತು ಹ್ಯಾಗೆ ಕೇಳಲಿ? ಪಟೇಲರಿಗೆ ಸುಳ್ಳು ಹೇಳುವುದಕ್ಕೆ ಎಷ್ಟು ಛಾತಿ? ಇದು ತಮ್ಮ ಅಪ್ಪಣೆಯೇ ಎಂದು ಹಾಗೇ ಜಾರಿಮಾಡಿದೆ."

"ಆಮೇಲೆ?"

"ರಾತ್ರಿ ಹನ್ನೊಂದು ಹನ್ನೆರಡು ಹೊಡೆದಿರಬಹುದು, ಆಗ ಪಾರಪತ್ತೇಗಾರರು ಒಬ್ಬ ಹೆಣ್ಣನ್ನು ಕರೆದುಕೊಂಡು ಬಂದರು. ಆಕೆಯನ್ನು ಒಳಗೆ ಬಿಟ್ಟೆ ಆಕೆ ಮಹಡಿಯ ಮೇಲೆ ಮೆಟ್ಟಲು ಹತ್ತಿಹೋದದ್ದು ನೋಡಿ ನಾನು ಕೈಸಾಲೆಯಿಂದ ಈಚೆಗೆ ಬಂದು ಜಗಲಿಮೇಲೆ ಕೂತೆ. ಒಂದು ಜಾವವಾದಮೇಲೆ ಆಕೆ ಈಚೆಗೆ ಬಂದಳು ಅವಳಿಗಾಗಿ ದೇವಸ್ಥಾನದ ಜಗಲಿಯಮೇಲೆ ಕಾದಿದ್ದ ಪಾರುಪತ್ತೇಗಾರರ ಸಂಗಡ ಹೊರಟು ಹೋದಳು."

"ಅವಳು ಯಾರು, ನೋಡಿದೆಯ?"

"ಒಳಕ್ಕೆ ಬರಬೇಕಾದರೆ ಬಾಗಿಲ ಮುಂಭಾಗದ ಲಾಂದೀನ್ ಬೆಳಕಿನಲ್ಲಿ ಚನ್ನಾಗಿ ಕಂಡಿತು."

ನಂತರ ಅಮಲ್ದಾರರು ಯಾವುದೋ ಸಬೂಬಿನ ಮೇಲೆ ಪಾರುಪತ್ತೇಗಾರ ವೆಂಕಟಪ್ಪನನ್ನು ಕರೆಸಿಕೊಂಡು ವಿಚಾರಿಸಿದರು. ಅವನಿಗೂ ಪಟೇಲನು ದಫೇದಾರನಿಗೆ ಹೇಳಿದ ಹಾಗೇ ಹೇಳಿ ಅವನ ಸಹಾಯವನ್ನೂ ಪಡೆದನಂತೆ.

ಪಾಪ, ಅಮಲ್ದಾರರಂತೂ ಅವೊತ್ತು ರಾತ್ರಿಯ ದೊಡ್ಡ ಶೃಂಗಾರ ನಾಟಕದಲ್ಲಿ ಅವಾಸ್ತವ ನಾಯಕರಾಗಿದ್ದರು. ಆ ನಾಟಕದ ಪ್ರವೇಶ

ನಿಷ್ಕ್ರಮಗಳ ನಿಜವಾದ ಉದ್ದೇಶವೂ ಸೂತ್ರಧಾರನ ಜಾಣ್ಮೆಯೂ ಆಮೇಲೆ ತಿಳಿಯಿತು. ಹಾಗೆ ತಿಳಿಯುವುದಕ್ಕೆ ಕಾರಣ— ಪಟೇಲನಿಗೂ ಅವನ ಅಪ್ಪನಿಗೂ ಯಾರೋ— ಎದುರು ಕಕ್ಷಿಯವರೇ ಇರಬೇಕು— ಜಗಳ ತಂದಿಟ್ಟರು ಆಕೆ ಅವನನ್ನು ಬಿಟ್ಟು ಶತ್ರುಪಕ್ಷದ ಗೆಣೆಯನನ್ನು ಸೇರಿದ ಮೇಲೆ ಅವೊತ್ತು ರಾತ್ರಿಯ ವೃತ್ತಾಂತವನ್ನು ಹೊರಪಡಿಸಿದಳು. ಪಟೇಲ ಅವಳಿಗೆ—ಸದ್ದುಮಾಡದೆ ಅಮಲ್ದಾರರ ಬಿಡಾರದಲ್ಲಿ ಹೊಕ್ಕು ಒಂದೆರಡು ಘಂಟೆಗಳ ಕಾಲ ಮಹಡಿ ಮೆಟ್ಟಲುಗಳ ಮೇಲೆ ಕುಳಿತೋ ಮಲಗಿಯೋ ಕಾಲಕಳೆದು ಈಚೆಗೆ ಬಂದುಬಿಡು, ನಿನಗೆ ವಜ್ರದ ಮೂಗ್ತು ಬಟ್ಟು ಬಹುಮಾನವಾಗಿ ಕೊಡುತ್ತೇನೆ— ಎಂದು ಕಳಿಸಿದನಂತೆ. ಇದನ್ನು ಶ್ಯಾನುಭೋಗನ ಕಕ್ಷಿಯವರು ಪ್ರಚಾರಕ್ಕೆ ತಂದರು. ಪಟೇಲ ನಾದರೋ— "ಆ ಮುಂಡೆ ಸುಬೇದಾರರಿಗೆ ಮರುಳುಮಾಡಿ ಸರಿಮಾಡಿ ಕೊಂಡು ಅವರಲ್ಲಿಗೆ ತಾನೇ ಹೋದಳು— ಅದು ನನಗೆ ತಿಳಿದ ಕೂಡ್ಲೆ ಅವಳನ್ನ ವದ್ದು ಕಳಿಸಿಬಿಟ್ಟೆ. ಅವಳನ್ನು ಇತರರಿಗೆ ತಲೆ ಹಿಡಿಯೋ ಹೇಡೀನೇ ನಾನು"— ಎಂದುವಿಸಾನೆ ತಿರುಪಿದನಂತೆ. ಸಮಯ ಕಂಡು ಅಮಲ್ದಾರರು ಅವನ ಮೇಲಿನ ಸೇಡನ್ನೂ ತೀರಿಸಿಕೊಂಡರು.

ಈ ತರಹದ ತಂತ್ರದ ಉದಾಹರಣೆ ನನ್ನ ಅನುಭವದ್ದೇ ಹೇಳು ತ್ತೇನೆ ಕೇಳಿ. ನರಸೀಪುರದಲ್ಲಿ (ಹೆಸರು ಬೇಡ, ಒಬ್ಬ ಭಾರಿ ಜವಳಿ ವರ್ತಕರಿದ್ದರು. ಅವರು ಒಂದು ದಿನ ನನ್ನಲ್ಲಿ ಅನಿರೀಕ್ಷಿತವಾಗಿ ಬಂದು ಬಹಳ ಸಂಕೋಚದಿಂದ ಕೇಳಿದರಲ್ಲ:

"ತಾವು ವೆಂಕಟಪ್ಪನ (ಹೆಸರು ಬದಲಾಯಿಸಿದ್ದೇನೆ) ಕೈಲಿ ಜವಳಿಗೆ ಏನಾದರೂ ಅಪ್ಪಣೆಕೊಡಿಸಿರೋಣಾಯಿತೇ?"

ನನಗೆ ಆಶ್ಚರ್ಯವಾಯಿತು.

"ಇಲ್ಲ. ವೆಂಕಟಪ್ಪನ ಮಾರೀಫತ್ತು ಯಾಕೆ ಹೇಳಿಕಳಿಸಲಿ? ನನಗೆ ಆಳುಗಳಿಲ್ಲವೆ? ಇದೇನು ಸಮಾಚಾರ? ಬಾಯಿಬಿಟ್ಟು ಹೇಳಿ"

"ವೆಂಕಟಪ್ಪ ನನ್ನ ಮನೆಗೇ ಬಂದು ಬಹಳ ಗುಟ್ಟಾಗಿ 'ಒಂದು ಮಾತನ್ನ ಹೇಳಬೇಕಾಗಿದೆ' ಎಂದ. ಹೇಳಪ್ಪ— ಅಂದೆ. 'ಸುಬೇದಾರರ ಅಪ್ಪಣೆಯಾಗಿದೆ, ತಮ್ಮನ್ನ ಕೇಳಿ, 40-45 ರೂಪಾಯಿನ

ಬೆಲೆಯೊಳಗೆ ಒಂದು ಧರ್ಮಾವರದ ಸೀರೆಯನ್ನು ತೊಕ್ಕೊಂಡು, ಅವರ ಲೆಖ್ಖಕ್ಕೆ ಬರೆಸಬೇಕಂತೆ ಮೊದಲನೇ ತಾರೀಖಿಗೆ ಹಣ ಕಳಿಸಿಕೊಡುತ್ತಾರಂತೆ' ಅಂದ. ನನಗೆ ಆಶ್ಚರ್ಯವಾಯಿತು. ನಿನ್ನ ಮಾರೀಫತ್ತು ಹೇಳಿ ಕಳಿಸೋಕೆ ಕಾರಣವೇನಪ್ಪ?— ಎಂದು ಕೇಳಿದೆ. 'ಕಾರಣವಿರುತ್ತಲ್ಲ! ಊಹಿಸಲಾರಿರ? ಯಾರಿಗೋ ಗೌರಿಹಬ್ಬಕ್ಕೆ ಕೊಡಬೇಕು—ಅದೆಲ್ಲ ನಮಗ್ಯಾಕೆ?' ಅಂದ. ನನಗೆ ಅನುಮಾನ ಬಂತು. ಹಾಗೆ 'ಯಾರಿಗೋ' ಕೊಡಬೇಕ.ದರೆ ಅಮಲ್ದಾರರು ಹಣ ವನ್ನೇ ಕಳಿಸುತ್ತಿದ್ದರು. ಈ ಜುಜುಬಿ ಮನುಷ್ಯನ ಮೂಲಕ ಹೇಳಿಕಳು ಹಿಸಿ ಲೆಖ್ಖಕ್ಕೆ ಬರೆಸುತ್ತಿದ್ದರೆ? ಆದರೆ ಈ ಸಂದೇಹವನ್ನು ನನ್ನಲ್ಲೇ ಇಟ್ಟುಕೊಂಡು ಅವನಿಗೆ—ಗೊತ್ತಾಯಿತಪ್ಪ, ಆಗಲಿ. ಜವಳಿ ಬರೋ ದಿವೆ. ಇನ್ನೂ ಎರಡು ಮೂರು ದಿನ ಬಿಟ್ಟುಕೊಂಡು ಬಾ. ಆದರೆ ಸೀರೆ ಯಾರಿಗೆ ಹೇಳಬಾರದೆ? ಅಂದೆ. ಅವನು ನಕ್ಕು— ಅದೆಲ್ಲ ನಿಮಗೇಕೆ ಶೆಟ್ರೆ? ಅಂದ 'ಸರಿ, ಎರಡು ಮೂರು ದಿನ ಬಿಟ್ಟುಕೊಂಡು 'ಬಾ'—ಅಂದೆ. 'ಖಾಲಿ ಮಾಡಬೇಡಿ, ಗೌರಿಹಬ್ಬಕ್ಕೆ ಖಂಡಿತವಾಗಿ ಬೇಕು'—ಅಂದ. 'ಹಬ್ಬಕ್ಕೆ ಇನ್ನೂ ಐದಾರು ದಿನ ಇವೆಯಲ್ಲ, ನನ್ನ ಸರಕು ಬಾರದಿದ್ದರೆ ಎಲ್ಲಿಂದಾದರೂ ತರಿಸಿಕೊಡುತ್ತೇನೆ. ಆದರೆ ಸೀರೆ ಉಡೋರೇ ನೋಡಿ ಒಪ್ಪಿ ಚುನಾಯಿಸಿಕೊಂಡರೆ ಒಳ್ಳೇದಲ್ಲವೇ?' ಅವರೇ ಬರಲಿ'—ಅಂದೆ. 'ಛೇ ಛೇ! ಉಂಟೆ? ಅವರು ಬಹಿರಂಗ ವಾಗಿ ನಿಮ್ಮ ಅಂಗಡಿಗೆ ಬರೋಕುಂಟೇ!' ಅಂದ. 'ಬಂದರೆ ಸುಬೇ ದಾರರು ಕೋಪಮಾಡ್ತ್ಯಾರು'— ಅಂದ. ನಾನು —'ಎಂಥೆಂತವರೋ ಅಂಗಡಿಗೆ ಬರುತ್ತಾರೆ, ಅದಕ್ಕೇನಪ್ಪ? ಸುಬೇದಾರರ ಕುಟುಂಬ— ಅವರ್ಮಾವರೇ 'ಬಂದು ಜವಳಿ ತೊಗೊಂಡು ಹೋಗ್ತಾರೆ!' ಅಂದೆ. 'ಕುಟುಂಬಾ'ನೆ ಆಗಿದ್ದರೆ ಅವರೂ ಹಂಗೇ ರಾಜಾರೋಷವಾಗಿ ಬರು ತ್ತಿದ್ದರು. ಅವರು ಯಾರಂತೀರೋ— ಹೀಗೆಂದು ಒಬ್ಬ ಮೂಗೂರಿನ ವೇಶ್ಯೆಯ ಹೆಸರನ್ನು ಹೇಳಿದ. ನಾನು— ಸರಿ, ಸರಿ, ಪರವಾಯಿಲ್ಲ, ಜವುಳಿ ಗಂಟು ನಮ್ಮ ಮನೆಯಲ್ಲೇ ಇರುತ್ತೆ. ಬಂದು ನೋಡಿಕೊಂಡು ಹೋಗಲಿ ಅಂದೆ."

ಶೆಟ್ಟರು ಮಾತನ್ನು ನಿಲ್ಲಿಸಿ ನನ್ನ ಕಡೆ ನೋಡಿದರು. ಅವರ ಮನಸ್ಸಿನಲ್ಲಿ ನಾನು ಹೇಳಿಕಳಿಸಿದ್ದರೂ ಹೇಳಿಕಳಿಸಿರಬಹುದೋ? ಎಂಬ ಶಂಕೆ ಇದ್ದರೂ ಇದ್ದಿರಬಹುದು ಹಾಗಿಲ್ಲದಿದ್ದರೆ ಅವರೇ ಅವನಿಗೆ ಸುಬೇದಾರರಿಂದ ಚೀಟಿತರದಿದ್ದರೆ ಕೊಡೋದಿಲ್ಲವೆಂದು ಹೇಳಿ ದಬಾಯಿಸಿ ಕಳಿಸುತ್ತಿದ್ದರು.

ವೆಂಕಟಪ್ಪ ಪೋಕರಿ, ಪೋಕರಿಗಳ ಪ್ರಣಯದಳ್ಳಾಳಿ. ಇವನ ಅಭಿಪ್ರಾಯವೇನಿರಬಹುದು? ಶೆಟ್ಟಿ ಅಂಗಡಿ ಲೆಖ್ಖದಲ್ಲಿ ನಾನು ಒಂದು ಸೀರೆ ಕೊಂಡುಕೊಂಡದ್ದು ದಾಖಲ್ಮಾಡಿಸಿ, ಆ ಸೀರೆ ಸದರಿಯುವರಿಗಾಗಿ ಕೊಂಡದ್ದೆಂದು ನನ್ನನ್ನು ಬದ್ನಾಮಿಗೆ ತರಬೇಕು ಆ ಹೆಂಗಸು ಮೂಗೂರಿನ ಒಂದು ಪಾರ್ಟಿಯ ಮುಖಂಡನ ಕಡೆಯವಳು

ನಾನು ಶೆಟ್ಟರಿಗೆ—ಈ ಸಂಗತಿಯನ್ನು ನೀವು ನನಗೆ ತಿಳಿಸಿದ್ದು ಬಹಳ ಒಳ್ಳೇ ಕೆಲಸವಾಯಿತು. ಅವನು ನಿಮ್ಮಲ್ಲಿ ಬಂದರೆ, ಅಥವ ಅವಳು ಬಂದರೆ, ಪೋಲಿಸಿಗೆ ಹಿಡಿದುಕೊಡಿ— ಎಂದೆ

ವೆಂಕಟಪ್ಪನೇ ಆಗಲಿ, ಆ ಹೆಂಗಸೇ ಆಗಲಿ, ಪುನಃ ಅಲ್ಲಿಗೆ ತಲೆ ಹಾಕಲಿಲ್ಲ. ನಾನು ವೆಂಕಟಪ್ಪನಿಗೆ ಉಚಿತವಾದ ಶಿಕ್ಷೆಮಾಡಿದೆ. ತಾನು ಆ ಯತ್ನವನ್ನು ತನ್ನ ಪಾರ್ಟಿ ನಾಯಕನ ಪರವಾಗಿ ಮಾಡಿದ್ದೆಂದು ಅವನಿಂದಲೇ ತಿಳಿಯಿತು.

## ೨೮

ತಿರುಮಕೂಡ್ಲು ನರಸೀಪುರದ ನೆನಪುಗಳಿಗೆಲ್ಲ ತಿರಮಕೂಡಲಿನಲ್ಲಿ ಸಂಗಮಿಸುವ ಹೊಳೆಗಳೇ ಹಿನ್ನೆಲೆ ನಾನೂ ತಕ್ಕಮಟ್ಟಿಗೆ ಇಂಡಿಯಾದಲ್ಲೂ, ಯೂರೋಪಿನಲ್ಲೂ ಸಂಚಾರಮಾಡಿದ್ದೇನೆ. ಅನೇಕ ಸುಂದರವಾದ ಭೂಭಾಗಗಳನ್ನು ನೋಡಿ ಆನಂದಪಟ್ಟಿದ್ದೇನೆ; ಆದರೆ— ಜೀವನದ ಪ್ರಾತಃಕಾಲದ ಹೊಂಬೆಳಕಿನ ಪ್ರಭಾವವೋ ಕಾಣೆ— ನರಸೀಪುರದ ಕೆಲವು ನೋಟಗಳ ಚಂದವನ್ನಾಗಲಿ, ಅಲ್ಲಿನ ಕೆಲವು ಅನುಭವಗಳ ಆನಂದವನ್ನಾಗಲಿ, ಮೀರಿದವುಗಳನ್ನು ನಾನೆಲ್ಲೂ ಕಾಣಲಿಲ್ಲ. ಆ ನೆನಪುಗಳಲ್ಲೆಲ್ಲಾ ಕಾವೇರಿಯ ಪವಿತ್ರ ನೀರೋಟವು ಬೆರೆತಿದೆ.

ನಾನು ಕಾವೇರಿಯನ್ನು ನೋಡುವುದಕ್ಕೆ ಮುಂಚೆಯೇ ಆ ತಾಯಿಯ ಭಕ್ತನಾಗಿದ್ದೆ. ನನಗೆ ಓದಿ ಅರ್ಥಮಾಡಿಕೊಳ್ಳುವ ಮಟ್ಟಿಗೆ ಇಂಗ್ಲಿಷು ಬಂದ ಕಾಲದಲ್ಲಿ ಆಗ ಸ್ಕೂಲುಗಳಲ್ಲಿ ಪಾಠಕ್ಕಾಗಿಡುತ್ತಿದ್ದ ಬ್ರಾಡ್ಷಾ ಜೋಡಿಸಿದ ಐದನೇ ಪಠ್ಯಪುಸ್ತಕ (Bradshaw's V Reader) ನನ್ನ ಕೈಗೆ ಸಿಕ್ಕಿತು. ಆ ಆನಂದವನ್ನು ಏನು ಹೇಳಲಿ? ಕೀಟ್ಸಗೆ ಒದಗಿದ ಹೋಮರಿನ ಪರಿಚಯದಂತೆ ನನಗೆ ಅಗಾಧ ಹೊಸ ಅನುಭವದ ಬೆಳಕು ಹರಿಯಿತು. ಅದರಲ್ಲಿನ ಕೆಲವು ಪಾಠಗಳು — ಪೋಪಿನ ವಿಶ್ವಪ್ರಾರ್ಥನೆ (Universal Prayer) ವುಲ್ಫ್ (Wolfe')ನ ಸರ್ ಜಾನ್ ಮೂರಿನ ಭೂಸಮಾಧಿ (Burial of Sir John Moore) ಹುಡ್‌ನ ಯೂಜೀನ್ ಆರಾಂ, Lamb ನ ಯೂಲಿಸೀಸಿನ ಪ್ರವಾಸ (Adventures of Ulysses) — ಮುಖ್ಯವಾಗಿ ಒಂದು ಇಂಡಿಯನ್ ಹೊಳೆಯ ಪ್ರಗತಿ (Course of an Indian river) — ಇದನ್ನು ಬರೆದ ಮಹನೀಯರು ಯಾರೋ, ನನಗೆ ಜ್ಞಾಪಕವಿಲ್ಲ. ಇವುಗಳನ್ನು ಉಕ್ಕುವ ಆನಂದದಿಂದ ಮರಳಿ ಮರಳಿ ಓದಿದೆ. ಆ ಇಂಡಿಯನ್ ಹೊಳೆ ಕಾವೇರಿ. ಆ ಮಹಾತಾಯಿ ಕೊಡಗಿನಲ್ಲಿ ಹುಟ್ಟಿ, ಮೈಸೂರಿಗೆ ಇಳಿದು, ರಾಮನಾಥಪುರ, ಹನಸೋಗೆ, ಚುಂಚನಕಟ್ಟೆ, ಯಡತೊರೆ, ಶ್ರೀರಂಗಪಟ್ಟಣ, ಸೋಸಲೆ, ಗರ್ಗೇಶ್ವರಿ, ತಿರುಮಕೂಡ್ಲು, ಮಾದಾಪುರ, ಮುಡುಕತೊರೆ, ತಲಕಾಡು ಇವುಗಳನ್ನು ಪುಣ್ಯಕ್ಷೇತ್ರಗಳನ್ನಾಗಿ ಮಾಡಿ, ಶಿವನಸಮುದ್ರದಲ್ಲಿ ಬೈಲುಸೀಮೆಗೆ ಧುಮುಕಿ ಮದರಾಸಿಗೆ ಭಾಗ್ಯವನ್ನೂ ಪವಿತ್ರತೆಯನ್ನೂ ಒಯ್ಯುವುದನ್ನು ಆ ಪಾಠದಲ್ಲಿ ಮನಮುಟ್ಟುವಂತೆ ಬರೆದ ಮಹಾಶಯ ವರ್ಣಿಸಿದಾನೆ. ನದಿಯ ತಟದ ಶ್ರೀರಂಗಪಟ್ಟಣ ಶಿವನಸಮುದ್ರಗಳ ಐತಿಹಾಸಿಕ ಉನ್ನತಿ ಅವನತಿಗಳನ್ನು ಐಹಿಕ ಸಂಪತ್ತಿನ ಭಂಗುರತೆಯ ನಿದರ್ಶನವೆಂಬಂತೆ ಬರೆದಿದಾನೆ. ಟಿಪ್ಪೂಸುಲ್ತಾನಿನ ಕೊನೆಯ ದಿವಸದ ವೀರವರ್ತನೆಯನ್ನು ಚಿತ್ರಿಸಿ— "ಈ ಪ್ರಭಾವಶಾಲಿಯಾದ ಶೂರನು ಕೊನೆಗೆ ಯಾರೋ ಅನಾಮಧೇಯನಿಂದ ಹತನಾದ. ಇವನ ಸಂಪತ್ತು, ಆಕಾಂಕ್ಷೆ, ಇವುಗಳೆಲ್ಲ ನೀರುಗುಳ್ಳೆಯಂತೆ ಶೂನ್ಯವಾಗಿ, ಅವನ ಹೆಸರು ಒಂದು ಕತೆಯ ಚಂದಕ್ಕೋ, ಒಂದು ಗಾದೆಯ ಅಂದಕ್ಕೋ ಮಾತ್ರ

ಉಳಿದಿದೆ — (to point a moral or adorn a tale) ಎಂಬ ಕವಿಯ ವಾಕ್ಯವನ್ನು ಎತ್ತಿ ಬರೆದಿದ್ದಾನೆ.

ಮೊದಲು ನಾನು ಕಾವೇರಿಯನ್ನು ನೋಡಿದ್ದು 1888 ರಲ್ಲಿ ಮೊದಲನೆಯ ಸಲ ಮೈಸೂರಿಗೆ ಹೋಗುವಾಗ, ರೈಲುಗಾಡಿಯ ಕಿಡಕಿಯಿಂದ. ನಾನು ಮೆಡೋಸ್ ಟೇಲರನ "ಟಿಪ್ಪುಸುಲ್ತಾನ್"ನನ್ನು ಓದಿದ್ದೆ. ಹಿರೋಡೆ (French Rocks) ಯಿಂದ ಮುಂದಿನ ಪ್ರಯಾಣವೆಲ್ಲ ನನ್ನ ಭಾವನೆಯ ಚರಿತ್ರೆಯಲ್ಲೇ ನಡೆದದ್ದು.

ಶ್ರೀರಂಗಪಟ್ಣದ ಕೋಟೆಯನ್ನು ಹಲ್ಲ ಮಾಡಿದ ಫರಂಗಿಗಳ ಕ್ರೋಧೋನ್ಮತ್ತ ಧಾಳಿಯನ್ನೂ, ದ್ರೋಹಿಗಳಿಂದ ವಂಚಿತನಾದ ಟಿಪ್ಪು ಮತ್ತು ಅವನ ವಿರಳಪಡೆಯ ನಿರಾಶೆಯಾದ ನಿರರ್ಥಕವಾದ ಧೀರ ಕದನದ ಮರಣಯಾತನೆಯನ್ನೂ ಕಣ್ಣಾರ ಕಂಡಂತೆ ಸ್ಪಷ್ಟವಾಗಿ ಭಾವನೆಯಲ್ಲಿ ನೋಡಿದೆ. ಮೈಸೂರಿನಲ್ಲಿ ಯಾವ ಮುಸಲ್ಮಾನನನ್ನು ನೋಡಿದರೂ — ಇವನ ಅಜ್ಜ ಟಿಪ್ಪೂವಿನ ಸರ್ದಾರನೋ, ಶಿಪಾಯಿಯೋ ಇದ್ದಿರಬಹುದು — ಎಂದು ನನ್ನ ಮನಸ್ಸಿಗೆ ಬರುತ್ತಿತ್ತು. ಆಗ ನನಗೆ ಟಿಪ್ಪೂವೆಂದರೆ ಬಹಳ ವಿಶ್ವಾಸ ಅವನು ನಮ್ಮ ಊರಿನಲ್ಲಿ — ದೇವನಹಳ್ಳಿಯಲ್ಲಿ — ಹುಟ್ಟಿದವನು. ಅವನು ಹುಟ್ಟಿದ ಮನೆಯಿದ್ದ ವಠಾರವನ್ನೂ ಸುಧ ನೋಡಿದ್ದೆ. ಟಿಪ್ಪುವು ನನ್ನ ಹುಟ್ಟು ಹಗೆಗಳಾದ ಫರಂಗಿಯವರ ಪಿತೂರಿಯಿಂದ ನಾಶವಾದ ಸಾಧು ತುರುಕ ಈಚೆಗೆ ಟಿಪ್ಪುವಿನ ವಿಚಾರದಲ್ಲೂ, ಫರಂಗಿಯವರ ವಿಚಾರದಲ್ಲೂ ನನ್ನ ಅಭಿಪ್ರಾಯಗಳು ಸ್ವಲ್ಪ ಮಟ್ಟಿಗೆ ಬದಲಾಯಿಸಿಕೊಂಡಿರಬಹುದು; ಆದರೆ The thoughts of youth are long long thoughts — ಚಿಕ್ಕಂದಿನ ಭಾವನೆಗಳು ಬಹು ದೀರ್ಘ ಬಾಳುವ ಭಾವನೆಗಳು. ಈಗಲೂ ಟಿಪ್ಪು ನನ್ನ ಮೆಚ್ಚಿಗೆಯ ಧೀರನೆ, ಫರಂಗಿಯವರು ಒಬ್ಬಿಬ್ಬರ ಹೊರತು ರಾಕ್ಷಸರೇ.

ಈಗ ತಿರುಮಕೂಡ್ಲಿನ ಹತ್ತಿರ ಎರಡು ಸೇತುವೆಗಳು ಆಗಿವೆ— ಒಂದು ಕಪಿಲೆಗೆ (ಕಪಿಲೆ ತಿರುಮಕೂಡ್ಲಿಗೂ, ನರಸೀಪುರಕ್ಕೂ ನಡುವೆ ಹರಿಯುತ್ತದೆ; ತಿರುಮಕೂಡ್ಲು ದೇವಸ್ಥಾನ ಕಪಿಲೆ— ಕಾವೇರಿ ಸಂಗ

ಮದ ಭೂನಾಲಗೆಯ ಮೇಲಿದೆ); ಮತ್ತೊಂದು ಕಾವೇರಿಗೆ. ಕಪಿಲೆಯ ಸೇತುವೆಯ ಮೇಲೆ, ದಕ್ಷಿಣಕ್ಕೆ ಮೂಗೂರು, ಚಾಮರಾಜನಗರ, ಕೊಳ್ಳೇಗಾಲಗಳಿಗೆ ಹೋಗುವ ರಸ್ತೆ ಹಾಯುತ್ತದೆ— ಕಾವೇರಿಯ ಸೇತುವೆಯ ಮೇಲೆ ಹಾಯುವ ರಸ್ತೆ ಸೋಸಲೆ, ಮಳವಳ್ಳಿ, ಬನ್ನೂರು, ಬೆಳಕವಾಡಿ, ಶಿವನಸಮುದ್ರ, ಇವೇ ಮೊದಲಾದ ಸ್ಥಳಗಳಿಗೆ ಹೋಗುತ್ತದೆ. ನಾನು ಆ ತಾಲ್ಲೂಕಿಗೆ ಅಮಲ್ದಾರನಾಗಿ ಹೋಗುವಾಗ ಈ ಸೇತುವೆಗಳಿರಲಿಲ್ಲ. ಹೊಳೆಗಳನ್ನು ಕಡವುಗಳಲ್ಲಿ ಹಾದುಹೋಗ ಬೇಕಾಗಿತ್ತು. ವರ್ಷದಲ್ಲಿ ಸುಮಾರು ಐದು ತಿಂಗಳು ನೀರಿನ ಘಾತ ಮತ್ತು ಸೆಳೆತ ಜಾಸ್ತಿ ಇರುತ್ತಿದ್ದದ್ದರಿಂದ ಕಾಲುನಡಿಗೆಯಲ್ಲಾಗಲಿ, ವಾಹನಗಳಲ್ಲಾಗಲಿ, ಹಾಯುವುದಕ್ಕಾಗುತ್ತಿರಲಿಲ್ಲ—ಆಗ ದೋಣಿಗಳಲ್ಲೇ ದಾಟಬೇಕು. ದೋಣಿಯನ್ನು ನಡಸುವ ಹಕ್ಕನ್ನು ಹರಾಜಿನ ಮೇಲೆ ಕಂಟ್ರಾಕ್ಟು ಕೊಡಲಾಗುತ್ತಿತ್ತು. ನಾನು ಅಲ್ಲಿಗೆ ಹೋದಮೇಲೆ ಹಿಂದಿನ ರಿಕಾರ್ಡನ್ನೆಲ್ಲಾ ನೋಡಿ ದಾಮಾಷಾ ಗುತ್ತಿಗೆಯನ್ನು ರಚಾಯಿಸಿ, ಹೆಸರಿಗೆ ಮಾತ್ರ ಹರಾಜಾದರೂ ಅಂಬಿಗರಿಗೆ ಲುಕ್ಸಾನಿಲ್ಲದಂತೆಯೂ, ಪ್ರಯಾಣಿಕರಿಗೆ ದುಬಾರಿ ಇಲ್ಲದಂತೆಯೂ ಹೊಳೆಯ ದಾಟುವಿಕೆ ಸಲೀಸಾಗಿ ನಡೆಯುವಂತೆ ಏರ್ಪಾಡು ಮಾಡಿದೆ—"ಎಲ್ಲೊತ್ತೂ ಗಂಗೇನಾಗಿರೋರು ಬುದ್ಧಿ; ನಮ್ಗೆ ಪಪ್ಪಾಯ್ನೇಗೆ ವಸಿ ರಿಯಾಯ್ತಿ ಬೇಕು" ಎಂಬ ಅಂಬಿಗರ ಅಹವಾಲಿನ ಮೇಲೆ ಹೆಂಡದ ಕಂಟ್ರಾಕ್ಟುದಾರರನ್ನು ಕರೆಸಿ, ಉಭಯತ್ರರಿಗೂ ಅನುಕೂಲವಾಗುವಂತೆ ಮೊಗಂ ಕರಾರು ಮಾಡಿಸಿದೆ. ಅಂಬಿಗರ ಸಹಾಯವಿಲ್ಲದಿದ್ದರೆ ಹೊಳೆ ಕಟ್ಟಿದ ತಿಂಗಳುಗಳಲ್ಲಿ ಹೆಂಡನಾಗುವ ಹಾಗಿಲ್ಲ; ಅಂಬಿಗರ ದಾಹ ಶಮನವಾಗದಿದ್ದರೆ ಅವರು "ಗಂಗೇನಾಗಿರೋದು" ಕಷ್ಟ; ಅದಕ್ಕೋಸ್ಕರ ಇದು ಎರಡು ಕಕ್ಷಿಗೂ ಅನುಕೂಲವಾದ ಏರ್ಪಾಡು. ಕಾಲು ಹೊಳೆ ಬಿದ್ದ ಕಾಲದ ಕಡವೂ ಕೂಡ ಮಳೆ ಪ್ರಾರಂಭವಾದಮೇಲೆ ಕೆಲವು ಕಾಲ ಸ್ವಲ್ಪ ಅಪಾಯಕ್ಕೊಳಗಾದದ್ದು. ಇದ್ದದ್ದು ಇದ್ದಹಾಗೇ ಅಕಸ್ಮಾತ್ತಾಗಿ ಅಲೆಬರುವ ರೀತಿಯಲ್ಲಿ ಒಂದು, ಒಂದೂವರೆ, ಅಡಿ ನೀರು ಹೆಚ್ಚಾಗಿ ಬಂದುಬಿಡುವುದುಂಟು. ಒಂದು ಸಲ— ನನಗೆ ಜ್ಞಾಪಕವಿದೆ— ನಾನು ಕುದುರೆ ಮೇಲೆ ಕುಳಿತು ಸೋಸಲೆ ಕಡು

ವಿನಲ್ಲಿಳಿದ ಕಾವೇರಿ ಹೊಳೆಯನ್ನು ದಾಟುತ್ತಿದ್ದ ಹಾಗೇ ನೀರು ಮೇಲೆ ಮೇಲೆ ಬರುವುದಕ್ಕೆ ಹತ್ತಿತು ಮುಂದೆ ಹೋಗುತ್ತೇನಲ್ಲ, ದಾರಿಯಲ್ಲಿ ಒಬ್ಬ ಮನುಷ್ಯ— ಅವನು ಸೋಸಲೆ ಕುಲವಾಡಿ (ಆದಿ ಕರ್ಣಾಟಕ)— ಸ್ತಬ್ಧನಾಗಿ ನಿಂತಿದ್ದಾನೆ; ಹಿಂದೂ ಹೋಗವಲ್ಲ, ಮುಂದೂ ಬರವಲ್ಲ. ಕಡುವಿನ ಪಂಕ್ತಿಯ ಎಡಕ್ಕೆ ಬಲಕ್ಕೆ ಆಳವಾದ ನೀರು, ಕಡುವಿನ ಪಾರ್ಶ್ವಕ್ಕೆ ಹಾದುಹೋಗುವ ಹಾಗಿಲ್ಲ ನೀರೂ ಕ್ಷಣ ಕ್ಷಣಕ್ಕೂ ಏರುತ್ತಿದೆ ನಾನು ಸ್ವಲ್ಪ ಕಾದು—" ಎಲಾ, ಅಪ್ಪ— ಬಾರೋ, ಅಥವ ಹಿಂದಾದರೂ ಹೋಗೋ "—ಅಂತ ಕೂಗಿದೆ. ಆಗೋಕಿಲ್ಲ ಬುದ್ಧಿ, ನನಗೆ ಕಣ್ಣೇಕಾಣೋಕ್ಕಿಲ್ಲ—ಅಂದ. " ಯಾಕೋ ಕುರುಡನೇನೋ? ಯಾರನ್ನಾದರೂ ಕರೆದುಕೊಂಡು ಬರಬೇಕಾಗಿತ್ತೋ ಇಲ್ಲವೋ? ಸತ್ತರೆಗಿತ್ತರೆ ಏನು ಗತಿ?" ಅಂದೆ. " ಕುಂಡನಲ್ಲ ಬುದ್ಧಿ, ನಿಮ್ಮ ಪಾದ. ಕುಡಿದುಬಿಟ್ಟೆವನಿ, ಕಣ್ಣು ಕತ್ಲೆ ಮುಚ್ಕೆತೆ"— ಅಂದ ನಾನು— " ಅಯ್ಯೋ ಬಡ್ಡಿಮಗನೆ, ಅಲ್ಲೇ ಇರು, ಯಾರನ್ನಾದರೂ ಕಳಸ್ತೀನಿ ನಿನ್ನ ಕರಕೊಂಡ ಬರೋಕೆ "—ಅಂತ ನನ್ನ ಕೊಂಬಿನವನನ್ನು ಕಳಿಸಿ ಅವನನ್ನು ಹೊಳೆ ಹಾಯಿಸಿ ಮನೆಗೆ ತಲಪಿಸಿದೆ. ಇನ್ನೊಂದು ನೆನಪು—ನೆನೆವರೆ ಈಗಲೂ ನಗು ಬರುತ್ತದೆ ತಲಕಾಡು ಪಂಚಲಿಂಗದರ್ಶನದ ಕಾಲ. ಕೊಳ್ಳೇಗಾಲ ಕಡೆಯಿಂದ ಬರುವ ಜನ ಮಾಲಿಂಗಿ ಕಡುವಿನಲ್ಲಿ ಹೊಳೆಯನ್ನು ದಾಟಬೇಕು— ಹೊಳೆಯಲ್ಲಿ ಹೊಸ ನೀರು ಬರುವುದಕ್ಕೆ ಏಕಾಏಕಿ ಶುರುವಾಯಿತು; ಹರಿಗೋಲು ತಯಾರಾಗುವುದಕ್ಕೆ ಸ್ವಲ್ಪ ಕಾಲ ಹಿಡಿಯುತ್ತದೆ; ಜನಗಳಂತೂ ಬರುತ್ತಲೇ ಇದ್ದಾರೆ. ನಾನು ಕಡು ಲೈನ್ ತೋರಿಸಲಿಕ್ಕೆ ಕಡುವಿನ ಸಾಲಿಗೆ ದಪ್ಪನಾದ ಬಂಬುಗಳನ್ನು ನೆಡಿಸಿ, ಅಕಸ್ಮಾತ್ತುಗಳ ಸಂದರ್ಭದಲ್ಲಿ ಜನಗಳ ಸಹಾಯಕ್ಕಾಗಿ ಪೋಲೀಸಿನವರನ್ನೂ ಕಾವಲುಗಾರರನ್ನೂ ನೇಮಿಸಿದ್ದೆ. ಹೀಗಿರುವಾಗ ಒಂದು ದಿನ ಏನಾಗಿದೆ—ಒಬ್ಬ ಕೊಳ್ಳೇಗಾಲದ ಶೆಟ್ಟಿ ಹೊಳೆ ದಾಟುವುದಕ್ಕೆ ಬಂದವನು, ನೇಮಕವಾಗಿದ್ದ ಕಡುವಿನಲ್ಲಿ ದಾಟಿದರೆ ಕಾವಲುಗಾರರು ಇನಾಮು ಕೇಳಿಯಾರೆಂತಲೋ, ಏನೋ, ಕಡುವಿನ ಸ್ವಲ್ಪ ಮೇಲುಭಾಗದಲ್ಲಿ ಹೊಳೆಯನ್ನು ದಾಟಲು ನೋಡಿದ. ಸರಿ, ದಾರಿತಪ್ಪಿ, ಸೆಳತಕ್ಕೆ ಸಿಕ್ಕು,

ಕೊಚ್ಚಿಹೋಗುತ್ತಿದ್ದ. ತೇಲುತ್ತ, ಮುಳುಗುತ್ತ, ಇದ್ದ ಅವನನ್ನು ಒಬ್ಬ ಕಾವಲು ಪೋಲೀಸಿನವನು ತೊಟ್ಟಿದ್ದ ಡ್ರೆಸ್ಸಿನ ಮೇಲೇ ಹೊಳೆಗೆ ಇಳಿದು, ಬಹಳ ಕಷ್ಟದಿಂದ ಈಚೆಗೆ ಸೆಳದು ಉಳಿಸಿದ. ಅದು ಪೋಲಿಸಿಗೆ ರಿಪೋರ್ಟಾಗಿ ಕೊನೆಗೆ ಬಂಗಲೆಯಲ್ಲಿದ್ದ ನನ್ನ ಹತ್ತಿರ ಶೆಟ್ಟಿಯೂ ಪೋಲೀಸಿನವನೂ, ಇನ್‌ಸ್ಪೆಕ್ಟರೂ ಬಂದರು. ಇನ್‌ಸ್ಪೆಕ್ಟರು ನಡೆದದ್ದನ್ನೆಲ್ಲ ವಿವರಿಸಿ—“ನೋಡಿ ಸರ್, ಬೂಟ್ಸು, ಡ್ರೆಸ್ಸು ಎಲ್ಲ ಇದ್ದ ಹಾಗೇ ಕಾನ್‌ಸ್ಟೆಬಲ ಕೆಂಪ ನೀರಿಗೆ ಬಿದ್ದು ಈ ಶೆಟ್ಟಿಯ ಜೀವ ಉಳಿಸಿದ. ಈ ಶೆಟ್ಟಿ ಕೆಂಪ ಬಕ್ಷೀಸ ಕೇಳಿದನೆಂದು ಅವನಮೇಲೆ ಫಿರ್ಯಾದು ತಂದಿದ್ದಾನೆ'—ಎಂದು ಹೇಳಿದರು.

ಶೆಟ್ಟಿ—“ತಾವು ನ್ಯಾಯಪ್ರಭು; ನ್ಯಾಯಮಾಡಬೇಕು. ಈ ಪೋಲೀಸಿನವನು ನನ್ನನ್ನು ಎಳದುಹಾಕಿದ ಮಾತ್ರಕ್ಕೇ ಐದು ರೂಪಾಯಿ ಕೊಡು ಅಂತ ಜುಲುಮಿ ಮಾಡ್ತಾನಲ್ಲ, ಇದು ಯಾವ ನ್ಯಾಯ? ಯಾರಪ್ಪನ ಮನೆ ಗಂಟು? ನಾನೇನಾದರೂ “ಎಳದು ಹಾಕಪ್ಪಾ” ಅಂತ ಕೇಳಿಕೊಂಡೆನೇ? ಅವನಾಗೇ, ನನ್ನ ಕೇಳದೇಲೇ, ಎಳದು ಹಾಕಿದ! ನೀವು ಹೇಳಿ ಸಾರ್, ನ್ಯಾಯ ತಿಳಿದೋರು”—ಎಂದ.

ನಾನು ಅಸಹ್ಯವನ್ನೂ ನಗುವನ್ನೂ ತಡೆದು, ಕೂಡಿದಮಟ್ಟಿಗೆ ಗಂಭೀರವಾಗಿ—

“ನೀವು ಹೇಳೋದು ಬಹಳ ಸರಿ. ಎಲೋ, ಕೆಂಪ, ನೀನು ಯಾಕೋ ಈ ಸಾಹುಕಾರರನ್ನ ಅವರ ಅನುಮತಿಯಿಲ್ಲದೆ, ಜುಲುಮಿಯಿಂದ ಹೊಳೆಯಿಂದ ಎತ್ತಿಹಾಕಿದೆ, ಪಾಪ? You fool! (ಬೇಕೂಫ್) ಅವರನ್ನ ಕರೆದುಕೊಂಡು ಹೋಗಿ, ಅವರು ಹೊಳೆಯಲ್ಲಿ ಎಲ್ಲಿದ್ದರೋ ಅಲ್ಲೇ ಬಿಟ್ಟುಬಿಡು. ಇದು ನ್ಯಾಯವಾದ ತೀರ್ಪು, ಅಲ್ಲವೇ, ಸಾಹುಕಾರರೆ?”

ನ್ಯಾಯವಾದ ತೀರ್ಪಾದರೂ ಸಾಹುಕಾರರಿಗೆ ಪುನಃ ಹೊಳೆಯ ಪ್ರವೇಶ ರುಚಿಸಲಿಲ್ಲವೆಂದು ಕಾಣುತ್ತದೆ. ಅದರಂತೆ ನಿಜವಾಗಿ ಮಾಡುತ್ತಾರೆಂದು ಅವರು ತಿಳಿದೂ ಇರಲಾದರು. ಆದರೂ ಅಲ್ಲಿದ್ದವರೆಲ್ಲರೂ ನಗಲಿಕ್ಕೆ ಹತ್ತಿದ್ದರು. ಅಲ್ಲಿದ್ದ ವರ್ತಕರೊಬ್ಬರು—ನಮ್ಮ ಜಾತಿಗೇ

ಅವಮಾನ ತರುತ್ತೀಯಲ್ಲ ಮಾರಾಯ! ಸೀ ಕೊಡ್ತೀಯೋ, ನಾನಾ ದರೂ ಕೊಡಲೋ?— ಅಂದರು. ಆಗ ಆತ ಬಹು ಸಂಕಟದಿಂದ ಎರಡು ರೂಪಾಯಿಗಳನ್ನು ಕಿಶೆಯಿಂದ ತೆಗೆದು ಪೋಲೀಸು ಕೆಂಪನಿಗೆ ಕೊಡಲಿಕ್ಕೆ ಹೋದರು. ಅವನು—"ವಲ್ಲೆ ಸಾಹುಕಾರರೇ, ನಿಮ್ಮ ಪರಮಾತ್ಮ (ಅಂದರೆ ಜೀವವೆಂದು ಅವನ ಅರ್ಥ, ಅವನು ಖಾಕಿ ಉಡು ಪಿನ ವೇದಾಂತಿ, ನೋಡಿ) ಅಷ್ಟಕ್ಕೆ ಬಾಳೋಕಿಲ್ಲ. ಹಂಗೂ ಅದರ ಬೆಲೆ ಕೊಡಬೇಕೂ ಅಂದ್ರೆ ಮೂರು ಕಾಸಿನಬಿಲ್ಲೆ ಕೊಡಿ" ಅಂದ

ಎಲ್ಲರೂ ಘೊಳ್ಳಂತ ನಕ್ಕೆವು ಕೊನೆಗೆ ಅಲ್ಲಿದ್ದವರೆಲ್ಲ ಚಂದ ಎತ್ತಿ ಸಾಹುಕಾರನಿಂದ ಕಣ್ಣೀರಲ್ಲಿ ತೊಳೆದ ಮೂರು ರೂಪಾಯಿಗಳನ್ನೂ ಹಾಕಿಸಿ, ಹತ್ತು ರೂಪಾಯಿಗಳನ್ನು ಮಾಡಿ ಕೆಂಪನಿಗೆ ಬಹುಮಾನವಾಗಿ ಕೊಟ್ಟರು.

## ೨೯

ನನ್ನ ಜೀವನದಲ್ಲೂ ಕಾವೇರಿಗೆ ಸಂಬಂಧಪಟ್ಟ ಅನೇಕ ನೆನಪು ಗಳಿವೆ ಕಾಲೇಜಿನ ರಜಾ ದಿನದಲ್ಲಿ ನನ್ನ ಮಾವಂದರು, ಪೂಜ್ಯ ಆನಂದತೀರ್ಥರಾಯರು, ಅಸಿಸ್ಟೆಂಟು ಇಂಜನೀಯರಾಗಿ ಮೊಕ್ಕಾಂ ಮಾಡುತ್ತಿದ್ದ ಮಿರ್ಲೆ ಗ್ರಾಮದಲ್ಲಿ ವಿರಾಮ ಸುಖವನ್ನು ಅನುಭವಿಸು ತ್ತಿದ್ದೆ. ಮಿರ್ಲೆಯಿಂದ ಹೊಳೆ ಸುಮಾರು ಎರಡೂವರೆ ಮೈಲು ದೂರ ವಿದೆ ಬೇಸಿಗೆ; ನಾಲೆಗಳಲ್ಲಿ ನೀರಿಲ್ಲ. ಒಂದು ದಿನ ಬೆಳಗ್ಗೆ ಆರು ಹೊಡೆಯುತ್ತಲೇ ಎದ್ದು ನದಿಯ ಕಡೆಗೆ ವಾಕಿಂಗ್ ಹೊರಟೆ ಸರಿ ಯಾದ ದಾರಿಯ ಮಾಹಿತಿ ಇಲ್ಲದ್ದರಿಂದ, ಇಲ್ಲಿ ಸುತ್ತಿ, ಅಲ್ಲಿ ತಿರುಗಿ, ಅಂತೂ ಎಂಟು ಎಂಟೂವರೆ ಹೊತ್ತಿಗೆ ಬೆವರಿ ಬೆಂಡಾಗಿ ಹೊಳೆ ಕೆರೆಗೆ ಬಂದೆ. ನಿರ್ಮಲವಾದ ನೀರು, ಬಂಡೆ ತಿಟ್ಟುಗಳ ನಡುವೆ ಬೆಳೆದು ತಲೆತೂಗುತ್ತಿರುವ ಜಂಡು, ಹೂತಿರುವ ಜಲ ಸುಗಂಧರಾಜದ ನಾಳ ಗಳೊಡನೆ ಮೊರೆದು ನಲಿದಾಡುತ್ತಿತ್ತು. ಬೆಳ್ಳಕ್ಕಿಗಳು ನೀರಿನ ಬಾಳಿನ ಸಂತೋಷದಿಂದಲೋ ಎಂಬಂತೆ ಬಂಡೆಯಿಂದ ಬಂಡೆಗೆ ಕಲಕಲಧ್ವನಿ ಮಾಡುತ್ತಾ ಹಾರಾಡುತ್ತಿದ್ದವು. ಆಯಾಸಪಟ್ಟಿದ್ದ ನನಗೂ ಉಲ್ಲಾಸ

ತುಂಬಿ, ಬೆಳಗಿನ ಬಿಸಿಲಲ್ಲಿ ಹೊಳೆದು ಹರಿಯುತ್ತಿದ್ದ ತಿಳಿನೀರಿನಲ್ಲಿ ಸ್ನಾನಮಾಡಬೇಕೆಂಬ ಆಶೆಯಾಯಿತು. ಸ್ನಾನದ ಬಟ್ಟೆಗಳನ್ನು ತಂದಿರಲಿಲ್ಲ. ಆದರೇನು? ಅದು ನಿರ್ಮಾನುಷಪ್ರದೇಶವಾಗಿ ಕಂಡಿತಾದ್ದರಿಂದ, ಸಂಕೋಚವಿಲ್ಲದೆ ನಾನು ಹಾಕಿಕೊಂಡಿದ್ದ ಪೋಷಾಕನ್ನು ತೆಗೆದು, ನಾಜೂಕಾಗಿ ಮಡಿಸಿ ಕರೆಯ ಒಂದು ಬಂಡೆಯಮೇಲೆ ಮೇಲಿರಿಸಿ, ಹಾರಿಹೋಗದಂತೆ ಮೇಲೆ ಒಂದು ಕಲ್ಲನ್ನು ಹೇರಿ, ದೇವರು ಮಾಡಿದ ರೂಪದಲ್ಲೇ ನೀರಿಗೆ ಇಳಿದೆ. ಬೇಸಿಗೆಯ ಹೊಳೆಯು ಆ ಭಾಗದಲ್ಲಿ ಈಜುವುದಕ್ಕೆ ತಕ್ಕಷ್ಟು ಘಾತವಾದ ನೀರಿರಲಿಲ್ಲವಾದ್ದರಿಂದ, ಘಾತವನ್ನು ಅರಸಿಕೊಂಡು, ತಣ್ಣೀರಿನ ಸಂಪಿನಲ್ಲಿ ಮೈಮರೆತು, ತಾರಾಡುತ್ತಾ ನಾನು ಹೊತ್ತಿನ ಲೆಕ್ಕವನ್ನೇ ಇಡಲಿಲ್ಲ. ಆಮೇಲೆ ಹಸಿವು ನನ್ನನ್ನು ಈ ಲೋಕಕ್ಕೆ ಎಚ್ಚರಿಸಲಾಗಿ, ನಾನು ಬಟ್ಟೆ ಇಟ್ಟಿದ್ದ ಜಾಗಕ್ಕೆ ಬಂದೆ. ಸದ್ಯಕ್ಕೆ ಬಟ್ಟೆಗಳನ್ನು ಯಾರೂ ಕದ್ದಿರಲಿಲ್ಲ— ಆದರೆ, ನನ್ನ ಪರಿಚಯದ ಮನೆಯ ಜನ, ಹೆಂಗಸರು, ಗಂಡಸರು, ಮಕ್ಕಳು. ಸಂಸಾರವೇ— ಅಲ್ಲಿಗೆ ಬಂದಿರಬೇಕೇ? ಅವರು ತಂದಿರುವ ಬಟ್ಟೆಗಳ, ಫಲಾಹಾರದ ಬುಟ್ಟಿಗಳ, ಸನ್ನಾಹ ನೋಡಿದರೆ ಅಪೊತ್ತೆಲ್ಲ ಅಲ್ಲೇ ಮೊಕ್ಕಾಂ ಮಾಡುವ ಡೌಲು ಕಾಣುತ್ತಿತ್ತು. ನಾನು ನಿರ್ವಾಣವಾಗಿ ಈಚೆಗೆ ಬರುವುದಾದರೂ ಹ್ಯಾಗೆ? ನೀರಿನಲ್ಲಿ ಎಷ್ಟು ಹೊತ್ತಾದರೂ ಇದ್ದೇನು? ಅವರ ತಿಂಡಿಯ ಬುಟ್ಟಿಗಳನ್ನು ನೋಡಿದರೆ ನನ್ನ ಹಸಿವು ಹತ್ತರಷ್ಟು ಹೆಚ್ಚಾಗುತ್ತಿರುವುದಲ್ಲ! ನೀರಿಗೆ ಇಳಿಯುವುದಕ್ಕೆ ಅದೇ ವೈನಾದ ಜಾಗವಾದ್ದರಿಂದ, ಆ ವಿಹಾರಿಗಳ ಗುಂಪು ನಾನು ಈಚೆಗೆ ಬರುವುದನ್ನು ಕಾಯುತ್ತಿರುವಂತಿತ್ತು. ಕೊನೆಗೆ — ಆರ್ಕಿಮಿಡೀಸ್ ಮಹಾಶಯನಂತೆ— ಯುರೀಕಾ— ಅಂದೆ— ನನ್ನ ಸಮಸ್ಯೆಯನ್ನು ಗುರು, ಸಚಿವರುಗಳ ಸಹಾಯವಿಲ್ಲದೆಯೇ ನಾನೇ ಪರಿಹರಿಸಿಕೊಂಡೆ. "ಶ್ಯಾಮ, ಇಲ್ಲಿ ಸ್ವಲ್ಪ ಬಾ, ಅಪ್ಪ" ಅಂದೆ. ಆ ಸಣ್ಣ ಹುಡುಗ ನೀರಿನ ಅಂಚಿಗೆ ಬಂದ, "ಆ ಬಂಡೆ ಮೇಲಿನ ಬಟ್ಟೆಗಳನ್ನು ದಯವಿಟ್ಟು— ಅದೋ ಆ ಮೆಳೆ ಕಾಣುತ್ತೆ ನೋಡು, ಅದರ ಆಚೆಗೆ ಮರೆಯಲ್ಲಿ ಒಂದು ಬಂಡೆಯಿದೆ; ಅದರ ಮೇಲೆ ಇಟ್ಟುಬಾರಪ್ಪ" ಅಂದೆ. ಒಳ್ಳೇ

ಹುಡುಗ "ನೀವೆ ಯಾಕೆ ಇಟ್ಟುಕೊಳ್ಳಬಾರದು" ಅಂತ ಕೇಳಲಿಲ್ಲ; ಫಕ್ಕಂತ ನಗಲೂ ಇಲ್ಲ— ಅವನ ಕಣ್ಣೇನೋ ಸ್ವಲ್ಪ ಮಿಣಗುಟ್ಟು ತ್ತಿತ್ತು. ಅವನ ಕಡೆಯವರ ಕಡೆ ಸ್ವಲ್ಪ ಹಸನ್ಮುಖದಿಂದ ನೋಡಿ, ನಾನು ಕೇಳಿಕೊಂಡಂತೆ ಮಾಡಿದ ನಾನು ಎದೆಯುದ್ದ ನೀರಿನಲ್ಲೇ ಬಳಸಿಕೊಂಡು ಹೋಗಿ, ನನ್ನ ದಿರಸನ್ನು ಹಾಕಿಕೊಂಡು, ಹೊಳೆ ಕರೆ ಯಲ್ಲಿದ್ದವರಿಗೆ ಮುಖ ತೋರಿಸದೆ, ಮಿರ್ಲೆಗೆ ವಾಪಸು ಬಂದೆ ಈ ಇತಿಹಾಸ ನಮ್ಮ ಮನೆಯುವರಿಗೂ ಗುನ್ನಾಂಪಟ್ಟೆ ಕುಸುರುಗಳಿಂದ ಅಲಂಕೃತವಾಗಿ ತಲುಪಿ ಅವರಿಗೆ ವಿನೋದಕ್ಕೂ, ನನಗೆ ಅವರಿಗೆ ವಿನೋದವನ್ನುಂಟುಮಾಡಿದ ಸಂತೋಷಕ್ಕೂ ಎಡೆಯಾಯಿತು.

ನದಿಗಳೇ ಲಾವಣ್ಯವಾದ ಈ ತಾಲ್ಲೂಕಿನಲ್ಲಿ ಈಜು ಬಾರದವನೇ ಪಾಪಿ, ದೋಣಿಗಳಲ್ಲಿ ವಿಹರಿಸದವನು ತನ್ನನ್ನು ತಾನೇ ವಂಚಿಸುವ ಮೂಢ ನಾನು ಸಾಮಾನ್ಯವಾಗಿ ವಾರಕ್ಕೆ ಮೂರು ದಿನವಾದರೂ ಮೂಲಸ್ಥಾನೇಶ್ವರ ಘಟ್ಟದ ಹತ್ತಿರ ಆಳವಾಗಿರುವ ಹೊಳೆಯ ನೀರಿನಲ್ಲಿ ಕ್ರೀಡಿಸುತ್ತಿದ್ದೆ. ನನ್ನ ಅನುಯಾಯಿಗಳಂತೆ ನಾನೂ ಸಂಧ್ಯಾವಂದನೆ ಯನ್ನು ಮಾಡಿ, ಮೂಲಸ್ಥಾನೇಶ್ವರರ ಮಂಗಳಾರುತಿ ವೇಳೆಯಲ್ಲಿ ದರುಶನ ಪಡೆಯುತ್ತಿದ್ದೆ "ಸುಬೇದಾರರು ಸಿಗರೇಟು ತೆಗೆಯುವುದನ್ನು ಒಂದನ್ನು ಬಿಟ್ಟರೆ, ಬಹಳ ಒಳ್ಳೇಜೀವ, ಏನು ಭಕ್ತಿ" ಎಂಬ ಕೀರ್ತಿ ಯನ್ನೂ ಸ್ಮಾರ್ತಸಂಗಡದವರಿಂದ ಪಡೆದೆ ಶ್ರೀವೈಷ್ಣವರಿಂದ ಮಾತ್ರ "ಇವರು ಮಾಧ್ವರಂತೆ, ಎಂಥ ಮಾಧ್ವರೋ! ಗುಂಜಾ ನರಸಿಂಹ ಸ್ವಾಮಿ ದೇವಸ್ಥಾನವಿದ್ದರೂ, ಅಲ್ಲಿಗೆ ಬಾರದೆ ಶಿವ ದೇವಾಲಯಕ್ಕೇ ಹೋಗುತ್ತಾರಲ್ಲ! ಊರ್ಧ್ವಪುಂಡ್ರವೇಕೆ? ವಿಭೂತಿ ಹಚ್ಚಿಕೊಳ್ಳಲಿ" ಅನ್ನಿಸಿಕೊಂಡೆ. ಇದನ್ನು ಕೇಳಿದಮೇಲೆ ನರಸಿಂಹಸ್ವಾಮಿಘಟ್ಟದಲ್ಲೂ ಆಗಾಗ ಆಹ್ನೀಕಕ್ಕೆ ಹೋಗಿ ಅಲ್ಲಿಯೂ ದೇವರ ದರ್ಶನಕ್ಕೆ ಹೋಗಲು ಆರಂಭಿಸಿದೆ ಅಲ್ಲಿನ ಪ್ರಸಾದವು ಆಗಾಗ— ಅದರಲ್ಲೂ ನಾನು ಸೇವೆಗೆ ಬರುತ್ತೇನೆಂದು ಮೊದಲೇ ತಿಳಿದ ದಿನಗಳಲ್ಲಿ— ಕೇವಲ ಮಾನಸಿಕ ವಲ್ಲದ್ದರಿಂದ, ಭಕ್ತಿ ನನಗೇ ತಿಳಿಯದೆ ಜಾಸ್ತಿಯಾಯಿತೋ ಏನೋ, ಕಾಣೆ.

ತಾಲ್ಲೂಕು ಆಮಳೆ ಅಂಬಿಗರಿಗೆ ನನಗೆ ಬಹಳ ಸ್ನೇಹ. ಅವರು ಬಡವರು, ಕಷ್ಟಜೀವಿಗಳು, ಸಾಹಸ ಜೀವಿಗಳು. ದೃಷ್ಟಾಂತರಕ್ಕೆ ಕೇಳಿ— ಬೇಸಿಗೆಯ ಕೊನೆಯಲ್ಲಿ ಒಂದು ದಿನ ನರಸಿಪುರದ ಹೆಂಗಸರೂ ವೃದ್ಧರೂ ಬಹುಮಂದಿ ಕಪಿಲೆ ಹೊಳೆಯ ಆ ತೀರದಲ್ಲಿನ ತಿರುಮ ಕೂಡ್ಲಿಗೆ ಪುರಾಣ ಕೇಳುವುದಕ್ಕೋ, ಶ್ರೀ ಅಗಸ್ತ್ಯೇಶ್ವರ ದೇವಸ್ಥಾನದ ಹೆಚ್ಚು ಕಟ್ಟಳೆ ಉತ್ಸವಕ್ಕೋ, ಹೋಗಿದ್ದರು. ಮಕ್ಕಳು, ಮರಿ, ಸ್ಕೂಲಿಗೆ ಹೋಗಿದ್ದ ಹುಡುಗರು, ಕಛೇರಿಗೆ ಹೋಗಿದ್ದ ಗಂಡಸರು, ಮಾತ್ರ ಹೊಳೆಯ ಈಚೆಕಡೆ ಉಳಿದಿದ್ದರು. ಮಧ್ಯಾಹ್ನದ ಮೇಲೆ ಇದ್ದಕಿದ್ದ ಹಾಗೇ ಸಿಡಿಲು ಸಮೇತ ಭಾರಿ ಮಳೆ ಬಂದು, ಹೊಳೆಗಳಲ್ಲಿ, ಅದರಲ್ಲೂ ಪಾತ್ರ ಇಕ್ಕಟ್ಟಾಗಿರುವ ಕಪಿಲೆಯಲ್ಲಿ, ಭರೋ ಅಂತ ನೊರೆ ಬೆರಿಕೆ ಯಾದ ಹೊಸ ನೀರು ಬರಲಾರಂಭಿಸಿ, ನೋಡು ನೋಡುತ್ತಾ ಇದ್ದ ಹಾಗೇ ನಾಲ್ಕಾರು ಅಡಿ ಸೆಳೆಯುವ, ಅರ್ಭಟಿಸುವ, ನೀರಿನ ಉರುಳು ಪ್ರಾರಂಭಿಸಿತು. ಸಂಜೆಗತ್ತಲಿಟ್ಟಿತು, ಸಾಲದ್ದಕ್ಕೆ ಮಳೆಗಾಳಿ ಜೋರೆ. ನರಸಿಪುರದ ಅರ್ಧಜನ— ಅದರಲ್ಲೂ ಮಕ್ಕಳ ತಾಯಿಯರು— ಆಚೆ ತೀರದಲ್ಲಿದ್ದಾರೆ. ಬೇಸಿಗೆಯಲ್ಲಿ ಪ್ರಕೃತವಿಲ್ಲದ ದೋಣಿಗಳು ಬಿಸಲಿನ ಜೋಗೆಗೆ ಬಿರಿಯದಿರಲು ಎಲ್ಲೆಲ್ಲೋ ನೀರಿನಲ್ಲಿ ಮುಳುಗಿಸಿಡಲ್ಪಟ್ಟಿದ್ದವು ಕೆಲವು ಅನಿರೀಕ್ಷಿತ ಪ್ರವಾಹದಲ್ಲಿ ಕೊಚ್ಚಿಹೋದವು. ಅಂತೂ, ವೇಳೆಗೆ ಕೈಗೆ ಸಿಕ್ಕದೇಹೋದವು.

ಕಛೇರಿಯಲ್ಲಿದ್ದ ನನಗೆ ಈ ಸ್ಥಿತಿಯನ್ನು ನಮ್ಮ ನೌಕರರೂ, ಇತರರೂ ಬಹಳ ಕಾತರದಿಂದ ತಿಳಿಸಿದರು. ಈ ದುರವಸ್ಥೆಗೆ ಏನಾ ದರೂ ಪರಿಹಾರ ಹುಡುಕುವ ಹೊಣೆ ನನ್ನದಾಯಿತು. ಘಳಿಗೆ ಘಳಿಗೆಗೂ ನೀರು ಹೆಚ್ಚುತ್ತಲೇ ಬರುತ್ತಾ, ಸ್ವಲ್ಪ ಕಾಲದಲ್ಲೇ ಹೊಳೆ ಇಳಿಯುತ್ತೆಂಬ ಆಸೆ ಇಲ್ಲವಾಯಿತು. ನಾನು ನರಸಿಪುರ, ಅಲಗೋಡು, ಮತ್ತು ಸುತ್ತ ಮುತ್ತಲಿನ ಅಂಬಿಗರ ಯಜಮಾನರನ್ನು ಕರೆಯಿಸಿ ಆಲೋಚನೆ ಮಾಡಿದೆ. ಅವರಲ್ಲಿ ಅನೇಕರು:—"ದೋಣಿ ಇಲ್ಲವಲ್ಲ ಬುದ್ಧಿ!" "ಹರಿ ಗೋಲಾದರೂ ಇದ್ದಿದ್ದರೆ, ನನ್ನ ಒಡೆಯ"—ವಗೈರೆ ವಗೈರೆ. ಇಲ್ಲದಿದ್ದದು ಇದ್ದಿದ್ದರೆ ತಾವು ತೋರಿಸುತ್ತಿದ್ದ ಶೌರ್ಯವನ್ನು ಕೊಚ್ಚಿದರು. ಕೊನೆಗೆ

ಹೊಟ್ಟೆವಾದನೆಂಬ ಒಬ್ಬ ಮುದುಕ ಎದ್ದು ಅವರನ್ನೆಲ್ಲರನ್ನೂ— ಥೂ ಹೇಡಿ ನನ್ ಮಕ್ಕಳಿರ! (ಅವನ ವಕ್ತೃತ್ವ ಅನೇಕ ತಲಾಂತರಗಳನ್ನು ವ್ಯಾಪಿಸಿತು) ಗಂಗೇ ಮಕ್ಕಳೀನರಾ ನೀವು? ಎಂದು ಬೈದು— ಇದು ಕೇಳಿ ಬುದ್ಧಿ, ನಾ ಮುದಿಯಾ ಏಳೋದ, ದೊಡ್ಡ ದೊರೆಗಳ ದಿನದಾಗೆ ಹಿಂಗೇ ಉಚ್ಚ್ಕುವಳಿ ಬಂತೇಳಿ. ಆಗ ನಾನು ಈಟು (ಸುಮಾರು ಮೂರು ಅಡಿ ಎತ್ತರ ಕೈತೋರಿ) ಹೈದ ನಮ್ಮಪ್ಪ— ವಿರಾಶೇ ಮಂಟನಾಯಕ —ಒಳ್ಳೇ ಗಂಡೇಳಿ, ಮೂವರು ಎಂಡರನ್ನಾಳೋನು, ಮೂರು ಸೇರು ಎಂಡಾ ಕುಡಿಯೋನು, ಈಗಿನೋರಾಂಗೆ, — ಯಾನಪ್ಪ ಮಾಡೋಣ, ಮಳೆಬೀಳತದಲ್ಲಪ್ಪ— ಅನ್ನೋ ಯಾನಾದಿ ಅಲ್ಲೇನಿ— ನಮ್ಮಪ್ಪ ಊರಲ್ಲಿರೋ ಬಂಬನ್ನ, ಬಿಂಗುಗಳನ್ನ, ಎಮ್ಮೆ ಮರಗೆಗಳನ್ನ ಎಲ್ಲ ಇಡಿದು ತೆಪ್ಪಕಟ್ಟಿ ವಳೆ ಆಚೆ ಗದ್ದೆ ಬೈಲಿಗೆ ಕೂಲಿನಾಲಿಗೆ ವೋಗಿದ್ದ ಎಮ್ಮಕ— ಮಕ್ಕಾನೆಲ್ಲ, ತಿರಮುಕೂಡ್ಲಿಗೆ ವೋಗಿದ್ದ ಐನೋರನ್ನೆಲ್ಲ, ಕರತಂದ ಈಗ್ಯಾಕೆ ಅಂಗೇಮಾಡಬಾರದೇಳಿ?" ಅಂದ.

ಅಲ್ಲಿದ್ದ ಬಾಕಿ ಅಂಬಿಗರೂ ಅದು ಒಳ್ಳೆ ಸಲಹೆ ಎಂದು ಒಪ್ಪಿದರು. ಅವರಿಗೆ, ಕೆಲಸತೀರಿದ ಮೇಲೆ ಮೆಹನತ್ತಿಗೆ ತಕ್ಕಷ್ಟು ಪಾನ ಕೊಡಿಸುವುದಾಗಿ ಭರವಸೆ ಕೊಟ್ಟಮೇಲಂತೂ, ಅವರ ಒಪ್ಪಿಗೆ ಉತ್ಸಾಹದ ಮಟ್ಟಕ್ಕೆ ಏರಿತು. ಸರಿ, ಕೂಡಲೆ ಮರಹಮತ್ತು ಕಂಟ್ರಾಕ್ಟರುಗಳಿಂದ, ಗಳುವಿನಂಗಡಿಗಳಿಂದ, ದೊರೆಯುವ ಬಂಬುಗಳನ್ನೂ ಹಗ್ಗಗಳನ್ನೂ, ಖಾಲಿ ಕೆರೋಸಿನ್ ಡಬ್ಬಾಗಳನ್ನೂ ತರಿಸಿ, ಡಬ್ಬಾಗಳಲ್ಲಿ ನೀರು ಪ್ರವೇಶಿಸದಂತೆ ಬೆಸಗೆಮಾಡಿಸಿ, ಆಳುಗಳನ್ನು ಬಿಟ್ಟು ಅಂತೂ ನಾಲ್ಕು ತೆಪ್ಪಗಳನ್ನು ತಯಾರ್ಮಾಡಿಸಿ, ಮಡಿವಾಳ ಶೆಟ್ಟಿಗಳ ಮನೆಗಳಿಂದ ಪಂಜುಗಳನ್ನೂ, ದೇವಸ್ಥಾನದಿಂದ ಮಷಾಲುಗಳನ್ನೂ ತರಿಸಿ, ಹೊಳೆಯ ಕರೆಯನ್ನು ಬೆಳಕಾಗಿ ಮಾಡಿಸಿ, ತೆಪ್ಪಗಳನ್ನು ತಿರಮುಕೂಡ್ಲಿಗೆ ಬಿಡಿಸಿದೆ. ಮೊದಲನೆಯ ತೆಪ್ಪದಲ್ಲೇ ನಾನು ಅಲ್ಲಿಗೆ ಹೋದೆ. ಪ್ರವಾಹದಲ್ಲಿರುವ ಹೊಳೆಯನ್ನು ಮಳೆಗಾಳಿಗಳ ಹೊಡೆತದಲ್ಲಿ ರಾತ್ರಿಯ ಕತ್ತಲಿನಲ್ಲಿ ತೆಪ್ಪಗಳ ಮೇಲೆ ದಾಟುವುದು ಸಾಹಸದ ಕೆಲಸ; ಅನಿವಾರ್ಯದ ಹೊರತು, ಹೆಂಗಸರು ಮಕ್ಕಳನ್ನು ಇದಕ್ಕೆ ಸಿಕ್ಕಿಸಬಾರದೆಂದು ತೋರಿತು. ತಿರುಮ

ಕೂಡಲಲ್ಲಿ ಈ ಅಕಸ್ಮಾತ್ತಿನಿಂದ ಸಿಕ್ಕು ನಿಲ್ಲಬೇಕಾಗಿ ಬಂದ ಹೆಂಗಸರು ಮಕ್ಕಳಿಗೆ ರಾತ್ರಿ ಊಟಕ್ಕೆ ಅನ್ನ, ಮಲಗುವುದಕ್ಕೆ ಸ್ಥಳ, ಹೊದೆಯು ವುದಕ್ಕೆ ಬಟ್ಟೆಗಳಿಗೆ ಏರ್ಪಾಡುಮಾಡಿ, ನನ್ನ ಜೊತೆಗೆ ವಾಪಸು ಬರಲು ಇಷ್ಟಪಟ್ಟ ಗಂಡಸರನ್ನೆಲ್ಲಾ ಕರೆದುಕೊಂಡು ಬಂದೆ. ಅವೊತ್ತು ರಾತ್ರಿ ತೆಪ್ಪಗಳು ಬಟ್ಟೆ, ಬರೆ, ತಿಂಡಿ, ಇವುಗಳನ್ನು ಹೇರಿಕೊಂಡು ಎರಡು ಮೂರು ಸಲ ತಿರಮಕೂಡ್ಲಿಗೆ ಆಡಿದವೆಂದು ವರದಿ ಬಂತು. ಆ ರಾತ್ರಿ ಶ್ರಮಪಟ್ಟ ಅಂಬಿಗರು, ದಾಹಶಮನವಿಲ್ಲದ್ದೆ ನಿದ್ರಿಸಲಿಲ್ಲ !

ಹೊಳೆಗಳ ಪೂರ್ಣಪ್ರವಾಹ ಬಂದಾಗ ತಿರಮಕೂಡ್ಲು ನರಸಿಪುರದ ಪ್ರಕೃತಿಸೌಂದರ್ಯದ ಸಂಪತ್ತನ್ನು ಏನು ಹೇಳಲಿ ? ಕಪಿಲಾ ನದಿಯು ಪಶ್ಚಿಮದಿಂದ ಪೂರ್ವಕ್ಕೆ ಹರಿದು, ಅದುವರಿಗೂ ಉತ್ತರದಿಂದ ದಕ್ಷಿಣಕ್ಕೆ ಬರುವ ಕಾವೇರಿಯನ್ನು ತಿರಮಕೂಡ್ಲು ಪುಣ್ಯಕ್ಷೇತ್ರದಲ್ಲಿ ಸೇರಿ, ಈ ಸಂಗಮದಿಂದ ಮಹತ್ವವನ್ನು ಹೊಂದಿದ ಸರಿತ್ತು ಮೂಡಲಿಗೆ ಮುಡುಕ ತೊರೆ, ತಲಕಾಡು, ಮಾರ್ಗವಾಗಿ, ವಿಶಾಲವಾದ ಪಾತ್ರದಲ್ಲಿ ಧಾವಿಸು ತ್ತದೆ ನದಿಯ ಉಭಯ ತೀರಗಳಲ್ಲೂ ಸಂವೃದ್ಧಿಯಾದ ಗ್ರಾಮಗಳು ; ಪ್ರವಾಹ ಕಾಲದಲ್ಲಿ ಸೊಂಪಾಗಿ ಬೆಳೆದು ಕಾಣುವಷ್ಟು ದೂರವೂ ಕಣ್ಣಿಗೆ ತಣಿವು ತುಷ್ಟಿಯನ್ನುಕೊಡುವ ಪೈರುಪಚ್ಚೆಗಳು, ತೋಪುಗಳು. ಈ ಸನ್ನಿವೇಶದಲ್ಲಿ ತುಂಬಿ, ಗಂಭೀರ ಘೋಷದಿಂದ, ಹಗಲು ರಾತ್ರಿಗಳ ಬಗೆಬಗೆಯ ಚಂದದ ಆಕಾಶವನ್ನು ಪ್ರತಿಬಿಂಬಿಸುತ್ತಾ ಹರಿಯುವ ಕಾವೇರಿಯ ನೊಬಗನ್ನು ವರ್ಣಿಸಲಿಕ್ಕೆ ನನಗೆ ವಾಗ್ವಿಭವ ಏನೇನೂ ಸಾಲದು. ಆದರೆ ಆ ತಾಯಿಯ ಲಾಲನೆಯ ಸುಖವನ್ನು ಬಹಶಃ ಇತರರಗಿಂತಲೂ ಹೆಚ್ಚಾಗಿ ಅನುಭವಿಸಿದ್ದೇನೆ. ನನ್ನ ಹಿಂದೆ ಅಲ್ಲಿ ಅಮಲ್ದಾರರಾಗಿದ್ದು, ಖುದ್ದು ಪರಿಚಯಕ್ಕೆ ಮುಂಚೆಯೇ ಕೇಳಿಕೆಯ ಬಲದಮೇಲೆ ನನ್ನ ಮೆಚ್ಚುಗೆಳೆಯರಾಗಿದ್ದ, ವೈ॥ ವಾ॥ ಎಂ. ಜಿ. ಕೃಷ್ಣ ಸ್ವಾಮಿರಾಯರು ತುಂಬು ಹೊಳೆಯಲ್ಲಿ ಜೋಡು ದೋಣಿ ಕಟ್ಟಿಸಿಕೊಂಡು ಮುಡುಕತೊರೆಗೆ ಒಮ್ಮೆ ಪ್ರವಾಹವನ್ನನುಸರಿಸಿ ಪ್ರಯಾಣ ಮಾಡಿದರೆಂದು ಅಂಬಿಗರಿಂದ ಕೇಳಿ —ಚಾಪಲಾಯ ಪ್ರಚೋದಿತಃ — ನಾನು ವಯೋ ವೃದ್ಧ ಹಿತಚಿಂತಕರ ಎಚ್ಚರಿಗೆ ಬುದ್ಧಿವಾದಗಳನ್ನು ಲೆಕ್ಕಿಸದೆ, ಒಂದು

ದಿನ ಹಾಗೇ ದೋಣಿಯನ್ನೇರಿ ನಡುಹೊಳೆಯ ಸೆಳೆತದ ಭರದಲ್ಲಿ ಮುಡುಕುತೊರೆಗೆ — ಸುಮಾರು ಹತ್ತುಮೈಲುಗಳನ್ನು ಎರಡು ಘಂಟೆಗಳಗಿಂತ ಸ್ವಲ್ಪಕಡಮೆ ಕಾಲದಲ್ಲಿ ಧಾವಿಸಿ — ಬಂದೆ. ಆ ಉತ್ಸಾಹವನ್ನು ಏನು ಹೇಳಲಿ! ನಾನು ಸಾಮಾನ್ಯವಾಗಿ ನನ್ನ ತಾಬೇದಾರರ ಸಂಗಡ ಸಲಿಗೆಯಾಗಿ ಮಾತನಾಡದಿದ್ದವನು, ಆ ಹೊತ್ತಿನಲ್ಲಿ ಶ್ರೀಮದ್ಗಾಂಭೀರ್ಯವನ್ನು ತೊರೆದು, ನನ್ನೊಡನೆ ಪ್ರವಾಹಯಾನಕ್ಕೆ ಒಡಂಬಟ್ಟು ಭಯವನ್ನು ಪಡುತ್ತಿದ್ದ ಅಥವ ನಟಿಸುತ್ತಿದ್ದ ಪೋಲೀಸು ಜಮಾದಾರರು, ಶಿರಸ್ತೆದಾರರು, ಶೇಕದಾರರು, ಮತ್ತು ಇತರ ಅನುಯಾಯಿಗಳ ಸಂಗಡ ಹಾಸ್ಯದ ಮಾತುಗಳನ್ನಾಡಿ, ನಾನೂ ರಾಜಾಜಿಯವರೂ ಮದರಾಸಿನಲ್ಲಿ ಒಂದು ದಿನ ಕಟ್ಟುಮರದ ಮೇಲೆ ಬೆಸ್ತರ ಸಂಗಡ ಕಡಲಿನಲ್ಲಿ ತೀರದಿಂದ ಐದಾರು ಮೈಲುಗಳಷ್ಟು ದೂರ ಹೋದದ್ದನ್ನು ಕುರಿತು ಕೊಚ್ಚಿಕೊಂಡೆ. ಶೇಕದಾರರು ದೇವರನಾಮಗಳನ್ನು ಹಾಡುತ್ತಾರೆಂದು ಕೇಳಿದ್ದೆನಾದ್ದರಿಂದ, ಆ ಬಡಸಾಯಿ ಕೈಲಿ (ಅಥವ ಬಾಯಲ್ಲಿ ಅನ್ನಬೇಕೋ?) ನಾಲ್ಕು ದಾಸರಪದಗಳನ್ನು ಹಾಡಿಸಿ — ಸೀಕರದ ಗಾಳಿಯಿಂದಲೋ, ಭಯದಿಂದಲೋ, ನಡಗುತ್ತಿದ್ದ ಅವರ ಧ್ವನಿಯ ಪಲುಕುಪಡಿಯನ್ನು ಹೊಗಳಿದೆ. ಮುಡುಕತೊರೆಗೆ ತಲಪಿದ ಮೇಲೆ ನಮ್ಮ ನಾಲ್ವರು ಅಂಬಿಗರಿಗೆ ಘಸಂದಾದ ಊಟಕ್ಕೆ ಏರ್ಪಾಡುಮಾಡಿ, ಪಾನಕ್ಕಾಗಿ ಫೀ ಇಸಂ ಎರಡೆರಡು ರೂಪಾಯಿಗಳನ್ನು ಕೊಟ್ಟೆ (ಆಗಿನ ಕಾಲದಲ್ಲಿ ರೂಪಾಯಿ ಎಂದರೆ ನಿಜವಾಗೂ ಹತ್ತು ಸೇರು ಅಕ್ಕಿ, ಮುಖ್ಯವಾಗಿ ಸ್ನಾನದತೊಟ್ಟಿ ತುಂಬ ಹೆಂಡವನ್ನು ಕೊಳ್ಳುವ ಯೋಗ್ಯತೆಯುಳ್ಳ ನಾಣ್ಯವಾಗಿತ್ತು) ರಾತ್ರಿ ಬೆಟ್ಟದಮೇಲಿನ ಶ್ರೀ ಮಲ್ಲಿಕಾರ್ಜುನ ದೇವಸ್ಥಾನಕ್ಕೆ ಹೋಗಿ ಪೂಜೆಮಾಡಿಸಿ, ತಮ್ಮಡಿಗಳ ಬಾಯಿನಲ್ಲಿ ರಾಜಾಶೀರ್ವಾದವನ್ನು ಹ್ಯಾಗೋ ಉಚ್ಚಾರಣೆ ಮಾಡಿಸಿ, ಪೊತ್ತು ಅಲ್ಲಿನ ಚಿಕ್ಕ ಇನ್‌ಸ್ಪೆಕ್ಷನ್ ಲಾಡ್ಜಿನಲ್ಲೇ ಮೊಕ್ಕಾಂ ಮಾಡಿದೆ. ನಮ್ಮ ಮನೆಯವರ ಚಿಂತೆಯ ಶಮನಕ್ಕಾಗಿ, ತಲಪಿದಕೂಡಲೆ ಒಂದು ಚೀಟಿಯನ್ನು ಮುದ್ದಾಂ ಕಳುಹಿಸಿದೆ.

ಇದಾದ ಮೇಲೆ, ಹೊಳೆಯಲ್ಲಿ ಸಾಕಾದಷ್ಟು ನೀರಿದ್ದಾಗಲೆಲ್ಲಾ ನಾನೂ, ನನ್ನ ಮನೆಯವರೂ ಮುಡುಕತೊರೆಗೆ ಹೋಗಬೇಕಾದರೆ ದೋಣಿಯಲ್ಲೇ ಪ್ರಯಾಣ ಮಾಡುತ್ತಿದ್ದೆವು. ಅದರ ನವತೆ ಸವೆದರೂ, ನರ್ಮಜನಕತ್ವ ಸವೆಯಲಿಲ್ಲ. ಆ ಪ್ರಯಾಣಗಳಲ್ಲಿ ಎರಡು ಮಾತ್ರ ಅಸಾಧಾರಣ ಅನುಭವದ ದೆಸೆಯಿಂದ ನನ್ನ ಜ್ಞಾಪಕದಲ್ಲಿ ತೇಲುತ್ತಿವೆ. ಒಂದು ಸಲ ಇದ್ದದ್ದು ಇದ್ದಹಾಗೇ, ಸ್ವಲ್ಪವೂ ಮುನ್ ಸೂಚನೆ ಇಲ್ಲದೆ ನರಸಿಪುರದಿಂದ ನಾಲ್ಕೈದು ಮೈಲಿ ದೂರದಲ್ಲಿದ್ದಾಗ, ಸಿಡಿಲು, ಬಿರುಗಾಳಿ ಸಮೇತವಾದ ಮಳೆ ಶುರುವಾಯಿತು ಹೊಳೆಯಲ್ಲಿ ದೊಡ್ಡ ದೊಡ್ಡ ಅಲೆಗಳು—ನೊರೆಸಹಿತವಾದ ಎತ್ತರವಾದ ಅಲೆಗಳು— ಎದ್ದು ದೋಣಿಯನ್ನು ಉರುಳಾಟವಾಡಿಸಲು ಹತ್ತಿದವು. ಗಾಳಿ ಮಳೆಗಳ ಹೊಡೆತದಿಂದ ದೋಣಿ ಅಂಬಿಗರ ಹತೋಟಿ ಮೀರಿತು. ಅಂಬಿಗರೇ ಹೆದರಿದಂತೆ ನನಗೆ ತೋರಿತು; ದೋಣಿಯಲ್ಲಿದ್ದ ಇತರರ ಪಾಡೇನು? ನಾನು ಹತ್ತಿರದ ತೀರದಲ್ಲಿನ ಮುಸಕನಕೊಪ್ಪಲೆಂಬ ಗ್ರಾಮಕ್ಕೆ ದೋಣಿಯನ್ನು ಪ್ರವಾಹದಿಂದ ಉಪಾಯವಾಗಿ ತಿದ್ದಿ ತಿರುಗಿ ಸೆಂದು ಅಂಬಿಗರ ನಾಯಕನಿಗೆ ಹೇಳಿದೆ. ಬಹಳ ಶ್ರಮದಿಂದ — ಮುಖ್ಯವಾಗಿ ದೇವರದಯದಿಂದ—ಅವನು ಹಾಗೆ ಮಾಡಿದ ಸುರಿಯುವ ಮಳೆಯಲ್ಲಿ ನಾವು ಮುಸಕಿನಕೊಪ್ಪಲನ್ನು ಕ್ಷೇಮವಾಗಿ ತಲಪಿ, ಅಲ್ಲಿಯ ಭಾರಿ ಜಮೀನ್‌ದಾರ ಒಬ್ಬ ಹೆಗ್ಗಡೆ ಗೌಡನ ಮನೆಗೆ ಹೋಗಿ ಆತಿಥ್ಯ ವನ್ನುಪಡೆದೆವು. ಅವನು ಬಹಳ ಉದಾರ ಸ್ವಭಾವದ ಗೃಹಸ್ಥ; ನಮ್ಮನ್ನು ನಿಜವಾದ ಆದರದಿಂದ ಸತ್ಕರಿಸಿ, ಅವನ ಭಾರಿ ಹೊಸ ತೊಟ್ಟಿ ಮನೆಯಲ್ಲಿನ ಮುಖ್ಯಭಾಗವನ್ನು ನಮಗೆ ಬಿಡತಿ ಮಾಡಿಕೊಟ್ಟ. ಅದರಲ್ಲಿ ಬೆಲೆ ಬಾಳತಕ್ಕ ವಜನ್‌ದಾರ ಪೆಟ್ಟಿಗೆ, ಬೀರು, ನಾಗಾಲು ಮಣೆಗಳು, ನಗ್ನಲಾವಣ್ಯದ ಫರಂಗಿ ಲಲನೆಯರ ಜರ್ಮನ್ ಬಣ್ಣಪಟಗಳು, ಇದ್ದವು. ಒಂದು ವಿಚಿತ್ರವಾದ ಮಂಚವಿತ್ತು. ಅದು ಕರೀ ಮರದ್ದು, ಮಜಭೂತಾದ ಕಟ್ಟಡದ್ದು; ಶ್ರೀಮಂತ ಹೆಗ್ಗಡೆಯು ಬೆಲೆ ಬಾಳುವ ಮರಕ್ಕಾಗಲಿ, ಹಿತ್ತಾಳೆಕಟ್ಟು, ಕಲಶಗಳಿಗಾಗಲಿ ಕಾರ್ಪಣ್ಯಪಟ್ಟಂತಿರ ಲಿಲ್ಲ ಅಂದರೆ, ಅದರ ಮುಖ್ಯ ಸೊಗಸು, ಹಾಸಿಗೆಯ ಸುತ್ತಲೂ

ಇದ್ದ ಒಂಬು ಗಜ ಎತ್ತರದ ಆದರ್ಶ ಕನ್ನಡಿಯು ಕೈಪಿಡಿ. ಮಲಗಿದ ಮಹರಾಯ ಎತ್ತ ಕಡೆ ನೋಡಿದರೂ ತನ್ನನ್ನೇ ತಾನು ಕಂಡು ಆನಂದಿಸಬಹುದು. ನಮ್ಮ ಹೆಗ್ಗಡೆಯ ರೂಪು ಅವನ ಹೃದಯದಷ್ಟು ಸುಂದರವಲ್ಲ—ಕರೀ ಬಣ್ಣದ ದಟ್ಟವಾದ ರೋಮಸಂಪತ್ತಿನಿಂದ ಕೂಡಿದ ತುಂಬು ಶರೀರ. ಅದನ್ನು ದಿನವಹಿ ನಾಲ್ಕು ದಿಕ್ಕಿನಲ್ಲೂ ನೋಡಿ ಹಿಗ್ಗುತ್ತಾನೋ, ಏನೋ—ಎಂದುಕೊಂಡೆ. ಅಥವ, ಆ ಶಯನದ ಭಾಗಗಳ ಲಾವಣ್ಯ ಎಷ್ಟು ನೋಡಿದರೂ ಸಾಲದು ಎಂದು ಈ ಏರ್ಪಾಡಿದ್ದರೂ ಇದ್ದಿರಬಹುದು. ಅವೊತ್ತು ಮುಸಕಿನಕೊಪ್ಪಲಿನಲ್ಲೇ ಹೆಗ್ಗಡೆಯ ಆತಿಥ್ಯದಲ್ಲಿ ಸುಖವಾಗಿದ್ದು ಮಾರನೇ ದಿನ ಮುಂದೆ ಮುಡುಕತೊರೆಗೆ ಪಯಣಮಾಡಿದೆವು.

ನನ್ನ ಅನುಭವದಲ್ಲಿ ಈ ಪ್ರಾಂತ್ಯದ ಹೆಗ್ಗಡೆ ಗೌಡರು ಬಹಳ ಉದಾರ ಸ್ವಭಾವದ, ಅಭಿಮಾನದ ಜನ — ಒಕ್ಕಲಿಗರಷ್ಟು ವ್ಯವಹಾರ ಜ್ಞಾನ ಉಳ್ಳವರಲ್ಲ; ಲಿಂಗಾಯಿತರಷ್ಟು ಅಹಂಕಾರಿಗಳಲ್ಲ ನನಗೆ ಜ್ಞಾಪಕ ಬರುತ್ತೆ, ಹಿಂದೆ ಒಂದು ಸಲ ಯಡತೊರೆ ತಾಲ್ಲೂಕಿನಲ್ಲಿ ನಾನು ಹುಲ್ಲೇಬೋರೆ ಕಾವಲೆಂಬ ಮಾಳದಲ್ಲಿ ಹೀಗೆಯೇ ಮಳೆಗೆ ಸಿಕ್ಕು, ದಾರಿತಪ್ಪಿ, ಇಲ್ಲಿ ಅಲ್ಲಿ ಅಲೆದು, ಕೊನೆಗೆ ಕತ್ತಲಲ್ಲಿ ಕಾಣುತ್ತಿದ್ದ ಒಂದು ಉರಿಯ ಕಡೆಗೆ ಹೋಗಿ, ಅದರ ಸುತ್ತಲೂ ಕುರಿಮಂದಿ ಕಾದುಕೊಂಡು ಮೊಕ್ಕಾಂ ಮಾಡುತ್ತಿದ್ದ ಕುರುಬರ ಗುಂಪಿನ ಬಳಿಸೇರಿದೆ. ನಾನು ಹೊಸ ಅಗ್ರಹಾರಕ್ಕೆ ಹೋಗಬೇಕಪ್ಪ, ಯಾರಾದರೂ ದಾರಿ ತೋರಿಸುತ್ತೀರಾ—ಎಂದುಕೇಳಿದೆ. ಅವರ ಯಜಮಾನ—ಆಗಲಿ ಬುದ್ಧಿ, ವಸಿ ಮುಹೂರ್ತ ಮಾಡಿ, ಹಿಟ್ಟುಂಡು ಬತ್ತೀನಿ—ಎಂದು ತಾನು ಹೊದ್ದಿದ್ದ ಕಂಬಳಿಯನ್ನು ಮಡಿಸಿ ನನಗೆ ಕೂಡಲಿಕ್ಕೆ ವದ್ದೆಯಾಗಿದ್ದ ನೆಲದಮೇಲೆ ಹಾಕಿದ. ಆಮೇಲೆ, ಒಂದು ಮೊಗೆಯಲ್ಲಿ ಬಿಸಿಬಿಸಿಯಾದ ಕುರಿಯ ಹಾಲನ್ನು ತಂದು ಒಪ್ಪಿಸಿದ ಅದು ಏನೋ ಒಂದು ತರಹದ ಸಿಗಡು ವಾಸನೆಯಾದ್ದರಿಂದ ನನಗೆ ಕುಡಿಯಲಿಕ್ಕಾಗಲಿಲ್ಲ. ಅವನು ಮುಖ ಚಿಕ್ಕದು ಮಾಡಿಕೊಂಡದ್ದನ್ನು ನೋಡಿ—ಅವರು ಬೆಯಿಸುತ್ತಿದ್ದ ಸಾರಿನ ಬೆಳ್ಳುಳ್ಳಿವಾಸನೆ ನನ್ನ ಮೂಗಿಗೆ ಬಂದದ್ದರಿಂದ, ಅದರಿಂದಲಾದರೂ

ಕುರಿಹಾಲಿನ ಗವುಟು ಮುಚ್ಚಬಹುದಲ್ಲ — ಎಂದುಕೊಂಡು ಅದನ್ನು ತಂದುಕೊಡೆಂದು ಕೇಳಿದೆ. ಅವನು ಬಹಳ ಸಂಕೋಚದಿಂದ—ಅದೂ ಆಲಿನ ಆಮ್ರವೇ, ಬುದ್ಧಿ— ಎಂದು ಒಂದು ದೊನ್ನೆ ಆಮ್ರವನ್ನು ತಂದುಕೊಟ್ಟ. ಭೇಷಾಗಿತ್ತು—ನನಗೆ ಹಸಿವೂ ಆಗಿತ್ತೆಂದು ಕಾಣುತ್ತೆ. ಆಮೇಲೆ ಹ್ಯಾಗೋ ಒಂದು ಪಂಜನ್ನು ಹವಣಿಸಿಕೊಂಡು, ಅವರು ಮೂರು ಜನ ನನಗೆ ದಾರಿತೋರಿಸಲು ಸಂಗಡ ಬಂದು ಹೊಸ ಅಗ್ರಹಾರವನ್ನು ತಲಪಿಸಿದರು.

ಸರಿ, ಮತ್ತೊಂದು ಜ್ಞಾಪಕದಲ್ಲಿರುವ ಹೊಳೆಯಾನ ಇದು. ಒಳ್ಳೆ ಬೆಳದಿಂಗಳು ರಾತ್ರೆ; ಜೊತೆಗೆ ಊಟ ಬುತ್ತಿಕಟ್ಟಿಕೊಂಡು, ನೀರಿನ ಮೇಲೇ ಮುಡುಕತೊರೆಗೆ ಹೊರಟೆ. ನನ್ನ ಮಾಮೂಲು ಪರಿವಾರವಲ್ಲದೆ, ಬಹಳ ಚನ್ನಾಗಿ ಪಿಟೀಲು ನುಡಿಸುವ ಒಬ್ಬ ಶ್ಯಾನುಭೋಗರನ್ನು ಜೊತೆಗೆ ಕರೆದುಕೊಂಡೆ. ಹೊರಟಾಗ ಸಂಜೆ; ನದಿಯು ತೀರದ ದೇವಸ್ಥಾನಗಳಲ್ಲಿ ಸಂಧ್ಯಾಕಾಲದ ಅರ್ಚನೆಯ ಸಮಯ. ತೀರದ ತೋಪಿನಲ್ಲಿ ಹಕ್ಕಿಗಳು ತಮ್ಮ ದಿನಚರಿಯ ಸಂಚಾರ ತೀರಿಸಿಕೊಂಡು ತಮ್ಮ ಗೂಡುಗಳಿಗೆ ವಿಶ್ರಾಂತಿಗೆ ವಾಪಸು ಬರುತ್ತಿರುವ ಕೋಲಾಹಲ ಇದು ಮುಗಿಯುವದರೊಳಗಾಗಿ ದೇವಸ್ಥಾನದ ನಿತ್ಯಸೇವೆಯ ಓಲಗ ದೂರದಿಂದ ಮಧುರವಾಗಿ ನೀರಿನಮೇಲೆ ತೇಲಿ ನಮ್ಮ ಕಿವಿಗೆ ಬಂತು. ಲಕ್ಷ್ಮೀಶ ಕವಿಯು ಎಲ್ಲಿಯೋ ಗಂಗೆಯನ್ನು ವರ್ಣಿಸುತ್ತಾ "ಮೊಳಗಿದವು ದೇಗುಲದ ವಾದ್ಯಂಗಳು" ಎನ್ನುತ್ತಾನೆ— ಆ ಪದಗಳ ಸಂಪೂರ್ಣ ಅರ್ಥವೂ ಅಂದವೂ ಅವೊತ್ತೇ ನನಗೆ ತಿಳಿದದ್ದು. ಬೆಳದಿಂಗಳು ನದಿಯ ವಿಶಾಲ ಹರಡನ್ನು ಅಮೃತದಿಂದ ತುಂಬಿಸಿತು. ನಾವು ಪ್ರವಾಹದಮೇಲೆ ಮುಂದುಸರಿಯುತ್ತಾ ಬಂದಾಗ ತಟದ ಗ್ರಾಮಗಳ ದೀಪಗಳು ಅಲ್ಲಲ್ಲಿ ಕಾಣಿಸಲು ಪ್ರಾರಂಭಿಸಿದವು. ಈ ವಿಶ್ವದ ಸೌಂದರ್ಯ, ಪರಿಶುದ್ಧತೆ, ಸರ್ವವ್ಯಾಪಿಯಾದ ಭಗವಂತನ ವಿಭೂತಿ, ಅವೊತ್ತು ನನ್ನ ಹೃದಯವನ್ನು ಹೊಕ್ಕು ನನಗೆ ಹೇಳಲು ಸಾಧ್ಯವಿಲ್ಲದ ಆನಂದದ ಅನುಭವವಾಯಿತು. ವಿಶ್ವದಲ್ಲಿ ನಾನೂ ಬೆರತೆ: ನಾನು ಬೇರೆಯಲ್ಲ — ಇದನ್ನು ಹೇಗೆ ಇತರರಿಗೆ ತಿಳಿಯುವಂತೆ ಹೇಳುವುದು? ಈ ರೀತಿ ಅನುಭವ

ಇತರರಿಗೂ ಇರಬಹುದು. ನನಗೇನೋ, ಆಗ ಈ ಬಾಳುವೆಯ ಅರ್ಥ ಸ್ವಲ್ಪ ಹೊಳೆದ ಹಾಗಾಯಿತು. ಆಮೇಲೆ—ನಗಬೇಡಿ — ಹಸಿವಿನಿಂದ ಬುತ್ತಿ ನೆನಪು ಬಂದು ಆ ಅಂತಸ್ಥಿನಿಂದ ಭೂಮಿಗೆ ಇಳಿದೆ.

೨೯

ನಾನು ಟಿ. ನರಸಿಪುರಕ್ಕೆ ಸೇರಿದ ಕೆಲವು ದಿನಗಳಲ್ಲೇ ಹುಜೂರು ಜಮಾಬಂದಿಗಾಗಿ ಸಬ್ ಡಿವಿಜನ್ ಆಫೀಸರ ಸವಾರಿ ಬಂತು. ಸಂತೇಮರಹಳ್ಳಿ ಮೊಕ್ಕಾಂನಲ್ಲಿ ಚಾಮರಾಜನಗರದ ತಾಲ್ಲೂಕಿನ ಜಮಾಬಂದಿ ಮುಗಿಸಿಕೊಂಡು ಅಲ್ಲಿಂದ ಮೂಗೂರಿಗೆ ದಯಮಾಡಿಸಿ ನರಸಿಪುರದ ಜಮಾಬಂದಿ ಷುರೂಹಚ್ಚಿದರು ಚಾಮರಾಜನಗರದ ಅಮಲ್ದಾರರು ನನ್ನ ಸ್ನೇಹಿತರಾದ ದಿ|| ವೆಂಕಟರಮಣಶ್ರೋತ್ರಿಯವರು. ಸ|| ಡಿ|| ಆ||ಗೆ ಸಂತೇಮರಹಳ್ಳಿಯಲ್ಲಿ ಚಾಮರಾಜನಗರ ಜಮಾಬಂದಿ ಮುಗಿಸಿದ ಮೇಜವಾಣಿಯಾದ್ದಕ್ಕೆ ಅಮಲ್ದಾರರವರ ಔತಣದ ಮೇಲೆ ನಾನೂ ಹೋಗಿದ್ದೆ. ಸ|| ಡಿ|| ಆ||ರವರ ಪರಿಚಯ ನನಗೆ ಹೆಚ್ಚಾಗಿರಲಿಲ್ಲ. ಅವರು ನನಗೆ ಕೊಟ್ಟ ಆತಿಥ್ಯದ ಕತೆ ಆಗಲೇ ಹೇಳಿದ್ದೇನೆ. ಶ್ರೋತ್ರಿಯವರನ್ನು— ಈ ಮುದುಕರ ವಿಚಾರ ಹ್ಯಾಗೊ? ಅವರ ಮನಸ್ಸು ನೋಯಿಸದೆ, ಅವರು ಬಂದಿರುವ ಕಾರ್ಯವನ್ನು ಸಲೀಸಾಗಿ ನಿಭಾಯಿಸಿ, ಅವರನ್ನು ಸುಖವಾಗಿ ವಾಪಸು ಕಳುಹಿಸಿಕೊಡಬೇಕೆಂದು ನನ್ನ ಇಷ್ಟ. ನೀವು ಅವರನ್ನು ಚನ್ನಾಗಿ ಬಲ್ಲಿರಿ. ನನಗೆ ಏನಾದರೂ ಸಲಹೆ ಕೊಡುತ್ತೀರಾ? —ಎಂದು ಕೇಳಿದೆ. ಅವರು ನಕ್ಕು — ನಿಮ್ಮ ತಂಟೆಗೆ ಬರಲಾರರು. ನೀವು ಡೆಪ್ಯುಟಿ ಕಮಿಷನರ ಮೆಚ್ಚಿನ ಅಮಲ್ದಾರರೆಂದು ಅವರಿಗೆ ಗೊತ್ತು ನೀವು ಬೆಂಕಿನವಾಬರೆಂಬ ಭಯ ಆದರೂ ಅವರು ವಿಚಿತ್ರ ಮನುಷ್ಯರು. ಮಕ್ಕಳಹಾಗೆ, ಕೆಟ್ಟ ಅಭಿಪ್ರಾಯವಿಲ್ಲದೆಯೇ ಅವಿವೇಕವಾಗಿ ಮಾತನಾಡುತ್ತಾರೆ. ಅದನ್ನು ನೀವು ಸಹಿಸಬೇಕಾಗುತ್ತೆ. ನಾನು ಹೇಳೋದೇನು? ನಿಮಗೇ ಗೊತ್ತಾಗುತ್ತಲ್ಲ— ಅಂದರು. ಸರಿ, ಜಾಗ್ರತೇಲೇ ಗೊತ್ತಾಯಿತು. ಅವೊತ್ತು ಒಳ್ಳೇ ರಾಜರೀತಿಯ ಜಲಸ — ಸಂಗೀತ, ಗ್ರೂಪ್ ಫೋಟೋಗ್ರಾಫ್, ಮೃಷ್ಟಾನ್ನ ಭೋಜನ. ಊಟಕ್ಕೆ

ಎಲೆಹಾಕುವದಕ್ಕೆ ಸುಮಾರು ಎರಡು ಘಂಟೆಯಾಗಿತ್ತು. ಆದರೆ ಕಾಫಿ, ತಿಂಡಿ, ವಿಹಾರಗಳಲ್ಲಿ ಯಾರಿಗೂ ಹೊತ್ತಾಯಿತೆಂಬ ಕಳವಳ ತೋರ ಲಿಲ್ಲ. ಸ|| ಡಿ|| ಅ|| ಬಹಳ ಸಿಪ್ಮರೆಂದು ಹೇಳಿದೆನಷ್ಟೆ; ಅವರು ಬಾಕಿ ಯವರ ಹಾಗೆ ತಂದ ತಿಂಡಿಯನ್ನು, ಬಂದ ಕಾಫಿಯನ್ನು ಒಪ್ಪಿಸಿಕೊಂಡಿ ರಲಿಲ್ಲ. ಬಹಳ ಹಸಿದಿದ್ದರು. ಅವರ ವಯಸ್ಸಿನವರಿಗೆ ಹಸಿವಿನಿಂದ ಸಾಮಾನ್ಯವಾಗಿ ಆಗುವಂತೆ (ನನಗೆ ಇದು ಸಹಜ, ಸಾಮಾನ್ಯವೆಂದು ಈಗ ತಿಳಿದಿದೆ; ಆಗ ತಿಳಿದಿರಲಿಲ್ಲ) ತಾಳ್ಮೆಯೂ ಸ್ವಲ್ಪ ಜಾಳಾಗಿತ್ತೆಂದು ಕಾಣುತ್ತದೆ. ಎಲ್ಲ ಸಿದ್ಧವಾಯಿತು, ಶ್ರೋತ್ರಿಗಳು ಸಾಹೇಬರನ್ನು ಭೋಜನ ಶಾಲೆಯ ಅಗ್ರಸ್ಥಾನಕ್ಕೆ ಕರೆದುಕೊಂಡು ಬಂದು — ಹೊತ್ತಾಯಿತು, ಕ್ಷಮಿಸಬೇಕು — ಎಂದರು. ಸಾಹೇಬರು — ಓಹೋ, ಆಯಿತೆಂಬೋದು ಈಗ ಗೊತ್ತಾಯಿತೇ? ಘಡಿಯಾರ ನಿಂತುಹೋಗಿತ್ತೇನೊ, ನಿಮ್ಮದು!" ಎಂದರು ದುರ್ವಾಸರಿಂದವಿನ — ಧರ್ಮಛತ್ರದ ಬಿಟ್ಟಿ ಭೋಜನದ ವಿಮರ್ಶಕರಿಂದವಿನ — ಈ ರೀತಿ ಸತ್ಕಾರ ಪ್ರತಿಕ್ರಿಯೆಯನ್ನು ನಾನು ಕೇಳಿರಲಿಲ್ಲ. ನೋಡಿರಲಾತೂ ಇಲ್ಲ. ಊಟಕ್ಕೆ ಕೂತೆವು. ಬಡಿಸಿ ದವರು ಕೊನೆಗೆ ಕೆಲವು ಕಡೆಯ ಪದ್ಧತಿಯಂತೆ ಅನ್ನದಮೇಲೆ ತೊವ್ವೆ ಒಂದೊಂದು ಸವುಟು ಹಾಕಿದರು. ಸಾಹೇಬರಿಗೆ ಕೋಪಬಂತು. ಬಡಿ ಸಿದ ಅಡಿಗೆಯವನನ್ನು ಎದ್ದು ಹೊಡೆಯುತ್ತಾರೋ ಏನೋ ಅಂತ ಇದ್ದೆ—"ಥೂ ನಿನ್ನ ಮನೆಹಾಳಾದೋನೇ! ಪ್ರಾಣಾಹುತಿಗೆ ಮುಂಚೆ ತೊವ್ವೆ ಹಾಕಿದೆಯಲ್ಲ! ಅಚಮನ, ಪ್ರಾಣಾಹುತಿ ಆದಮೇಲೆ ತೊವ್ವೆ ಆದರೂ ಹಾಕು ಅಮೇಧ್ಯವಾದರೂ ಹಾಕು" ಎಂದು ಘರ್ಜಿಸಿದರು. ಅಮೇಧ್ಯವೆಂದರೆ ಹುತಿಗೆ ಯೋಗ್ಯವಲ್ಲದ್ದು ಎಂಬುದು ಒಂದು ಅರ್ಥ ವಾದರೂ ಪುರೀಷವೆಂದೂ ಮತ್ತೊಂದು ಅರ್ಥ—ಈ ಎರಡನೆಯ ಅರ್ಥ ದಲ್ಲೇ ಆ ಪದವನ್ನು ವಾಡಿಕೆಯಾಗಿ ಉಪಯೋಗಿಸುವುದು. ಶ್ರೋತ್ರಿಗಳು ಮುಖ ಚಿಕ್ಕದುಮಾಡಿಕೊಂಡು, ಆ ಎಲೆಯನ್ನು ತೆಗೆಸಿ ಬೇರೆ ಎಲೆ ಯನ್ನು ಹಾಕಿಸಿದರು.

ಸಾಹೇಬರು ಮೂಗೂರಿನಲ್ಲಿ ನರಸಿಪುರದ ತಾಲ್ಲೂಕಿನ ಜಮಾ ಬಂದಿಯನ್ನು ಪ್ರಾರಂಭಮಾಡಿ ಒಂದು ವಾರ ತಾಲ್ಲೂಕಿನ ಮುಖ್ಯ

ಸ್ಥಳಗಳಲ್ಲಿ ಮೊಕ್ಕಾಂ ಮಾಡಿದರು. ನಾನು ನನ್ನ ಕರ್ತವ್ಯವನ್ನನುಸರಿಸಿ ಅವರ ಸಂಗಡಲೇ ಇದ್ದೆ. ಅವರಿಗೆ ರೆವಿನ್ಯೂ ಕೆಲಸದ ಮಾಹಿತಿ ಸ್ವಲ್ಪ ಕಡಿಮೆ — ಅವರೂ ಖಮೀಂ ಗುಮಾಸ್ತರುಗಳಿದ್ದರಾದ್ದರಿಂದ, "ಜಮಾಬಂದಿ ಏರ್ಪಾಡು" ಸುಲಲಿತವಾಗಿ ನಡೆಯಿತು. ಸರಬರಾಜು, ಪೂಜೆ, ಊಟ, ಉಪಚಾರ, ಮಧ್ಯಾಹ್ನದ ನಿದ್ರೆ, ಸಾಯಂಕಾಲದ ದರ್ಬಾರು ಮಾಮೂಲಿನಂತೆ ನಡೆದವು. ನಾನು ಅವರ ಗುಮಾಸ್ತರುಗಳಿಗೆ—"ನಮ್ಮ ಗ್ರಾಮ ಹೋಬಳಿ ತಾಲ್ಲೂಕು ಸಿಬ್ಬಂದಿಗಳಿಗೆ ತೊಂದರೆ ಕೊಟ್ಟರೆ ನಾನು ಸುಮ್ಮನಿರುವುದಿಲ್ಲ; ಕಸ್ತಿಗಾರರಿಂದ ರುಷುವತ್ತಿಗೆ ಯತ್ನಪಟ್ಟರೆ ನಾನು ಮ್ಯಾಜಿಸ್ಟ್ರೇಟಾಗಿ ಗಮನಿಸಬೇಕಾಗುತ್ತೆ; ನಿಮ್ಮ ಮಾಮೂಲು ಊಟ ಉಪಚಾರ ಮರ್ಯಾದೆಗಳಿಗೆ ನಾನು ಹೊಂಚುಕಾದು ಅಡ್ಡ ಬರುವುದಿಲ್ಲ; ಮುಖ್ಯವಾಗಿ ನನ್ನವರಿಗೂ ಪುಕಾರು ಬರಕೂಡದು." ಎಂದು ಮುಂದಾಗೇ ಎಚ್ಚರಿಸಿದ್ದೆ. ಈ ಮುಂಜಾಗರೂಕತೆಗೆ ಅವರು ಗೌರವಕೊಟ್ಟರು. ಸಾಹೇಬರಿಗೆ ಕುದುರೆ ಸವಾರಿ ಬಾರದು; ಕಾಲ್ನಡಿಗೆಯೂ ಅಭ್ಯಾಸವಿಲ್ಲ; ವಯಸ್ಸಿನ ದೆಸೆಯಿಂದ ಅಷ್ಟು ಸುಖವೂ ಇಲ್ಲ. ಅವರ ಅಜಮಾಯಿಷೆಗಳೆಲ್ಲ ಎತ್ತಿನ ಗಾಡಿಯಲ್ಲಿ ಜರುಗಬೇಕು. ನನಗೆ ಆ ವಾಹನದ ರೂಢಿ ಹೆಚ್ಚಾಗಿರಲಿಲ್ಲವಾದ್ದರಿಂದ, ನಾನು ಸಾಹೇಬರ ಸವಾರಿಯ ಸಂಗಡ ಕುದುರೆಯ ಮೇಲೆ ಬರುತ್ತಿದ್ದೆ. ಮೊಕ್ಕಾಂಗಳಲ್ಲಿ ಸಾಹೇಬರ ಪೂಜೆ ಪಾರಾಯಣಗಳಲ್ಲಿ ಪೂರ್ವಾಹ್ನ ಬಹುಮಟ್ಟಿಗೆ ಕಳೆದು ಹೋಗುತ್ತಿತ್ತು. ಆಮೇಲೆ ಊಟ "ಎಣ್ಣೆಯಲ್ಲಿ ಭಕ್ಷವನ್ನು ಕರಿದರೆ ಸಾಹೇಬರಿಗೆ ನೆಗಡಿ ಕೂಡ್ಲೆ ಬರುತ್ತೆ. ಕಳ್ಳತನ ಪತ್ತೆಯಾಗುತ್ತೆ. ತಪ್ಪದಲ್ಲೇ ಎಲ್ಲ ಅಡಿಗೆಯೂ ಆಗಬೇಕು" ಎಂದು ಸ|| ಡಿ|| ಹೆಡ್ ಮುನ್ಷಿಯವರು ಬಾಬರ್ಚಿಖಾನೆ ಅಧಿಕಾರಿಗಳಿಗೆ ಎಚ್ಚರಿಸಿದ್ದರು ಇದರಿಂದ ಎಣ್ಣೆಯ ಪತ್ತೇದಾರಿಯಲ್ಲಿ ನಿಪುಣರಲ್ಲದ ಇತರರಿಗೂ ಪ್ರಯೋಜನವಾಗುತ್ತಿತ್ತು. ಸಾಹೇಬರಿಗೆ ಆಧ್ಯಾತ್ಮ ವಿಚಾರಗಳಲ್ಲಿ ಬಹಳ ಆಸಕ್ತಿ. ಆಧುನಿಕ ವಿಜ್ಞಾನಕ್ಕೂ (ಆಗಿನ ಆಧುನಿಕ ವಿಜ್ಞಾನಕ್ಕೂ) ಅವರು ಗ್ರಹಿಸಿದ್ದ ವೇದಾಂತಕ್ಕೂ ಸಮನ್ವಯವಿದೆಯೆಂಬುದು ಅವರ ಮತ; ಅದರ ಬೋಧಕರು ತಾವಾಗಲು ಅವರ ಸದಾಕಾಲ ಸಿದ್ಧತೆ.

ವೇದಾಂತ, ವಿಜ್ಞಾನ, ಇವು ಎರಡನ್ನೂ ಸಂಪೂರ್ಣವಾಗಿ ತಿಳಿದವನಿಗೆ ಎರಡೂ ಒಂದೇ ಆಗುತ್ತೋ ಏನೋ ನನಗೆ ಗೊತ್ತಿಲ್ಲ; ಯಾವದನ್ನೂ ತಿಳಿಯದವರಿಗೆ ಇವುಗಳನ್ನು ರಾಜಿಮಾಡಿಸುವುದು— ಅದರಲ್ಲೂ ಅಧಿಕಾರವಿದ್ದವರಿಗಂತೂ— ಬಹಳ ಸುಲಭ. ಈ ಪ್ರವಚನಗಳನ್ನು ಸ|| ಡಿ|| ಸಿಬ್ಬಂದಿಯವರೇ ಮೊದಲಾದ ತಾಬೇದಾರರುಗಳು ಬಹಳ ಭಕ್ತ್ಯಾದರಗಳಿಂದ ಕೇಳುತ್ತಿದ್ದರು. ನನಗೆ ವಿಜ್ಞಾನದಲ್ಲಿ ಸ್ವಲ್ಪ ಶಿಕ್ಷೆ ಇತ್ತಾದ್ದರಿಂದ ನಾನು ಮೂಕನಾಗಿರುತ್ತಿದ್ದೆ; ಅಥವ ಕೆಲಸದ ನೆವದಮೇಲೆ ಹೊರಟು ಬಂದು ಬಿಡುತ್ತಿದ್ದೆ. ಒಂದೊಂದು ವೇಳೆ ಅವರು ಶೇಷಾದ್ರಿ ಅಯ್ಯರರವ ಚಿಕ್ಕಂದಿನ ನೆನಪುಗಳನ್ನೂ ಅವರ ಜೀವನದ ಕಥೆಗಳನ್ನೂ ಹೇಳುತ್ತಿದ್ದರು. ಅವು ಕೆಲವು ನನಗೆ ಈಗ ಜ್ಞಾಪಕ ಬರುತ್ತವೆ. ಶೇಷಾದ್ರಿ ಅಯ್ಯರವರು ಬಾಲ್ಯದಲ್ಲಿ ತಮ್ಮ ವಯಸ್ಸಿನ ಇತರ ಹುಡುಗರಂತೆ ಲವಲವಿಕೆಯಾಗಿರಲಿಲ್ಲವಂತೆ ಇದ್ದದ್ದಿದ್ದಹಾಗೇ ಆಟಪಾಟಗಳನ್ನು ಬಿಟ್ಟು ಭ್ರಾಂತು ಬಡಿವರಂತೆ ಗುರಿ ಇಲ್ಲದ ದೃಷ್ಟಿಯಿಂದ ಕಣ್ಣುಬಿಟ್ಟುಕೊಂಡು ನಿಂತುಬಿಡುತ್ತಿದ್ದರಂತೆ. ಅವರ ತಂದೆಯವರ ಎಣ್ಣಿಕೆಯಲ್ಲಿ ಮನೆಯ ಹುಡುಗರ ಪೈಕಿ ಶೇಷಾದ್ರಿಯೇ ದಡ್ಡ; ಬಾಕಿಯವರು ಹ್ಯಾಗೋ ಬದುಕಿಕೊಳ್ಳುತ್ತಾರೆಂದು ಇತ್ತಂತೆ ಒಂದು ದಿನ ಒಬ್ಬ ಪ್ರಸಿದ್ಧನಾದ ಮಳೆಯಾಳಿ ಸಾಮುದ್ರಿಕ ಅವರ ಮನೆಗೆ ಅತಿಥಿಯಾಗಿ ಬಂದವನು ಊಟವಾದ ಮೇಲೆ ಎಲ್ಲರ ಕೈಗಳನ್ನೂ ನೋಡಿ, ಶೇಷಾದ್ರಿಯವರು ಮುಂದೆ ಬಹಳ ಉನ್ನತಪದವಿಗೆ ಬಂದು ಶ್ರೇಯಸ್ಸನ್ನೂ ಕೀರ್ತಿಯನ್ನೂ ಪಡೆಯುತ್ತಾರೆಂದು ಹೇಳಿದನಂತೆ. ಶೇಷಾದ್ರಿಯವರ ತಂದೆಯವರು ಮೊದಲು ನಕ್ಕು, ಆಮೇಲೆ ನಿಟ್ಟುಸಿರು ಬಿಟ್ಟು— ಅಯ್ಯೋ ಪಾಪ, ಒಳ್ಳೇ ಹುಡುಗ, ಆದರೆ ಶುದ್ಧಮಡಯ (ದಡ್ಡ); ನಿಮ್ಮ ಬಾಯಹರಿಕೆಯಿಂದಲಾದರೂ ಚನ್ನಾಗಿ ಬಾಳಲಿ— ಅಂದರಂತೆ. ಶೇಷಾದ್ರಿ ಅಯ್ಯರವರಿಗೆ ಜ್ಯೋತಿಷಶ್ಶಾಸ್ತ್ರದಲ್ಲಿ ಬಹಳ ನಂಬಿಕೆ. ಅವರ ಜಾತಕದ ಫಲವನ್ನು ಬಹಳ ವಿವರವಾಗಿ ಬರೆಯಿಸಿ, ಗೋಪ್ಯವಾಗಿಟ್ಟುಕೊಂಡಿದ್ದರಂತೆ. ಅದನ್ನು ನಮ್ಮ ವೈದ್ಯನಾಥ ಅಯ್ಯರಿಗೆ ಮಾತ್ರ ಒಂದು ಸಲ ತೋರಿಸಿದ್ದರಂತೆ. ಆದರಲ್ಲಿ, ಶೇಷಾದ್ರಿ ಅಯ್ಯರವರ

ಧರ್ಮಪತ್ನಿಯವರ ಶುಭವಾದ ಮಾಂಗಲ್ಯ ಬಲ, ಅವರ ಶೀಲ ಸುಕೃತಗಳ ಫಲವಾಗಿ ಶೇಷಾದ್ರಿ ಅಯ್ಯರವರಿಗೆ ಆಕೆಯ ಜೀವಮಾನ ಪರ್ಯಂತ ಸದಾ ಜಯವೆಂತಲೂ, ಆಮೇಲೆ ಕಷ್ಟಕಾಲ ಬರುತ್ತೆಂತಲೂ, ಕೊನೆಗೆ ಪಲಾನೆ ವಯಸ್ಸಿನಲ್ಲಿ ಮರಣವೆಂತಲೂ, ಬರೆದಿತ್ತಂತೆ. ಲೇಡಿ ಶೇಷಾದ್ರಿಯವರು ಗತಿಸಿದಾಗ ವಿಯೋಗ ಹತಪತಿಯು — ಇನ್ನು ನನ್ನ ಜೀವನದ ಬೆಳಕು ಹೋಯಿತು — ಎಂದು ತಿಳಿದುಕೊಂಡರಂತೆ. ಅವರಿಗೆ ವೇದಾಂತದಮೇಲೆ ಬಹಳ ಆಸಕ್ತಿ. Sir William Hunter ಎಲ್ಲಿಯೋ ಹೀಗೆ ಹೇಳಿದ್ದಾನೆ— ಇವರ ಮೇಧಸ್ಸನ್ನು Herbert Spencer (ಈತನು ವಿಕ್ಟೋರಿಯಾ ಚಕ್ರವರ್ತಿನಿಯವರ ಕಾಲದ ಸಾಮಾಜಿಕಶಾಸ್ತ್ರಜ್ಞ)ಗೂ, ಇವರ ಹೃದಯವನ್ನು ಪರಬ್ರಹ್ಮನಿಗೂ, ಅರ್ಪಿಸಿದ್ದಾರೆ — ಎಂದು. ಶೇಷಾದ್ರಿ ಅಯ್ಯರವರಿಗೆ ಆಗ ಶ್ರೀ ಶೃಂಗೇರಿ ಮಠದ ಸ್ವಾಮಿಗಳಾಗಿದ್ದ ಶ್ರೀ। ಶ್ರೀ। ನರಸಿಂಹ ಭಾರತೀಸ್ವಾಮಿಗಳಲ್ಲಿ ಪರಮಭಕ್ತಿ ಇತ್ತೆಂದು ನಾನು ಬಲ್ಲೆ. ದಿವಾನಗಿರಿಯ ಭರಾಟೆಯಲ್ಲಿ, ಪ್ರಪಂಚವೇ ತಮ್ಮ ಅಧೀನದಲ್ಲಿರುವ ಭ್ರಮೆ ಸಾಮಾನ್ಯ ಜನಕ್ಕೆ ಬರುವ ಸನ್ನಿವೇಶದಲ್ಲಿ, ಅವರು ಶ್ರೀ ಸ್ವಾಮಿಗಳವರ ಪ್ರತಿನಿಧಿ (ಏಜಂಟು) ಯಾಗಿದ್ದ ದಿ। ಶ್ರೀಕಂಠಶಾಸ್ತ್ರಿಗಳೆಂಬುವರಿಗೆ ಬರೆದಿದ್ದ ಕಾಗದದ ಪ್ರತಿಯನ್ನು ನನಗೆ ನನ್ನ ಪ್ರಿಯಮಿತ್ರರಾದ ದಿ। ಬೆಳವಾಡಿ ದಾಸಪ್ಪನವರು ಒಮ್ಮೆ ತೋರಿಸಿದರು. ಅದರಲ್ಲಿ, ತಾವು ಕೈಗೊಂಡಿದ್ದ ಹಲವು ರಾಜಕಾರ್ಯಗಳು ಯಶಸ್ವಿಯಾಗಿ ಕೈಗೂಡಿದ್ದನ್ನು ವಿವರಿಸಿ —"ಇದು ನನ್ನ ಪೂಜ್ಯಗುರುಗಳ ಆಶೀರ್ವಾದದ ಬಲದಿಂದ, ಎಂಬುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ಆದರೂ ನನ್ನ ಮನಸ್ಸಿನ ಶಂಕೆ, ಕಳವಳಗಳನ್ನು ಅವರಲ್ಲಿ ಅಲ್ಲದೆ ಮತ್ಯಾರಲ್ಲಿ ಹೇಳಿಕೊಳ್ಳಲಿ? ಈ ಕಾರ್ಯಸಾಧನೆ, ಈ ಜಯ, ಈ ಸಂಪತ್ತು, ಅತ್ಯಲ್ಪವಾದವುಗಳು, 'ಕ್ಷಣ ಭಂಗುರ'ವಾದವುಗಳು. ನನ್ನ ಸ್ವಾಮಿಯಾದ ಜಗದ್ಗುರುಗಳ ಅನುಗ್ರಹದಿಂದ, ನಾನು ಬಯಸುವ ಭಿಕ್ಷೆಯೇ ಬೇರೆ. ಅವರ ಪಾದಸೇವೆ, ವೈರಾಗ್ಯ, ಜ್ಞಾನ— ಇವುಗಳನ್ನು ಕೊಟ್ಟು ಪರಮಕಾರುಣಿಕರಾದ ಅವರು ನನ್ನನ್ನು ಉದ್ಧಾರಮಾಡಬೇಕು. ನನಗೆ ಅರ್ಹತೆಯಿಲ್ಲ; ಆದರೆ ಅವರು ಕೃಪಾಳುಗಳು" ಛಾಂದೋಗ್ಯ

ಉಪನಿಷತ್ತಿನಲ್ಲಿ ನಾರದರು ಸನತ್ಕುಮಾರರಲ್ಲಿ ಇದೇ ಭಿಕ್ಷೆಯನ್ನು ಬೇಡುತ್ತಾರೆ:

ಸೋಽಹಂ ಭಗವೋ ಮಂತ್ರವಿದೇವಾಸ್ಮಿ, ನಾತ್ಮವಿತ್; ಶ್ರುತಂ ಹಿ ಏವ ಮೇ ಭಗವದ್ದೃಶೇಭ್ಯಃ "ತರತಿ ಶೋಕಂ ಆತ್ಮವಿತ್" ಇತಿ. ಸೋಽಹಂ ಶೋಚಾಮಿ ತಂ ಮಾ ಭಗವಾನ್ ಶೋಕಸ್ಯಪಾರಂ ತಾರಯತು.

ಇದು ಜೀವದ ಅನವರತ ಮೊರೆ

ಶೇಷಾದ್ರಿ ಅಯ್ಯರವರಿಗೆ ಕೊನೆಗೆ ಸನ್ಯಾಸ ಸ್ವೀಕರಿಸಬೇಕೆಂಬ ಹಂಬಲವಿತ್ತಂತೆ. ಅವರು ಸಾವಿನ ಹಾಸಿಗೆಯನ್ನು ಹತ್ತಿದಮೇಲೆ ಅವಸಾನಕ್ಕೆ ಮುಂಚೆ ಸನ್ಯಾಸಿಗಳಾದರೆಂದು ಕೇಳಿದ ಹಾಗೆ ನೆನಪು, ಆದರೆ ಸ್ಪಷ್ಟವಾದ ನೆನಪಲ್ಲ. ಅವರು ಕೊನೆ ಕಾಯಿಲೆಗೆ ಬಿದ್ದಮೇಲೆ, ವೈದ್ಯನಾಥಯ್ಯರಿಗೆ—

"ವಾಸಿಯಂತೆ, ವಾಸಿ! ವಾಸಿ ಎಲ್ಲೀದು, ದಡ್ಡ? ಅವತ್ತು ನನ್ನ ಜಾತಕದಲ್ಲಿ ನೋಡಿದೆವಲ್ಲ, ಆ ಕಾಲಬಂದ ಹಾಗಿಲ್ಲವೇ?" ಎಂದರಂತೆ. ವೈದ್ಯನಾಥಯ್ಯರು ವ್ಯಸನದಿಂದ—ಹೌದು—ಎಂಬ ಅರ್ಥದಲ್ಲಿ ತಲೆಬಾಗಿದರಂತೆ.

ಆಗ ಅವರಿಗೆ ಬಹುಶಃ ಮನಸ್ಸಿನಲ್ಲಿ ಕೊರೆಯುತ್ತಿದ್ದ ಒಂದು ವಿಚಾರವನ್ನು ಸರಿಪಡಿಸಿ, ದೋಷವನ್ನು ತೊಳೆದುಕೊಳ್ಳಬೇಕೆಂದು ತೋರಿತೆಂದು ನನ್ನ ಭಾವನೆ ಅವರು ಅಧಿಕಾರದಲ್ಲಿದ್ದಾಗ ಜಹಗೀರದಾರರು ಪಿ. ಎನ್. ಕೃಷ್ಣಮೂರ್ತಿಗಳನ್ನು ದಬಾಯಿಸಿ, ತಮ್ಮ ಕಡೆಯವರು—ತಮ್ಮ ಪ್ರಿಯಶಿಷ್ಯರೆಂದು ಭಾವಿತರಾದ—ಒಬ್ಬರನ್ನು ತಮ್ಮ ತರುವಾಯ ದಿವಾನಗಿರಿಗೆ ತರಬೇಕೆಂದು ಬಹಳಮಟ್ಟಿಗೆ ತರದೂದು ಮಾಡುತ್ತಿದ್ದರೆಂಬುದು ಬಹಿರಂಗ ಗುಟ್ಟು. ಕೊನೆಕೊನೆಗೆ ತಮ್ಮ ಪ್ರಿಯ ಚೇಲಾಗಳು ತಮಗೇ ಬುಡಕ್ಕೆ ನೀರುತಿದ್ದುತ್ತಿದ್ದಾರೆಂದು ರೆಸಿಡೆನ್ಸಿಯಿಂದಲೇ ಸಾಫ್ ರುಜುವಾತ್ತು ಬಂತೆಂದು ಕೇಳಿದ್ದೇನೆ. ಅದು ಹ್ಯಾಗಾದರೂ ಇರಲಿ; ತಮ್ಮ ನೈಸರ್ಗಿಕ ಧರ್ಮಬುದ್ಧಿಗೆ ತಾವು ಮಾಡಿದ ವ್ಯಾವಹಾರಿಕ ಅನ್ಯಾಯವು ಪಶ್ಚಾತ್ತಾಪವನ್ನು ತಂದಿರಬೇಕು. ಅವರು ಸಾಯುವ ಹಿಂದಿನ ದಿನ ಜಹಗೀರದಾರರನ್ನು ಕರೆಯಿಸಿಕೊಂಡು, ಅವರ

ಸಂಗಡ ಪ್ರೇಮದಿಂದ ಮಾತನಾಡಿ, ದಿವಾನಗಿರಿಗೆ ಅವರನ್ನೇ ಮಹಾ ರಾಜರವರಲ್ಲಿ ಶಿಫಾರ್ಸುಮಾಡಿ ಒಪ್ಪಿಸಿರುವುದಾಗಿ ತಿಳಿಸಿ—

"ತಮ್ಮಲ್ಲಿ ನನಗೆ ಸರ್ವಾತ್ಮನ ದ್ವೇಷವಿಲ್ಲ—ದೇವರು ತಮ್ಮನ್ನ ಕ್ಷೇಮವಾಗಿಟ್ಟು ತಮ್ಮಿಂದ ನಮ್ಮ ದೇಶಕ್ಕೂ ನಮ್ಮ ಪ್ರಭುಗಳಿಗೂ ದೀರ್ಘಕಾಲ ಸೇವೆಸಲ್ಲಿಸಿ, ತಮಗೆ ತಮ್ಮ ಪೂರ್ವಿಕರಂತೆ ಯಶಸ್ಸು ಕೊಡಲಿ ನನ್ನಲ್ಲಿ ತಮಗೆ ಕೋಪವಿಲ್ಲವೆಂದು ಕೇಳ ಬಯಸುತ್ತೇನೆ"— ಎಂದರಂತೆ.

ಕೃಷ್ಣಮೂರ್ತಿಗಳು ಉದಾರವಾದ ಸರಳ ಹೃದಯದವರು; ಕರುಣ ವನ್ನು ತಡೆಯಲಾರದೆ ಅಳುತ್ತಾ ನಮಸ್ಕಾರ ಮಾಡಿ ಆಶೀರ್ವಾದವನ್ನು ಪಡೆದು ಬಂದರಂತೆ

ಸ|| ಡಿ|| ಆಫೀಸರಿಗೆ ಅದ್ವೈತ ಸಿದ್ಧಾಂತವೆಂದರೆ ಸಹನದ ಎಲ್ಲೆ ಮೀರಿದ ಭಕ್ತಿ. ಇವರ ದೃಷ್ಟಿಯಲ್ಲಿ ಮಾಧ್ವರು ಜಾತಿಕೆಟ್ಟ ಸ್ಮಾರ್ತರು; ಶ್ರೀವೈಷ್ಣವರು ಬ್ರಾಹ್ಮಣರೇ ಅಲ್ಲ ಬಹುಕರುಣೆಯಿಂದ ನನ್ನನ್ನು ಅಜ್ಞತೆಯಿಂದ ಎಚ್ಚರಿಸಿ ನನಗೆ ತತ್ವಜ್ಞಾನ ಬೋಧೆಯನ್ನು ಅನುಗ್ರಹಿ ಸಲು ಯತ್ನಮಾಡಿದರು. ನನಗೆ ಆಗ "ದೃಷ್ಟಾನುಶ್ರವಿಕ ವಿಷಯ ವಿತೃಷ್ಣತೆ" ಯಾಗಲಿ, ಸಂಸಾರದಲ್ಲಿ ವೈರಾಗ್ಯವಾಗಲಿ ಇರಲಿಲ್ಲ. ಒಂದೆರಡು ಸಲ ಸೂಕ್ಷ್ಮವಾಗಿ ಮಾತು ತಿರುಗಿಸಲು ಯತ್ನಮಾಡಿದೆ. ಅದು ಸಾಗದೆ, ಕೊನೆಗೆ ಅವರಿಗೆ ನನ್ನ ಅನುಭವದ ಒಂದು ಕಥೆಯನ್ನು ಹೇಳಿದೆ.

ನಮ್ಮ ತಂದೆಯವರ ಅಣ್ಣಂದಿರು ಶ್ರೀ ವ್ಯಾಸಾಚಾರ್ಯರೆಂಬುವರಿ ದ್ದರು. ಅವರು ಪ್ರಖ್ಯಾತ ವಿದ್ವಾಂಸರು; ತಿರುಪತಿ ಮಹಾಸಭೆ, ಮೊದಲಾದ ವಿದ್ವನ್ಮಂಡಲಿಗಳಲ್ಲಿ ಧರ್ಮದರ್ಶಿಗಳಾಗಿ ಮಾನಿತರಾಗಿ ದ್ದರು. ಅವರಿಗೆ ನನ್ನಲ್ಲಿ ಬಹಳ ಪ್ರೀತಿ. ಒಂದುಸಲ ನಾನು ಮಗುವಾ ಗಿದ್ದಾಗ ನನ್ನನ್ನು ಎತ್ತಿಕೊಂಡು ಲಾಲಿಸುತ್ತಾ,— ಏನು ಕಲೀತಿದ್ದೀ, ರಾಮಣ್ಣ?— ಎಂದು ಕೇಳಿದರಂತೆ. ಇಂಗ್ಲೀಷು—ಅಂತ ಜಂಭ ದಿಂದ ಹೇಳಿದೆನಂತೆ. ಕಾಕಾ ಅವರು—ಹಂಗಾದರೆ ಹೇಳು, ಇಂಗ್ಲೀ ಷಿನಲ್ಲಿ ದೇವರು ಅನ್ನಲಿಕ್ಕೆ ಏನಂತಾರೋ-ಅಂತ ಕೇಳಿದರು. "God".

" ತಂದೆ ? " "Papa" " ಕಾಕ ? " " ನಂಗೊತ್ತಿಲ್ಲ " " ಜಾಣ ? " " ನಂಗೊತ್ತಿಲ್ಲ " " ದಡ್ಡ ? " " ಹೂ, ಗೊತ್ತು. ದಡ್ಡನೆ ವ್ಯಾಸಕಾಕ ಅಂತಾರೆ " ಎಂದೆನಂತೆ. ಈ ಜಲಪನ ನನಗೆ ಮರೆತು ಹೋಗಿದ್ದರೂ, ನಮ್ಮ ಕಾಕಂದಿರು ಇದನ್ನು ನೆನೆನೆನೆದು ನಗುವರು. ನಾನು ದೊಡ್ಡವ ನಾದಮೇಲೆ ಅವರು ನನ್ನಿಂದ ಕ್ರಿಸ್ತರ ಬೈಬಲನ್ನು ಸಮೂಲವಾಗಿ ಓದಿಸಿ ಅನುವಾದ ಮಾಡಿಸಿ ಆದರದಿಂದ ಕೇಳಿ — ಏನು ಮಹಾನುಭಾವನಪ್ಪ, ಯೇಸುವು, ಅವನು ಬೆಟ್ಟದಮೇಲೆ ಹೇಳಿದ ನೀತಿಪಾಠ, ಸ್ವಾಮಿ ಅರ್ಜುನನಿಗೆ ಬೋಧಿಸಿದ್ದನ್ನ ಹೋಲುತ್ತಲ್ಲಪ್ಪ — ಅಂದರು. ಸರಿ, ಅನೇಕ ವರ್ಷಗಳನಂತರ ನಾನು ಬಿ ಎಲ್, ಪ್ಯಾಸು ಮಾಡಿಕೊಂಡು, ಶ್ವೇತಕೇತುವಿನಹಾಗೆ "ಮಹಾಮನಾ, ಅನೂಚಾನ ಮಾನಿ, ಸ್ತಬ್ಧ " ನಾಗಿ ನಮ್ಮ ಊರಿಗೆ ಹೋದೆ. ಕಾಕಾವರು ಶಿಷ್ಯರಿಗೆ ಪಾರಸನ್ನು ಹೇಳುತ್ತಿದ್ದವರು ತರಕ್ಕನೆ ಎದ್ದು, ನನ್ನನ್ನು ಕಟ್ಟಿಕೊಂಡು, ನನ್ನ ತಲೆಯನ್ನು ಮೂಸಿ, ನನ್ನನ್ನು ಆಶೀರ್ವದಿಸಿ. ಹತ್ತಿರ ಕೂಡಿಸಿಕೊಂಡರು. ಯೋಗಕ್ಷೇಮ ವಿಚಾರವಾದಮೇಲೆ, ಪುನಃ ಪಾರಪ್ರವಚನಗಳಿಗೆ ಗಮನಕೊಟ್ಟರು ನಾನು ಅವು ಮುಗಿಯುವವರಿಗೆ ಹ್ಯಾಗೋ ಸುಮ್ಮನಿದ್ದವನು, ಆಮೇಲೆ,

" ವ್ಯಾಸಕಾಕ, ನೀವು ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಸಿದ್ಧಾಂತಗಳನ್ನೆಲ್ಲಾ ಓದಿದ್ದೀರಲ್ಲವೆ ?" ಎಂದು ಪ್ರಶ್ನೆಮಾಡಿದೆ.

" ಹೂ. ಯಥಾಮತಿ ನೋಡಿದೇನಪ್ಪ "

" ಕ್ರಿಸ್ತಮತ, ಮಹಮದ್ದೀಯ ಮತ— ಇವುಗಳನ್ನೂ ಪ್ರಾಸಂಗ ಮಾಡಿದ್ದೀರಲ್ಲವೇ ? "

"ಕ್ರಿಸ್ತಮತದ ವೇದ ನೀನೇ ನನಗೆ ಓದಿ ಅರ್ಥಹೇಳಿದ್ದಿ. ಈಚೆಗೆ, ಅದರ ಕನ್ನಡ ಅನುವಾದ, ಮಂಗಳೂರಿಂದು, ನೋಡಿದ್ದೇನೆ. ತುರುಕರ ವೇದ ನಾನು ಓದಿಲ್ಲಪ್ಪ "

" ಆಯಿತಲ್ಲ—ಇವುಗಳಲ್ಲಿ ಸತ್ಯವ್ಯಾವುದು ? "

ನನ್ನ ಮನಸ್ಸಿನಲ್ಲಿ ಅವರನ್ನು ವಾದಕ್ಕೆ ಸೆಳೆದು, ನನ್ನ ಖಸರತ್ತಿನ ಬುದ್ಧಿಯಿಂದ ಅವರನ್ನು ಕಟ್ಟಿ, ಅವರನ್ನು ಸೋಲಿಸಬೇಕು (ದೇವರು

ನನ್ನನ್ನು ಕ್ಷಮಿಸಲಿ), ಅಥವ ಅವರ ಮೆಚ್ಚಿಕೆಯನ್ನಾದರೂ ಪಡೆಯ ಬೇಕೆಂದು. ಅವರು ಸ್ವಲ್ಪ ಹೊತ್ತು ಸುಮ್ಮನಿದ್ದು, ನಂತರ ಹಸು ಮಗು ವಿನ ನಿಷ್ಕಪಟ ನೋಟದಿಂದ ನನ್ನ ಮುಖವನ್ನು ನೋಡಿ

"ಸತ್ಯವ್ಯಾವದು, ಅಂದಿಯಾ? ಸತ್ಯವನ್ನು ಶ್ರೀಹರಿಬಲ್ಲ. ನಾನು ಯಾವುದನ್ನು ನಂಬುತ್ತೇನೆಂತೀಯೋ? ಹೇಳಬಲ್ಲೆ, ಕೇಳು. ನಾನು ನಂಬೋದು ನಮ್ಮ ಗುರುಗಳು—ನಮ್ಮ ತೀರ್ಥರೂಪ ಹಿರೇ ಆಚಾರ್ಯರು —ನನಗೆ ಉಪದೇಶ ಮಾಡಿದ ನಮ್ಮ ಪರಮಗುರುಗಳ ಸಿದ್ಧಾಂತದ ವೈಷ್ಣವ ಮತ, ನನಗೆ ಅದರಲ್ಲಿ ತೃಪ್ತಿ, ಶಾಂತಿ ಎರಡೂ ಉಂಟು. ನನಗೆ ಅದು ಸಾಕು."

"ನಾನು ನಾಚಿಕ್ಕೊಂಡು, ಅವರಿಗೆ ಸಾಷ್ಟಾಂಗ ಪ್ರಣಾಮಮಾಡಿ, ಅವರ ಕ್ಷಮಾಪಣೆಯನ್ನು ಬೇಡಿದೆ. ಅವರು ಕಣ್ಣೀರು ಬೆರಿಕೆಯಾದ ಹಾಸ್ಯದಿಂದ ನನ್ನನ್ನು ಸಂತೈಸಿದರು.

ಈ ಕತೆಯನ್ನು ನಾನು ಸ|| ಡ|| ಆ||ಗೆ ಹೇಳಿ, "ಅದೇ ನನ್ನ ಮತ"ವೆಂದೆ. ಹೌದು, ಅದೇ ನನ್ನ ಮತ. ಆದರೆ ಅದರಲ್ಲಿನ ಒಂದು ವಿಷಯವನ್ನು ನಾನು ನಂಬಬೇಕೆಂದು ಯತ್ನಪಟ್ಟರೂ ನನ್ನ ಹೃದಯ ನಿರಾಕರಿಸುತ್ತದೆ. ನಮ್ಮ ಸಿದ್ಧಾಂತದಲ್ಲಿ, ಜೀವರುಗಳು — ಮುಕ್ತಿ ಯೋಗ್ಯರು, ನಿತ್ಯ ಸಂಸಾರಿಗಳು, ತಮೋ ಯೋಗ್ಯರು — ಎಂದು ಮೂರು ತರಹೆಯವರಾಗಿ ವಿಂಗಡಿಸಲ್ಪಟ್ಟಿದ್ದಾರೆ. ವೈರಾಗ್ಯದಿಂದ, ಶುದ್ಧ ಜೀವನದಿಂದ, ಭೂತದಯೆಯಿಂದ, ದೇವರಲ್ಲಿನ ಭಕ್ತಿ, ಪ್ರಪತ್ತಿ ಗಳಿಂದ, ಮುಖ್ಯವಾಗಿ ಮೇಲೆ ಹೇಳಿದ ಸಾಧನಗಳಿಗೆಲ್ಲ ಮೂಲಕಾರಣ ವಾದ ದೇವರ ಕೃಪೆಯಿಂದ, ಮೋಕ್ಷವಾಗುತ್ತೆಂದು ನನ್ನ ಹೃದಯವು ಒಪ್ಪುತ್ತೆ. ಇವುಗಳೆಲ್ಲ ಬಹುಶಃ ಒಂದೇ ಜನ್ಮದಲ್ಲಿ ಪಡೆಯಲು ಆಗುವು ದಿಲ್ಲ—ಅನೇಕ ಜನ್ಮಗಳ ಸಂಶುದ್ಧಿ— ಎಂದು ಭಗವದ್ವಾಕ್ಯವಿದೆ. ಜನ್ಮ ಜನ್ಮಕ್ಕೂ ಪರಿಷ್ಕೃತವಾಗಿ, ವಿಕಾಶವನ್ನು ಹೊಂದಿ ಸುಸಂಸ್ಕೃತವಾದ ಜೀವವು ಕೈವಲ್ಯವನ್ನು ಸಾಧಿಸುತ್ತೆಂದು ನಾನು ನಂಬಿದ್ದೇನೆ. ಈ ಕ್ರಮಪರಿಣಾಮವು ವಿಶ್ವವ್ಯಾಪಿ ಎಂದು ಈಚಿನ ಪಾಶ್ಚಾತ್ಯ ವಿಜ್ಞಾನಿಗಳ ಮತ. ಅದನ್ನು ನಾನು ನಿಶ್ಯಂಕೆಯಾಗಿ ನಂಬುತ್ತೇನೆ. ನಾನು ನಂಬುವ

ಭಗವಂತನು ನಿರ್ಗುಣನಲ್ಲ ನಿರ್ಗುಣ, "ನೇತಿ, ನೇತಿ" ಬ್ರಹ್ಮನು ನನ್ನ ಮನಸ್ಸಿನ, ನನ್ನ ಪ್ರೇಮದ, ಹಂಬಲಕ್ಕೆ, ಹಿಡಿತಕ್ಕೆ, ಸಿಕ್ಕುವುದಿಲ್ಲ. ಅವನನ್ನು ಗ್ರಹಿಸಲಿಕ್ಕೆ ನಾನು ಯತ್ನಮಾಡಿದರೆ ಆಕಾಶವನ್ನು ಮುಟ್ಟಿ ಸೂರ್ಯನನ್ನು ಕೀಳಲು ಎತ್ತಿದ ಕೈಯುಳ್ಳನಾಗುತ್ತೇನೆ ಸೂರ್ಯಮಂಡಲ ನನ್ನ ಕಣ್ಣಿಗಾದರೂ ಕಾಣುತ್ತೆ; ನಿರ್ಗುಣ ಬ್ರಹ್ಮನನ್ನು ಅರಸಿದರೆ ನನ್ನ ಬುದ್ಧಿ ಕೂಡ ದಿಕ್ಕು ಕೆಟ್ಟು ವಾಪಸು ಬರುತ್ತೆ. ನಾನು ನಂಬುವ ನನ್ನ ಜೀವನದ ಒಡೆಯ ಅನಂತ ದಯೆಯುಳ್ಳವನು. ಅವನನ್ನು ನಾನು ಅರ್ಜುನನು ಕೇಳಿಕೊಂಡಂತೆ "ಪಿತೇವ ಪುತ್ರಸ್ಯ, ಸಖೇವ ಸಖ್ಯುಃ ಪ್ರಿಯಪ್ರಿಯಾ ಯಾರ್ಹಸಿ ದೇವಸೋಢುಂ" ಎಂದು ಮೊರೆಯಿಡ ಬಹುದು. ಇಂಥ ಸ್ವಾಮಿಯು ಪರತಂತ್ರರಾದ ಬಡ ಜೀವರುಗಳನ್ನು ಉದ್ದೇಶವಿಲ್ಲದ ಉಂಡಲಿತವಾದ ನಿತ್ಯಸಂಸಾರದಲ್ಲೇ ಆಗಲಿ, ಅಲ್ಪ ದಯೆಯುಳ್ಳ, ನಮ್ಮಂಥವರಿಗೂ ದಯಾಶೂನ್ಯವೆಂದು ಸ್ಪಷ್ಟವಾಗುವ ನಿತ್ಯನರಕದಲ್ಲೇ ಆಗಲಿ, ಬೀಳಗೊಡುತ್ತಾನೆಂದು ನಂಬುವುದು ನನಗೆ ಅಸಾಧ್ಯ.

ನಮ್ಮ ಸ|| ಡಿ|| ಸಾಹೇಬರಿಗೆ ಜ್ಯೋತಿಷಶಾಸ್ತ್ರದಲ್ಲಿ ಬಹಳ ನಂಬಿಕೆ ಅವರು ಶೇಷಾದ್ರಿ, ಅಯ್ಯರವರ ವಿಚಾರ ಹೇಳಿದ ಕತೆ ಯನ್ನು ಹಿಂದೆ ಕೊಟ್ಟಿದ್ದೇನೆ ವೈದ್ಯನಾಥ ಅಯ್ಯರವರು ಯಾವ ಕೆಲಸಕ್ಕೂ ಘಳಿಗೆ, ಮುಹೂರ್ತ, ಕಾಲ, ತಿಥಿ ನೋಡತಕ್ಕವರು ರಾಹು ಕಾಲದಲ್ಲಿ ಸಾಮಾನ್ಯ ಕಾರ್ಯಗಳನ್ನೂ ಮಾಡುತ್ತಿರಲಿಲ್ಲ ಮನುಷ್ಯರ ನಿತ್ಯಚರ್ಯಗಳಲ್ಲಿ ಗ್ರಹಗಳಿಗೆ ಅಷ್ಟು ಕುತೂಹಲವೇ? ಎಂದು ನಾನು ಒಂದು ಸಲ ಅವರನ್ನು ತಮಾಷೆಗೆ ಕೇಳಿದೆ. ಅವರು — ನೀವು ಮಳೆ ಯಲ್ಲಿ ಹೋದರೆ ತೊಯ್ಯುತ್ತೀರಿ, ಬಿಸಿಲಲ್ಲಿ ಹೋದರೆ ಬೆವರುತ್ತೀರಿ; ನೀವು ದೊಡ್ಡವರೆಂದು ನಿಮ್ಮಲ್ಲಿ ಇಂದ್ರನಿಗೆ, ಅಥವ ಸೂರ್ಯನಿಗೆ ಜಿದ್ದೆ? — ಎಂದರು. ಮಾತಿನಲ್ಲಿ ಬೇಸ್ತು ಬಿದ್ದೆ.

ನಾನು ಜ್ಯೋತಿಷಶಾಸ್ತ್ರವನ್ನು ನಂಬುತ್ತೇನೆಯೋ? ಈ ಪ್ರಶ್ನೆಗೆ ಏನು ಉತ್ತರ ಕೊಡಲಿ? ಅದು ಶಾಸ್ತ್ರವೋ; ಅಲ್ಲವೋ: ಅದರಿಂದ ಮುಂದಾಗುವುದನ್ನು ಗುಣಿಸಿ ಹೇಳಬಹುದೆಂಬುದು ಸತ್ಯವೋ, ಸುಳ್ಳೋ;

ನನಗೆ ತಿಳಿಯದು. ಅದು ಗುರಿತಪ್ಪದ ಲೆಖ್ಖಾಚಾರಕ್ಕೆ ಸಿಕ್ಕುವ ಶಾಸ್ತ್ರವೆಂದು ನಿಸ್ಸಂದೇಹವಾಗಿ ಹೇಳಲಿಕ್ಕೆ ನನಗೆ ಅದರ ಪರಿಚಯವಿಲ್ಲ; ರುಜುವಾತ್ತು ಸಾಲದು. ಅದು ಸುಳ್ಳು; "ಹಕ್ಕೀ ಬಿಕ್ಕೀ, ಮಾಟ ಮಾಮುರರನ್ನು ಬೆರಗುಮಾಡಿ, ಅಥವ ಜನಗಳ ಸ್ವಾಭಾವಿಕ ಭವಿಷ್ಯ ವಿಚಾರದ ಕುತೂಹಲವನ್ನು ಸೂರೆಮಾಡಿ, ಹಣ ಸಂಪಾದಿಸುವ ಮೋಸದ ಉಪಾಯವೆಂದು ಹೇಳುವುದಕ್ಕೂ ನನಗೆ ಧೈರ್ಯ ಸಾಲದು

ಇತಿಹಾಸದ ಪ್ರಾರಂಭದಿಂದ ಇಂದಿನವರಿಗೂ ಅನೇಕ ಸತಶಿವಂತರೂ, ಮೇಧಾವಿಗಳೂ, ವಿಮರ್ಶಕರೂ, ಅನುಭವಸ್ಥರೂ, ಸರ್ವ ವಿಧದಲ್ಲೂ ಮಾನ್ಯರೂ, ಪೂಜಾರ್ಹರೂ, ಆದ ಜನಗಳು ಜ್ಯೋತಿಷ ಶಾಸ್ತ್ರವನ್ನು ಪ್ರಮಾಣವೆಂದು ನಂಬಿದ್ದಾರೆ ಈಗಲೂ ನಂಬುತ್ತಲೂ ಇದ್ದಾರೆ. ಇವರೆಲ್ಲರೂ ಮೂಢರು, ನಾನು ಒಬ್ಬನೆ ಬುದ್ಧಿಶಾಲಿ ಎಂದು ತಿಳಿಯುವುದು ಹುಚ್ಚುತನ; ಆದರೆ ಪ್ರತಿಯೊಬ್ಬನಿಗೂ ತನ್ನ ಅನುಭವ, ತನ್ನ ತಿಳುವಳಿಕೆಗೆ ಬಂದಿರುವ ವಿದ್ಯಮಾನಗಳು, ತನಗೆ ಸಿಕ್ಕಿರುವ ರುಜುವಾತು, ಇವುಗಳ ಮೇಲೆ ತನ್ನ ಬುದ್ಧಿಯನ್ನು ಉಪಯೋಗಿಸಿ, ತೀರ್ಮಾನಕ್ಕೆ ಬರುವ ಹಕ್ಕು—ಯಾಕೆ, ಜವಾಬ್ದಾರಿ ಸುಧ— ಇದೆ. ನನ್ನ ಅನುಭವದಲ್ಲಿ ಜೋಯಿಸರು ಹೇಳಿದ ಭವಿಷ್ಯ ಅನೇಕ ಸಲ ನಗಗೇಡಾಗುವಷ್ಟು ಸುಳ್ಳಾಗಿದ್ದರೂ, ಕೆಲವು ಸಂದರ್ಭಗಳಲ್ಲಿ ಅತ್ಯಾಶ್ಚರ್ಯವಾಗುವಷ್ಟು ನಿಜವಾಗಿ ಬಂದಿದೆ. ನಾನು ಅಸಿಸ್ಟೆಂಟು ಸೆಕ್ರೆಟರಿಯಾಗಿದ್ದಾಗ—ಅದು ಶ್ರೀ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರ ದಿವಾನಗಿರಿಯಲ್ಲಿ— ನನ್ನನ್ನು ಎಕನಾಮಿಕ್ ಕಾನ್ಫರೆನ್ಸಿನ ವ್ಯವಸಾಯ ಕಮಿಟಿ ಛಾರ್ಜಿಗೆ ನೇಮಿಸಿದರು. ಆಗಿನ ಕಾರ್ಯಕ್ರಮದಲ್ಲಿ ಆರ್ಭಟ, ಪತ್ರವ್ಯವಹಾರ, ರಿಪೋರ್ಟ್ ರಚನೆ, ಇವುಗಳಿಗೆ ವೈಶಿಷ್ಟ್ಯವಿದ್ದಷ್ಟು, ವಾಸ್ತವವಾದ ಕೆಲಸಕ್ಕೆ ಇರಲಿಲ್ಲ. ನಾನು ವ್ಯವಸಾಯ ಶಾಖೆಯಲ್ಲಿ ಗಾಳಿಗುದ್ದುತ್ತಿರುವಾಗ, ನನ್ನ ಸುಯೋಗದಿಂದ, ಒಂದು ನಿಜವಾಗೂ ಸಾಹಸಕ್ಕೆ ಅರ್ಹವಾದ, ದೇಶದ ಭಾಗ್ಯಕ್ಕೂ ಜನಗಳ ಸೌಖ್ಯಕ್ಕೂ ಹೇತುವಾಗಬಹುದಾದ, ಲಕ್ಷ್ಯ ಸಿಕ್ಕು ನನ್ನ ಮನಸ್ಸನ್ನು ಆಕರ್ಷಿಸಿತು. ಅದು ರೇಷ್ಮೆ ಕೈಗಾರಿಕೆ. ಆದರಿಂದ ಲಕ್ಷಾಂತರ ಜನ ಜೀವಿಸು

ತ್ತಿದ್ದರು; ಅದು ಒಳ್ಳೆಯ ಸ್ಥಿತಿಯಲ್ಲಿದ್ದರೆ, ಅದರಿಂದ ಲಕ್ಷಾಂತರ ಜನಗಳಿಗೆ ನೆಮ್ಮದಿ, ದೇಶಕ್ಕೆ ಸುಮಾರು ಒಂದು ಕೋಟಿ ರೂಪಾಯಿಗಳ ವರಮಾನ. ಇಂಥ ಕೈಗಾರಿಕೆ ದಿನೆ ದಿನೆ ಕ್ಷಯಿಸಿ ಅರ್ಧ ಭಾಗಕ್ಕೆ ಸವೆದುಹೋಗಿ, ಇನ್ನು ಕೆಲವು ವರ್ಷಗಳಲ್ಲೇ ಸಂಪೂರ್ಣವಾಗಿ ನಾಶವಾಗಬಹುದೆಂಬ ಗತಿಗೆ ಇಳಿದಿತ್ತು. ಅದುವರೆಗೆ ಸರ್ಕಾರದವರು, ಅದರ ಚಿಕಿತ್ಸೆಗೆ ಕರೆಸಿದ್ದ ಹೊರದೇಶದ ಪಂಡಿತರ ಅಳಲೇಕಾಯಿ ವೈದ್ಯರೆಂದು ನನಗೆ ತೋರಿತು. ಅವರು ಕೊಟ್ಟ ಔಷಧಿ — ಪ್ರಾಣಸಂಕಟಕ್ಕೆ ಸಾಮ್ರಾಣಿಪಟ್ಟು — ಎಂಬಂತಿತ್ತು. ರೋಗಿಗೆ ಬಂದಿದ್ದ ವ್ಯಾಧಿಯನ್ನೇ ಯಾರೂ ಸರಿಯಾಗಿ ನಿರ್ಧರಿಸಿರಲಿಲ್ಲವೆಂದು ನಾನು ಅನುಮಾನಿಸಿದೆ. ಸಂಸ್ಥಾನ ಅಮಳಿ ಸುತ್ತಿ, ಕೈಗಾರಿಕೆಯ ಹಿಂದಿನ ಸ್ಥಿತಿ, ಈಗಿನ ಅವಸ್ಥೆ, ಮೊದಲು ಮಾಡುತ್ತಿದ್ದು ಹಾಲಿ ಕೈಬಿಟ್ಟಿರುವರ ಅನುಭವ, ಆ ಆವರಣದಲ್ಲಿನ ಬದಲಾವಣೆಗಳು, ಇವೆಲ್ಲವನ್ನೂ ಸಾವಧಾನದಿಂದ ವಿಚಾರಿಸಿ ತಿಳಿದು, ಕೊನೆಗೆ "ನನಗೆ ಇದರ ಬ್ಯಾನೆ ಗೊತ್ತಾಯಿತು. ನಾನು ಅದನ್ನು ವಾಸಿಮಾಡಬಲ್ಲೆ" ಎಂದು ನಿರ್ಧರಿಸಿ, ನನ್ನ ಮೇಲ್ಪಟ್ಟ ಅಧಿಕಾರಿಗಳ ಮಾರ್ಗವಾಗಿ ಸರಕಾರಕ್ಕೆ ವರದಿಮಾಡಿದೆ. ಕೆಲವರು ನಕ್ಕರು. "ಇವನು ಬಂದನಪ್ಪ, ಬೃಹಸ್ಪತಿ" "ಇವನು ಲಾ ಕಾಲೇಜಿನಲ್ಲಿ ರೇಷ್ಮೆ ಹುಳು ಸಾಕುವುದನ್ನು ಕಲಿತನೇನೋ" "ಅಂತೂ ಈಗಿನ ರಂಗದ ಮೇಲೆ ಯಾವದಾದರೂ ಒಂದು ವೇಷ ಕಟ್ಟಬೇಕಲ್ಲ" — ವಗೈರೆ ವಗೈರೆ. ಅನ್ನುವರಿಗೆ ಪ್ರತಿಯಾಗಿ ಬಡ್ಡಿದೇಖೀಲು ಜವಾಬನ್ನು ಕೊಟ್ಟೆ. ನಮ್ಮ ಶಾಖೆಯ ಛೇರ್‌ಮ್ಯಾನ್ ಸರ್ದಾರ ಕಾಂತರಾಜೇ ಅರಸಿನವರು ನನ್ನ ಮಾತನ್ನು ತಿರ ಮನಸ್ಸಿನಿಂದ ಸಾವಧಾನವಾಗಿ ಕೇಳಿ, ಅದರಲ್ಲಿ ತಿರುಳಿದೆ; ನನಗೆ ಈ ಕೈಗಾರಿಕೆಯನ್ನು ಕ್ರಮಕ್ಕೆ ತಂದು ಅಭಿವೃದ್ಧಿಗೆ ತರಲು ಅವಕಾಶ ಕೊಡಬೇಕೆಂದು ಅಭಿಪ್ರಾಯಪಟ್ಟು, ಸರ್ಕಾರದಲ್ಲಿ ಈ ಪಕ್ಷಹಿಡಿದು ಈ ಕೈಗಾರಿಕೆಯ ಉದ್ಧಾರಕ್ಕಾಗಿ ಒಂದು ಹೊಸ ಇಲಾಖೆಯನ್ನೇ ಮಂಜೂರ್ಮಾಡಿಸಿದರು. ನಾನೇ ಈ ಇಲಾಖೆಯ ಮುಖ್ಯಾಧಿಕಾರಿಯಾಗಿ ನೇಮಿತನಾದೆ. ಈ ಜವಾಬ್ದಾರಿಯನ್ನು

ನಾನು ಕೇವಲ ಕರ್ತವ್ಯಭಾವನೆಯಿಂದ ಒಪ್ಪಿದೆ. ಈ ಕೆಲಸವನ್ನು ನಾನು ಮಾಡಬಲ್ಲೆ, ಇದನ್ನು ನಾನು ಸರಿಯಾಗಿ ಮಾಡಿದರೆ ಒಂದು ಲಕ್ಷಕ್ಕೆ ಹೆಚ್ಚು ಜನಕ್ಕೆ ಹೊಟ್ಟೆತುಂಬ ಅನ್ನ, ಬೆನ್ನುಮುಚ್ಚ ಬಟ್ಟೆ ಸಿಕ್ಕುತ್ತವೆ; ನಮ್ಮ ಸಂಸ್ಥಾನದ— ಅದರ ಆವರಣಕ್ಕೆ ಬಹಳ ಚನ್ನಾಗಿ ಹೊಂದುವ— ಒಂದು ಸುಂದರವಾದ ಕೈಗಾರಿಕೆಯೂ ಉಳಿಯುತ್ತೆ; ಇದು ನನಗೆ ದೊರೆತಿರುವ ವಿಶೇಷ ಅವಕಾಶವೆಂದು ನಂಬಿ, ಒಪ್ಪಿದೆ. ಇದಕ್ಕಾಗಿ ನಾನು ಸಿವಿಲ್ ಸರ್ವೀಸಿನಲ್ಲಿನ ಬಡ್ತಿಹಕ್ಕು (lien and prospects), ಅಂದರೆ ಡೆಪ್ಯುಟಿಕಮಿಷನರ್, ಸೆಕ್ರೆಟರಿ, ಮೊದಲಾದ ಕೆಲಸಗಳಿಗೆ ಏರುವ ಹಕ್ಕನ್ನು, ತ್ಯಜಿಸಬೇಕಾಯಿತು ಡಿಸ್ಟ್ರಿಕ್ಟ್ ಡೆಪ್ಯುಟಿ ಕಮಿಷನರ್ ಆಗಬೇಕೆಂಬುದೆ ನನ್ನ ಬಹು ದಿನದ ಆಶಯ. ಇದನ್ನು ತೊರೆಯುವುದೆಂಬುದು ನನ್ನ ಹೃದಯಕ್ಕೆ ಒಂದು ಯಾಗವೇ ಆಯಿತು. ಅಂತೂ ರೇಷ್ಮೆ ಇಲಾಖಾ ಸೂಪರಿನ್‌ಟೆನ್‌ಡೆನ್‌ಟ್ ಆಗಿ, ಆ ಹುದ್ದೆಗೆ ಸ್ಪೆಷಲ್ಲಾಗಿ ಮಂಜೂರಾಗಿದ್ದ ಗ್ರೇಡಿನಲ್ಲಿದ್ದ ನನಗೆ— ಇದೇ ನನ್ನ ನೌಕರಿಯ ಏಕ ಪಥ, ಇದರಲ್ಲೇ ನಿವೃತ್ತನಾಗುತ್ತೇನೆ—, ಎಂಬುದು ನಿರ್ದಿಷ್ಟವಾಗಿತ್ತು. ಆ ಹುದ್ದೆಯಲ್ಲೇ ಹನ್ನೆರಡು ವರ್ಷ ನನಗೆ ದೇವರು ಕೊಟ್ಟ ಸಾಮರ್ಥ್ಯವನ್ನೆಲ್ಲಾ ವಿನಿಯೋಗಿಸಿ, ದೈವಕೃಪೆಯಿಂದ ಇಲಾಖೆಯ ನಿರ್ಮಾಣದ ಉದ್ದೇಶವನ್ನೂ ಕೂಡಿದಮಟ್ಟಿಗೆ ಸಾಧಿಸಿದೆನೆನ್ನಬಹುದು ಬೇರೇ ಅಧಿಕಾರಕ್ಕೆ ಹೋಗುತ್ತೇನೆಂದಾಗಲಿ, ಬೇರೆ ಜವಾಬ್ದಾರಿಗಳು, ಸಮುದ್ರಯಾನ, ಹೊಸ ಅನುಭವಗಳು— ನನಗೆ ಕಾದಿವೆ ಎಂದಾಗಲಿ, ನಾನು ಕನಸಿನಲ್ಲೂ ಕಂಡಿರಲಿಲ್ಲ. ಹೀಗಿರುವಾಗ ಒಮ್ಮೆ ನಾನೂ ನನ್ನ ಮಿತ್ರರು ಜಡ್ಜಿ ಸಕಲೇಶಪುರ ವೆಂಕಟಕೃಷ್ಣಯ್ಯನವರೂ ಹಾಸನಕ್ಕೆ ಹೋದೆವು. ಅಲ್ಲಿ ನಮ್ಮ ನಾನಾಸಾಮಿರಾಯರು ಡೆಪ್ಯುಟಿ ಕಮಿಷನ್ನರಾಗಿದ್ದರು. ಅವರ ಮನೆಯಲ್ಲಿ ಮಾತನಾಡುತ್ತಿದ್ದಾಗ, ಒಬ್ಬ ಯುವಕರು— ಅವರು ಇಂಜನಿಯರಿಂಗ್ ಕಾಲೇಜು ವಿದ್ಯಾರ್ಥಿಯಂತೆ— ಬಂದರು. ನಾನಾಸಾಮಿಯವರು— ಅವರ ಪರಿಚಯವನ್ನು ನಮಗೆ ಕೊಡುತ್ತಾ—

"ಇದೋ ನೋಡಿ, ಇವರು ಬಹಳ ಗಿಫ್ಟೆಡ್ (gifted—ದೇವದತ್ತ ಪ್ರಜ್ಞೆಯುಳ್ಳ) ಅಸ್ಟ್ರಾಲಜರ್ (Astrologer— ಜ್ಯೋತಿಷ ಶಾಸ್ತ್ರಜ್ಞ). ಅವರಿಗೆ ನಿಮ್ಮ ಜಾತಕ ತೋರಿಸಿ. ದೇವರ ದಯವೋ, ಕಾಣೆ—ಅವರು ಹೇಳುವುದೆಲ್ಲ ಸತ್ಯವಾಗುತ್ತೆ; ಇದು ನನ್ನ ಅನುಭವದ ಮಾತು"

ಎಂದರು.

ವೆಂಕಟಕೃಷ್ಣಯ್ಯನವರಿಗೆ ಜ್ಯೋತಿಷಶಾಸ್ತ್ರದಲ್ಲಿ ಸಂಪೂರ್ಣವಾದ ನಂಬಿಕೆ; ಅವರು ಈಚೆಗೆ ವ್ಯಾಸಂಗ ಮಾಡಿ ಅದರಲ್ಲಿ ವಿಶೇಷ ಪರಿಣತಿಯನ್ನೂ ಪಡೆದಿದ್ದಾರೆ. ನನಗೆ ಆಗ ಅದರಲ್ಲಿ ಅಪನಂಬಿಕೆ. ಅದು ಸ್ವಲ್ಪ ನನ್ನ ಮುಖದಲ್ಲೂ ಕಂಡಿರಬಹುದು.

ನನ್ನ ಜಾತಕವನ್ನು ತರಲಿಲ್ಲವೆಂದು ಹೇಳಿದೆ.

"ಪರವಾ ಇಲ್ಲ, ಎಲ್ಲಿ ನಿಮ್ಮ ಕೈನೋಡೋಣ" ಎಂದರು, ಯುವಕರು.

ನಕ್ಕು ಕೈತೋರಿದೆ ಅವರು ಅದನ್ನು ಏಕಾಗ್ರವಾಗಿ ದಿಟ್ಟಿಸಿ ನೋಡಿ,

"ಒಂದೆರಡು ನಿಮ್ಮ ಜೀವನದಲ್ಲಿನ ಮುಖ್ಯ ವಿಷಯಗಳನ್ನು ಹೇಳಿ. ನಿಮ್ಮ ಕೈಯಲ್ಲಿ ನನಗೆ ಕಾಣುವುದಕ್ಕೆ ಅವು ತಾಳೆ ಬರುತ್ತೇನೋ, ನೋಡೋಣ"

ಎಂದರು. ನಾನು ನಕ್ಕು,

"ನೀವೇ ನನ್ನ ಕೈನಲ್ಲಿ ಓದಿದ್ದನ್ನು ಹೇಳಿ; ಅದು ಸರಿಯೇನೋ ಹೇಳುತ್ತೇನೆ" ಎಂದೆ. ಅವರು ನನ್ನನ್ನು ಅಲ್ಲೇ ಸ್ವಲ್ಪ ಮರೆಯಾಗಿ ಕರೆದುಕೊಂಡು ಹೋಗಿ, ಕೆಲವು ನನಗೆ ಒಬ್ಬನಿಗೇ ಗೊತ್ತು, ಎಂದು ತಿಳಿದುಕೊಂಡಿದ್ದ ವಿಷಯಗಳನ್ನೂ, ನಾನು ನೌಕರಿಗೆ ಇಷ್ಟನೆ ವಯಸ್ಸಿನಲ್ಲಿ ಸೇರಿದೆನೆಂಬುದನ್ನೂ, ಒಡಹುಟ್ಟಿದವರ, ಮತ್ತು ಮಕ್ಕಳ ಸಂಖ್ಯೆಯನ್ನೂ, ನನಗೆ ಆಶ್ಚರ್ಯವಾಗುವಷ್ಟು ಸರಿಯಾಗಿ ಹೇಳಿದರು. ನಾನು ಹುಟ್ಟಿದ ಇಂಗ್ಲಿಷು ತಾರೀಖನ್ನೂ ಘಂಟೆಯನ್ನೂ ನನ್ನಿಂದ ತಿಳಿದು, ಸ್ವಲ್ಪ ಹೊತ್ತಿನಲ್ಲೇ ಒಂದು ಕುಂಡಲಿಯನ್ನು ಹಾಕಿ "ನಿಮ್ಮ

ಜಾತಕದಲ್ಲಿ ನನಗೆ ಕಂಡುಬರುವ ಫಲಗಳನ್ನು ಸಂಕ್ಷೇಪವಾಗಿ ಬರೆದು ನಾಳೆ ಕಳಿಸಿಕೊಡುತ್ತೇನೆ" ಎಂದರು.

ಬರೆದು ಕಳುಹಿಸಿದರು. ಅದರಲ್ಲಿ ಮುಖ್ಯವಾಗಿ

"ನೀವು ಸೆಕ್ರೆಟೇರಿಯಟ್ಟಿಗೆ ಹೋಗುತ್ತೀರಿ. ನಿಮ್ಮ ಜಾತಕದಲ್ಲಿ ಸಮುದ್ರಯಾನವಿದೆ. ಭಾರಿ ರಾಜಕೀಯ ಪ್ರಸಂಗಗಳಲ್ಲಿ ನಿಮಗೂ ಭಾಗವಿದೆ ನೀವು ಪಲಾನೆ ವರ್ಷದಲ್ಲಿ ಒಂದು ಇಲಾಖೆಯ ಮುಖ್ಯಾಧಿಕಾರಿಯಾಗುತ್ತೀರಿ — ಪಲಾನೆ ವರ್ಷದಲ್ಲಿ ನಿವೃತ್ತರಾಗುತ್ತೀರಿ. ನಿವೃತ್ತರಾದಮೇಲೆ ಅನೇಕ ಕಾರ್ಯಗಳನ್ನು ಮಾಡಿ, ಹೆಸರುವಾಸಿಗೆ ಬಂದು, ಒಂದು ಟೈಟಲ್ ಪಡೆಯುತ್ತೀರಿ" ಎಂದು ನಮೂದಿಸಿದ್ದರು. ಇವುಗಳ ಪೈಕಿ ಯಾವುದನ್ನೂ ನಾನು ನಿರೀಕ್ಷಿಸಿರಲಿಲ್ಲ. ಎಲ್ಲವೂ ಮುಂದೆ ನಿಜವಾದವು. ಈ ಪ್ರಾಜ್ಞರು ಈಗ ಮರಹಮತ್ತು ಇಲಾಖೆಯಲ್ಲಿ ಅಧಿಕಾರದಲ್ಲಿರಬೇಕು. ಹಸರು ಜ್ಞಾಪಕವಿಲ್ಲ.

ಇನ್ನೊಂದು ಕತೆ. ನನ್ನ ಪ್ರಿಯ ಸ್ನೇಹಿತರಾದ ದಿ|| ಎಸ್. ಎಸ್. ಸುಬ್ಬರಾಯರಿಗೆ ಜ್ಯೋತಿಷದಲ್ಲಿ ಬಹಳ ನಂಬಿಕೆ. 1930ರಲ್ಲಿ ಮೊದಲನೆಯ Round Table Conferenec ಗೆ ನಮ್ಮ ದಿವಾನರಾಗಿದ್ದ ಸರ್ ಮಿರ್ಜಾ ಇಸ್ಮೈಯಿಲ್‌ರು ಹೋಗುವಾಗ ತಮ್ಮ ಸಂಗಡ ಇಬ್ಬರನ್ನು ಸಹಾಯಕ್ಕಾಗಿ ಕರೆದುಕೊಂಡು ಹೋಗುವುದು ನಿಷ್ಕರ್ಷೆಯಾಯಿತು. ಒಬ್ಬರಂತೂ ಆಗ ಮುಖ್ಯ ಸೆಕ್ರೆಟರಿ (Chief Secretary) ಯಾಗಿದ್ದ (ಅನಂತರ ದಿವಾನಗಿರಿಗೂ ಬಂದ) ಶ್ರೀ|| ನ್ಯಾಯಪತಿ ಮಾಧವರಾಯರೆಂದು ನಮಗೆಲ್ಲರಿಗೂ ಖಾತರಿ. ಇನ್ನೊಬ್ಬರು ಯಾರಿರಬಹುದೆಂಬುವುದೇ ಸಮಸ್ಯೆ. ದಿವಾನರು ಕೆಲವು ದಿನದ ಹಿಂದೆ ಆಗ ಡೆವೆಲಪ್‌ಮೆಂಟ್ ಸೆಕ್ರೆಟರಿಯಾಗಿದ್ದ ನನ್ನನ್ನು — ನೀವು ಇಂಗ್ಲೆಂಡಿಗೆ ಬರುತ್ತೀರ, ನನ್ನ ಸಂಗಡ? — ಎಂದು ಕೇಳಿದ್ದರು. ನಾನು ಸಂತೋಷವಾಗಿ ಒಪ್ಪಿದ್ದೆ. ಆದರೆ ಅದು ಇನ್ನೂ ನಿರ್ಧರವಾಗಿರಲಿಲ್ಲ. ಅಷ್ಟರಲ್ಲಿ ವಿಶ್ವವಿದ್ಯಾನಿಲಯದ ವೈಸ್‌ಛಾನ್ಸಲ್ಲರ್ ಆಗಿದ್ದ ಪ್ರಸಿದ್ಧ ವಿದ್ವಾಂಸರಾದ ದಿ| ಡಾಕ್ಟರ್ ಸೀಲ್‌ರವರು ದಿವಾನರಿಗೆ ಎಸ್. ಎಸ್. ಸುಬ್ಬರಾಯರನ್ನು ಚರ್ಚಾಕೂಟಕ್ಕೆ ಕರೆದುಕೊಂಡು ಹೋಗಬೇಕೆಂದ

ಬಹಳ ಒತ್ತಾಯವಾಗಿ ಶಿಫಾರ್ಸುಮಾಡಿದರು. ಇದು ನನಗೆ ತಿಳಿಯಿತು. ನನ್ನನ್ನು ಕರೆದುಕೊಂಡುಹೋಗುವ ಸಂಭವ ಸ್ವಲ್ಪ ಹಗುರು ಬಿದ್ದಂತೆ ನನಗೆ ತೋರಿತು. ಹೀಗಿರುವಲ್ಲಿ ಒಂದು ದಿವಸ ಸುಬ್ಬರಾಯರೂ ನಾನೂ ಕಲಿತು ವಿನೋದವಾಗಿ ಹರಟುತ್ತಿರುವಾಗ, ಅವರು—

"ನನ್ನ ಜಾತಕದಲ್ಲಿ ಈ ವರ್ಷ ನಾನು ಎರಡನೆಯ ಸಲ ಇಂಗ್ಲೆಂಡಿಗೆ ಹೋಗುತ್ತೇನೆಂದು ಇದೆ—ನನ್ನ ಜಾತಕದ ಫಲವನ್ನು ನಿಪುಣ ಜೋತಿಷ್ಕರಾದ ಶ್ರೀನಿವಾಸಯ್ಯಂಗಾರ್ (ಹೆಸರು ನನಗೆ ಚನ್ನಾಗಿ ಜ್ಞಾಪಕವಿಲ್ಲ; ಅವರು ರೆವೆನ್ಯೂ ಕಮಿಷನರ್ ಆಫೀಸಿನ ನೌಕರರೆಂಬಂತೆ ನೆನಪು) ಬರೆದುಕೊಟ್ಟಿದ್ದಾರೆ ನಿಮಗೆ ಛಾನ್ಸ್ ಇಲ್ಲ, ಪಾಪ" ಎಂದು ಹಾಸ್ಯ ಮಾಡಿದರು.

ನಾನು ನಕ್ಕು—"ನಮ್ಮ ಜೋಯಿಸರೂ ನಾನು ಈ ವರ್ಷ ಇಂಗ್ಲೆಂಡಿಗೆ ಹೋಗುತ್ತೇನೆಂದು ಬರೆದುಕೊಟ್ಟಿದ್ದಾರೆ, ಕಾಣ್ರಿ. ಅವರೂ ಬಹಳ ಪಿಡಗು, ನೋಡೋಣ, ನಿಮ್ಮವರು ಘಟ್ಟಿಗರೋ, ನಮ್ಮವರು ಘಟ್ಟಿಗರೋ" ಎಂದೆ.

ಪರಿಣಾಮದಲ್ಲಿ—

ಸುಬ್ಬರಾಯರೂ ನಾನೂ ಇಬ್ಬರೂ ಆ ವರ್ಷ ಇಂಗ್ಲೆಂಡಿಗೆ ಹೋದೆವು.

ಏನು ಹೇಳುತ್ತೀರಿ?

ನೋಡಿ, ನೆನಪಿಗೆ ಕಾಲದೇಶಗಳ ನಿರ್ಬಂಧವಿಲ್ಲ. 1908 ರಿಂದ 1930 ಕ್ಕೆ, ನರಸಿಪುರದಿಂದ ಇಂಗ್ಲೆಂಡಿಗೆ ಒಂದೇ ಹಾರಿಗೆ ಹಾರಿತು. ಪುನಃ ಈ ಸುಪರ್ಣನನ್ನು ಯಥಾಸ್ಥಾನಕ್ಕೆ ವಾಪಸು ಕರೆತರೋಣ.

* * * *

ವೈದ್ಯನಾಥ ಅಯ್ಯನವರ ಜಮಾಬಂದಿಯ ಮಾತನ್ನಲ್ಲವೆ, ಹೇಳುತ್ತಿದ್ದುದು? ಅವರಿಗೆ ರೆವೆನ್ಯೂ ಕೆಲಸ ಚನ್ನಾಗಿ ಗೊತ್ತಿಲ್ಲ; ಆದರೂ ಕಾಮನ್‌ಸೆನ್ಸ್ ಎನ್ನುತ್ತಾರಲ್ಲ—ಅಷ್ಟು ಸಾಮಾನ್ಯವಲ್ಲದ ಸಾಮಾನ್ಯ ವಿವೇಕ. ಚನ್ನಾಗಿತ್ತು; ಒಟ್ಟಿನ ಮೇಲೆ ಜಮಾಬಂದಿ ಚನ್ನಾಗೇ ನಡೆಯಿತು, ಅವರು ರೈತರ ಸಂಗಡ ಮಾತನಾಡುವುದು ತೀವ್ರವಾದ

ತಮಿಳು ಸರಣಿಯ ಕನ್ನಡ; ಅವರ ಮಾತಿಗೆ ಕಣಿವೆ ಕೆಳಗಿನ ಗೊಡ್ಡು ಸಾರಿಗೆ ಹಿಂಗಿನ ವಗ್ಗರಣೆ ಹಾಕಿದುವಂತೆ ಒಂದು ಬಗೆಯಾದ ಕಟುವಾದ ಹಾಸ್ಯದ ಆಮೋದ. ವಸ್ತುವಿಲ್ಲದ ವಾಸನೆಯನ್ನು ವರ್ಣಿಸುವುದು ಅಸಾಧ್ಯ; ಒಂದು ಕತೆಯಿಂದ ಅದರ ಭಾವವನ್ನು ಸೂಚಿಸಬಹುದು. ರಾತ್ರಿ ಮಳೆ ಹುಯಿದ ಮಾರನೆಯ ಬೆಳಿಗ್ಗೆ ತುರಗನೂರೆಂಬ ಗ್ರಾಮದ ಅಜಮಾಯಿಷಿಗೆ ಹೊರಟರು. ಸವಾರಿ ಉತ್ಸವವನ್ನು ನೋಡಲು ಗ್ರಾಮಸ್ಥರೆಲ್ಲ ಪರಶೆ ನೆರದಿದ್ದರು. ಸಾಹೇಬರು ಮಾಮೂಲಾಗಿ ಗ್ರಾಮ ಪಾಕೀಜು ವಿಚಾರದಲ್ಲಿ ಒಂದೆರಡು ಪ್ರಶ್ನೆಗಳನ್ನು ಕೇಳುವುದುಂಟು.

"ಏನಯ್ಯ, ಪಟೇಲ, ಊರನ್ನ ಕ್ಲೀನಾಗಿಟ್ಟುಕೊಂಡಿದ್ದೀಯೋ?"

"ಹೂ, ಮಹಾಸ್ವಾಮಿ; ಪರಾಂಬರಿಸಬೇಕು"

ಊರಿನ ದೊಡ್ಡ ಬೀದಿಗೆ ಬಂದೆವು. ರಾತ್ರಿ ಮಳೆಯಿಂದ ಅಡ್ಡ ಗಲ್ಲಿಗಳ ಕಚಡ ಎಲ್ಲ ಕೊಚ್ಚಿಕೊಂಡು ಬಂದು ಬೀದಿಯಲ್ಲಿನ ಹಳ್ಳಕೊಳ್ಳ ಗಳಲ್ಲಿ ನಿಂತು, ಜನಗಳ ತುಳಿದಾಟದಿಂದ ಮರಳು ಬೆರೆತ ತಾರಿನ ಹದಕ್ಕೆ ಬಂದು, ಸಾಹೇಬರ ಗಾಡಿ ಚಕ್ರದ ಹೊಡೆತಕ್ಕೆ ಮೇಲೆ ಹಾರು ತ್ತಿತ್ತು. ಅದೂ ಅಲ್ಲದೆ ಮಳೆಬಂದರೆ ಸೆರೆಯಲ್ಲಿದ್ದ ಗ್ರಾಮದ ನಾತಗಳೆಲ್ಲ ಬಿಡುಗಡೆ ಹೊಂದಿ ಮೆರೆಯುತ್ತವೆ.

ಸಾಹೇಬರು:

"ಏನಪ್ಪ ಪಟೇಲ, ಇದಕ್ಕೆ ಕ್ಲೀನ್ ಅಂತ ಹೆಸರೋ ನಿಮ್ಮ ಮಾತಿನಲ್ಲಿ?"

"ಬುದ್ಧಿ, ಸ್ವಾಮಿಗಳ ಸವಾರಿ ಬರ್ತದೇ ಅಂತ ನಮ್ಮ ಭಾಗ್ಯಕ್ಕೆ ಮಳೀ ಬಂತು" ಅಂದ ಪಟೇಲ ಅವನು ಮಾತು ಬಲ್ಲವನು ನೋಡಿ.

ಸಾಹೇಬರು, "ಸಾಹೇಬರ ಮೇಲಿನ ಪ್ರೀತಿ ಅಂದರೆ ಹಂಗಿರ ಬೇಕು. ಬರಕೊಳ್ಳಿ ಸುಬೇದಾರರೆ, ನಾವು ಬರ್ತೀವಿ ಅಂತ ಈ ಊರಲ್ಲಿ ಕರ‍್ರಗಿನ ವಾಸನೆಯುಳ್ಳ ಮಳೀನ ಪಟೇಲರು ಹುಯಿಸಿದ್ದಾರೆ ಅಂತ."

ಇವರು ನಾನು ನರಸಿಪುರಕ್ಕೆ ಹೋದ ಒಂದು ವರ್ಷದಲ್ಲೇ ಸ್ವಲ್ಪ ಅಸಮಾಧಾನ ಸನ್ನಿವೇಶದಲ್ಲಿ—ಇಂಗ್ಲಿಷಿನಲ್ಲಿ ಅದಕ್ಕೆ ಮೋಡ ಕವಿದು

ಎಂಬ ಅರ್ಥದ ಮಾತಿದೆ—ಕೆಲಸದಿಂದ ನಿವೃತ್ತರಾದರು. ಇವರು ಛಾರ್ಜು ಬಿಟ್ಟುಹೋದಮೇಲೆ ಕೆಲವರು ಇವರ ಹೆಸರನ್ನು ಕೆಡಿಸಲು ಪಿತೂರಿ ಮಾಡಿದರು ಇದು ನನ್ನ ತಿಳುವಳಿಕೆಗೆ ಬಂದ ಕೂಡಲೆ ನಾನು ಆ ಸಂಗತಿಗಳನ್ನು ರಹಸ್ಯವಾಗಿ ವಿಚಾರಿಸಿ, ಆರೋಪಣೆಗಳಲ್ಲಿ ಬಹುಶಃ ನಿಜಾಂಶವಿಲ್ಲವೆಂದು ತಿಳಿದಾದ್ದರಿಂದ ಆ ಪಿತೂರಿಯನ್ನು ಮುಂದೆ ಹೋಗಲು ಬಿಡದೆ ಅಷ್ಟರಲ್ಲೇ ಅಡಗಿಸಿದೆ.

## ೩೦

ಯಡತೊರೆಯಲ್ಲಿ ನಾನಿದ್ದಾಗ ಸಂಭವಸಿದ ಕಾಲರಾ ಉಪಪ್ಲವದ ಅನುಭವವನ್ನು ಹೇಳಿದ್ದೇನಲ್ಲವೆ? ತಿರುಮಕೂಡ್ಲು ನರಸೀಪುರಕ್ಕೆ ನಾನು ಬಂದ ವರ್ಷ ಆ ತಾಲ್ಲೂಕಿನ ಅನೇಕ ಕಡೆಗಳಲ್ಲಿ ಪ್ಲೇಗು ಉಪಗಮಿಸಿ, ಹರಡಲಿಕ್ಕೆ ಹತ್ತಿತು. ಈ ವಿಪತ್ತಿಗೆ ಊರು ಬಿಡುವುದು, ಇನಾಕ್ಯಾಲೇಷನ್ ಮಾಡಿಸಿಕೊಳ್ಳುವುದು — ಇವೆರಡೇ ಉಪಯುಕ್ತವಾದ ಪರಿಹಾರಗಳೆಂದು ನನ್ನ ಅನುಭವ. ಮನೆಗಳನ್ನು ಕ್ರಿಮಿನಾಶಕ ದ್ರವಗಳಿಂದ ತೊಳೆಯುವುದು, ಇಲಿಗಳನ್ನು ನಾಶಮಾಡುವುದು ಶ್ಲಾಘಿತ ಉಪಾಯಗಳೇ—ಆದರೆ ಕ್ರಿಮಿಗಳು ನಿರ್ಮೂಲವಾದವೆಂಬ ಭರವಸೆ ಅಸಾಧ್ಯ; ಇಲಿಗಳ ಶಿಕಾರಿಯೂ ಅಷ್ಟು ಸುಲಭವಲ್ಲ. ಇದಕ್ಕೆ ಉದಾಹರಣೆ— ಔರಂಗಜೇಬ ಪಾದಷಾನು ಛತ್ರಪತಿ ಶಿವಾಜಿ ಮಹಾರಾಜರಿಗೆ "ಬೆಟ್ಟದ ಇಲಿ" ಎಂದು ಸ್ತುತಿಸುತ್ತಿದ್ದನಂತೆ. ಊರನ್ನು ಬಿಡುವುದಾದರೋ, ರೈತನಿಗೆ ಶರೀರಬಿಡುವ ಯಾತನೆಯು ಮುನ್ನೆರಳು. ತಾನು ಯಾವ ಝೋಪಡಿಯಲ್ಲಿ ಹುಟ್ಟಿ ಬೆಳೆದು ಸಂಸಾರದ ಸುಖದುಃಖಗಳನ್ನು ಅನುಭವಿಸಿದನೊ ಅದನ್ನು ಏಕಾಏಕಿ ಬಿಟ್ಟು ಬೇರೆ ಸ್ಥಳದಲ್ಲಿ ಗುಡ್ಲು ಹಾಕಿಕೊಂಡು ಇರಬೇಕೆಂದರೆ ಅವನಿಗೆ ಬಹು ಸಂಕಟ ಅಲ್ಲದೆ, ಗುಡ್ಲು ಹಾಕುವುದಕ್ಕೆ ಸಾಮಾನು, ಸರಂಜಾಮು ಬೇಕು. ನಾನು ಸರಕಾರದಲ್ಲಿ ರೈತರ ಪರ ವಾದಮಾಡಿ, ಸ್ವಲ್ಪ ಅಸಮಾಧಾನಕ್ಕೂ ಗುರಿಯಾಗಿ, ಚಾಮರಾಜನಗರ, ಗುಂಡಲುಪೇಟೆ ಫಾರೆಸ್ಟುಗಳಿಂದ ಪ್ಲೇಗು ಪೀಡಿತ ಗ್ರಾಮಸ್ಥರ ಉಪಯೋಗಕ್ಕಾಗಿ ನೂರಾರು ಬಂಡಿ ಬಂಬುಗಳನ್ನು

ತರಿಸಿ, ಅಂಥ ಗ್ರಾಮಗಳಿಗೆ ನನಗೆ ತಿಳಿದಮಟ್ಟಿಗೂ ಅವುಗಳ ಅವಶ್ಯಕತೆಯ ದಾಮಾಷಾಮೇಲೆ ಹಂಚಿದೆ. ಸರ್ಕಾರದ ತೋಪುಗಳಲ್ಲಿ ಮನೆಗೆ ಇಷ್ಟೆಂದು ನಿರಖುಮಾಡಿ ಕವಲುಗಳನ್ನು ಕತ್ತರಿಸಿಕೊಳ್ಳಲು ರಹದಾರಿಗಳನ್ನು ಕೊಟ್ಟೆ. ಗೋರುಗರೀಬರಿಗೆ ಬಂಬುಗಳನ್ನು ಕವೆಗಳನ್ನು ಮಾಫಿಯಾಗಿ ಕೊಡಲು ಅಧಿಕಾರ ತರಿಸಿಕೊಂಡೆ. ಗ್ರಾಮಗಳಲ್ಲಿನ ಕೋಮು ಯಜಮಾನರ ಸಹಾಯವನ್ನು ಪಡೆದು, ಗ್ರಾಮಸ್ಥರು ಈ ಕೆಲಸದಲ್ಲಿ ಒಟ್ಟುಗೂಡಿ ಅನ್ಯೋನ್ಯ ವರ್ತಿಸಬೇಕೆಂತಲೂ, ಸರದಿಯಂತೆ ಗ್ರಾಮ ಮತ್ತು ಕ್ಯಾಂಪು ಉಸ್ತುವಾರಿ ನೋಡಿಕೊಳ್ಳಬೇಕೆಂತಲೂ ಏರ್ಪಾಡು ಮಾಡಿದೆ. ಸಾಮಾನ್ಯವಾಗಿ ಸಣ್ಣ ಸಣ್ಣ ಗ್ರಾಮಗಳಲ್ಲಿ ಈ ಏರ್ಪಾಡು ಚನ್ನಾಗಿ ಪರಿಣಮಿಸಿತು ದೊಡ್ಡ ಊರುಗಳಲ್ಲಿ ಅಷ್ಟು ಸುಲಲಿತವಾಗಿ ನಡೆಯಲಿಲ್ಲ. ಅಲ್ಲಿ ಇತರ ಉಪಾಯಗಳನ್ನು ಹುಡುಕಬೇಕಾಯಿತು. ಆ ತಂತ್ರಗಳು ಫಲಕಾರಿಯಾದಾಗ ನನಗೆ ಬಹು ಹಿಗ್ಗು, ಆತ್ಮ ಶಾಭಾಸುಗಿರಿ; ಈಗ ನೆನಪಿನಲ್ಲಿ ಅಷ್ಟು ಸ್ತೋತ್ರಾರ್ಹವಾಗಿ ಕಾಣುವುದಿಲ್ಲ ಇದನ್ನು ಕೇಳಿ: ನರಸಿಪುರದ ಹತ್ತಿರ ಆಲಗೋಡು ಎಂಬ ಗ್ರಾಮ. ನಿವಾಸಿಗಳು ಮುಕ್ಕಾಲು ಮೂರುವೀಸೆ ಪಾಲಿನವರು ಪರಿವಾರದವರು, ಗ್ರಾಮದೇವತೆ ಆಲಗೋಡಮ್ಮನ ಭಕ್ತರು. ಆ ತಾಯಿಯ ಪೂಜಾರಿ ಅಂಬಿಗರ ಹೊಟ್ಟೆ ಮಾದನಾಯಕ; ಆಕೆ ಸಂದಿಗ್ಧ ಸಂದರ್ಭಗಳಲ್ಲಿ ಮಾದನಾಯಕನ ಮಗಳು ಕೆಂಪುಸಂಜಿ ಮೇಲೆ ಬಂದು ತನ್ನ ಆಜ್ಞೆಯನ್ನೋ, ಬುದ್ಧಿವಾದವನ್ನೋ ಭಕ್ತರಿಗೆ ಅನುಗ್ರಹಿಸುವಳು.

ಸರಿ, ಆಲುಗೋಡಿನಲ್ಲಿ ಇಲಿಗಳು ಸತ್ತು ಬೀಳಲು ಪ್ರಾರಂಭಿಸಿದವು. ನಾನು ಊರಿನವರಿಗೆ ಊರನ್ನು ಬಿಟ್ಟು ಕ್ಯಾಂಪು ಮಾಡಬೇಕು, ಇನಾಕ್ಯುಲೇಟು ಮಾಡಿಸಿಕೊಳ್ಳಬೇಕು — ಎಂದು ಒತ್ತಾಯ ಮಾಡಿದೆ. ಅವರು ಸಾಮಾನ್ಯವಾಗಿ ನನ್ನ ಮಾತನ್ನು ತೆಗೆಯತಕ್ಕವರಲ್ಲ, ಆದರೆ ಪ್ರಕೃತದಲ್ಲಿ ನನಗಿಂತಲೂ ಹೋಲಿಸಲಸಾಧ್ಯವಾದಷ್ಟು ದೊಡ್ಡ ಅಧಿಕಾರಿಯ ಭಯಕ್ಕೆ ಒಳಗಾದರು. "ಅಮ್ಮನೋರ ಗುಡಿ ಸುತ್ತಲೂ ಮನೆ ಕಟ್ಟಿಕೊಂಡಿದ್ದೀವಿ. ಹ್ಯಾಗೆ ಸೋಮಿ ಅವರ ಅಪ್ಪಣೆ ಇಲ್ದೇಯೇ

ಅವರ್ನ ಬಿಟ್ಟು ಬುಟ್ಟು ಹೋಗೋದು ?" "ಹೌದಪ್ಪ, ನೀವು ಹೇಳೋದು ನ್ಯಾಯ, ದೇವರನ್ನೇ ಕೇಳಿ ; ಅವರು ನುಡಿದ ಹಾಗೆ ಮಾಡಿ" ಎಂದು ಹೇಳಿದೆ. ಶುಕ್ರವಾರದ ದಿವಸ ಗ್ರಾಮಸ್ಥರೆಲ್ಲ ಸೇರಿ, ಊರ ಪೂಜೆ ಮಾಡಿ ಕ್ರಮವಾಗಿ ಅಲಗೋಡಮ್ಮನನ್ನು ಪ್ರಶ್ನಿಸಿ ಅನುಜ್ಞೆಪಡೆಯುವುದೆಂದು ನಿಷ್ಕರ್ಷೆಯಾಯಿತು. ಆ ಹೊತ್ತಿಗೆ ನಾನೂ ಗುಡಿಗೆ ಬಂದು ಆಜ್ಞೆಯನ್ನು ಕೇಳಬೇಕೆಂದು ಗ್ರಾಮಸ್ಥರು ಕೇಳಿಕೊಂಡರು. ಒಪ್ಪಿದೆ. ಬೃಹಸ್ಪತಿವಾರ ಮಧ್ಯಾಹ್ನದ ಮೇಲೆ ನರಸಿಪುರಕ್ಕೆ ಯಾವುದೋ ಕೆಲಸಕ್ಕಾಗಿ ಬಂದಿದ್ದ ಹೊಟ್ಟೆಮಾದನಾಯಕನನ್ನೂ ಅವನ ಮಗಳು ಕೆಂಪುನಂಜಮ್ಮನನ್ನೂ ಕರೆಯಿಸಿಕೊಂಡು ಅವರಿಗೆ ಪೂಜೆಗೆ ಏನೇನು ಸಾಮಗ್ರಿ ಬೇಕು ? ಎಷ್ಟು ಹೊತ್ತಿಗೆ ನಾನು ಬರಬೇಕು ? ಮೊದಲಾದ ವಿಚಾರಗಳನ್ನು ಮಾಡುತ್ತ — ಕೆಂಪುನಂಜಮ್ಮನ ಕಡೆ ತಿರುಗಿ—

"ಇದೋ, ನೋಡು ತಾಯಿ, ಇದು ನಿನ್ನ ಸತ್ಯದ ಪರೀಕ್ಷೆ. ಅಮ್ಮನೋರು ನಿನ್ನ ಮೇಲೆ ಬರೋದು ನಿಜವಾದರೆ ನಿನ್ನ ಬಾಯಿಯಿಂದ ಹೊರಡೋ ಮಾತು ಬಹಳ ಸರಿಯಾದ್ದು, ವಿವೇಕವಾದ್ದು, ಎಲ್ಲರಿಗೂ ಕ್ಷೇಮವಾದ್ದು, ಆಗಿರಬೇಕಲ್ಲವೆ ? ಖಂಡಿತವಾಗೂ ಊರ ಮಹಾತಾಯಿ ಮಕ್ಕಳು ಬದುಕೋ ಬುದ್ಧಿ ಹೇಳ್ಯಾಳೆ ಹೊರತು, ಊರಿನಲ್ಲೇ ಇದ್ದು ಇಲಿಗಳ ಹಾಗೆ ಸಾಯಿರಿ ಅಂತ ಹೇಳ್ಯಾಳೆ? ನಮಗೇ ಇಷ್ಟು ಬುದ್ಧಿ, ಜನಗಳ ಮೇಲೆ ಪ್ರೀತಿ ಇರುವಾಗ, ಊರ ತಾಯಿಗೆ ಇನ್ನು ಎಷ್ಟು ಇರಬೇಕು, ಹೇಳು ?"

ಎಂದೆ.

ಕೆಂಪುನಂಜಮ್ಮ ಬುದ್ಧಿವಂತಳು.

"ದೇವರು ಏನು ಏಳ್ತಾರೋ, ನಾನೇನು ಬಲ್ಲೇ, ಬುದ್ದಿ ? ಆದರೆ ತಾವು ಏಳಿದಹಂಗೆ ಯಾವದು ವಳ್ಳೇದೆಂಬೋದು ಅಮ್ಮನೋರಿಗೆ ಗೊತ್ತಿಲ್ಲವಾ ? ತಾವು ವಳ್ಳೇವರು, ದೇವರಿಗೆ ಹರಿಕೆಮಾಡಿಕೊಳ್ಳಿ ಬುದ್ದಿ" ಎಂದಳು.

"ಏನು ಹರಕೆ, ಅಮ್ಮ ?"

"ಕ್ಯಾಂಪಿಗೆ ಹೋಗೀ ಅಂತ ದೇವರು ನುಡಿದರೆ, ಊರ ಹಬ್ಬ ಕ್ಯಾಂಪಿನಾಗೇ ಮಾಡಿಸುತೀವಿ ಅಂತ ಹರಿಕೆ ಮಾಡಬೇಕು ಬುದ್ಧಿ, ಕ್ಯಾಂಪಿನಾಗೆ ಒಂದು ಚಿಕ್ಕ ಜೋಪಡಿ ಗುಡಿಹಾಕಿ ಕಳಸ ಕೂಡಿಸಿ ಪೂಜೆ, ಅಬ್ಬ, ಕಾಣಿಕೆ ಎಲ್ಲ ನಡಸ್ತೀವಿ ಅಂತ" ಎಂದಳು.

ಸರಿ, ಊರ ದೇವರು ಮೂಡಿ ಕಣಿ ಕೇಳಿದಾಗ ನಾನು ಹೋಗಿ ಭಕ್ತರ ಮಂಡಲಿಯಲ್ಲಿ ಕುಳಿತೆ. ನರಸಿಪುರದವರು ಆಲಗೋಡೋರು, ಸುತ್ತಮುತ್ತಲ ಗ್ರಾಮಗಳವರು ಸುಮಾರು ಐನೂರು ಜನದ ಗುಂಪು ಗುಡಿಯಲ್ಲೂ ಆವರಣದಲ್ಲೂ ತುಂಬಿತ್ತು. ತಮಟೆ, ಶಂಖ, ಕಹಳೆ, ತುತೂರಿ, ವಾಲಗ ಇವುಗಳ ತುಮುಲ ಕೋಲಾಹಲವು ಊರ ದಿಕ್ಕುಗಳನ್ನು ಮೀರಿ ಹರಿದು ಆಕಾಶಕ್ಕೆ ಹಾರಿತು. ಭಕ್ತಾದಿಗಳ ಎಡೆ, ಬಲಿ, ಧೂಪ, ದೀಪ, ಸ್ತುತಿಪಾಠ ಇವುಗಳನ್ನು ನೋಡುವ ನನಗೆ ಇಷ್ಟು ಜನ, ಇಷ್ಟು ಭಕ್ತಿಯಿಂದ ಬೇಡಿದರೆ ಕರುಣಾಮೂರ್ತಿಯಾದ ಭಗವಂತನು ಕೇಳದಿರತ್ತಾನೆಯೇ — ಅನ್ನಿಸಿತು. ಒಳಗುಡಿಯ ಅರೆ ಬೆಳಕಿನಲ್ಲಿ ಧೂಪದ ಹೊಗೆಯ ಆವರಣದ ಮುಸುಕಿನಲ್ಲಿ, ಕುಂಕುಮದ ರಾಶಿಯ ಎದುರಿನಲ್ಲಿ ಕೆಂಪುನಂಜಮ್ಮ ತಲೆಯನ್ನು ಚಕ್ರಾಕಾರವಾಗಿ ಊಗಲಾಡಿಸುತ್ತಾ ಕೂತ್ತಿದ್ದಳು. ಅವಳ ಹಣೆದುಂಬ ಕುಂಕುಮ, ತೇವದ ತಲೆಯಲ್ಲಿ ಕೆದರಿ ಬಿರಿಹಾಕಿದ ಕೂದಲು. ಅರಶಿನ ನೀರಿನಲ್ಲಿ ಅದ್ದಿದ್ದ ವದ್ದೆ ಸೀರೆಯನ್ನುಟ್ಟಿದ್ದಾಳೆ. ನಾನು ಪ್ರವೇಶಿಸಿದ ಕೂಡಲೆ — ಸುಬೇದಾರರು ಬಂದ್ರು ತಾಯಿ — ಎಂದು ಯಾರೋ ಕೂಗಿದರು. ಕೆಂಪುನಂಜಮ್ಮ ನನ್ನ ಕಡೆ ತಿರುಗಿದಳು. ಅವಳ ಮುಖದಿಂದ ಕುಂಕುಮ ಬೆರಿಕೆಯಾದ ಬೆವರು ರಕ್ತಧಾರೆಗಳಂತೆ ಜನಿಯುತ್ತಿತ್ತು. ಅವಳ ಕಣ್ಣಿನಲ್ಲಿ ಉನ್ಮತ್ತರ ದೃಷ್ಟಿಯಂತೆ ಒಂದು ವಿಲಕ್ಷಣ ನೋಟವಿತ್ತು. ಈಕೆ ಬಹುಶಃ ಸನ್ನಿವೇಶದ ಮಹತ್ತಿನಿಂದ ಪರವಶತೆ ಸ್ಥಿತಿಯಲ್ಲಿರುವಂತೆ ನನಗೆ ತೋರಿತು. ಇವಳು ದೇವರು ಸಂದೇಶವೆಂದು ಏನು ಹೇಳುತ್ತಾಳೋ, ಯಾರು ಬಲ್ಲರು? ಎಂಬ ಶಂಕೆ ನನ್ನಲ್ಲಿ ಹುಟ್ಟಿತು. ಆದರೆ ಅವಳ ಮಾತು ಆ ಶಂಕೆಯನ್ನು ಹೋಗಲಾಡಿಸಿತು.

"ನನ್ನ ಮಕ್ಕಳೂ ನೀವೂ ನನ್ನನ್ನು ಯಾಕೆ ಕರೆದಿರಿ? ಬಂದಿವಿನಿ. ಹೇಳಿ, ಬುದ್ಧಿ"

ನನ್ನನ್ನು "ಬುದ್ಧಿ" ಎಂದು ಕರೆಯುವ ದೇವರ ವಿಚಾರದಲ್ಲಿ ಜನಗಳ ಸಂಬಿಕೆ ಏನಾದೀತೋ ಎಂಬ ಭಯದಿಂದ ನಾನು ವಿನಯ ದಿಂದ ಕೈಮುಗಿದು :

"ಮಹಾತಾಯಿ, ಞಾನು ಜನಗಳಿಗೆ ಬುದ್ಧಿ, ನಿಮಗೆ ಆಜ್ಞಾ ಧಾರಕ ನನ್ನನ್ನು ಜಂಭದೋನೆಂದು ತಮಾಷೆ ಮಾಡಬೇಡಿ. ಈಗ ಜನಗಳಿಗೆ ಬಂದಿರೋ ಕಷ್ಟ ಯಾಕೆ ಬಂತು? ಏನು ಮಾಡಿದರೆ ಹೋಗುತ್ತೆ? ನಿಮಗೆ ನಮ್ಮ ಮೇಲೆ ಯಾಕೆ ಇಷ್ಟು ಕೋಪ? ಏನು ಸೇವೆ ಮಾಡಿದರೆ ಸಮಾಧಾನ?" ಎಂದು ಕೇಳಿದೆ.

ಕೆಂಪುನಂಜಮ್ಮ ಜಾಣೆ ಎಂದು ಆಗಲೇ ಹೇಳಿದ್ದೇನೆ. ಅವಳ ಬಾಯಿನಲ್ಲಿ ದೇವರು ಹೀಗೆ ನುಡಿದರು.

"ನಿಮ್ಮ ಮನಸ್ಸು ನೋಡೋಣ ಅಂತ ಬುದ್ಧಿ ಅಂದಿ. ಈ ಊರೋರು ಭಕ್ತಿ, ಪೂಜೆ ಎಲ್ಲ ಬಿಟ್ಟು, ನನ್ನ ಗುಡಿ ಬಾಗಿಲು ಮುಚ್ಚಿದ್ದಕ್ಕೆ ಬುದ್ಧಿ ಕಲಿಸಿದೆ. ಈಗ ಬುದ್ಧಿ ಬಂತೋ? ನನ್ನ ಮಕ್ಕಳಿರಾ? ಈಗಲಾದರೂ ಊರ ದೇವರು ಮಾಡಿ ಮೂಗೂರು ರೋಟಿನ ಮೂಡಲ ಮಾಳದಲ್ಲಿ ಗುಡಲು ಹಾಕಿಕೊಂಡು ಅಲ್ಲಿ ಎರಡು ತಿಂಗಳು ಕ್ಯಾಂಪು ಮಾಡಿ. ಸುಬೇದಾರರು ಹೇಳೋ ಹಂಗೆ ಗೋರು, ಹಾಕಿಸಿಕೊಳ್ಳಿ. ಕೊಡೋ ಮದ್ದು ತೊಗೊಳ್ಳಿ. ಇವಕ್ಕೆದಿಗರು ಮಾಡಬೇಡಿ"

ಇಷ್ಟು ಹೇಳಿ ದೇವರು ಕೆಂಪುನಂಜಮ್ಮನನ್ನು ಬಿಡಲು ಆಕೆ ಧುಪ್ ಅಂತ ನೆಲಕ್ಕೆ ಉರಳಿದಳು. ನಾನು ದೇವರಿಗೆ ನಮಸ್ಕಾರ ಮಾಡಿ ಈಚೆಗೆ ಬಂದೆ. ಬಾಕಿ ಕೆಲಸಗಳೆಲ್ಲ ಸಲೀಸಾಗಿ ನಡೆದವು. ಆಲಗೋಡು ಗ್ರಾಮದವರೇ ಅಲ್ಲ, ಸುತ್ತಮುತ್ತಲ ಗ್ರಾಮಗಳವರೂ ಕೂಡ, ಊರಾಚೆನ ಮಾಳಗಳಲ್ಲಿ ಕ್ಯಾಂಪುಗಳನ್ನು ಕಟ್ಟಿಕೊಂಡು, ಅನೇಕರು ಸ್ಪೆಷಲ್ ಡ್ಯೂಟಿ ಡಾಕ್ಟರು ಬಂದಾಗ ಇನಾಕ್ಯೂಲೇಷನ್ ಮಾಡಿಸಿಕೊಂಡರು.

ಸದೃಶ ಸನ್ನಿವೇಶಗಳಲ್ಲಿ ಮನುಷ್ಯರ ಬುದ್ಧಿ ಸದೃಶಉಪಾಯ ಗಳನ್ನು ಅನುಸರಿಸುತ್ತವೆಂಬುದು ನನಗೆ ತಮಾಷೆಯಾಗಿ ಅನುಭವಕ್ಕೆ

ಬಂದಿತು. ಎರಡು ಮೂರು ವರುಷಗಳ ಹಿಂದೆ ನನ್ನ ಸ್ನೇಹಿತರು ದಿ|| ಸರ್ ಟಿ. ವಿಜಯರಾಘವಾಚಾರ್ಯರು ತಾವು ಕೊಚ್ಚಿಯ ದಿವಾನರಾಗಿದ್ದಾಗ ಇಂಥದ್ದೇ ಒಂದು ಸಂದರ್ಭದಲ್ಲಿ ಜನಗಳ ಅನುಮತಿಯನ್ನು ಇದೇ ರೀತಿ ಪಡೆದದ್ದಾಗಿ ವಿನೋದವಾಗಿ ವ್ಯಾಕ್ಯಾನಿಸುತ್ತಿದ್ದಾಗ ಹೇಳಿದರು. ನಾನು ನನ್ನ ಕತೆಯನ್ನು ಅವರಿಗೆ ಹೇಳಲಿಲ್ಲ.

ಇದೇ ಪ್ಲೇಗ್ ಉಪಪ್ಲವ ಸಂದರ್ಭದಲ್ಲಿ ನನಗೆ ಗರ್ಗೇಶ್ವರಿಯಲ್ಲಿ ಆದ ಇನ್ನೊಂದು ಅನುಭವ ಜ್ಞಾಪಕಕ್ಕೆ ಬರುತ್ತದೆ. ಗರ್ಗೇಶ್ವರಿಯಲ್ಲಿ ತಲೆ ಎಣಿಸಿದರೆ ಕುರುಬರೂ, ಇತರ ಹಿಂದೂಗಳೂ ಹೆಚ್ಚಾಗಿದ್ದರೂ ಅದು ನಿಜವಾಗೂ ಲಬ್ಬೇತುರುಕರ ಪಾಳ್ಯಪಟ್ಟು ಎನ್ನಬಹುದಾಗಿತ್ತು. ಅಲ್ಲಿಯ ಪಾಳೈಗಾರರು ಸಾಹುಕಾರ ಬಾಬಾಸಾಬರೆಂಬುವರು. ಗರ್ಗೇಶ್ವರಿ, ನರಿಪುರ, ಕಿರುಗಾವಲು, ಈ ಮೂರು ದೊಡ್ಡ ಗ್ರಾಮಗಳಲ್ಲೂ ಮೊದಲು ವ್ಯಾಪಾರಕ್ಕಾಗಿ ಬಂದ ಲಬ್ಬೆಯವರು ಭಾರಿ ಜಮೀನ್‌ದಾರರೂ ಸಾಹುಕಾರರೂ ಆಗಿ ಕೊನೆಗೆ ಆಯಾ ಗ್ರಾಮಗಳಲ್ಲಿ, ಹಿಂದು ಸ್ಥಾನಕ್ಕೆ ಬಂದ ಫರಂಗಿಯವರಂತೆ ನಾಯಕರಾಗಿದ್ದರು. ಅವರಲ್ಲಿ ಅನೇಕರು ತಕ್ಸೀರು, ಪುಂಡುತನ, ದುರ್ವ್ಯಾಪಾರಗಳಿಗೆ ಹೇಸುತ್ತಿರಲಿಲ್ಲವೆಂಬ ಪ್ರತೀತಿ; ಅಲ್ಲದೆ ಅವರು ಬಹಳ ಒಗ್ಗಟ್ಟಿನ ಜನವಾದ್ದರಿಂದ ಸಂಸಾರಿಗಳೂ ಮಾನಸ್ಥರೂ ಆದ ರೈತರು ಅವರನ್ನು ಕಂಡರೆ ಹೆದರುತ್ತಿದ್ದರು. ಹೆದರುವುದೆಂದರೆ ಹೇಡಿತನದ ಹೆದರಿಕೆಯಲ್ಲ—ಮಾನದ. ಬಡತನದ ಹೆದರಿಕೆ. ನಾವು ಹುಡುಗರಾದಾಗ ಕೆಲವು ಕೋಮಿನವರು ಉಗಿದರೆ ಜಾತಿ ಕೆಟ್ಟುಹೋಗುತ್ತದೆಂದು ಅವರಿಂದ ಸಾಧ್ಯವಾದಷ್ಟು ದೂರದಲ್ಲಿರುತ್ತಿದ್ದೆವು. ಅದರಂತೆಯೇ ಗರ್ಗೇಶ್ವರಿ ರೈತರ ವರ್ತನೆ. ಗರ್ಗೇಶ್ವರಿಯ ಲಬ್ಬೆಯವರಿಗೂ ಆ ಗ್ರಾಮದ ಇತರರಿಗೂ ಇದ್ದ ಇನ್ನೊಂದು ವ್ಯತ್ಯಾಸ – ಲಬ್ಬೆಯವರು ಐಶ್ವರ್ಯಮದದಿಂದಲೋ, ಇನ್ಯಾವ ದುರಹಂಕಾರದಿಂದಲೋ, ಕಾಣೆ; ಹಿಂದುಗಳಾದ ಸರ್ಕಾರಿ ಅಧಿಕಾರಿಗಳಿಗೆ ಆದರ ಗೌರವಗಳನ್ನು ತೋರಿಸುತ್ತಿರಲಿಲ್ಲ. ಅಧಿಕಾರಿಗಳು ಅಲ್ಲಿ ಏನಾದರೂ ಕೆಲಸದಮೇಲೆ ಹೋದರೆ, ಹಿಂದು ಪ್ರಜೆಗಳೆಲ್ಲರೂ ಇತರ ಕಡೆಗಳಲ್ಲಿನಂತೆ ಅವರನ್ನು ಮರ್ಯಾದೆಯಿಂದ ಕಂಡು, ಅವಶ್ಯಕ

ವಿದ್ದರೆ ಅವರ ಸಂಗಡಲೇ ಇದ್ದು ಕುಮ್ಮಕ್ಕು ಮಾಡುತ್ತಿದ್ದರು. ಲಬ್ಬೆಯವರು ಮಾತ್ರ ಸಾಮಾನ್ಯವಾಗಿ ಅವರನ್ನು ಲಕ್ಷ್ಯಕ್ಕೆ ತಾರದೆ, ತಮ್ಮ ತಮ್ಮ ಮನೆ ಜಗಲಿಗಳ ಮೇಲೋ ಅಂಗಡಿಗಳಲ್ಲೋ ಕುಳಿತು, ಬೀದಿಯಲ್ಲಿ ಹೋಗುವ ಖಾಲಿ ತಮಾಷೆಯನ್ನು ನೋಡಿದಂತೆ ನೋಡುವರು. ಕೆಲಸ ವಿದ್ದು ಹೇಳಿಕಳಿಸಿದರೆ, ಏನೋ ಕಾಟಕ್ಕೆ ಬಂದವರ ಹಾಗೆ ಹಾಜರಿಕೊಟ್ಟು, ಉದಾಸೀನವಾಗಿರುವರು. ಜನಗಳ ಆದರವನ್ನೂ ಪ್ರೀತಿಯನ್ನೂ ಬಯಸಿ, ಬಹುಶಃ ಪಡೆಯುತ್ತಿದ್ದ ನನಗೆ, ಈ ಕೋಮಿನವರ ನಡತೆ ಸ್ವಲ್ಪ ಕಟುವಾದ ಅಸಮಾಧಾನವನ್ನೇ ಉಂಟು ಮಾಡಿತ್ತು; ಆದರೂ ಅವರು ಮರ್ಯಾದೆ ಮಾಡಲಿಲ್ಲವೆಂದು ಕೋಪ ಮಾಡುವುದು ಬಾಲಿಶತನವೆಂದು ನಾನು ಅದನ್ನು ಗಮನಿಸದಿದ್ದವನಂತೆ ಇರುತ್ತಿದ್ದೆ ಬಾಕಿ ಜನಗಳಿಗೆ ಸರಿಯಾದ ನಡತೆಗೆ ಎಚ್ಚರಿಸುತ್ತಿದ್ದ ನನ್ನ ನೌಕರರೂ ಸಹ ಈ ಲಬ್ಬೆಯವರನ್ನು ಸಂಕೋಚಭಾವದಿಂದಲೋ, (ಈ ಮಾತನ್ನು ನಾನು inferiority complex ಎಂಬ ಅರ್ಥದಲ್ಲಿ ಉಪಯೋಗಿಸಿದ್ದೇನೆ) ಏನೋ ಸಲಹೆ ಮಾಡದೆ ಬಿಡುತ್ತಿದ್ದರು.

ಸರಿ, ಗರ್ಗೇಶ್ವರಿಯಲ್ಲಿ ಪ್ಲೇಗು ಪ್ರಾರಂಭವಾಯಿತು. ಹಿಂದು ಗ್ರಾಮಸ್ಥರು ನನ್ನ ಕೋರಿಕೆಯಂತೆ ಊರು ಬಿಟ್ಟು ಕ್ಯಾಂಪು ಮಾಡಿದರು; ಲಬ್ಬೆಯವರು ಹೋಗುವುದಿಲ್ಲವೆಂದರು; ಬಲಾತ್ಕಾರದಿಂದ ಅವರನ್ನು ಹೊರಡಿಸಲು ನನಗೆ ಕಾನೂನು ಬದ್ಧ ಅಧಿಕಾರವಿಲ್ಲ. ಅವರಲ್ಲಿ ಅನೇಕರು ಸತ್ತರು ಅವರು ಅದಕ್ಕೂ ಹೆದರಲಿಲ್ಲ. ಮೈಸೂರಿನಿಂದ ಪ್ಲೇಗಿನ ಸಂಬಂಧವಾದ ಇಲಾಜುಗಳಿಗಾಗಿ ನೇಮಕವಾಗಿದ್ದ ಮೆಡಿಕಲ್ ಆಫೀಸರನ್ನು ನನ್ನ ತಾಲ್ಲೂಕಿಗೆ ಕರೆಯಿಸಿಕೊಂಡು, ಅವರ ಸಂಗಡ ವ್ಯಾಧಿಗ್ರಸ್ಥವಾದ ಇತರ ಗ್ರಾಮಗಳಿಗೆ ಹೋದಂತೆಯೇ ಇನಾಕ್ಯುಲೇಷನ್ ಕೆಲಸಕ್ಕಾಗಿ ಗರ್ಗೇಶ್ವರಿಗೂ ಹೋದೆ. ಅಲ್ಲಿನ ಹಿಂದು ಜನಗಳೆಲ್ಲ ಬಂದರು. ಅವರಿಗೆ ಧೈರ್ಯಕೊಡುವುದಕ್ಕೆ ನಾನು ಅವರ ಎದುರಿಗೆ ಮೊದಲು ಇನಾಕ್ಯುಲೇಟು ಮಾಡಿಸಿಕೊಂಡೆ. (ಈ ಉದ್ದೇಶದಿಂದಲೇ ನಾನು ಆ ಒಂದು ಎಪಿಡೆಮಿಕ್ಕಿನಲ್ಲೇ ಎರಡು ಮೂರು ಸಲ ಸಣ್ಣ ಡೋಜುಗಳನ್ನು ಇನಾಕ್ಯುಲೇಟ್ ಮಾಡಿಸಿಕೊಂಡಿದ್ದೆನೆಂದು

ಜ್ಞಾಪಕ) ಬಹುಶಃ ಹಿಂದೂಗಳೆಲ್ಲರೂ ಇನಾಕ್ಯುಲೇಟು ಮಾಡಿಸಿ ಕೊಂಡರು. ಲಬ್ಬೆಯವರಿಗೆ ಹೇಳಿಕಳಿಸಿದೆ. ಅವರ ಮನೆಗಳಲ್ಲಿ ಹೆಂಗಸರು ಮಕ್ಕಳಿಗೆ ಗೋರು ಚುಚ್ಚುವುದಕ್ಕೆ ಬೇಕಾದರೆ ಲೇಡಿ ಡಾಕ್ಟರನ್ನು ಕರೆಸಿ ಕೊಡುವುದಾಗಿಯೂ ಹೇಳಿಕಳುಹಿಸಿದೆ. ಯಾರೂ ಬರಲಿಲ್ಲ. ಲಬ್ಬೆಯವರೆಲ್ಲ ದೂರದಲ್ಲೇ ಗುಂಪು ಗುಂಪಾಗಿ ನಿಂತು ತಮಾಷೆ ನೋಡುತ್ತಿದ್ದರು. ನಾನು ಹತ್ತಿರ ಹೋಗುವಷ್ಟರಲ್ಲಿ, ಹಿಂತಿರುಗಿ ಕಣ್ಣುಮರೆಯಾಗಿ ಹೋದರು. ನಾನು ಆ ಕೋಮಿನ ಮುಖಂಡರಾದ ಬಾಬಾಸಾಹೇಬರಿಗೆ, ದಯವಿಟ್ಟು ಭೇಟಿ ಕೊಡಬೇ ಕೆಂದು ಹೇಳಿಕಳುಹಿಸಿದೆ. ಅವರು—ಜರೂರು ಕೆಲಸವಿದೆ, ತೀರಿಸಿ ಕೊಂಡು ಬರುತ್ತೇನೆ— ಎಂದು ಉತ್ತರಕೊಟ್ಟವರು ಎಲ್ಲಿಯೋ ತಲೆ ತಪ್ಪಿಸಿಕೊಂಡು ಹೊರಟು ಹೋದರು. ಬಹಳ ಹೊತ್ತು ಕಾದು, ಆಮೇಲೆ ಅವರ ಮನೆಯ ಹತ್ತಿರ ನಾನೇ ಹೋದೆ. ಬಾಗಿಲು ಬೀಗ ಹಾಕಿಕೊಂಡು ಹೊರಟು ಹೋಗಿದ್ದರು. ನೋಡುತ್ತಿದ್ದ ಲಬ್ಬೆಯವರಿಗೆ ಇದು ಒಳ್ಳೆಯ ಪ್ರಹಸನವಾಗಿದ್ದಂತೆ ಅವರ ಮುಖಭಾವದಿಂದ ತೋರಿತು. ಬಾಕಿಯುವ ರಿಗೂ, ತಾವು ಸಾಧುಪ್ರಜೆಗಳಾದ್ದರಿಂದ ತಮಗೆ ಇನಾಕ್ಯುಲೇಷನ್ ಹಿಂಸೆಯಾಯಿತು; ತುಂಟರಾಗಿದಿದ್ದರೆ ತಾವೂ ದೂರ ನಿಂತು ನಗುತ್ತಿರ ಬಹುದಾಗಿತ್ತೆಂದು ತೋರಿರಬಹುದು, ಎಂದು ನನ್ನ ಮನಸ್ಸಿಗೆ ಬಂತು. ನನಗೆ ಮನೋಭಂಗವಾಗಿ ಕೋಪಬಂತು. ಅವಕಾಶ ಹುಡುಕುತ್ತಿದ್ದ ನನಗೆ ಬಾಬಾಸಾಬರ ಮನೆಯ ಬಚ್ಚಲು ನೀರೆಲ್ಲ ಮನೆಯ ಮಗ್ಗುಲಿ ನಲ್ಲಿ ದೊಡ್ಡ ಕೆಸರು ಹೊಂಡವಾಗಿ ನಿಂತು, ನಾರುತ್ತಿದ್ದದ್ದು ಕಂಡು ಬಂತು. ಅದರಲ್ಲಿ ಬಾತು, ಕೋಳಿ, ಕಾಗೆ, ಇಂಥವುಗಳು ವಿಹರಿಸು ತ್ತಿದ್ದವು. ಇದರ ನಾತ ಬಹುದೂರ ಹರಡಿತ್ತು. ಇದು ಆಗ ಜಾರಿ ಯಲ್ಲಿದ್ದ ಸ್ಯಾನಿಟರಿ ರೆಗ್ಯುಲೇಷನ್ (ಆರೋಗ್ಯ ವಿಧಾಯಕ ಕಾನೂನು) ಪ್ರಕಾರ ಒಂದು ತಕ್ಸೀರು. ಗ್ರಾಮಾಂತರದಲ್ಲಿ ಈ ತಕ್ಸೀರನ್ನು ಮಾಡದವರೇ ಇಲ್ಲವೆನ್ನಿ; ಆದರೂ, ಈ ಪ್ರಕೃತದಲ್ಲಿ ಸಾಹುಕಾರ ಬಾಬಾಸಾಬರನ್ನು ಬರಮಾಡಿಕೊಳ್ಳುವುದಕ್ಕೆ ಒಂದು ಮಾರ್ಗ ಸಿಕ್ಕಿದ ಹಾಗಾಯಿತು. ನಾನು ಸ್ಯಾನಿಟರಿ ಇನ್‌ಸ್ಪೆಕ್ಟರನ್ನು ಕರೆದು—

"ಇದನ್ನು ನೋಡಿದಿರೇನಯ್ಯ? ನಿಮ್ಮ ಕರ್ತವ್ಯ ನಿಮಗೆ ಗೊತ್ತಿಲ್ಲವೇ? ಇದನ್ನು ನೋಟೀಸು ಮಾಡಿ ತಕ್ಕ ಕ್ರಮ ಕೈಗೊಳ್ಳುವುದಕ್ಕಲ್ಲವೆ, ನೀವಿರೋದು?" ಎಂದು ಅಲ್ಲಿಂದ ಬಂದುಬಿಟ್ಟೆ. ಸ್ಯಾನಿಟರಿ ಇನ್‌ಸ್ಪೆಕ್ಟರು ಬಾಬಾಸಾಬರು ತಮ್ಮ ಮನೆಯ ಹತ್ತಿರ ಗಲೀಜುಮಾಡಿಕೊಂಡು ಗ್ರಾಮದ ಆರೋಗ್ಯಕ್ಕೆ ಊನತಂದಿರುವುದಕ್ಕೆ ಮಹಜರು ಮಾಡಿ, ಸಾಕ್ಷಿಗಳನ್ನಿಟ್ಟು, ಕ್ರಮವಾಗಿ ನನ್ನ ಕೋರ್ಟಿನಲ್ಲಿ ಫಿರ್ಯಾದು ದಾಖಲ್ಮಾಡಿದರು. ಬಾಬಾಸಾಬರು ಇದನ್ನು ತಿಳಿದ ಕೂಡಲೆ ನನ್ನನ್ನು ನೋಡುವುದಕ್ಕೆ ನನ್ನ ಮನೆಯ ಹತ್ತಿರ ಬಂದರು. ಇನಾಕ್ಯುಲೇಷನ್ ಮಾಡಿಸಿಕೊಳ್ಳದಿದ್ದವರನ್ನು ಮನೆಯೊಳಕ್ಕೆ ಬಿಡಕೂಡದೆಂದು ಯಜಮಾನರ ಹುಕ್ಕುಂ ಆಗಿದೆ; ಕೆಲಸವಿದ್ದರೆ ಕಛೇರಿಗೆ ಹೋಗಿ ಅವರನ್ನ ಕಾಣಬಹುದೆಂದು ನನ್ನ ತೈನಾತಿಯವರು ಅವರಿಗೆ ತಿಳಿಸಿದರು. ಅವರು ಕಛೇರಿಗೆ ಬಂದಾಗ ನಾನು ಬೇರೆ ಕೆಲಸದಲ್ಲಿದ್ದೆ. ಕೆಲಸಮುಗಿದ ಮೇಲೆ, ಏನು ಸಮಾಚಾರ? ಎಂದು ಕೇಳಿದೆ ಸಾಬರು ಕೋಪವನ್ನು ಪೂರ್ತ ಮರೆಮಾಡಲು ಸಾಧ್ಯವಿಲ್ಲದ ಭಾವದಿಂದ

"ನನ್ನ ಮೇಲೆ ಸ್ಯಾನಿಟರಿ ಇನ್‌ಸ್ಪೆಕ್ಟರು ಬಚ್ಚಲು ಕೇಸು ದಾಖಲ್ಮಾಡಿದಾರಂತೆ. ನಾನು ಒಬ್ಬನೇನೆ ಬಚ್ಚಲುಬಿಟ್ಟು ಕೊಂಡಿರೋದು ತಮ್ಮ ತಾಲ್ಲೂಕಿನಲ್ಲಿ?" ಎಂದು ಕೇಳಿದರು.

"ನಿಮ್ಮ ಸವಾಲಿಗೆ ನಾವು ಜವಾಬು ಕೊಡಬೇಕಾದ್ದಿಲ್ಲ. ನಿಮ್ಮ ಮೇಲೆ ಕೇಸು ದಾಖಲಾಗಿದ್ದರೆ ಕ್ರಮೇಣ ವಿಚಾರಣೆ ನಡೆಯುತ್ತೆ. ಅಷ್ಟೆ ತಾನೆ, ಸಾಹೇಬರೆ? ನಮಗೆ ಬಹಳ ಕೆಲಸವಿದೆ"

ಎಂದು ನನ್ನ ಮೇಜಿನ ಮೇಲಿನ ಕಾಗದಗಳ ಕಡೆ ತಿರುಗಿದೆ.

ಕೇಸನ್ನು ಬನ್ನೂರಲ್ಲಿ ಒಂದು ಹೀರಿಂಗ್, ತಲ್ಕಾಡಿನಲ್ಲಿ ಮತ್ತೊಂದು, ಮೂಗೂರಲ್ಲಿ ಮರಿದೊಂದು, ಹೀಗೆ ಹೀರಿಂಗ್‌ಗಳನ್ನಿಟ್ಟು ತಾಲ್ಲೂಕಿನ ಭಾರಿ ಗ್ರಾಮಗಳಲ್ಲೆಲ್ಲಾ ಬಾಬಾಸಾಬರ ಸವಾರಿ ಬರುವಂತೆ ಮಾಡಿದೆ. ಅವರು ಕೇಸನ್ನು ಬೇರೆ ಕೋರ್ಟಿಗೆ ವರ್ಗಾಯಿಸಿ ಕೊಳ್ಳಲಿಕ್ಕೆ ಮಾಡಿದ ಯತ್ನ ವಿಫಲವಾಯಿತು. ನಂತರ ನರೀಪುರದ ಅವರ ನೆಂಟರು ಲಬ್ಬೆಸಾಹುಕಾರರೊಬ್ಬರು ಅವರ ಪರವಾಗಿ ಬಂದು

ಅವರನ್ನು ಮಾಫ್ ಮಾಡಬೇಕೆಂದು ಬೇಡಿದರು. ನಾನು 'ಗರ್ಗೇಶ್ವರಿಯಲ್ಲೇ ಕೇಸಿನ ಹೀರಿಂಗ್ ಇಡುತ್ತೇನೆ. ಅವರಿಗೆ ಗಲೀಜು ತೆಗೆದು, ಬಚ್ಚಲನ್ನು ಸರಿಯಾಗಿ ಕಟ್ಟಿಸಿ, ಕೊಳಕು ನೀರಿನ ವಿಲೇವಾರಿ ಗ್ರಾಮಪಾರಿಶುದ್ಧ್ಯಕ್ಕೆ ಬಾಧಕವಿಲ್ಲದಂತೆ ಮಾಡುವುದಕ್ಕೆ ವಾಯಿದೆ ಕೊಡುತ್ತೇನೆ, ಅವರು ಹಾಗೆ ಮಾಡಲಿ, ಆಮೇಲೆ ನೋಡೋಣ' ಎಂದೆ. ಹೀಗೆ ಅವಕಾಶ ಕೊಡುವುದಕ್ಕೆ ಕಾನೂನಿನಲ್ಲಿ ಅವಕಾಶವಿತ್ತು.

ಕೊನೆಗೆ, ಗರ್ಗೇಶ್ವರಿಯಲ್ಲೇ ಬಹಿರಂಗವಾಗಿ ಕೋರ್ಟು ಮಾಡಿ, ಅವರು ಕೋರ್ಟಿನ ಅಪ್ಪಣೆಯಂತೆ ಕೆಲಸಮಾಡಿದ್ದಕ್ಕೆ ಮಹಜರು ಮಾಡಿ, ಅವರ ಕೋಮಿನವರು ದೇಖೀಲು ಊರಿನವರೆಲ್ಲರ ರೂಬರೂಬು ಅವರ ವಿಷಾದವಚನವನ್ನು ಸ್ವೀಕಾರ ಮಾಡಿ, ಅವರನ್ನು ಕೇಸಿನಿಂದ ಖುಲಾಸು ಮಾಡಿದೆ. ಅವರ ಸಹಾಯದಿಂದ ಇನಾಕ್ಯುಲೇಷನ್ ಮತ್ತು ಕ್ಯಾಂಪಿಂಗ್ ಸಹ ಸರಿಯಾಗಿ ನಡೆದವು. ಮುಂದೆ ನಾನು ಆ ತಾಲ್ಲೂಕಿನಲ್ಲಿರುವವರೆಗೂ, ಲಬ್ಬೆಯವರು ಇತರರಂತೆಯೇ ನನ್ನಲ್ಲಿ ಯುಕ್ತರೀತಿಯಲ್ಲಿ ನಡೆಯುತ್ತಿದ್ದರು.

ಮೇಲೆ ವಿವರಿಸಿರುವ ಕಾರಬಾರನ್ನು ನೆನೆದರೆ ನನಗೇನು ಹೆಮ್ಮೆ ಇಲ್ಲ. ಅದು ಅಧಿಕಾರದ ಅಯುಕ್ತ ಚಲಾವಣೆಯೆಂದು ನನಗೆ ಆಗಲೇ ಗೊತ್ತಿದ್ದರೂ, ಆ ಸನ್ನಿವೇಶದಲ್ಲಿ ಜನಗಳ ಹಿತಕ್ಕೂ, ಸರ್ಕಾರದದರ್ಪವನ್ನು ಕಾಪಾಡಲಿಕ್ಕೂ, ಹಾಗೆ ಮಾಡುವುದು ಅವಶ್ಯಕವೆಂದುಮಾಡಿದೆ. ಇದರಲ್ಲಿ ನನ್ನ ಸ್ವಂತ ಕೋಪವೂ ಸೇರಿತ್ತೆಂಬ ತಿಳುವಳಿಕೆ ನನ್ನ ಮನಸ್ಸನ್ನು ಚುಚ್ಚಿ ಬಾಧಿಸುತ್ತಿತ್ತು; ಆದ್ದರಿಂದ ಈ ಕತೆಯ ಸುದ್ದಿಯನ್ನೇ ಎತ್ತದೆ, ಇದನ್ನು ಮರೆತುಬಿಡಲಿಕ್ಕೆ ಯತ್ನ ಮಾಡಿದೆ. ಮರೆತೂಬಿಟ್ಟೆನೆಂದು ಕಾಣುತ್ತದೆ. ಬಹು ಕಾಲದನಂತರ ಇದು ಒಂದು ತಮಾಷೆ ರೀತಿಯಲ್ಲಿ ನನ್ನ ನೆನಪಿಗೆ ತರಲ್ಪಟ್ಟಿತು. ನಾನು ರಿಟೈರಾದಮೇಲೆ ಕ್ಲಬ್ಬಿನಲ್ಲಿ ಸ್ನೇಹಿತರ ಸಂಗಡ ವಿರಾಮವಾಗಿ ಮಾತನಾಡುತ್ತ ಕುಳಿತಿರುವಾಗ, ನಮ್ಮ ಗುಂಪಿನಲ್ಲಿ ಒಬ್ಬ ದೊಡ್ಡ ಅಧಿಕಾರಿ ಇದ್ದರು. ಅವರು ತಮ್ಮ ಸರ್ವೀಸಿನ ಆದಿ ಭಾಗದಲ್ಲಿ—ನಾನು ತಿರುಮಕೂಡ್ಲು ನರಸೀಪುರವನ್ನು

ಬಿಟ್ಟ ಕೆಲವು ವರುಷಗಳನಂತರ — ಆ ತಾಲ್ಲೂಕಿನಲ್ಲಿ ಅಮಲ್ದಾರ ರಾಗಿದ್ದರಂತೆ. ತಮ್ಮ ಅನುಭವಗಳನ್ನು ವಿವರಿಸುತ್ತಾ—

“ನರಸೀಪುರ ಅದಲ್ಲ, ಬಹಳ ಪಠಿಂಗ ತಾಲ್ಲೂಕು. ಅದಕ್ಕೇ ಒಳ್ಳೆ ರಸ್ತುಂ ಅಮಲ್ದಾರ್ ಬೇಕು, ನೋಡಿ. ನಾವು ಅಲ್ಲಿದ್ದಾಗ ಒಂದು ದಫ ಪ್ಲೇಗು ಬಂದಿತ್ತು. ಗರ್ಗೇಶ್ವರೀನಾಗೆ ಒಬ್ಬ ಭಲೇ ಮಸ್ತಿ ಸಾಹುಕಾರರು — ಲಬ್ಬೇಯೋರು — ಅವರ ಹೆಸರು ಬಾಬಾ ಸಾಹೇಬರು — ಇದ್ದರು. ಡೆಪ್ಯುಟಿ ಕಮಿಷನರ್ ಬಂದರೂ ಅವರು ಕೇರ್ ಮಾಡುತ್ತಿರಲಿಲ್ಲ. ನಾವು ಅವರಿಗೆ ಪ್ಲೇಗು ಇನಾಕ್ಯುಲೇಷನ್‌ಗೆ ಕರೆಕಳಿಸಿದೆವು. ಊ ಹೂ–ಆಮೇಲೆ—” ಆಮೇಲೆ ಅವರು ಬಾಬಾ ಸಾಹೇಬರನ್ನು ಥರಾಟೆಗೆ ತೆಗೆದುಕೊಂಡದ್ದು ನನ್ನ ಮಂತ್ರದ ಮಕ್ಕೀಕೆ ಮಕ್ಕಿ ನಕಲು. ಒಂದು ವಿಶೇಷ ಮಾತ್ರ — ಅವರು ಬಾಬಾ ಸಾಬ ರನ್ನು ಹೊಡೆದರಂತೆ. ನಾನು—

“ಬೇಷ್ ಮಾಡಿದಿರಿ. ಆದರೆ ಆ ಮುದುಕರನ್ನಯಾಕೆ ಹೊಡೆ ದಿರಿ, ಸಾಷ” ಅಂದೆ

“ಮಾತಿನ ಠೇಕಾ ಇರಲಿ ಅಂತ ಮೆತ್ತಗೆ ಮುಟ್ಟಿದೆ. ಘಟ್ಟಿ ಯಾಗಿ ಹೊಡೆಯಲಿಲ್ಲ ಸಾರ್” ಎಂದು ನನ್ನನ್ನು ಸಂತೈಸಿದರು.

ಈ ಕತೆ ಅವರು ಅಮಲ್ದಾರರಾಗಿದ್ದಾಗ ಅವರ ಕಿವಿಗೆ ಹಿಂದಲ ಅಮಲ್ದಾರರು ಯಾರೋ ಮಾಡಿದ್ದಾಗಿ ಬಿದ್ದಿರಬೇಕು. ಅದು ಬೇವಾ ರಸು ಬಹದ್ದೂರೀ ಸುದ್ದಿಯಾದದ್ದರಿಂದ ತಾವು ಅದನ್ನು ವಹಿಸಿಕ್ಕೊಂಡು ವರ್ಥಮಾನಕ್ಕೆ ತಂದರೆಂದು, ನನ್ನ ಊಹೆ.

ಮೂಗೂರಿನಲ್ಲಿ ತೊರಗೇರಿಯಲ್ಲಿ ಈ ರೋಗವು ಬಹಳ ಬಲವಾಗಿ ವ್ಯಾಪಿಸಿತು. ಸಾಮಾನ್ಯವಾಗಿ ಎಲ್ಲರೂ ಊರನ್ನು ಬಿಟ್ಟು ಕ್ಯಾಂಪಿಗೆ ಹೋದ್ದಲ್ಲದೆ ಇನಾಕ್ಯುಲೇಟೂ ಮಾಡಿಸಿಕೊಂಡರು. ಒಂದು ಅನಾಥ ಮನೆಯವರು ಮಾತ್ರ ಹೋಗಲಿಕ್ಕಾಗಲಿಲ್ಲ. ಅವರು ಮುದುಕ ದಂಪತಿ ಗಳು, ಇಬ್ಬರು ತಬ್ಬಲಿ ಮೊಮ್ಮಕ್ಕಳನ್ನು ಸಾಕಿಕೊಂಡಿದ್ದವರು. ನಾನು ಡಾಕ್ಟರನ್ನು ಅವರ ಮನೆಯ ಬಳಿಗೆ ಕರೆದುಕೊಂಡು ಹೋದಾಗ ಆ ಇಬ್ಬರು ಮಕ್ಕಳಿಗೂ ಪ್ಲೇಗು ತಗಲಿ, ಕೊಂಕಳುಗಳಲ್ಲಿ ಗೆಡ್ಡೆಗಳೆದ್ದಿದ್ದವು.

ಡಾಕ್ಟರು — ಇವರಿಗೆ ಇನಾಕ್ಯುಲೇಟ್ ಮಾಡಿದ್ದರಿಂದ ಪ್ರಯೋಜನವಿಲ್ಲ; ಇವರನ್ನೂ ಇವರ ಸಂಪರ್ಕದವರನ್ನೂ ಕ್ಯಾಂಪಿಗೆ ಕಳಿಸಿದ್ದರಿಂದ ಕ್ಯಾಂಪಿನ ಸುರಕ್ಷತೆಗೆ ಕೂಡ ಕೇಡು; ಇವರೆಲ್ಲ ಇಲ್ಲೇ ಇರಲಿ —ಎಂದು ಅಭಿಪ್ರಾಯಪಟ್ಟರು. ನಾವು ಮಾತನಾಡುತ್ತಿದ್ದಾಗ ಬಹಳ ಕಾತರದಿಂದ ಕೇಳುತ್ತಿದ್ದ ಅಜ್ಜ ಅಜ್ಜಿ— ಮಕ್ಕಳಿಗೆ ಏನಾದರೂ ಔಷಧಿ ಕೊಡಿ, ಎಂದು ದೈನ್ಯದಿಂದ ಬೇಡಿದರು. ಅವರಿಗೆ ಗಂಜಿಗಾಗಿ ಸ್ವಲ್ಪ ಗೋಧಿರವೆಯನ್ನೂ, ಒಂದು ಡಬ್ಬ ಹಾಲನ್ನೂ, ಒಂದು ರೂಪಾಯನ್ನೂ ಕೊಟ್ಟೆವು. ಅವರು ಔಷಧಿ ಎಂಬ ಮಾತನ್ನು ಬಿಡಲಿಲ್ಲ. ಡಾಕ್ಟರು ಇಂಗ್ಲಿಷಿನಲ್ಲಿ — ಇದಕ್ಕೇನು ಔಷಧಿ ಕೊಡಲಿಕ್ಕಾಗುತ್ತೆ? ಮದ್ದಿಗೆ ಮೀರಿಬಿಟ್ಟಿದೆ, ಈ ಅವಸ್ಥೆ — ಎಂದರು. ನಾನು ಆ ಮುದುಕರಿಗೆ "ಮಕ್ಕಳಿಗೆ ಬಿಸಿ ಬಿಸಿ ಗಂಜಿ ಕುಡಿಸಿ. ಇದೋ, ಈ ಬೇವಿನಮರದ ತೊಗಟೆಯನ್ನೂ, ಈ ಬಿಲ್ಪತ್ರೆ ಚಿಗರನ್ನೂ ಅರೆದು ಕಂಕುಳಗಡ್ಡೆಗೆ ಕಟ್ಟಿ" ಎಂದು ಹೇಳಿ, ಕೆಲವು ಧೈರ್ಯದ ಮಾತುಗಳನ್ನು ಆಡಿ, ಮರುಕದಿಂದ ನೊಂದು, ಬಂದುಬಿಟ್ಟೆ. ಬಹು ದಿವಸಗಳನಂತರ, ರೋಗದ ಸೋಂಕು ತೀರ ಮಾಯವಾದ ಮೇಲೆ, ನಾನು ಮೂಗೂರಿಗೆ ಹೋದ ಸಂದರ್ಭದಲ್ಲಿ ಮೇಲೆ ಹೇಳಿರುವ ಮುದಿದಂಪತಿಗಳು ಅವರ ಮೊಮ್ಮಕ್ಕಳಿಬ್ಬರನ್ನೂ ಕರೆದುಕೊಂಡು ನನ್ನ ಬಿಡಾರಕ್ಕೆ ಬಂದು ನನಗೆ ಅಡ್ಡಬಿದ್ದು ನಮಸ್ಕಾರ ಮಾಡಿದರು. ಪಾಪ, ಒಂದು ಚಿಪ್ಪು ಬಾಳೆಹಣ್ಣು, ತಾಂಬೂಲ, ಹೂವಮಾಲೆ, ತಂದು ಒಪ್ಪಿಸಿದರು. ಇವೇ ನಾವು ಸತ್ತವೆಂದು ಭಾವಿಸಿದ್ದ ಮಕ್ಕಳು;

"ಬುದ್ಧಿ, ತಾವು ಬದುಕಿಸಿದ ಮಕ್ಳ — ತಮ್ಮ ಮಕ್ಳ, ಬುದ್ಧಿ. ತಾವು ಹೇಳಿದ ಬೇವೂ-ಪತ್ರೆ ಅಡಿಸಿ ಕಟ್ಟಿ, ಗಂಜಿ ಕೊಟ್ಟೆವೇಳಿ. ತಮ್ಮ ಬಾಯಿಂದ ಕಡಧಾಂಗೆ ಗಡ್ಡೆವಡೆದು ಮಕ್ಳ ಬದಕಿಕೊಂಡವು" ಅಂದರು. "ಆ ಮರಗಳ ತೊಗಟೆ, ಎಲೆ, ಊರೆಲ್ಲರೂ ತರಕೊಂಡು ಹ್ವಾದರು. ಬಹು ಮಂದಿಗೆ ಒಳ್ಳೇದಾಯಿತೇಳಿ, ಮರಗಳು ಮಾತ್ರ ವಣಗಿದವೇಳಿ" ಎಂದರು. ಅಳಬೇಕೋ, ನಗಬೇಕೋ?

ಆ ಮರಗಳ ಬಾಳು ಸಾರ್ಥಕ. ದೇವರು ದೊಡ್ಡವನು. ಅವನ ಕೃಪೆಯಿಂದ ಯಾವ ತೃಣ ಅಮೃತವಾಗದು ?

೩೧

ತಿರುಮಕೂಡ್ಲು ನರಸೀಪುರ ದೇವಸ್ಥಾನಗಳ ತಾಲ್ಲೂಕೆಂದು ಹೇಳಿದರೆ ಸಲ್ಲುತ್ತದೆ. ಪ್ರಕೃತಿಯ ರಮಣೀಯತೆ ಮನಸ್ಸನ್ನು ಪ್ರಸಾದ ಗೊಳಿಸಿ ವಿಶ್ವಕರ್ತನ ಪೂಜೆಗೆ ಅನುಮಾಡಿ ಸೆಳೆಯುತ್ತದೆ. ದೊಡ್ಡ ದೇವಸ್ಥಾನಗಳು: ಮುತ್ತತ್ತಿ, ಗರ್ಗೇಶ್ವರಿ, ತಿರುಮಕೂಡ್ಲು, ನರಸೀ ಪುರ, ಮುಡುಕತೊರೆ, ಈ ಕ್ಷೇತ್ರಗಳು, ಕಾವೇರಿ ತೀರದಲ್ಲಿ ಪೂಜಾ ಮಾಲೆಯಂತೆ ಬೆಳಗಿ, ತಲಕಾಡಿನಲ್ಲಿನ ಪ್ರಸಿದ್ಧ ದೇವಸ್ಥಾನಗಳ ನವರತ್ನ ಪದಕವುಳ್ಳದ್ದಾಗಿವೆ. ಮೂಗೂರು ತ್ರಿಪುರ ಸುಂದರಮ್ಮನವರ ದೇವ ಸ್ಥಾನದ ಪ್ರಶಸ್ತಿಯನ್ನು ಆಗಲೇ ಮಾಡಿದ್ದೇನೆ. ಸೋಮನಾಥಪುರದ ದೇವಸ್ಥಾನದ ಖ್ಯಾತಿ ಲೋಕಪ್ರಸಿದ್ಧವಾಗಿದೆ. ತಾಜಮಹಲ್, ಬೇಲೂರು ಹಳೇಬೀಡುಗಳ ದೇವಸ್ಥಾನಗಳು, ಪಿರಾಮಿಡ್‌ಗಳು, ಇವುಗಳು ಹೇಗೋ ಸೋಮನಾಥಪುರವೂ ಹಾಗೇ. ಮೇಲೆ ಹೇಳಿರುವ ದೊಡ್ಡ ದೇವಸ್ಥಾನಗಳಲ್ಲದೆ, ಕಾವೇರಿ ಕಪಿಲೆಗಳ ತಟದ ಪ್ರತಿಯೊಂದು ಸುಂದರವಾದ ಮೂಲೆಯಲ್ಲೂ, ತಾಲ್ಲೂಕಿನ ವನ, ಗುಟ್ಟೆ, ಗುಹೆ ಪ್ರದೇಶಗಳಲ್ಲೂ, ಗುಡಿಯೋ, ಮಠವೋ, ದೇವಿ ತೋಪೋ, ಇದ್ದೇ ಇವೆ. ಜನಪುಂಜವಾಪ ಈ ತಾಲ್ಲೂಕಿನಲ್ಲಿ ಪ್ರತಿಯೊಂದು ಕ್ಷೇತ್ರ ದಲ್ಲೂ ಭಕ್ತರಸೇವೆ, ಪೂಜೆ, ಹರಕೆ, ದಾಸೋಗ, ಸಣ್ಣ ಜಾತ್ರೆ, ಇದ್ದೇ ಇರುತ್ತವೆ. ನಮ್ಮ ಸರಳ ಹೃದಯದ, ದಿಟ ನಂಬಿಕೆಯ ಜನರ ಭಕ್ತಿಯನ್ನು ಕಂಡರೆ ನನಗೆ ಬಹಳ ಗೌರವ ಮತ್ತು ಪ್ರೇಮ. ಒಂದೊಂದು ಸಲ ನನಗೆ ಹೀಗೆ ತೋರೋದಲ್ಲ— ನಾನು ಓದಿದ್ದು, ಸಾಧಿಸಿದ್ದು, ಅನುಭವಿಸಿದ್ದು, ಇವೆಲ್ಲ ನನ್ನನ್ನು ಈ ನೇರವಾದ, ತಿಳಿಯಾದ, ನಂಬಿಕೆಯಿಂದ ದೂರ ಮಾಡಿಲ್ಲವೆ ? ತಲೆಯ ಮತ್ತು ಜೇಬಿನ ಪ್ರಯೋಜನಕ್ಕಾಗಿ ಹೃದಯವನ್ನು ಬಡತನಕ್ಕೆ ತರುವುದು ನಿಜ ವಾದ ವಿವೇಕವೆ ? ದೇವರು ಬಲ್ಲ. ಪಾಮರ ಭಕ್ತಾದಿಗಳು ಅವರ

ಇಷ್ಟದೇವತೆಗಳ ದೇವಸ್ಥಾನಗಳಲ್ಲಿ, ಭಯ ಭಕ್ತಿಗಳಿಂದ ಗಂಟಲು ಸೆರೆಬಿಗಿದು, ಮೊರೆ ಇಡುವುದನ್ನು ನೋಡಿ ಕೇಳಿದರೆ—ಆಹಾ, ಇವರಿಗೆ ದೇವರು ಎಷ್ಟು ನಿಜ, ಎಷ್ಟು ಹತ್ತಿರ—ಎನ್ನಿಸುತ್ತಿತ್ತು. ನನಗೂ ದೂರದ ಹರಿಸಂಕೀರ್ತನ ಕೇಳಿದ ಹಾಗೆ, ಎಲ್ಲಿಯದೋ ತಂಗಾಳಿ ಸುಳಿದು ಸೋಕಿದ ಹಾಗೆ, ಹೇಳಲಿಕ್ಕೆ ಬಾರದ ಸಮಾಧಾನವಾಗುತ್ತಿತ್ತು. ಈ ಜನಗಳ ಮನೋಭಾವ, ಒಳವರ್ತನೆಗಳನ್ನು ಸ್ಪಷ್ಟಪಡಿಸಲು ನಾನು ನೋಡಿದ ಒಂದು ದೃಶ್ಯವನ್ನು ವರ್ಣಿಸುತ್ತೇನೆ

ಮುಡುಕತೊರೆ ಶ್ರೀ ಮಲ್ಲಿಕಾರ್ಜುನ ಸ್ವಾಮಿಯ ಗುಡಿ ಕಾವೇರಿ ತೀರದ ಒಂದು ಗುಟ್ಟದ ಮೇಲಿದೆ. ಸ್ವಾಮಿಯವರ ಸಂಗಡ ಭ್ರಮರಾಂಬಿಕಾ ಅಮ್ಮನವರಿದ್ದಾರೆ. ಅಮ್ಮನವರು ಬಹಳ ಹೆಂಗರಳಿನ ತಾಯಿ, ಆದರೆ ಚಂಡಿ. ಅಲ್ಲಿ ಭಕ್ತಾದಿಗಳು ಬಹಳ ಪರಿಶುದ್ಧರಾಗಿ ನೇಮದಿಂದಿರಬೇಕು. ತಪ್ಪಿದರೆ ಕೂಡಲೆ ಶಿಕ್ಷೆಯಾಗುತ್ತೆ. ಇದು ಜನಗಳ ದೃಢವಾದ ನಂಬಿಕೆ. (ಇದರಿಂದಲೇ ಅಬ್ಬೆಡು ಬಾಯ್ ಪಾದ್ರಿಯಿಂದ ಮೂಡುವ ನಾತವು ಅವನ ಪುನಗೇ ಎಂದು ನನಗೆ ಖಾತರಿ).

ಈ ದೇವಸ್ಥಾನದಲ್ಲಿ ಒಬ್ಬ ಹಳ್ಳಿ ತಾಯಿ—ಅವಳು ಯಾವ ಕೋಮಿನವಳೋ ಕಾಣೆ—ಅಮ್ಮನವರ ಪಾದದ ಹತ್ತಿರ ತನ್ನ ಖಾಯಿಲೆ ಕೂಸನ್ನು ಇರಿಸಿ ತಾನು ಅಡ್ಡ ಬಿದ್ದು, ಗದ್ಗದ ಸ್ವರದಿಂದ ತನ್ನ ಕರುಳ ಸಂಕಟವನ್ನು ಹೀಗೆ ಉಸುರಿದಳು—ಬೊಮ್ಮಮ್ಮ ನಮ್ಮಮ್ಮ ನಿನಗೆ ಕಣ್ಣಿದೆ, ಕಿವಿ ಇದೆ, ನನ್ನ್ಯಾಕೇ ನೋಡವಲ್ಲೇ? ನನ್ನ ಕಳ್ಳು ಬೆಂದೋದ್ದು ಕಾಣ್ಯಾ, ನನ್ನವ್ವ? ನಾನೂ ನನ್ನ ಗಂಡಾನೂ ಹಗಲೂ ರಾತ್ರೆ ಮಣ್ಣುಂಡು ಕಣ್ಣೀರಾಗೆ ಕೈತೊಳೆಯೋದು ಕಾಣ್ಯಾ, ನನ್ನ ತಾಯಿ? ನಮ್ಮ ಗೋಳು ಕೇಣೋಕಿಲ್ಲವ? ನಾಲ್ಕು ಮಕ್ಕಳನ್ನ ಮಣ್ಣಿಗಿಟ್ಟೆವಲ್ಲೇ, ನಮ್ಮಮ್ಮ! ಈ ಬತ್ತೀನ ಬದುಕಿಸಿ ಕೊಡೇ ನನ್ನ ತಾಯಿ!”

ಅವಳಿಗೆ ಅಂಬಿಕೆಯವರ ಅಭಯಪ್ರಧಾನ ಬಂದಿರಬೇಕೆಂಬುದು ಕಂಡಿತು; ಅಶೆಭರಿತ ಸಂತೋಷ ತೋರಿಸುವ ಮುಖದಿಂದ ಗುಡಿಯಿಂದೀಚೆಗೆ ಬಂದಳು.

ಈ ಜನಗಳ ದೃಢನಂಬಿಕೆಯನ್ನು ತೋರಿಸುವ ಇನ್ನೊಂದು ದೃಶ್ಯವು ನನ್ನ ನೆನಪಿಗೆ ಬರುತ್ತದೆ. ತಲಕಾಡಿನಲ್ಲಿ ಒಬ್ಬ ಅಮೆರಿಕನ್ ಪಾದ್ರಿ (ಅವರ ಹೆಸರು ರೆವೆರೆಂಡ್ ಪೇಷೆಂಟ್ ಅಂತ ಜ್ಞಾಪಕ) ಇದ್ದರು. ಬೆಳಕರಿಯದ ಜನಗಳಿಗೆ ಬೆಳಕನ್ನು ತೋರಿಸಲಿಕ್ಕೆ, ಮುಳು ಗುತ್ತಿರುವ ಜನಗಳನ್ನು ಮೇಲೆತ್ತಲಿಕ್ಕೆ, ಮುಡುಕತೊರೆ ಜಾತ್ರೆ ಒಳ್ಳೆ ಸಮಯವೆಂದು ಇವರಿಗೆ ಪ್ರೇರಣೆಯಾಯಿತು. ಆ ಹೊತ್ತಿನಲ್ಲಲ್ಲವೇ, ಅಜ್ಞಾನಿಗಳು ದೇವರೆಂದು ತಿಳಿದಿರುವ ಪಿಶಾಚಗಳು ಅವರ ಬುದ್ಧಿಗೆ ಇನ್ನಿಷ್ಟು ಕತ್ತಲು ಕವಿಸಿ, ಸಣ್ಣಕಣ್ಣಿನ ಬಲೆ ಬೀಸಿ ಜನಗಳ ಆತ್ಮವನ್ನು ನಾಶಮಾಡುವುದು? ಸರಿ, ಆತ್ಮಗಳನ್ನು ರಕ್ಷಿಸಬೇಕೆಂಬ ಸದುದ್ದೇಶ ದಿಂದ ಪಾದ್ರಿಗಳು ಮುಡುಕತೊರೆಗೆ ಬಿಜಮಾಡಿದರು.

ನಾನು ಜಾತ್ರೆಗಾಗಿ—ಜಾತ್ರೆಯಲ್ಲಿ ದನಗಳ ಪರಿಶೆ, ವ್ಯಾಪಾರ, ಮುಜರಾಯಿ ಇಲಾಖೆಗೆ ಸಂಬಂಧಪಟ್ಟ ಉದ್ಯಮಗಳು, ಉಂಟು—ಸರಿ, ನಾನು ಜಾತ್ರೆಗಾಗಿ ಮುಡುಕತೊರೆಯಲ್ಲೇ ಮೊಕ್ಕಾಂ ಮಾಡುತ್ತಿದ್ದೆ. ಏಕಾ ಏಕೀ ಪಾದ್ರಿಸಾಹೇಬರ ಶಿಷ್ಯನೋ, ಬಟ್ಲರೋ, ಒಬ್ಬ ಓಡಿ ಬಂದು, ಜನಗಳು ದೊಂಬಿ ಎದ್ದು ತನ್ನ ಯಜಮಾನನ್ನು ಗೇರಾಯಿಸಿ ಕೊಂಡು, ಹೊಡೆಯಲು ನೋಡುತ್ತಿದ್ದಾರೆಂದು ಘಾಬರಿ ಘಾಬರಿಯಾಗಿ ಹೇಳಿದ. "ಜನಗಳಿಕೆ ಬೆಳಕು ತೋರಿಸುವ ಸೂರ್ಯನಿಗೆ ರಾಹು" ಎಂದು. ನನಗೆ ಸ್ವಲ್ಪ ನಗು ಬಂದರೂ, ನಮ್ಮ ತಿಳುವಳಿಕೆ ಇಲ್ಲದ ಜನರಿಂದ ಬಿಳಿಯರಿಗೆ ಅಪಾಯವಾದರೆ ಎಲ್ಲ ರೀತಿಯಲ್ಲೂ ಎಲ್ಲರಿಗೂ ಕೆಟ್ಟದಾಗಬಹುದೆಂಬ ಭೀತಿಯಿಂದ ಕೂಡಲೆ ಪಾದ್ರಿಗಳ ಪ್ರವಚನ ನಡೆಯುತ್ತಿದ್ದ ಜಾಗಕ್ಕೆ ಹೋದೆ. ಅಲ್ಲಿ ಸಾಹೇಬರು ಒಂದು ಪಾಳು ಮಂಟಪದ ದಿಬ್ಬದಮೇಲೆ ನಿಂತು, ಕೈಗಳನ್ನು ಬೆದರಿದ ಕೋಳಿಯ ಪುಕ್ಕಗಳಂತೆ ಅಭಿನಯಿಸುತ್ತಾ, ಏನನ್ನೋ ಹೇಳುತ್ತಿದ್ದರು. ಮುಖ ಕೆಂಪೇರಿ, ಬೆವರುತ್ತಿತ್ತು. ಆದರೆ ಅದರಲ್ಲಿ ಭಯವೇನೂ ಕಾಣುತ್ತಿರ ಲಿಲ್ಲ. ಆದರೂ, ನನ್ನನ್ನು ಕಂಡಕೂಡಲೆ ಸ್ವಲ್ಪ ಪ್ರಸನ್ನವಾಯಿತು. ಜನಗಳೂ ಸುಮ್ಮನಾದರು. ನಾನು ಪಾದ್ರಿಯವರಿದ್ದ ದಿಬ್ಬಕ್ಕೆ ಹತ್ತಿ ಅವರ ಮಗ್ಗುಲಿನಲ್ಲಿ ನಿಂತು, ಪಾದ್ರಿಗಳಿಗೆ ಪೆಟ್ಟು ಗಿಟ್ಟು ಬಿದ್ದಿಲ್ಲವೆಂದು

ತಿಳಿದಮೇಲೆ, ಜನಗಳಿಗೆ— ಇದೇನು ಗಲಾಟೆ? ಎಂದು ಕೇಳಿದೆ. ಅವರಲ್ಲಿನ ಒಬ್ಬ ಮುದುಕ—ಅವನ ಮುಖ, ಕಣ್ಣು, ಎಲ್ಲ ವಿಭೂತಿ; ಕತ್ತಿನಲ್ಲಿ ರುದ್ರಾಕ್ಷಿ ಸರ, ಕಿವಿಗೆ ದವನ; ಅವನು ದ್ಯಾವರಗುಡ್ಡನಿದ್ದಿರ ಬೇಕು—ಆ ಮುದುಕ— "ನೋಡಿ ಬುದ್ದಿ ಈ ಪರದೇಶಿಕೊಬ್ಬಾ! ಏನೋ ಏಳೋಕೆ ಬಂದವನೆ; ಇವನ ತಾವ ಮದ್ದೋ, ತಾಯಿ ತೀನೋ ಏನೋ ಇರ ಬೈದು, ಕೇಳೋವಾ, ಅಂತ ಪ್ಯಾವರೆ— "ಯಲ್ಲೈ ಪಾಪಿಗಳಿರ"—ಅಂತ ಸುರೂ ಮಡೋದೆ? ನಾವೇನು ಬುದ್ದಿ ಅಂತ ಪಾಪ ಮಾಡಿರೋದು? ನಾವು ಕಳ್ಳರೆ? ಕಾಕರೆ? ಮನೆಮುರಿ ಯೋರೆ? ನಾವೇನು ಬುದ್ದಿ ಇವನ ಅಪ್ಪನ ವಡಿವೆ ಕೊಳ್ಳೆಮಾಡಿದ್ದು— ಹೇಳಿ ಬುದ್ದಿ?"

ಬಾಕಿಯವರೆಲ್ಲ ತಲೆ ತೂಗುತ್ತ—ಹೌದೇಳಿ, ಉಂಟೇಳಿ—ಅಂತ ಅನುಮೋದಿಸಿದರು.

ನಾನು ಪಾದ್ರಿಯನ್ನು ಕೇಳಿದೆ: ಅವರು ಇಂಗ್ಲಿಷಿನಲ್ಲಿ—

ಆಡಮ್‌ನ ಕೃತ್ಯದಿಂದ ಅವನ ಸಂತಾನವಾದ ಮನುಷ್ಯ ಜಾತಿಯೇ ಪಾಪಿಗಳು, ಇವರು, ಮನುಷ್ಯರಲ್ಲವೋ? ಏಸುವನ್ನು ನಂಬದ ಹೊರ್ತು ಇವರ ಪಾಪ ತೊಳೆದು ಹೋಗಿ ಇವರು ಶುದ್ಧರು ಹ್ಯಾಗಾಗು ತ್ತಾರೆ? ಇದನ್ನೇ ಅವರಿಗೆ ಹೇಳಲಿಕ್ಕೆ ಪ್ರಾರಂಭಮಾಡಿದೆ. ಅಷ್ಟ ರಲ್ಲೇ ಗಲಾಟೆಯಾಯಿತು" ಎಂದರು.

ನಾನು—

ನೀವು ಬಹಳ ಧೈರ್ಯಶಾಲಿಗಳು, ನಿಮ್ಮ ಅಂತರಾತ್ಮ ಈಗ ತೃಪ್ತಿ ಯಾಗಿರಬೇಕು. ನೀವು ಅದೃಷ್ಟವಂತರೂ ಹೌದು. ಇಲ್ಲವಾದರೆ ಈ ಜನಗಳಿಂದ ನಿಮಗೆ ಅಪಾಯವಾಗುತ್ತಿತ್ತು. ಅವರಿಗೆ ನಿಮ್ಮ ವೇದ, ನಿಮ್ಮ ಮತ ಗೊತ್ತಿಲ್ಲ. ಅವರ ಹಿರಿಯರ ಪೈಕಿ ಆಡಂ ಎಂಬುವರಿದ್ದಾ ರೆಂಬುದನ್ನೂ ಅರಿತವರಲ್ಲ. ಅವರು ಇಲ್ಲಿಗೆ ಭಕ್ತಿಯಿಂದ ಬಂದು, ಹೊಳೆಯಲ್ಲಿ ಸ್ನಾನಮಾಡಿ, ದೇವರ ಪೂಜೆ ಮಾಡಿಸಿ, ಪ್ರಸಾದವನ್ನು ಪಡೆದು, ತಾವು ಪುನೀತರಾಗಿರುವೆವೆಂದು ತಿಳಿದುಕೊಂಡಿದ್ದಾರೆ. ಅಂಥ ವರಿಗೆ ನೀವು ಪಾಪಿಗಳೆಂದು ಕರೆದರೆ ಕೋಪ ಬರುವುದಿಲ್ಲವೆ? ಪಾಪಿ

ಎಂಬೋದು ಅವರಲ್ಲಿ ಬೈಮಾತು. ನಿಮಗೆ ನನ್ನ ವಿನಯವಾದ ಸಲಹೆ, ನೀವು ಇಂಥ ಜನಗಳ ಸಮೂಹದಲ್ಲಿ, ಈ ಸನ್ನಿವೇಶದಲ್ಲಿ, ವೇದಾಂತ ಬೋಧೆಯನ್ನು ಸದ್ಯಕ್ಕೆ ಸಾಕುಮಾಡಿ. ಬೇರೆ ಕಾಲ ಬೇರೆ ಅವಕಾಶ ವನ್ನು ಕಾಯಿರಿ— ಎಂದೆ. ಅವರು ಹಾಗೆ ಮಾಡಿದರು.

೩೨

ತಿರುಮಕೂಡ್ಲು ನರಸಿಪುರ ತಾಲ್ಲೂಕಿನ ಮ್ಯಾಜಿಸ್ಟ್ರೇಟ್ ಕೋರ್ಟ ನಲ್ಲಿ ಯಡತೊರೆಯಲ್ಲಿನಗಿಂತ ಕೇಸುಗಳ ಸಂಖ್ಯೆ ಹೆಚ್ಚಾಗಿದ್ದರೂ, ಅಲ್ಲಿನವುಗಳಷ್ಟು ತೊಡಕಲ್ಲ. ಆದರೂ ಬಹುಶಃ ಎಲ್ಲ ಕೇಸುಗಳಲ್ಲೂ ಮೈಸೂರಿಂದ ಲಾಯರುಗಳು ಬರುತ್ತಿದ್ದುದರಿಂದ ನನ್ನ ಕಾಲದ ಹೆಚ್ಚು ಭಾಗ ಕ್ರಿಮಿನಲ್ ವಿಚಾರಣೆಗಳಲ್ಲೇ ವ್ಯಯವಾಗುತ್ತಿತ್ತು. ಕೋರ್ಟು ಕೆಲಸ ಒಂದೊಂದು ವೇಳೆ ವಿನೋದವಾಗಿರುತ್ತಿತ್ತು. ಒಂದು ಕೇಸಿನಲ್ಲಿ ಒಬ್ಬನು ಇನ್ನೊಬ್ಬ ಿನ್ನನ್ನು ಮಾರಾಮಾರಿಗೆ ಕೆದಕುವಂತೆ ಅವಮಾನ ವಾಗಿ ಬೈದನೆಂದು ಫಿರ್ಯಾದು ದಾಖಲ್ಮಾಡಿದ. ಪಾರ್ಟಿಗಳು ಉಭಯ ತ್ರರೂ ಲಿಂಗಾಯಿತರು. ಬೈ–ಕೋರ್ಟಿನಲ್ಲಿ ವಿವರಿಸಿದಂತೆ— ಅವ ಮಾನಕರವಾದ್ದೇ ಹೌದು; ಅಂಥ ಮಾತುಗಳ ವಿನಿಮಯ ವಾಡಿಕೆ ಇಲ್ಲದ ಸನ್ನಿವೇಶದಲ್ಲಿ ಹೊಡೆದಾಟಕ್ಕೆ ರೇಗಿಸತಕ್ಕದೇ ಸರಿ. ಅದರ ಅರ್ಥ ಅಪರಾಧಿ ತಾನು ಫಿರ್ಯಾದಿಯ ಮನೆ ಅನೇಕ ತಲಾಂತರದ ಹೆಂಗಸರುಗಳನ್ನು ದುಷ್ಟ ರೀತಿಯಲ್ಲಿ ಬಲ್ಲೆನೆಂದು. ಮಾರಾಮಾರಿ ಯಾಕಾಗಲಿಲ್ಲ, ಬಲ್ಲಿರ? ಸಾಕ್ಷಿ ಮಸ್ತಾನ್ ಸಾಬರು ಮಲ್ಲಯುದ್ಧಕ್ಕೆ ಸಿದ್ಧವಾಗಿದ್ದ ಇವರಿಬ್ಬರ ನಡುವೆ ನುಗ್ಗಿ, ಇಬ್ಬರಿಗೂ ವಾಡಿಕೆಯ ಉರ್ದು ಬೈಗಳನ್ನು ಬೈದು — ಈ ಬೈಗಳಲ್ಲಿ ತಾಯಿಗೆ, ಸಹೋದರಿಯ ರಿಗೆ, ಭಾರ್ಯೆಗೆ ಇವರುಗಳಿಗೆಲ್ಲ ಪಾತ್ರ ಉಂಟು—ಪಾರ್ಟಿಗಳನ್ನು ತಡೆದ ರಂತೆ. ಅದನ್ನು ಅವರೇ ಫಿರ್ಯಾದಿ ಕಡೆ ಸಾಕ್ಷಿಯಾಗಿ ಸ್ತೋತ್ರಾರ್ಹ ಕೆಲಸ ಮಾಡಿದವರ ಸಹಜ ಆತ್ಮತುಷ್ಟಿಯಿಂದ ವರ್ಣಿಸಿದರು.

"ನಿಜವೇನಯ್ಯ ಚನ್ನಬಸದೇವರು?" ಎಂದು ಕೇಳಿದ್ದಕ್ಕೆ, ಫಿರ್ಯಾದಿ "ಉಂಟೇಳಿ" ಅಂದ.

ನಾನು ನಕ್ಕು,

"ಏನು ಬುದ್ಧಿವಂತರು, ಗೌರವಸ್ಥರಯ್ಯ, ನೀವು! ನಿಮ್ಮ ಜಾತಸ್ಥ ಬೈದದ್ದಕ್ಕೆ ಬೆಂಕಿ ಬೆಂಕಿಯಾಗಿ ಅವನನ್ನ ಹೊಡೆಯೋಕೆ ಮೇಲೆ ಬಿದ್ದಿರಿ. ಸಾಬರು ನಿಮ್ಮ ಮನೆ ಹೆಂಗಸರನ್ನೆಲ್ಲಾ ವಹಿಸಿ ಕೊಂಡರೆ ನಿಮ್ಮ ಹೊಟ್ಟೆ ತಣ್ಣಗಾಯಿತೋ? ಏನು ನಾಚಿಕೆ ಕೇಡು! ಹೋಗಿ ರಾಜಿ ಮಾಡಿಕೊಳ್ಳಿ" ಎಂದೆ.

ಸಾಬರು—ಹೋ, ಖಾವಿಂದ್! ನಾನೂ ಅವರಿಗೆ ಅದೇ ಮಾತು ಹೇಳಿದೆ." "ಅರ್ರೆ—("—" ಅಂದರೆ ಒಂದು ಉರ್ದು ಬೈ) ಯಾಕೋ ಜಾತಿ ಭಾಯಿಗಳಾಗಿ ಹೀಗೆ ಜಗಡ ಮಾಡ್ತೀರಾ? ರಾಜೀ ಆಗ್ರೋ" ಅಂತ ಎಷ್ಟು ಹೇಳಿದರೂ ಕೇಳದೆ ಕೋರ್ಟಿಗೆ ಬಂದಿದ್ದಾರೆ"— ಎಂದರು.

ಹಾಜರಿಯಲ್ಲಿದ್ದ ಆ ಗ್ರಾಮದ ಪಟೇಲನನ್ನು ಕರೆಸಿ, ಪಾರ್ಟಿಗಳಿಗೆ ರಾಜಿ ಮಾಡಿಸಿ ಬುದ್ಧಿ ಹೇಳಿ ಕಳುಹಿಸಿಕೊಟ್ಟೆ

ಇನ್ನೊಂದು ಕನ್ನಾ ಕಳವಿನ ಕೇಸು. ಅದರಲ್ಲಿ ಖೈದಿಗಳು ಒಂದು ಮನೆಯಲ್ಲಿ ಕನ್ನ ಕೊರೆದು ನುಗ್ಗಿ, ಕೆಲವು ಮಾಲುಗಳನ್ನು ಕದ್ದು ಒಯ್ಯುತ್ತಿರುವಾಗ ನಾಯಿ ಒಬ್ಬನ ಕಾಲನ್ನು ಕಡಿದು ಘಾಯ ಮಾಡಿತು; ಮತ್ತೊಬ್ಬ — ಅವನು ಧಾಂಡಗ. ಇಕ್ಕಟ್ಟಾದ ಕನ್ನದಲ್ಲಿ ನುಸಿಯುವಾಗ— ಭುಜಗಳ ತಲೆಯನ್ನೂ ಮಂಡಿಗಳನ್ನೂ ತರಚಿ ಕ್ಕೊಂಡ; ಇವರ ಘಾಯಗಳ ಗುಮಾನಿ ಮೇಲೆ ಇವರ ಗುಂಪನ್ನೇ ಹಿಡಿಯಲಾಯಿತು. ನಂತರ ಇವರುಗಳು ಪೋಲೀಸಿನವರನ್ನೂ ಪಂಚಾಯಿತರನ್ನೂ, ಕಳವು ಮಾಲನ್ನು ಬಚ್ಚಿಟ್ಟಿದ್ದ ಮತ್ಯಾರಿಗೂ ಗೊತ್ತಿಲ್ಲದ ಜಾಗಕ್ಕೆ ಕರೆದುಕೊಂಡು ಹೋಗಿ, ಮಾಲುಗಳನ್ನು ಈಚೆಗೆ ತೆಗೆದು ಪೋಲೀಸಿನವರ ವಶಕ್ಕೆ ಕೊಟ್ಟಿದ್ದಕ್ಕೆ ಮಹಜರಾಯಿತು. ಈ ಮಾಲುಗಳು ಕಳವಾದ ಮನೆಯ ಮಾಲೀಕನದೆಂದು ಗುರುತಿಸಲಾಯಿತು, ಇತರರ ಕೈಫಿಯತ್ತಿನಿಂದಲೂ ಗೊತ್ತಾಯಿತು. ಸಾಮಾನ್ಯವಾಗಿ ಇಂಥ ಮೊಕದ್ದಮೆಗಳ ರೀತಿ ಎಲ್ಲ ಹೀಗೇ. ಈ ಪ್ರತಿಯೊಂದು ಅಂಶಕ್ಕೂ ನಿರ್ದುಷ್ಟವಾದ ರುಜುವಾತು ಬಾರದಿದ್ದರೆ ಮೊಕದ್ದಮೆ ನಿಲ್ಲುವುದಿಲ್ಲ.

ಈ ಮೊಕದ್ದಮೆಯು ಖೈದಿಗಳಿಗೆ ಅನುಕೂಲಸ್ತರ ಆಸರೆ ಇತ್ತೆಂದು ಕಾಣುತ್ತದೆ. ಅವರು ತಮ್ಮ ಬಚಾವಿಗಾಗಿ ಮೈಸೂರಿನಿಂದ ಕ್ರಿಮಿನಲ್ ಲಾಯರ್ ಎಂದು ಪ್ರಸಿದ್ಧರಾಗಿದ್ದ ದಿ। ಎ. ರಾಮಣ್ಣನವರನ್ನು ಕರೆದು ಕೊಂಡು ಬಂದಿದ್ದರು. ರಾಮಣ್ಣನವರ ಪಾಟೀಸವಾಲು ಸರಣಿಯಲ್ಲಿ, ಅವರ ಕಕ್ಷಿಗಾರರ ಬಚಾವು ಈ ಕೇಸು ಕೇವಲ ಪೋಲೀಸಿನವರ ಬನಾವಣೆ ಎಂದು. "ಪೋಲೀಸಿನವರು ಕೆಲವು ಕಸಬುದಾರ ಕಳ್ಳರನ್ನು ಸಾಕಿಕೊಂಡಿದ್ದಾರೆ. ಇವರು ಬೇಟೆಯಾಡಿ, ಪೋಲೀಸಿನವರ ಅಲ್ಪ ಸಂಬಳದ ತಾಪತ್ರಯವನ್ನು ಹೋಗಲಾಡಿಸುತ್ತಾರೆ. ಆಗಾಗ ಪೋಲೀಸಿನವರು ತಾವು ಕಳ್ಳರ ಷಾಮೀಲೆಂಬುದನ್ನು ಮರೆ ಮಾಡಲಿಕ್ಕಾಗಿ ತಮ್ಮ ಸಾಕು ಕಳ್ಳರು ತಂದ ಮಾಲುಗಳನ್ನು ತಮಗೆ ಬೇಡದವರಾದ, ಅಥವ ತಮ್ಮ ಒಳಗುಟ್ಟನ್ನು ಬೈಲಿಗೆ ತರಬಹುದಾದವರಮೇಲೆ ಹಾಕಿ, ಅವರ ಮೇಲೆ ಮೊಕದ್ದಮೆ ಕಟ್ಟಿ, ಶಹಭಾಸುಗಿರಿ, ಪ್ರಮೋಷನ್, ಮೊದಲುಗಳನ್ನು ಪಡೆಯುತ್ತಾರೆ. ಈ ಮೊಕದ್ದಮೆ ಅಂಥಾದ್ದು. ಇನ್‌ಸ್ಪೆಕ್ಟರು ಮೊದಲ್ಗೊಂಡು ಪಟೇಲನ ವರೆಗೆ ಎಲ್ಲರೂ ತಮ್ಮ ಸತ್ಯವಂತರಾದ, ನಿರಪರಾಧಿಗಳಾದ ಕಕ್ಷಿಗಾರರನ್ನು ನರಬಲಿ ಕೊಡಲು ಉದ್ಯುಕ್ತರಾಗಿ ದ್ದಾರೆಂದು ರಾಮಣ್ಣನವರ ಸಿದ್ಧಾಂತ. ಇದನ್ನು ಅವರು ಅವರ ಪದ್ಧತಿಯಂತೆ ಬಹು ಘಟ್ಟಿಯಾಗಿ, ಬಹು ಮಾತುಗಳನ್ನು ಎರಚಿ ವಿಶದಪಡಿಸಿದರು. ಜಡಿ ಮಳೆ ಹಿಡಿದ ಹಾಗೆ ವಾದ ಮಾಡಿದರು. ಕೊನೆಗೆ ಅವರ ಮಾತು ಮುಗಿಯುವಾಗ ಹಗಲೂ ಮುಗಿದಿತ್ತು. ಅವೊತ್ತೇ ಅವರು ಮೈಸೂರಿಗೆ ವಾಪಸು ಹೋಗುವುದು ಅವಶ್ಯಕವಾಗಿತ್ತಂತೆ. ಅವರ ಮಾತಿನ ಆವೇಶವನ್ನು ನೋಡಿ ಅವೊತ್ತೇ ಅವರಿಗೆ ಶುಲ್ಕವೂ ಸಂದಿತ್ತೆಂದು ನನ್ನ ಊಹೆ. ಅದು ಸ್ವಲ್ಪ ಭಾರಿ ಮೊತ್ತದ್ದು ಎಂತಲೂ ನಾನು ಊಹಿಸಿದ್ದೆ.

ಸರಿ, ಕೇಸು ಮುಗಿದ ಮೇಲೆ ರಾಮಣ್ಣನವರು ನನಗೆ —"ಸ್ವಾಮಿ ನನ್ನ ಖುದ್ದು ಬೇಡಿಕೆಯೊಂದು ಇದೆ.—ನಾನು ಮೈಸೂರಿಗೆ ರಾತ್ರಿ ತಿರಗು ಎತ್ತಿನ ಗಾಡಿಯಲ್ಲಿ ಪ್ರಯಾಣ ಮಾಡುತ್ತೇನೆ. ಪ್ರತಿ ರಾತ್ರಿಯೂ ಮೈಸೂರು ರಸ್ತೆಯ ರಕ್ಷಣೆಗಾಗಿ ಇಲ್ಲಿಂದ ಪೋಲೀಸು ಬೀಟು ಅಗಸರ

ಹಳ್ಳಿ ಅಥವ ಮೇಗಳಪುರದ ವರೆಗೆ ಹೋಗುತ್ತಿಯಲ್ಲ. ಬೀಟು ಪೋಲೀಸಿನವನು ನನ್ನ ಗಾಡಿ ಸಂಗಡ ಬರುವ ಹಾಗೆ ಅಪ್ಪಣೆ ಮಾಡಿ— ಅಂದರು.

ಪೋಲೀಸ್ ಇನ್‌ಸ್ಪೆಕ್ಟರು—ಲಾಯರ ಪಾಟೀಸವಾಲಿನಿಂದ ಬಹಳ ಕೋಪಗೊಂಡಿದ್ದವರು—ಥಟಕ್ಕಂತ ಎದ್ದು,

"ಸ್ವಾಮಿ, ಪೋಲೀಸಿನವರು ಮಹಾಕಳ್ಳರು, ಕಳ್ಳರ ಪೋಷಕರೆಂದು ಅವರೇ ಹೇಳಿದ್ದಾರೆ. ಕಳ್ಳರಾದ ಬೀಟಿನವರಿಂದ ಅವರನ್ನು ರಕ್ಷಿಸಲಿಕ್ಕೆ ಅವರ ಸತ್ವವಂತರಾದ ಕಕ್ಷಿಗಾರರನ್ನೇ ಕಳಿಸಿ. ಅವರನ್ನು ಲಾಯರ ಜಾಮೀನಿನ ಮೇಲೆ ಖುಲಾಸೆ ಮಾಡಲು ನನ್ನ ತಕರಾರಿಲ್ಲ" ಎಂದರು.

ನಾನು ಪಕ್ಕೆ ಬಿರಿಯ ನಕ್ಕು—

"ಏನು ಮಿಸ್ಟರ್ ರಾಮಣ್ಣನವರೆ? ಒಳ್ಳೇ sporting offer (ಮಸಲತ್ತುದಾರೀ ಸವಾಲು) ಅಲ್ಲವೇ? ನೀವು ಖೈದಿಗಳಿಗೆ ಜಾಮೀನಾಗಿ ಬಾಂಡಿಗೆ ರುಜು ಹಾಕಿದರೆ ಅವರನ್ನು ನಿಮ್ಮ ರಕ್ಷಣೆಗಾಗಿ ಖುಲಾಸೆ ಮಾಡುವುದಕ್ಕೆ ಪೋಲೀಸಿನವರು ಒಪ್ಪುತ್ತಾರೆ" ಎಂದೆ.

ರಾಮಣ್ಣನವರೂ ನಮ್ಮ ಸಂಗಡಲೇ ನಕ್ಕು "ಇದು ಕೋರ್ಟು, ಅದು ಹೈ ರೋಡು. ಇದು ವಾದ ಮಾಡುವ ಜಾಗ, ಅದು ತಲೆ ಉಳಿಸಿ ಕೊಳ್ಳಬೇಕಾದ ಜಾಗ" ಎಂದರು.

ಈ ಮಾತುಗಳಿಂದ ಪ್ರಯಾಣಿಕರನ್ನು ರಕ್ಷಿಸುವ ಕರ್ತವ್ಯಕ್ಕೇನೂ ಲೋಪ ಬರಲಿಲ್ಲ.

೩೩

ಮೈಸೂರು ನರಸಿಪುರದ ರಸ್ತೆಯಲ್ಲಿ ತಿರುಗಾಟ ಸಾಮಾನ್ಯವಾಗಿ ರಾತ್ರಿ ಎತ್ತಿನ ಗಾಡಿಗಳ ಮೂಲಕ ನಡೆಯುತ್ತಿತ್ತು. ನಾನು ಹೇಳುತ್ತಿರುವುದು ಮೋಟಾರು ಬಸ್ಸುಗಳ ಅವತಾರಕ್ಕೆ ಸುಮಾರು ಇಪ್ಪತ್ತು ವರ್ಷಗಳ ಹಿಂದಿನ ಮಾತು. ಮೈಸೂರು ರಸ್ತೆಗೆ ದರೋಡೆಕಾರರ ರಂಗ

ಭೂಮಿ ಎಂಬ ಕೆಟ್ಟ ಹೆಸರಿತ್ತು; ಅದರಲ್ಲೂ ವರುಣದ ದಿಣ್ಣೆಯ ಕೆಳಗಿನ ತಗ್ಗು ಕೋವಿನಲ್ಲಿ ಅನೇಕ ಲೂಟಿಗಳಾಗಿದ್ದವೆಂಬ ಪ್ರತೀತಿ. ಈ ಚರಿತ್ರೆಯ ದೆಶೆಯಿಂದ ಸಾಮಾನ್ಯವಾಗಿ ರಾತ್ರೆ ಪಯಣದ ಗಾಡಿಗಳು ಒಂದೊಂದೇ ತಿರುಗಾಡದೆ ಇಪ್ಪತ್ತು ಮೂವತ್ತು ಗುಂಪು ಕಟ್ಟಿಕೊಂಡು ನಡೆಯುತ್ತಿದ್ದವು. ಅದರಲ್ಲೂ ಲಗ್ನಗಳ ಕಾಲ, ಸುಗ್ಗಿ ಕಾಲಗಳಲ್ಲಂತೂ ಪ್ರಯಾಣಿಕರು ಬಹು ಭಯದಿಂದ ಈ ದಾರಿ ನಡೆಯುತ್ತಿದ್ದರು. ನರಸಿಪುರದಿಂದ ಹೊಳೆದಾಟಿ ಗರ್ಗೇಶ್ವರಿಯಲ್ಲಿ ತಿರುಗು ಗಾಡಿಗಳ ಗುಂಪಿಗೆ ಬೆರೆತು, ಆ ಗುಂಪು ಸಾಕಾದಷ್ಟು ಪ್ರಮಾಣಕ್ಕೆ ಬಂತೆಂದು ಧೈರ್ಯವಾದಮೇಲೆ ಅಲ್ಲಿಂದ ಗಾಡಿಗಳ ಸಾಲು ಇಪ್ಪತ್ತು ಮೈಲುಗಳ ಮೈಸೂರು ದಾರಿ ಹಿಡಿಯುತ್ತಿದ್ದವು. ಸಾಮಾನ್ಯವಾಗಿ ಹೊರಡುವ ಹೊತ್ತು ಹತ್ತು ಘಂಟೆ ರಾತ್ರೆ; ಮೈಸೂರು ಸುಂಕದ ಉಕ್ಕಡಕ್ಕೆ ಬೆಳಕು ಹರಿಯುವ ವೇಳೆಗೆ ತಲಪುವುದು. ನಾನು ಆ ತಾಲ್ಲೂಕಿಗೆ ಹೋದಮೇಲೆ ವರುಣದ ದಿಣ್ಣೆಯಲ್ಲಿ ಒಂದು ಕಳ್ಳತನವಾಯಿತೆಂದು ಕೇಳಿದೆ. ಆಮೇಲೆ ನನ್ನ ತಾಲ್ಲೂಕಿನ ಸರಹದ್ದಿನಲ್ಲೇ ಗಾಡಿಗಳ ಸಾಲಿನ ಮೇಲೆ ಕಲ್ಲುಗಳ ಸುರಮಳೆಯಾಯಿತೆಂದು ರಿಪೋರ್ಟು ಬಂತು. ಇದು ಸುಗ್ಗಿಕಾಲಕ್ಕೆ, ಮದುವೆಗಳ ಕಾಲಕ್ಕೆ, ಇನ್ನೂ ಕೆಲವು ದಿನಗಳಿವೆ ಎಂಬುವಾಗ ಬಂದ ಸುದ್ದಿ. ನನಗೆ ತೋರಿತು—ಗಾಡಿ ಹೊಡೆಯುವವರ ಷಾಮೀಲು ಇಲ್ಲದೆ ಈ ಕೃತ್ಯಗಳು ನಡೆಯಲಾರವು. ಮೊದಲು ಕಳ್ಳತನಗಳು ನಡೆಯುವ ಸಂಭವವಿದೆ ಎಂದು ಪುಕಾರು ಹುಟ್ಟಿಸಿ, ನಂತರ ವಸ್ತ್ರವಡವೆ ತರುವ ಮದುವೆ ಗುಂಪುಗಳನ್ನೂ, ಭತ್ತಮಾರಿ ಮೈಸೂರಿನಿಂದ ಹಣತರುವ ರೈತರನ್ನೂ, ಲೂಟಿಮಾಡುವ ಸನ್ನಾಹ ನಡೆಯುತ್ತಿದೆ, ಎಂದು. ಒಂದು ಮಾತನ್ನು ಮೊದಲೇ ಹೇಳುವುದನ್ನು ಮರೆತೆ—ಅನೇಕ ಗಾಡಿಗಳು ತಿರುಗು ಕಸಬಿನ ಬಾಡಿಗೆ ಹೊಡೆಯುವ ಲಬ್ಬೆ ಮತ್ತು ಇತರರೋವು. ಇವರಲ್ಲಿ ಒಂದು ಬಗೆಯ ಒಳಸಂಚು ಇರಬೇಕೆಂದು ನನ್ನ ಅನುಮಾನ. ಅದಕ್ಕೋಸ್ಕರ ನಾನು ಮೈಸೂರು ತಾಲ್ಲೂಕಿನ ಅಧಿಕಾರಿಗಳ ಸಹಕಾರವನ್ನು ಪಡೆದು, ಈ ರೀತಿ ಪೋಲೀಸು ಬಂದೋಬಸ್ತಿಗೆ ಡೆಪ್ಯುಟಿ ಕಮ್ಮಿಷನ್ನವರ ಆರ್ಡರನ್ನು ಪಡೆದೆ; ಮೈಸೂರಿಂದ ನರಸಿಪುರ

ಕ್ಕಾಗಲಿ, ನರಸಿಪುರದಿಂದ ಮೈಸೂರಿಗಾಗಲಿ ಹೋಗುವ ಗಾಡಿಗಳನ್ನು ಮೈಸೂರು ನರಸಿಪುರಗಳ ಬಳಿ ಉಕ್ಕಡಗಳ ಮುಂದೆ ಹತ್ತು ಘಂಟೆ ವರೆಗೂ ಕಲೇಹಾಕಿ, ಗಾಡಿ ಹೊಡೆಯುವವರ ಹೆಸರುಗಳನ್ನು ನೋಟು ಮಾಡಿಕೊಂಡು, ಹೀಗೆ ಸೇರಿಸಿದ ಗಾಡಿಗಳ ಗುಂಪನ್ನು ಮುಂದೆ ಪ್ರಯಾಣಕ್ಕೆ ಬೀಟು ಪೋಲೀಸಿನವನ ಉಸ್ತುವಾರಿಯಲ್ಲಿ ಬಿಡುವುದು; ಹತ್ತು ಘಂಟೆಗೆ ಮೀರಿ ಬಂದ ಗಾಡಿಗಳಿಗೆ ಮಾರನೆ ಬೆಳಗ್ಗೆಯೇ ಪ್ರಯಾಣ. ನಡುದಾರಿಯಲ್ಲಿ ಬೀಟು ಪೋಲೀಸಿನವರು ಸಂಧಿಸಿ, ಒಬ್ಬರ ಪುಸ್ತಕದಲ್ಲಿ ಒಬ್ಬರು ರುಜೂಮಾಡಿ, ತಮ್ಮ ತಮ್ಮ ಸ್ಥಳಗಳಿಗೆ ವಾಪಸು ಬಂದು ತಮ್ಮ ಇನ್‌ಸ್ಪೆಕ್ಟರಿಗೆ ರಿಪೋರ್ಟು ಮಾಡುವುದು.

ಈ ಏರ್ಪಾಡು ಬಹಳ ಚೆನ್ನಾಗಿ ನಡೆಯಿತು. ಇದನ್ನು ಛಕ್ಕು ಮಾಡಲು ಒಂದೆರಡು ಸಲ ನಾನೂ, ಮೈಸೂರ ಅಮಲ್ದಾರರೂ, ಗುಟ್ಟಾಗಿ ಅಕಸ್ಮಾತ್ತಾಗಿ ಎಂಬಂತೆ ತಿರುಗು ಗಾಡಿಗಳಲ್ಲಿ ಪ್ರಯಾಣ ವನ್ನೂ ಮಾಡಿದೆವು.

ಈ ಏರ್ಪಾಡನ್ನು ನಾನೇ ಒಂದು ಸಲ ಉಲ್ಲಂಘಿಸುವ ಸಂದರ್ಭ ಬಿದ್ದು, ಆ ಉಲ್ಲಂಘನೆಯ ಫಲವನ್ನೂ ಅನುಭವಿಸುತ್ತೇನೋ ಎಂಬ ಭಯವೂ ಆಯಿತು. ನಾನು ನನ್ನ ಪತ್ನಿ ಸಮೇತ ಮೈಸೂರಿಗೆ ಹೋಗಿದ್ದವನು, ರಾತ್ರಿ ನರಸಿಪುರಕ್ಕೆ ವಾಪಸು ತಿರುಗಿ ಹೊರಟೆ. ಉಕ್ಕಡದ ಹತ್ತಿರ ಬರುವಾಗ ಒಂಬತ್ತು ಘಂಟೆಯಾಗಿತ್ತು. ಅಲ್ಲಿ ನಾಲ್ಕು ಐದು ಗಾಡಿಗಳು ಮಾತ್ರ ಸೇರಿದ್ದವು. ನಾನು ನರಸೀಪುರಕ್ಕೆ ಜಾಗ್ರತೆಯಾಗಿ ಹೋಗಬೇಕಾದ ಜರೂರಾತಿ ಏನಿತ್ತೋ, ಅಥವ ಬರೀ ಧೋರಣೆಯೋ, ನನಗೀಗ ಜ್ಞಾಪಕವಿಲ್ಲ. ನಾನು ಅಲ್ಲಿನ ಉಕ್ಕಡದ ಪೋಲೀಸು ಆಫೀಸರಿಗೆ— ನಾನೂ ಪೋಲೀಸು ಆಫೀಸರು, ನಿನಗೆ ಗೊತ್ತಿದೆ ತಾನೆ? ಇಲ್ಲಿ ನೋಡು, ನನ್ನ ಹತ್ತಿರ ರಿಪೀಟರ್ ಬಂದೂಕೂ ಇದೆ. ಈಗ ಇರತಕ್ಕ ಗಾಡಿಗಳ ಉಸ್ತುವಾರಿ ನೋಡಿಕೊಂಡು ಕರೆದುಕೊಂಡು ಹೋಗುತ್ತೇನೆ—ಎಂದು ಹೇಳಿ, ಅವನ ಪುಸ್ತಕದಲ್ಲಿ ಬರೆದು ನನ್ನ ಸಂಗಡ ಅದುವರಿಗೆ ಬಂದಿದ್ದ ಗಾಡಿಗಳನ್ನೂ ಹಿಂದೆ ಕರೆದುಕೊಂಡು ಹೊರಟೆ. ಇದು ತಪ್ಪು, ನಾನು ಮಾಡಬಾರದಿತ್ತು.

ಏನಾಯಿತೆಂಬುದನ್ನು ಕೇಳಿ. ನಾವು ಏಳೆಂಟು ಮೈಲಿಗಳು ನಡೆದಿರಬಹುದು. ನನಗೆ ಆಗಲೇ ಸ್ವಲ್ಪ ಝೊಂಪು ಹತ್ತಿತ್ತು. ಆಗ ನನ್ನ ಗಾಡಿಯುವವನು ಪಿಸು ಮಾತಿನಲ್ಲಿ ನನ್ನ ಕಿವಿಯಲ್ಲಿ—ಬುದ್ಧಿ, ನಾಲು ಮರದ ಕತ್ತಲಲ್ಲಿ ಯಾರೋ ಜನ ತಿರುಗಾಡ್ತಾರೆ, ನನಗೆ ಬಯವಾಗ್ತದೆ— ಅಂದ. ನಾನು ಮುಸುಕು ತೆಗೆದು, ಮಗ್ಗುಲಲ್ಲಿದ್ದ ಕೋವಿಯನ್ನು ಈಚೆಗೆ ತೆಗೆದು ಅದನ್ನು "ಕಾಕ್", ಅಂದರೆ ಹಾರಿಸಲು ಅಣಿ, ಮಾಡುವುದರೊಳಗಾಗಿ, ಮುಂದುಗಡೆ ನಾಲುಮರದ ಕತ್ತಲಿಂದ—

ನಿಲ್ಲಿಸೋ ಗಾಡಿ—

ಅಂತ ಘಟ್ಟಿಯಾಗಿ ಕೂಗುಬಂತು. ನಾನು ಗಾಡಿಯವನಿಗೆ—

"ಗಾಡಿ ನಿಲ್ಲಿಸಿ, ಎತ್ತು ಬಿಚ್ಚಿ, ಮೂಕಿ ಎತ್ತಿಬಿಡು. ನೀನು ಗಾಡಿಯ ಕೆಳಗೆ ಸೇರಿಕೋ. ಮುಂದೆ ಒರಬೇಡ"

ಎಂದು ಹೇಳಿದೆ. ಅವನು ಹಾಗೆ ಮಾಡಿದ. ಹಿಂದೆ ಬರುತ್ತಿದ್ದ ಗಾಡಿಗಳೂ ನಾನು ನಿಂತಕೂಡಲೆ ಒತ್ತೀಲಿ ಬಂದು ನಿಂತವು. ನಾನು ಬಂದೂಕನ್ನು ಗಾಡಿಯ ಮುಂಭಾಗದಲ್ಲಿ, ಕಟ್ಟಿದ್ದ ಅಡ್ಡಸಗ್ಗದಮೇಲೆ ಇಟ್ಟುಕೊಂಡು, ಏನಾಗುತ್ತೋ ನೋಡೋಣವೆಂದು ಕಾದೆ. ನನ್ನ ಬಂದೂಕಿನ ಕೋಶದಲ್ಲಿ ಐದು ತೋಟಾಗಳಿದ್ದವು. ಕಳ್ಳರು ಬಂದರೆ ಮುಂದುಗಡೆಯಿಂದ ಬರುತ್ತಾರೆ. ಅವಶ್ಯಕತೆ ಇಲ್ಲದೆ ಯಾರನ್ನೂ ಕೊಲ್ಲ ಬಯಸುವುದಿಲ್ಲ. ಮನುಷ್ಯ ಚನ್ನಾಗಿ ಕಂಡರೆ ಕಳ್ಳನ ಕಾಲಿಗೊ, ಕೈಗೋ ಹೊಡೆದು ನಿಶಾನಾಗುವಂತೆ **ಘಾಯಮಾಡಿ** ಆ ಘಾಯದ ಗುರುತಿನಮೇಲೇ ಆ ಗ್ಯಾಂಗಿನ ಪತ್ತೇದಾರಿ ಹಚ್ಚುವುದೆಂದು ಗೊತ್ತು ಮಾಡಿದೆ. ಅವರು ನಮಗೇನಾದರೂ ಕೇಡುಮಾಡಿಯಾರೆಂದು ನನಗೆ ತೋರಲಿಲ್ಲ. ಕಳ್ಳರು ಸಾಮಾನ್ಯವಾಗಿ ಹೇಡಿಗಳೆಂದು ಬಲ್ಲೆ. ನಾನು ಸಣ್ಣ ಹುಡುಗನಾಗಿದ್ದಾಗ ನಮ್ಮ ತಂದೆಯವರು ಶಿವಮೊಗ್ಗೆಗೆ ವರ್ಗವಾಗಿ, ಆಗ ರೈಲಿರಲಿಲ್ಲವಾದದ್ದರಿಂದ ತಿರುಗು ಗಾಡಿಮಾಡಿಕೊಂಡು, ಸಂಸಾರ ಸಮೇತ ನೂರ ಎಪ್ಪತ್ತು ಚಿಲ್ಲರೆ ಮೈಲಿ ಪ್ರಯಾಣ ಮಾಡಿದರು. ಅರಸಿಕೆರೆ (ಅದಕ್ಕೆ ಆಗ ಕಳ್ಳ ಅರಸಿಕೆರೆಯೆಂತಲೇ ಬಿರುದು)

ಹತ್ತಿರ ಸರಿ ರಾತ್ರಿಯಲ್ಲಿ ಕಳ್ಳರು ಬಂಡಿಸಾಲಿಗೆ ಅಡ್ಡ ಬಂದು ಕಲ್ಲು ಬೀರಿ ಆರ್ಭಟ ಮಾಡಿದರು. ನಮ್ಮ ತಂದೆಯವರು ಬಂಡಿಯಿಂದ ಜೋಡುನಲ್ಲಿ ಬಂದೂಕನ್ನು ಹಿಡಿದು ದುಮುಕಿ, ಗಾಡಿಯವರಿಗೆ ಧೈರ್ಯ ಕೊಟ್ಟು, ಬಂದೂಕನ್ನು ಕಲ್ಲುಬರುತ್ತಿದ್ದ ದಿಕ್ಕಿಗೆ ತಿರುಗಿಸಿ ಹಾರಿಸಿದರು. ಢಂ ಅಂದಕೂಡಲೆ ಕಳ್ಳರು ಮಾಯವಾದರು. ಅದೇ ರೀತಿ ಇವರೂ ಕೋವಿಯನ್ನು ಹಾರಿಸಿದರೇ ಸಾಕು, ಓಡುತ್ತಾರೆಂದು ತೋರಿತು. ಅಂತೂ ಏನೂ ಆಗಲಿಲ್ಲ; ಯಾರ ಸದ್ದೂ ಇಲ್ಲ. ನಮ್ಮ ಗಾಡಿಗುಂಪಿನ ಅಪೂರ್ವ ನಡತೆಯಿಂದ, ಕಳ್ಳರು ಇದೇನೋ ತಮ್ಮನ್ನು ಹಿಡಿಯುವ ಮಸಲತ್ತೆಂದು ಹೆದರಿ ಹೋದರೆಂದು ನನ್ನ ಊಹೆ. ನಾನು ಮಾಮೂಲಿನಂತೆ ಮೈಸೂರಿನಿಂದ ಹೊರಟ ಇತರ ಗಾಡಿಗಳ ಸಾಲು ಬರುವವರಿಗೂ ಅಲ್ಲೇ ಕಾದಿದ್ದು ಅವರ ಸಂಗಡಲೇ ಮುಂದೆ ಬಂದೆ.

೩೪

ಈಗಿನ ಜನಗಳಿಗಿಂತ ಇವರ ಅಜ್ಜಂದಿರು ಸುಲಭವಾಗಿ ಮೋಸ ಹೋಗುತ್ತಿದ್ದರೆ? ಅಥವ ಆಗಿನ ಮೋಸಗಾರರು ಅವರ ಮೊಮ್ಮಕ್ಕಳಗಿಂತಲೂ ಹಲಾಲಟೋಪಿ ವಿದ್ಯದಲ್ಲಿ ಹೆಚ್ಚು ನಿಪುಣರೆ? ಹೇಳುವುದು ಕಷ್ಟ.

ನಮ್ಮ ತಾಲ್ಲೂಕಿಗೆ ಬಂಗಾರ ಮಾಡಬಲ್ಲ ಮತ್ತು — ಅಣಿಮಾದಿ ಶಕ್ತಿಯುಳ್ಳ — ಒಬ್ಬ ಯೋಗೀಶ್ವರ ಬಂದು ಹಾಳುದೇವಸ್ಥಾನಗಳಲ್ಲೋ, ಬೆಟ್ಟದ ಗುಹೆಗಳಲ್ಲೋ, ಹೊಳೆಕರೆಯ ತೋಪುಗಳಲ್ಲೋ, ಏಕಾಕಿಯಾಗಿ ಜನ ಸಂಚಾರವಿಲ್ಲದ ಕ್ಷೇತ್ರಗಳಲ್ಲಿ, ಒಂದೊಂದು ದಿನವೋ, ಎರಡೆರಡು ದಿನವೋ ತಂಗಿದ್ದು, ಹೆಚ್ಚು ಜನವಿಲ್ಲದ ವೇಳೆಯಲ್ಲಿ ದೊಡ್ಡ ದೇವಸ್ಥಾನಗಳಲ್ಲಿ ಹೊಕ್ಕು ವೇದ ಘೋಷಗಳನ್ನರ್ಪಿಸಿ ಪೂಜೆ ಮಾಡಿಕೊಂಡು, ತಿರುಗಾಡುತ್ತಿದ್ದಾನೆಂದು ಕೇಳಿದೆ. ಅವನ ಅಗ್ನಿಹೋತ್ರದ ಹೊಗೆಯಿಂದ ಅವನಿದ್ದ ಪುಣ್ಯಸ್ಥಳವನ್ನು ಪತ್ತೆಮಾಡಿ, ಅವನ ದರ್ಶನವನ್ನು ಪಡೆದು ಕಾಣಿಕೆಗಳನ್ನು ಒಪ್ಪಿಸಿ, ಅವನ ಆಶೀರ್ವಾದವನ್ನು ಅನೇಕರು ಪಡೆಯುತ್ತಿದ್ದರೆಂದು ಕೇಳಿದೆ. ಅವನಿಗೆ ಹಣ ಕಾಸುಗಳ ಮೇಲೆ ಸ್ವಲ್ಪವೂ ಮಮತೆ ಇಲ್ಲವೆಂತಲೂ, ತನಗೆ ಭಕ್ತಾದಿಗಳು ಕೊಟ್ಟಿದ್ದನ್ನು ಬಡಬಗ್ಗರಿಗೂ, ಮಕ್ಕಳಿಗೂ ಹಂಚಿಬಿಡು

ತ್ತಿದ್ದನೆಂತಲೂ ಕೇಳಿದೆ. ನನಗೆ ಪುರಾಣ ಪುಣ್ಯಕಥೆಗಳಲ್ಲಿ ಹೊರತು ಲೋಕದಲ್ಲಿ ಸಮಲೋಷ್ಟಾನುಕಾಂಚನರಾದ ಯೋಗೀಶ್ವರರ ಪರಿಚಯ ಬಹಳ ಕಡಿಮೆ. ನನ್ನ ಜೀವನದಲ್ಲೆಲ್ಲಾ ಖಾತರಿಯಾಗಿ ಒಬ್ಬರನ್ನು, ಬಹುಶಃ ಇಬ್ಬರು ಮೂವರನ್ನು, ನೋಡಿರಬಹುದು. ಆದ್ದರಿಂದ ಈ ಯೋಗೀಶ್ವರರ ಸುದ್ದಿ ಕೇಳಿದಾಗ ನಾನು ನನ್ನ ಬಳಿಯಲ್ಲಿದ್ದ ಪೋಲೀಸಿನವರಿಗೆ ಅರ್ಧ ಹಾಸ್ಯವಾಗಿ ಈ "ಕಲಿಗಾಲದ ಮಹರ್ಷಿ"ಗಳ ಮೇಲೆ ಸ್ವಲ್ಪ ನಿಗಾ ಇರಲಿ ಎಂದು ಹೇಳಿದೆ. ಅವರು ಹಾಗೆ ಮಾಡಿರಬಹುದೆಂದು ಕಾಣುತ್ತೆ. ಆದರೂ ಖಾಕೀ ಧರಿಸಿದ ಮಾತ್ರದಿಂದಲೇ ಮನುಷ್ಯನ ಬುದ್ಧಿ ಬದಲಾಯಿಸುವುದಿಲ್ಲವಾದ್ದರಿಂದ ಇವರ ಕಡೆಯಿಂದಲೂ ಯೋಗೀಶ್ವರನ ಅಲೌಕಿಕ ನಿಸ್ಪೃಹತೆ ಮತ್ತು ಅಮಾನುಷ ಮಹಿಮೆಯ ಕಥೆಗಳೇ ಕೇಳಿಬಂದುವು. ಯೂನಿಫಾರಂ ಭಕ್ತರ ಪೈಕಿ ಒಬ್ಬರು—

"ಭಕ್ತರು ಕೊಟ್ಟ ದುಡ್ಡನ್ನೆಲಾ ಅವರಿಗೆ ಇವರಿಗೆ ಕೊಟ್ಟುಬಿಡುತ್ತಾರೆ. ಹೀಗೆ ಮಾಡುತ್ತೀರಲ್ಲ, ನಿಮಗೆ ಏನೂ ಉಳಿಸಿಕೊಳ್ಳಬಾರದೆ?" ಎಂದು ಕೇಳಿದ್ದಕ್ಕೆ, ಯೋಗೀಶ್ವರರು—"ನನಗೆ ಬೇಕಾದರೆ ಚಿನ್ನ, ಮಾಡಬಲ್ಲೆ, ನವರತ್ನಗಳನ್ನು ಮಾಡಬಲ್ಲೆ. ಆದರೆ ಇವೆಲ್ಲಾ ಮಣ್ಣು, ಮರಳು. ದೇವರು ಕೊಟ್ಟಹಾಗೆ ನೀರು, ಗಾಳಿ ನಮಗೆ ಸಾಕು!" ಎಂದರು." ಹೀಗೆಂದು ಹೇಳಿದರು.

"ಓಹೋ! ಹಾಗಾದರೆ ಇವರು ನೀರು ಗಾಳಿಗಳ ಭಕ್ಷಣ ಮಾಡಿಕೊಂಡಿರುವ ಚಂಡತಪಸ್ವಿಗಳು" ಅಂದುಕೊಂಡೆ. ಆದರೂ ಪೋಲೀಸಿನವರ ನಿಗಾವಣೆ ಪ್ರಾರಂಭವಾದಮೇಲೆ ಅಲ್ಲಲ್ಲಿಂದ ಬಂದ ಚಾತ್ಮಿಗಳಲ್ಲಿ ಯೋಗೀಶ್ವರರು ಒಬ್ಬ ಬ್ರಾಹ್ಮಣ ಜೋಯಿಸರಿಗೆ ಭಂಗಾರ ಮಾಡುವ ತಮ್ಮ ಶಕ್ತಿಯನ್ನು ತೋರಿಸಿ ಅವರ ಮನೆಯಲ್ಲಿ ಕೆಲವು ದಿನ ಅತಿಥಿಗಳಾಗಿದ್ದು ಅವರಿಂದ ಚಿನ್ನ ಮಾಡುವ ಸಾಮಗ್ರಿಗಾಗಿ ಹಣ ಪಡೆದರು ಎಂತಲೂ, ಇನ್ನೊಂದು ಗ್ರಾಮದಲ್ಲಿ ಹಿಂದೆ ನಿಕ್ಷೇಪವಾಗಿದ್ದ ನಿಧಿಯನ್ನು ಹುಡುಕಲು ಯಜ್ಞಾದಿ ಕರ್ಮಗಳನ್ನು ಸೂಚಿಸಿದರೆಂತಲೂ, ಸಾಮಾನ್ಯವಾಗಿ ಇವರಿಗೆ ವಾರಸುದಾರರಿಲ್ಲದ ಅಬಲೆ ಭಕ್ತರ ಮೇಲೆ ಹೆಚ್ಚು ಕರುಣ

ವೆಂತಲೂ, ವರ್ತಮಾನಗಳು ಬರಹತ್ತಿದುವು. ನಾನು ಪೋಲೀಸ್ ಇನ್ಸ್‌ಪೆಕ್ಟರನ್ನು ಕರೆದು, "ಈ ರಾವಣ ಸನ್ಯಾಸಿಯ ಕಥೆ ಹಾಸ್ಯಕ್ಕೆ ಮೀರುವುದಕ್ಕೆ ಮುಂಚೆಯೇ ನೀವು ಅವನನ್ನು ಪತ್ತೆ ಮಾಡಿ ಬಯಲಿಗೆ ಎಳೆಯುವ ತರದೂದು ಮಾಡಬೇಕು. ಕಾಗಮ್ಮ ಗುಬ್ಬಮ್ಮನ ಕಥೆಗಳನ್ನು ವೇದವಾಕ್ಯವೆಂದು ನಂಬುವ ಸಣ್ಣ ನೌಕರರಿಗೆ ಈ ತನಿಖೆಯನ್ನು ಬಿಡಬಾರದು" ಎಂದು ಎಚ್ಚರಿಸಿದೆ. ಪೋಲೀಸ್ ನಿಗಾ ಸ್ವಲ್ಪ ತೀವ್ರವಾದ ಮೇಲೆ ಯೋಗೀಶ್ವರರು ಸ್ವಲ್ಪ ಬೆದರಿದರೆಂದು ಕಾಣುತ್ತದೆ. ಒಂದು ದಿನ ನಾನು ಶ್ರೀ ಗುಂಜಾ ನರಸಿಂಹಸ್ವಾಮಿ ದೇವಸ್ಥಾನಕ್ಕೆ ಹೋದಾಗ ಪ್ರಾಕಾರದಲ್ಲಿನ ಒಳಮಂಟಪದಲ್ಲಿ ಕೂತಿದ್ದ, ಕಾವಿಬಟ್ಟೆಯನ್ನು ಧರಿಸಿದ್ದ ಒಂದು ವ್ಯಕ್ತಿಯನ್ನು ನೋಡಿದೆ. ಅದು ಸಮಾರು 40–45 ವರ್ಷದ ಒಳ್ಳೆ ಧಾಂಡಿಗ ಪುರುಷ ವ್ಯಕ್ತಿಯಾಗಿತ್ತು. ರಕ್ತಭರಿತವಾದ ಕೆಂಪಾದ ಮುಖ, ಕಪ್ಪಾದ ತಲೆ ಕೂದಲು, ಗಡ್ಡಮೀಸೆಗಳು. ಈ ಸಿಂಹಾಕಾರವು ಗಾಳಿ ಕುಡಿದಿದ್ದರಿಂದ ಬರತಕ್ಕದ್ದಲ್ಲ. ಅವನು ನನ್ನ ಕಡೆ ನೋಡಿ, ನನಗೆ ಬರುವಂತೆ ಸನ್ನೆಮಾಡಿದ. ನಾನು "ಇಲ್ಲೇ ಬನ್ನಿ" ಅಂತ ಘಟ್ಟಿಯಾಗಿ ಹೇಳಿದೆ. ಎದ್ದು ಬಂದು, "ನಾನು ತಮ್ಮನ್ನು ನೋಡಿ ರಹಸ್ಯವಾಗಿ ಮಾತನಾಡತಕ್ಕದ್ದಿದೆ. ಯಾವಾಗ ಬರಲಿ?" ಎಂದು ತಮಿಳು ಭಾಷೆಯಲ್ಲಿ ಕೇಳಿದ. ನಾನು ಅವನಿಗೆ—

"ಈಗ ನಾನು ಮನೆಗೆ ಹೋಗುತ್ತೇನೆ. ಇನ್ನು ಅರ್ಧಘಂಟೆ ಬಿಟ್ಟುಕೊಂಡು ಬರಬಹುದು" ಎಂದು ಹೇಳಿ ಮನೆಗೆ ಬಂದುಬಿಟ್ಟೆ.

ಅರ್ಧಘಂಟೆ ಹೊತ್ತು ಬಹಳ ಕುತೂಹಲದಿಂದ ಕಾದಬಳಿಕ, ಯೋಗೀಶ್ವರನು ಬಂದ. ಆತನನ್ನು ನನ್ನ ಕೊಠಡಿಯೊಳಕ್ಕೆ ಬರಮಾಡಿಕೊಂಡು ಕೂಡಿಸಿಕೊಂಡೆ. ಇಬ್ಬರೂ ಸ್ವಲ್ಪಹೊತ್ತು ಸುಮ್ಮನಿದ್ದ ಮೇಲೆ ನಾನು,

"ನನ್ನನ್ನು ನೋಡಬಯಸಿದ ಕಾರಣವೇನು?" ಎಂದು ಕೇಳಿದೆ.

ಅವನು ಬಹಳ ಗಾಂಭೀರ್ಯದಿಂದ, ತಮಿಳಿನಲ್ಲಿ,

"ನಿಮ್ಮ ತಾಲ್ಲೂಕಿನ ಪೋಲೀಸಿನವರು ಜನಗಳ ತಾರತಮ್ಯ ತಿಳಿಯದೆ ಸಣ್ಣ ಜನಗಳ ಮಾತನ್ನು ಕೇಳಿಕೊಂಡು ನಮ್ಮ ಗೌರವಕ್ಕೆ ತಕ್ಕ

ದ್ದಲ್ಲದ ಕಿರುಕುಳವನ್ನು ಕೊಡುತ್ತಾರೆ. ಇದು ತಮ್ಮ ಕೀರ್ತಿಗೂ ಶ್ರೇಯಸ್ಸಿಗೂ ಹಾನಿಕರ. ತಾವು ಸತ್ಕುಲಪ್ರಸೂತರು. ಅವರಿಗೆ ಕರೆಸಿ ಬುದ್ಧಿಹೇಳಿ" ಎಂದನು.

ನಾನು, ಕೋಪ ಬೆರೆಕೆಯಾದ ಹಾಸ್ಯದಿಂದ, ಕನ್ನಡದಲ್ಲಿ,

"ಅಷ್ಟು ದೊಡ್ಡ ಅಂತಸ್ತಿನ ಮಾತು ಬಿಡಿ. ನನ್ನ ಕುಲ, ಜಾತಿ ಕಟ್ಟಿಕೊಂಡು ನಿಮಗೇಕೆ? ನೀವು ಯಾರು? ಎಲ್ಲಿಂದ ಬಂದಿರಿ? ನಿಮ್ಮ ತಮಿಳು ನೋಡಿದರೆ ಶ್ರೀವೈಷ್ಣವರು ಇದ್ದ ಹಾಗೆ ಕಾಣುತ್ತೀರಿ. ನಿಮ್ಮ ಮೈಕಟ್ಟು ವ್ರತ ಉಪವಾಸಗಳಿಂದ ಕೃಶವಾಗಿರುವಹಾಗೆ ಕಾಣೋದಿಲ್ಲ. ನೀವು ಚಿನ್ನ ಮಾಡ್ತೀರಂತೆ, ಇದು ನಿಜವೇ? ನಿಧಿ ನಿಕ್ಷೇಪಗಳನ್ನು ಪತ್ತೆಮಾಡಿ ಕೊಡ್ತೀರಂತೆ, ಇದೂ ನಿಜವೋ?" ಎಂದು ಕೇಳಿದೆ.

ಮನುಷ್ಯ ಉಪ್ಪರಿಗೆಯಿಂದ ಇಳಿದು ನೆಲಮಟ್ಟಕ್ಕೆ ಬಂದ.

"ಚಿನ್ನ ಮಾಡುವುದು ಅಸಾಧ್ಯವೆಂದು ಈಗಿನ ಕಾಲದ ವಿಜ್ಞಾನ ಶಾಸ್ತ್ರ ಓದಿರುವ ತಮ್ಮಂಥಾವರ ನಂಬಿಕೆ. ತಮ್ಮ ಜೊತೆಗೆ ವಾದಿಸಿದ್ದರಿಂದ ಪ್ರಯೋಜನವೇನೂ ಕಾಣಲಿಲ್ಲ. ಗ್ರಾಮಸ್ಥರನೇಕರು ನನ್ನಲ್ಲಿ ಯಕ್ಷಣಿ ಅಣಿಮಾದಿ ಶಕ್ತಿ ಇದೆಯೆಂದು ಅವರವರಿಗೆ ಬೇಕಾದ ವಸ್ತುಗಳನ್ನು ನನ್ನಲ್ಲಿ ಬೇಡುತ್ತಾರೆ. ಅದಕ್ಕೆ ನಾನು ಜವಾಬ್ದಾರನಲ್ಲ. ತಮ್ಮಲ್ಲಿ ಒಂದು ಮಾತನ್ನು ಮಾತ್ರ ಹೇಳುತ್ತೇನೆ. ನಾನು ಆಯುರ್ವೇದದಲ್ಲಿ ಸಂಪೂರ್ಣ ವಿದ್ಯೆ ಉಳ್ಳವನಾಗಿದ್ದೇನೆ. ತಮಗೆ ಅಪೂರ್ವವಾದ ಒಂದು ಲೇಹ್ಯವನ್ನು ಮಾಡಿಕೊಡುತ್ತೇನೆ. ಅದರಲ್ಲಿ ಮುತ್ತು ಭಂಗಾರ, ಹವಳ, ರಸ ಮೊದಲಾದ ಅಮೂಲ್ಯ ಪದಾರ್ಥಗಳು ಸೇರಿರುತ್ತವೆ. ಹದಿನೈದು ದಿವಸ ಅದನ್ನು ಸೇವಿಸಿದರೆ ಅದರ ಗುಣ ತಮಗೇ ಗೊತ್ತಾಗುತ್ತದೆ. ಹದಿನೈದು ದಿವಸದ ಔಷಧಕ್ಕೆ (ನೂರು) 100 ರೂಪಾಯಿ ಲಾಗೋಡಾಗುತ್ತೆ" ಎಂದ.

ನಾನು, ನಗುತ್ತಾ

"ಯಾವಾಗಲೂ ಖಾಯಿಲೆ ಬೀಳದಿದ್ದವನಾದರೂ ಒಬ್ಬಿಬ್ಬರು ಮಹಾಪಂಡಿತರನ್ನು ನೋಡಿದ್ದೇನೆ. ನಮ್ಮೂರಾದ ದೇವನಹಳ್ಳಿಯಲ್ಲಿ

ಕುಂಟಿ ಕೃಷ್ಣಪಂಡಿತರು ಎಂದಿದ್ದರು. ಅವರು ಪ್ರಖ್ಯಾತರು. ನಮ್ಮೂರ ಕವಿ ನಾರಾಯಣಶಾಸ್ತ್ರಿಗಳು ಅವರ ವಿಚಾರದಲ್ಲಿ ಈ ಬಂಧವನ್ನು ರಚಿಸಿರುವರು :

" ಕುಂಟು ಕೃಷ್ಣಮಾತ್ರೆ
ವೈಕುಂಠಯಾತ್ರೆ !" ಎಂದು.

ಇನ್ನೊಬ್ಬರು ಬೆಂಗಳೂರು ಸಿದ್ದಿಕಟ್ಟೆಯಲ್ಲಿ ಪಂಡಿತರಿದ್ದರು. ಹೆಸರು ಮರೆತೆ; ಅವರಣ್ಣಂದಿರು ಅಪರಪ್ರಯೋಗದಲ್ಲಿ ಪ್ರಚಂಡರು. ಅವರಿಗೆ 'ಪ್ರೇತರಾಜರು' ಎಂತಲೇ ಜನ ಹೆಸರಿಟ್ಟಿದ್ದರು. ಅಣ್ಣ ತಮ್ಮಂದಿರಲ್ಲಿ ಒಟ್ಟು ಕುಟುಂಬದ ಸಹಕಾರ ಬಹಳ ಚೆನ್ನಾಗಿತ್ತೆಂದ್ದ ಕೇಳಿದ್ದೇನೆ. ನೀವು ನನಗೆ ಮಾಡಿಕೊಡುವ ಲೇಹ್ಯವು ನನ್ನನ್ನು ಸಂಸಾರ ದುಃಖದಿಂದಪಾರುಮಾಡ ತಕ್ಕಂಥಾದ್ದೋ ಹ್ಯಾಗೆ ?" ಎಂದು ಕೇಳಿದೆ.

ಅವರು ಹೇಳಿದ್ದು, ವಂಗದೇಶದ ಎರಡನೆಯ ದರ್ಜೆ ಪತ್ರಿಕೆಗಳಲ್ಲಿ ಸಾಮಾನ್ಯವಾಗಿ advertise ಮಾಡುವ Royal Yacooti ಸಿದ್ಧಕಲ್ಪ ಮಕರಧ್ವಜ, ಊನಿಂ ತೈಲ, ಕಾಮವರ್ಧಿನಿ, ಮೊದಲಾದ ಮಹೌಷಧಿ ಗಳಿಗೆ ನೂರುಪಾಲು ಮಿಗಿಲಾದ ಶಕ್ತಿಯುಳ್ಳದ್ದು ತಮ್ಮ ಲೇಹ್ಯ ಎಂದು.

ನಾನು—"ಇಂಥ ಅಮೃತ ನವನೀತವನ್ನು ಕ್ಲುಪ್ತ ಕಳತ್ರದ ಬಡ ಬ್ರಾಹ್ಮಣನಾದ ನನಗೆ ಕೊಟ್ಟರೇನು ಫಲ? ಅದನ್ನ ತಾವು ಹೈದರಾ ಬಾದಿನ ನೈಜಾಮ್‌ರ, ಅಥವ ಇತರ ಪ್ರಖ್ಯಾತ ನವಾಬರುಗಳ, ಬಳಿಗೆ ಹೋಗಿ, ಅವರಿಗೆ ಸಮರ್ಪಿಸಿದರೆ ಅವರಿಂದಲೂ, ಮುಖ್ಯವಾಗಿ ಅವರ ಅಂತಃಪುರದ ನಿವಾಸಿಗಳಿಂದಲೂ, ಮಹದೈಶ್ವರ್ಯವನ್ನೂ ಬಹುಮಾನ ಪತ್ರಿಕೆಗಳನ್ನೂ ಪಡೆಯಬಹುದು" ಎಂದು ಹೇಳಿ, ಆಮೇಲೆ ಕೋಪದ ಧ್ವನಿಯಲ್ಲಿ,

"ಈ ಹರಟೆ ಸಾಕು! ಇಂಥಾದ್ದಕ್ಕೆಲ್ಲಾ ನಾನು ಮರುಳಾಗ ತಕ್ಕವನಲ್ಲ. ಇದುವರೆಗೆ ನೀವೇನೇನು ಮಾಡಿದ್ದೀರೋ ನನಗೆ ಇನ್ನೂ

ಸರಿಯಾಗಿ ತಿಳಿಯದು. ನಿಮ್ಮಿಂದ ಯಾರಿಗಾದರೂ ಕೆಡುಕಾಯಿತೆಂದು ತಿಳಿದರೆ ಅದರ ಫಲವನ್ನು ತಡವಿಲ್ಲದೆ ಅನುಭವಿಸುತ್ತೀರಿ. ನಿಮ್ಮ ಸ್ಥಳವ್ಯಾವದು? ಅಲ್ಲಿಗೆ ವಾಪಸು ಹೋಗುವುದು ಕ್ಷೇಮ. ಇಲ್ಲಿಯ ಹವ—ನೀವು ಗಾಳಿ ಕುಡಿದು ಜೀವಿಸುತ್ತೀರಂತೆ—ಇಲ್ಲಿಯ ಹವ ನಿಮಗೆ ವಂಟುವುದಿಲ್ಲ. ಇನ್ನು ಹೋಗಿ"

ಎಂದು ಕಳುಹಿಸಿಬಿಟ್ಟೆ.

ಇದಾದ ಎರಡು ಮೂರು ದಿನಗಳ ತರುವಾಯ ತಲಕಾಡಿನ ಪ್ರಖ್ಯಾತ ಸಾಹುಕಾರರೂ ಜಮೀನ್‌ದಾರರೂ ಆದ ಶಿವಬಸವದೇವರೆಂಬುವರು ನನ್ನನ್ನು ನೋಡಲಿಕ್ಕೆ ಬಂದರು. ಏನು ಸಮಾಚಾರವೆಂದು ಕೇಳಲಾಗಿ, ಬಹಳ ಸಂಕೋಚದಿಂದ ಅವರು ಹೇಳಿದ ಕಥೆ ಇದು—ಹೇಳುವ ಸೌಲಭ್ಯಕ್ಕಾಗಿ ಸಾಧ್ಯವಾದ ಮಟ್ಟಿಗೆ ,ಅವರ ಬಾಯಿಯಿಂದ ಬಂದಂತೆಯೇ ಹೇಳುತ್ತೇನೆ.

"ಕೆಲವು ದಿನಗಳ ಹಿಂದೆ ನಮ್ಮ ಕೋಟಿ ಕನ್ಯಾದಾನ ತಾತಾಚಾರ್ರು ನನ್ನಲ್ಲಿ ಬಂದು ಹಾ—ಹೂ—ಅಂತ ಹೇಳಲಾರದೆ ಒಂದು ಸಂಗತಿಯನ್ನು ಹೇಳಿದರು. ಮೇಲುಕೋಟೆ ಯೋಗೀಶ್ವರರೊಬ್ಬರು ಅವರ ಮನೆಯಲ್ಲಿ ತಂಗಿಕೊಂಡಿದ್ದಾರೆ. ಅವರು ಚಿನ್ನವನ್ನು ಮಾಡುತ್ತಾರಂತೆ, ಅವರಿಗೆ ಚಿನ್ನ ಮಾಡುವ ಸಾಮಗ್ರಿಗಾಗಿ ನೂರು ರೂಪಾಯಿ ಮೊದಲು ಬೇಕಂತೆ, ಕೊಡಲೇ? ನೀವು ನನ್ನ ಆಪ್ತರು. ನಾನು ಶುದ್ಧ ವೈದಿಕ, ಅಲ್ಲದೆ ತಾಪತ್ರಯ ಮನುಷ್ಯ, ನಿಮಗೆ ಗೊತ್ತೇ ಇದೆಯಲ್ಲ—ಅಂದರು. ಪಾಪ, ದೊಡ್ಡ ಸಂಸಾರಿಗಳು, ಚೆನ್ನಾಗಿ ಬಾಳಿದವರು. ನಾನು ಆ ಯೋಗಿಯನ್ನು ಕರೆದುಕೊಂಡು ಬನ್ನಿ, ಅಂದೆ. ಆ ಮನುಷ್ಯ ಸ್ವಲ್ಪ ದರ್ಪದೋನು; ನಾನೇ ಹೋದೆ. ಅವನು—ತಾವು ಚಿನ್ನವನ್ನು ಮಾಡುವುದುಂಟು; ಮಾಡುವುದಕ್ಕೆ ಮುಂಚೆ ವ್ರತ, ಹಿರಣ್ಯಹೋಮ, ಪೂಜೆ, ಇವುಗಳೆಲ್ಲ ಅವಶ್ಯಕ; ಅಲ್ಲದೆ ಸಾಮುಗ್ರಿಗಳಿಗೆ ಸ್ವಲ್ಪ ಖರ್ಚು ಹಿಡಿಯುತ್ತೆ. ತಮ್ಮ ಮಾತನ್ನು ನಿದರ್ಶನ ವಿನ ನಂಬಬೇಕಾಗಿಲ್ಲ; ಮೊದಲು ಸ್ವಲ್ಪ ಚಿನ್ನವನ್ನು ಮಾಡಿಸಿ ನೋಡಿ, ಆಮೇಲೆ ತಮಗೆ ಖಾತರಿಯಾದರೆ ಮಣಗಟ್ಲೆ ಮಾಡಿಸಬಹುದು—ಎಂದರು. ನಾನು ಹಾಗಾದರೆ ಒಂದು

ತೊಲ ಚಿನ್ನವನ್ನು ಮೊದಲು ಮಾಡಿ ತೋರಿಸಿ. ಅದನ್ನು ನಾನು ನೋಡಿ ನಂಬಿದಮೇಲೆ ಮಣವಲ್ಲದಿದ್ದರೆ ಖಂಡಿಗಟ್ಟಲೆ ಮಾಡುವಿರಂತೆ ಅಂದೆ.

ಅವರು ಖರ್ಚಿಗಾಗಿ ನೂರು ರೂಪಾಯಿಗಳನ್ನು ಕೇಳಿದರು. ನಾನು ತಪಶೀಲನ್ನು ಕೇಳಿದೆ; ಏನೇನೋ ಚಿಲ್ಲರೆ ಸಾಮಾನುಗಳಿಗಾಗಿ ಇಪ್ಪತ್ತು ರೂಪಾಯಿ, ಗಂಧರ್ವ ಭಸ್ಮಕ್ಕೆ ಎಂಭತ್ತು ರೂಪಾಯಿ, ಅಂತ ಪಟ್ಟಿ ಕೊಟ್ಟರು. ಗಂಧರ್ವ ಭಸ್ಮ ಅಂದರೆ ಏನು? ಅಂತ ಕೇಳಿದೆ. ಅದು ರಹಸ್ಯ, 'ಗುರು ಉಪದೇಶ,' ನಿಮಗೆ ಹೇಳುವುದಕ್ಕೆ ಆಗುವುದಿಲ್ಲ ಅಂದರು. ಹಾಗೆ ಆಗಲಿ ಸ್ವಾಮಿ ಅಂದು ನೂರು ರೂಪಾಯಿ ಕೊಟ್ಟೆ. ಕೆಲವು ದಿನಗಳಾದಮೇಲೆ ಅವರು ನಮ್ಮ ಮನೆಗೆ ಬಂದು, "ನಿಮ್ಮ ತೋಟದಲ್ಲಿ ಇರುವ ಜೋಪಡಿಯಲ್ಲಿ ಅಗ್ನಿಕುಂಡ ಹಾಕಿ, ಹೋಮ ಮಾಡಿ, ಚಿನ್ನ ಮಾಡುತ್ತೇನೆ" ಅಂದರು. ಹಾಗೇ ಆಗಲಿ ಅಂತ ಅವರು ಹೇಳಿದ ಏರ್ಪಾಟುಗಳನ್ನೆಲ್ಲಾ ಮಾಡಿದೆ. ನಮ್ಮ ತೋಟದ ಮನೆಯಲ್ಲಿ ದೊಡ್ಡದಾಗಿ ಮಂಡಲಕಟ್ಟಿ ಒಂದು ಅಗ್ಗಿಷ್ಟಿಕೆಯನ್ನಿಟ್ಟು ಬೆಂಕಿ ಹತ್ತಿಸಿ ಹಾಂ! ಹೂಂ! ಅಂತ ಏನೇನೋ ಮಂತ್ರಗಳನ್ನು ಹೇಳಿ, ಬೆಂಕಿಯಲ್ಲಿ ಒಂದು ಮೂಸೆಯನ್ನು ಇಟ್ಟು, ಅದರಲ್ಲಿ ಕೆಲವು ಉಪ್ಪುಗಳನ್ನೂ, ತಾಮ್ರದ ತಂತಿ ಚೂರಗಳನ್ನೂ ಹಾಕಿ, ಮಂತ್ರ ಹೇಳುತ್ತಲೇ ತಮ್ಮ ಸೊಂಟದಲ್ಲಿ ಅಡಕಿದ್ದ ಒಂದು ಡಬ್ಬಿಯನ್ನು ತೆಗೆದು ಅದರೊಳಗಿಂದ, ಬೂದಿಯಂತೆ ಕಾಣುತ್ತಿದ್ದ, ಒಂದು ಪುಡಿಯನ್ನು ಮೂಸೆಯಲ್ಲಿ ಹೊಯ್ದರು. ಅದನ್ನು ಗಮನಿಸಿ ನೋಡುತ್ತಿದ್ದ ನನಗೆ ಗಸಗಸೆ ಕಾಳಿನ ಪ್ರಮಾಣದ ರವೆಗಳು ಇದ್ದಂತೆ ಕಂಡಿತು. ನಾನು ಹುಡುಗನಾಗಿದ್ದಾಗ ಭಂಗಾರದ ರೇಖಿಗೆ ಪಾದರಸ ಹಾಕಿ ಒಂದು ಸಲ ತಿಕ್ಕಿದ್ದೆ. ಅದರಲ್ಲಿ ಇದೇ ತರಹದ ರಸದ ರವೆಗಳು ಇದ್ದದ್ದು ನನಗೆ ಜ್ಞಾಪಕಕ್ಕೆ ಬಂತು. ಇವರ ಉಪಾಯ ನನಗೆ ಗೊತ್ತಾಯಿತು. ಮೊದಲು ನಮಗೆ ನಂಬಿಕೆ ಹುಟ್ಟಿಸಲು ಚಿನ್ನದರೇಖು, ಪಾದರಸ ತಿಕ್ಕಿ, ಭಸ್ಮ ಮಾಡಿ, ಪುಟಹಾಕಿ, ಅದೇ ಚಿನ್ನವನ್ನು ನಮಗೆ ತೆಗೆದು ತೋರಿಸುವುದು! ನಮಗೆ ನಂಬಿಕೆ ಹುಟ್ಟಿದಮೇಲೆ, ನಮ್ಮಿಂದ ದುಡ್ಡು ಎಳೆಯುವುದು. ಇದೇ ಇವನ ಯಕ್ಷಿಣಿ, ಅಂತ ಗೊತ್ತಾಯಿತು. ಅವನು ಹಾಕಿದ ಪುಟ ಪೂರೈಸಿದ

ಮೇಲೆ ಬೆಂಕಿಯ ಕಾವಿಗೆ ರಸವೆಲ್ಲಾ ಹಾರಿಹೋಗಿ ಒಂದು ಹೆಸರು ಕಾಳಿನಷ್ಟು ಚಿನ್ನಮೂಸೆಯಲ್ಲಿ ಉಳಿದಿತ್ತು.

"ನೋಡಿದ್ರಾ!" ಅಂದ ಆತ.

ನಾನು, "ನೋಡಿದೆ ಗುರುಗಳೇ! ಇದು ನಾ ಕೊಟ್ಟ ದುಡ್ಡಿನಿಂದ ಆದ ಚಿನ್ನ ತಾನೇ. ಇಲ್ಲಿ ಕೊಡಿ" ಅಂತ ಈಸಿಕೊಂಡೆ. ಆಮೇಲೆ ಅವನನ್ನು ನಮ್ಮ ಮನೆಗೆ ಕರೆದುಕೊಂಡುಹೋಗಿ ನನ್ನ ಕಬ್ಬಿಣದ ಪೆಟ್ಟಿಗೆ ಬಾಗಿಲು ತೆಗೆದು ಅದರಲ್ಲಿದ್ದ ನಾಲ್ಕು ಸವರನ್ ಚೀಲಗಳನ್ನು ತೋರಿಸಿ,

"ಅಯ್ಯೋ ಪಾಪಿ! ನಿನಗೇನು ಚಿನ್ನ ಮಾಡೋಕೆಬರುತ್ತೆ? ಇದು ನೋಡು ನಾನು ಮಾಡಿದ ಚಿನ್ನ ಇನ್ನು ನಡೀ ಸಾಕು. ಊರಲ್ಲಿದ್ದರೆ ಪೋಲೀಸಿಗೆ ಹಿಡಿದು ಕೊಡುತ್ತೇನೆ" ಅಂತ ಹೇಳಿ ಮನೆಯಿಂದ ಆಚೆಗೆ ಓಡಿಸಿಬಿಟ್ಟೆ. ಆಮೇಲೆ ಈ ಮನುಷ್ಯ ಎಷ್ಟು ಜನಕ್ಕೆ ಮೋಸ ಮಾಡಿಯಾನೋ? ಇವನಿಗೆ ಸರಿಯಾದ ಬೆಸೆಮಾಡಲಿಕ್ಕೆ ತಮಗೆ ತಿಳಿಸಬೇಕು ಅಂತ ತೋರಿತು ಬಂದೆ"

ನಾನು ಪೋಲೀಸು ಇನ್‌ಸ್ಪೆಕ್ಟರನ್ನ ಕರೆಸಿ, ಸಾಹುಕಾರರ ಕತೆಯನ್ನು ಅವರ ಮುಂದೆ ಹೇಳಿಸಿದೆ ಎರಡನೆಯ ಸುನಾವಣೆಯಲ್ಲಿ ಸಾಹುಕಾರರು ಖೋಟಾ ಯೋಗಿಗೆ ಸವರನ್‌ಗಳ ಥೈಲಿಗಳನ್ನು ತೋರಿಸಿದ ಮಾತು ಮುಚ್ಚಿದರು; ಕೇಸಿಗೆ ಸಂಬಂಧಪಡದ ನಿಧಿ ಗುಪ್ತವಾಗಿರುವುದು ವಿವೇಕ. ನಾನು ಪೋಲೀಸು ಇನ್‌ಸ್ಪೆಕ್ಟರಿಗೆ—ಈ ಮನುಷ್ಯನ ಚಟವಟಿಕೆ ಜೋರಾಗುತ್ತಿದೆ. ನಿಗ ಅದರಂತೆಯೆ ಜೋರಾಗಲಿ—ಎಂದು ಜಾಗ್ರತೆಪಡಿಸಿದೆ

ಕೆಲವು ದಿನಗಳಲ್ಲೇ ಆ ಕಪಟಸನ್ಯಾಸಿ ಆತುರಪಟ್ಟು ಎಡವಿ ಕೈಗೆ ಸಿಕ್ಕಿದ. ಆ ರೀತಿ ಹೀಗೆ: ಸಾಹುಕಾರರು ಯೋಗಿಯನ್ನು ತಮ್ಮ ಸುಪರ್ದಿಗೆ ಕರೆದುಕೊಂಡದ್ದು ನೋಡಿ, ಅದರ ಉದ್ದೇಶವನ್ನೂ, ಫಲಿತಾಂಶವನ್ನೂ ಅರಿಯದ ತಾತಾಚಾರ್ಯರು—ಇದೋ, ನೋಡಿದೆಯ, ಬಡತನ ಕೆಟ್ಟದ್ದು! ನನ್ನಲ್ಲಿ ನೂರು ರೂಪಾಯಿ ಇಲ್ಲದ್ದಕ್ಕಲ್ಲವೆ ಆ ಯೋಗಿಯನ್ನು ನಾನು ಸಾಹುಕಾರನ ಕೈಗೆ ಸಿಕ್ಕಿಸಿದ್ದು. ಈಗ ಅವನ ಪ್ರಯೋಜನವನ್ನೆಲ್ಲಾ ಸಾಹುಕಾರನೆ ಹೀರಿಬಿಡುತ್ತಾನೆ— ಎಂದುಕೊಂಡು, ತನ್ನ

ಬಡತನವನ್ನು ನಿಂದಿಸಿ ಚಿಂತೆಯಲ್ಲಿದ್ದುದನ್ನು ನೋಡಿ, ಅವರ ಧರ್ಮಪತ್ನಿಯಾದ ಸಾಧ್ವಿ ತನ್ನ ತಾಯಿಯ ಮನೆಯಿಂದ ತಂದಿದ್ದ ಶರಟಿಡ್ಡಿಗೆಯನ್ನು ತನ್ನ ಯಜಮಾನರಿಗೆ ತೆಗೆದುಕೊಟ್ಟು— ಇದನ್ನು ಮಾರಿ ಬೇಕಾದ್ದು ಮಾಡಿಕೊಳ್ಳಿ — ಎಂದು ಸಂತೈಸಿದರಂತೆ. ಇದು ಆ ಕಳ್ಳ ಸನ್ಯಾಸಿಯ ಕೈಗೆ ಸೇರಿತೋ ಇಲ್ಲವೋ, ಇನ್ನು ಈ ತಾಲ್ಲೂಕಿನ ಶಿಕಾರಿ ಸಾಕು, ಹವ ಕೆಟ್ಟಿತು, ಎಂದುಕೊಂಡು ಅಲ್ಲಿಂದ ಕಂಬಿಕಿತ್ತಲು ಯತ್ನ ಮಾಡಿದ. ಅವನನ್ನು ಬೆಳಕವಾಡಿಯ ಹತ್ತಿರ ಹಿಡಿದಾಗ, ಅವನು ಸನ್ಯಾಸಿ ಆಶ್ರಮವನ್ನೂ ಅದರ ನಿಶಾನೆಯಾದ ಗಡ್ಡ ಮೀಸೆಗಳನ್ನೂ, ತ್ಯಜಿಸಿ, ಸಾಮಾನ್ಯ ವೈದಿಕ ಬ್ರಾಹ್ಮಣನಾಗಿದ್ದ ದಸ್ತಗಿರಿ ಹೊತ್ತಿನಲ್ಲಿ ಅವನಲ್ಲಿ ಸುಮಾರು ಐನೂರು ರೂಪಾಯಿನಷ್ಟು ದುಡ್ಡಿತ್ತು — ತನಿಖೆ ಪ್ರಾರಂಭಿಸಲಾಗಿ, ಇವನು ಕೇಪಮಾರೀ ಕಸಬಿನಲ್ಲಿ ಪದವೀಧರನೆಂದು ಹೊರಬಿತ್ತು. ಹಿಂದೆ ಎರಡು ಮೂರು ಸಲ ಸಜವಾಗಿತ್ತು. ಇವನಿಗೆ K. D ಡಿಗ್ರಿಗೆ ಸಂಪೂರ್ಣ ಅರ್ಹತೆ ಇತ್ತು. ಇವನ ಯೋಗ್ಯತೆಗೆ ತಕ್ಕ ಶಿಕ್ಷೆಕೊಡುವುದು ನನ್ನ ಮೆಜಿಸ್ಟೀರಿಯಲ್ ಅಧಿಕಾರಕ್ಕೆ ಮೀರಿದ್ದಾದ್ದರಿಂದ ಸಬ್ ಡಿವಿಜನ್ ೧ನೆಯ ದರ್ಜೆ ಮ್ಯಾಜಿಸ್ಟ್ರೇಟ್‌ರಾದ ವೈದ್ಯನಾಥ ಅಯ್ಯರ ಕೋರ್ಟಿನಲ್ಲಿ ಇವನ ವಿಚಾರಣೆಯಾಯಿತು. ಕೇಸನ್ನು ಸೆಷನ್ಸಿಗೆ ಕಳಿಸುವುದಕ್ಕೆ ಮುನ್ನ ಮ್ಯಾಜಿಸ್ಟ್ರೇಟರಿಗೂ ಖೈದಿಗೂ ಬಹಳ ಸ್ವಾರಸ್ಯವಾದ ಪ್ರಮೇಯಪೂರಿತವಾದ ಅನೇಕ ವಾಗ್ವಾದಗಳು ನಡೆದವೆಂತಲೂ, ಈ ಸಂದರ್ಭದಲ್ಲಿ ಭಗವದ್ಗೀತೆ, ಭಾಗವತ, ಭಾರತ, ಉಪನಿಷತ್‌ಗಳ ಪ್ರಮಾಣಗಳು ತಾಂಡವವಾಡಿ ಕೋರ್ಟಿನಲ್ಲಿದ್ದ ಲಾಯರು, ನೌಕರರು, ಪ್ರೇಕ್ಷಕರು, ವಗೈರೆಯವರಿಗೆ ತಾವು ಯಾವದೋ ಪುಣ್ಯಾಶ್ರಮದಲ್ಲೋ, ಮಠದಲ್ಲೋ, ಪುಣ್ಯಕಥೆ ಶ್ರವಣ ಮಾಡುತ್ತಿದ್ದೇವೆಂಬ ಭ್ರಮೆಯುಂಟಾಗಿರಬೇಕೆಂತಲೂ, ಕೇಸು ಮುಗಿದು ಖೈದಿಯನ್ನು ಮೈಸೂರು ಜೈಲಿಗೆ ಸಾಗಿಸಿದಾಗ ಇಡಿ ಪೋಲೀಸು ದಳವೇ ಕಣ್ಣೀರು ಸುರಿಸಿತೆಂತಲೂ, ಕೋರ್ಟಿನಲ್ಲಿ ಪೋಲೀಸು ತರ್ಫು ಕೇಸನ್ನು ನಡೆಸಿದ ಇನ್‌ಸ್ಪೆಕ್ಟರು ಚನ್ನಮರಾಜರವರು ಹೇಳಿದರು. ಇದು ಉತ್ಪ್ರೇಕ್ಷೆ ಇರಬಹುದು, ಆದರೂ ವಾಸ್ತವದ ತಿರುಳುಳ್ಳದ್ದೆಂದು ನನ್ನ ನಂಬಿಕೆ.

ಕಳ್ಳರನ್ನು ಭಾಗವತರನ್ನಾಗಿ ಪರಿವರ್ತಿಸಬೇಕೆಂಬ ಆಶೆ ಬಹಳ ಹಳೆಯದು; ಇದು ಬಹಳ ವಿಶ್ವಾಸಕ್ಕೆ ಅರ್ಹರಾದ ಜನರ ಹೃದಯವನ್ನೂ (ಮೆದುಳನ್ನೂ) ಕರಗಿಸುತ್ತೆ. ಹಿಂದೆ ಯಡತೊರೆಯಲ್ಲಿ ನಾನು ಬಹಳ ಶ್ರಮದಿಂದ, ಅದುವರೆಗೆ ಪೋಲೀಸಿನವರಿಗೆ ಬಿಸಿಲು ಹಣ್ಣು ತಿನ್ನಿಸುತ್ತಿದ್ದ ರಾಮಲಿಂಗ K. D. (Known Depredator—ಹೆಸರುವಾಸಿ ಕಳ್ಳ) ಎಂಬ ಬಿರುದಾಂಕಿತದ ಕಳ್ಳನನ್ನು ಹಿಡಿದು, ನಾನು ತಾಲ್ಲೂಕಿನಲ್ಲಿ ಬೇರೆ ಕಡೆ ಕೆಲಸಕ್ಕಾಗಿ ಹೋಗಬೇಕಾಗಿದ್ದದ್ದರಿಂದ, ನನ್ನ ಸಂಗಡ ಬಂದಿದ್ದ ಪಾರಿಜಾತ ನರಸಿಂಹಾಚಾರ್ಯರೆಂಬ ಪೋಲೀಸು ಜವಾದಾರರ ವಶಕ್ಕೆ ಕೊಟ್ಟು, ಇವನನ್ನು ಯಡತೊರೆಗೆ ಹುಷಾರಾಗಿ ತೆಗೆದುಕೊಂಡು ಹೋಗಿ ಸಬ್ ಜೈಲಿನಲ್ಲಿ ಬಂದೋಬಸ್ತಾಗಿ ಸೇರಿಸಿ ಇಡಿ, ಎಂದು ತಾಕೀದು ಮಾಡಿದೆ. ನಾನು ಎರಡು ದಿನ ಬಿಟ್ಟುಕೊಂಡು ಕಸಬಾಕ್ಕೆ ಹಿಂತಿರುಗಿದಾಗ, ರಾಮಲಿಂಗ ದಾರಿಯಲ್ಲಿ ನರಸಿಂಹಾಚಾರ್ಯರನ್ನು ಹೊಡೆದು ಪರಾರಿಯಾದನೆಂದು ವರದಿಯಾಯಿತು. ನನಗೆ ಆಶ್ಚರ್ಯವಾಯಿತು. ಕೈಕೋಳ, ಕಾಲು ಬೇಡಿಗಳಿಂದ ಬಂಧಿಸಲ್ಪಟ್ಟಿದ್ದ ಈ ಖೈದಿ, ಹೇಗೆ ಬಿಡುಗಡೆ ಹೊಂದಿದ; ನರಸಿಂಹಾಚಾರ್ಯರರು ಪುಷ್ಟರು; ಅವರ ಸಂಗಡ ಒಬ್ಬ ಕಾನ್‌ಸ್ಟೆಬಲ್ ಕೂಡ ಇದ್ದ; ಇವರಿಬ್ಬರನ್ನೂ ಹೊಡೆಯುವುದು ಒಬ್ಬನಿಗೆ ಸಾಧ್ಯವೇ? ಅಂತ ಸಂದೇಹ ತೋರಿತು. ನರಸಿಂಹಾಚಾರ್ಯರು—ದಾರಿಯಲ್ಲಿ ಬಿಸಿಲಿನಲ್ಲಿ ಬರುತ್ತಿದ್ದಾಗ, ಆಗಲೇ ಖಾಯಿಲೆ ಇದ್ದು ದಸ್ತಗಿರಿ ಸಂದರ್ಭದಲ್ಲಿ ಸ್ವಲ್ಪ ಪೆಟ್ಟು ಬೇರೆ ತಿಂದಿದ್ದ ಖೈದಿ ಮೂರ್ಛೆ ಹೋದನೆಂತಲೂ, ಕಾನ್‌ಸ್ಟೇಬಲನ್ನು ಹತ್ತಿರದಲ್ಲಿದ್ದ ಗ್ರಾಮಕ್ಕೆ ನೀರಿಗೂ, ಒಂದು ಬಂಡಿ ತಲಾಷು ಮಾಡಿ ತರುವುದಕ್ಕೂ ಕಳಿಸಿದ್ದಾಗಿಯೂ, ಅವನು ಕಣ್ಣುಮರೆಯಾಗುತ್ತಲೇ ಖೈದಿಯು ತನ್ನ ಕಾಲು ಛಳಕು, ಬೇಡಿ ಸ್ವಲ್ಪ ತೆಗೆಯಿಸಿ; ಸುಧಾರಿಸಿಕೊಂಡಮೇಲೆ ತಿರುಗ ಹಾಕುವಂತೀರಿ ಅಂತ ಹೇಳಿದ್ದಾಗಿಯೂ, ಭೂತದಯೆಯಿಂದ ತಾವು ಹಾಗೆ ಮಾಡಿದ್ದಾಗಿಯೂ, ಖೈದಿ ಸ್ವಲ್ಪವೂ ನಿಯತ್ತಿಲ್ಲದೆ ಕೂಡಲೆ ಓಡಲಿಕ್ಕೆ ಷುರೂ ಮಾಡಿದ್ದಾಗಿಯೂ, ತಾವೂ ಬೆಂಬತ್ತಿ, ಅವನನ್ನು ಹಿಡಿದು ಬಹಳ ಜೂರತ್ತಿನಿಂದ ಹೋರಾಡಿದ್ದಾಗಿಯೂ—("ಆದರೇನು?

ಜಯಾಪಜಯ ದೈವಾಧೀನ"ವೆಂದು ದೈವಕ್ಕೆ ತಲೆಬಾಗಿ ಹೇಳಿದರು ನರಸಿಂಹಾಚಾರ್ಯರು) — ಕೊನೆಗೆ ಖೈದಿ ತಪ್ಪಿಸಿಕೊಂಡು ಪಲಾಯನ ಮಾಡಿದ್ದಾಗಿಯೂ ಹೇಳಿದರು. ಈ ವೃದ್ಧ ಖಾಕಿ ವೈದಿಕರ ಪರಿಯನ್ನು ಕೇಳಿ ನಾನು—ಅಯ್ಯೋ ಪಾಪ—ಅಂದುಕೊಂಡು ಸುಮ್ಮನಾದೆ. ಆದೇ ದಿನ ನಾನು ಕೋರ್ಟಿನಲ್ಲಿದ್ದಾಗ ಪರಾರಿಯಾಗಿದ್ದ ರಾಮಲಿಂಗ ತಾನಾಗೇ ಬಂದು—ಇದೋ ಮಹಾಸ್ವಾಮಿ, ಬಂದಿವನಿ; ಏನುಮಾಡುತ್ತೀರೋ, ಅಪ್ಪಣೆ ಮಾಡಿ—ಅಂದ.

"ನೀನು ಜಮಾದಾರರನ್ನು ಹೊಡೆದು ಫರಾರಿಯಾದಂತಲ್ಲೋ? ಓಡಿದ್ದೇನು, ತಿರಗ ಬಂದದ್ದೇನು?" ಎಂದು ಕುತೂಹಲದಿಂದ ಕೇಳಿದೆ.

"ನಾನು ಓಡಿ ಹೋಗಬೇಕೆಂದು ಹೋಗಲಿಲ್ಲವೇನಿ, ನನ್ನ ಹೆಂಡರು ತುಂಬಿದ ಬಿಮ್ಮನಶಿ, ಈಗ ನಾನು ಎಲ್ಲಿ ವೋಗಲಿ? ಆದರೆ ದಾರೀಲಿ ಈ ಪೋಲೀಸು ದಾಸರೀ ಮಾತು ಕೇಣನಾರದೆ ರೋಸಿವೋಗಿ —ಸೋಮಿ, ನಮ್ಮಪ್ಪ, ಇನ್ನುಬೇಡ, ಏನಾದರೂ ಆಗಲಿ,—ಅಂತ ಕಾಲಿಗೆ ಬುದ್ಧಿ ಏಳಿದೆ. ಅವರೇ ಪಾಪ ಬೇಡಿ ತೆಗೆದುಬಿಟ್ಟಿದ್ದರು. ಕೋಳ ಊರಲ್ಲಿ ಕಳಚಿಸಿದೆ. ತಾವು ಸರ್ಕೀಟಿಂದ ಬಂದದ್ದು ಕೇಳಿ, ಧಣಿ ಚಿತ್ತ ಕೇಳೋಕೆ ಬಂದೆ. ನಾನೇನು ತಕ್ಸೀರು ಮಾಡಿವನಿ ಬುದ್ಧಿ?"

"ನೀನು ಮಾಡಿರೋ ತಕ್ಸೀರು ನ್ಯಾಯವಾದ ಬಂಧನದಿಂದ ಅಕ್ರಮವಾಗಿ ತಪ್ಪಿಸಿಕೊಂಡದ್ದು. ಅದು ಹಾಗಿರಲಿ. ಪೋಲೀಸು ಜಮಾದಾರರು ನೀನು ಕೇಳಬಾರದ ಮಾತು ಏನೋ ಹೇಳಿದ್ದು? ಅಷ್ಟು ಕಷ್ಟವಾಯಿತೆ ಕೇಳೋದು?"

"ಬುದ್ದಿ, ಕೇಳಿ, "ನೀನು ಪಾಪಿ" "ನೀನು ಹಿಂದಿನ ಹುಟ್ಟಿನಲ್ಲಿ ಕರ್ಮಮಾಡಿದ್ದಿ" "ನೀನು ಕೆಟ್ಟ ಹೊಟ್ಟೇಲಿ ಹುಟ್ಟಿದ್ದಿ" "ಈಗಾದರೂ ಒಳ್ಳೇವನಾಗಿ ಶ್ರೀ ಕೃಷ್ಣನಲ್ಲಿ ಬುದ್ಧಿ ಇಡು" ಎಂದರು. ನಾನು "ಕೃಷ್ಣ ನಿಗೇ ನಮ್ಮಂತೋರಿಗೇ ಬಾಳದೂರ; ಆದರೂ ಕೈನಾಗೆ ಕಾಸಿದ್ದಾಗ ಗುಡೀಲಿ ಹಣ್ಣು ಕಾಯಿಮಾಡಿಸಿ, ಬ್ರಾಂಬರಿಗೆ, ತಮ್ಮಡಿಗಳಿಗೆ, ಮೂರು ಕಾಸು ಆರುಕಾಸು ಕೊಡೋದುಂಟು—ಅಂದಿ. "ಅದಲ್ಲ ಕಾಣೋ,

ಪಾಮರ, ನಾನು ಹೇಳ್ತೀನಿ ಕೇಳೋ" ಅಂತ ಹೇಳೋಕೆ ಷುರೂ ಮಾಡಿದೋರು— ಹೇಳಿದರು, ಹೇಳಿದರು, ಕೇಳೀ ಬುದ್ಧಿ; ಮೇಲೂರು ಬಂತು, ಇನ್ನೂ ಹೇಳ್ತಾಲೆ ಅವರೆ; ಅಂಕನಹಳ್ಳಿ ಬಂತು, ನಮ್ಮಪ್ಪ ಇನ್ನೂ ಬಿಡಲಿಲ್ಲ ನಾನು ಎಲ್ಲ ಬಿಡಬೇಕಂತೆ, ಆಗಲು ರಾತ್ರೆ ಗೂಟ ಹೊಡೆದಂಗೆ ಕುಂತು, ರಾಮ, ರಾಮ, ಕ್ರಿಷ್ಣ, ಕ್ರಿಷ್ಣ ಅಂತ ಮೂಗು ಇಡ ಕೊಂಡು ದ್ಯಾನಮಾಡಬೇಕಂತೆ— ಆಗಲಿ, ಬುದ್ಧಿ, ಹಂಗೆ ಮಾಡಿದರೆ ನನ್ನ ಹೆಂಡರು ಮಕ್ಕಳಿಗೆ ಹಿಟ್ಟೂ ಬಟ್ಟೆ ಕೊಡೋರ್ಯಾರು? ಅಂದೆ. 'ನಾನು ಹೇಳಿದ್ದು ಸರಿಯಾಗಿ ಅರ್ಥಮಾಡಿಕೋ ಹೆಂಡರು ಮಕ್ಕ ಳನ್ನು ದೇವರೇ ಕಾಪಾಡ್ತಾನೆ— ಅಂದರು. ಹಂಗೇ ಆಗಲಿ, ಬುದ್ಧಿ; ನಾನು ಸ್ವಲ್ಪ ಒಂದಕ್ಕೆ ಹೋಗಬೇಕು—ಅಂತ ಕೇಳಿದೆ. ನನ್ನ ಕೋಳದ ಸರಪಳಿಯನ್ನು ಪೋಲೀಸಿನವನ ಕೈಯಿಂದ ಬಿಡಿಸಿದರು. ನಾನು ಬಾಳ ಮಾನೋಸ್ತ, ಎಲ್ಲರ ಎದುರಿಗೂ ಚಡ್ಡಿ ಬಿಚ್ಚಿಕೊಂಡು ಕೂಡ್ಲೆ? ವಸಿ ದೂರ ಹೋಗಿ ವಬ್ಬೆ ಮರೇಲಿ ಕುಂತು, ಆಮೇಲೆ ಎದ್ದು ಕಾಲಿಗೆ ಬುದ್ಧಿ ಏಳಿದೆ. ಪೋಲೀಸಿನಪ ಬೆನ್ನಟ್ಟಿ ಬಂದ. ಆದರೆ ಅವ ನನ್ನ ಹಿಡಿಯೋ ಗಂಡು ಅಲ್ಲ ಇದೇ ಬುದ್ಧಿ, ನಾನು ಪರಾರಿಯಾದ ಸುದ್ದಿ."

ನರಸಿಂಹಾಚಾರರಿಗೆ ನಾನು—ನೋಡಿ, ಜಮಾದಾರರೆ, ನೀವು ರಿಟೈರಾಗಿ ಖಾಕಿ ಬಿಚ್ಚಿ ಕಾಷಾಯ ಧರಿಸಿದಾಗ ಭಗವದ್ಗೀತ, ಭಾಗವತ: ಅದುವರಿಗೂ, ಪೀನಲಕೋಡು, ಪೋಲೀಸು ರೂಲ್ಸು—ಎಂದು ಹೇಳಿದೆ.

ರಾಮಲಿಂಗನಿಗೆ—

ಸರಿ, ಕಾಣೋ. ನಿನ್ನ ಹೆಂಡತಿ ಬಿಮ್ಮನಶಿ ಅಂದೆ. ಅವಳ ಹೆರಿಗೆ ಬಾಣಂತನ ತೀರೋವರಿಗಾದರೂ ಸಂಭಾವಿತನಾಗಿರು ಆಮೇಲೆ ಜಮಾದಾರರು ಹೇಳಿದ ಪಾಟ ನಿನಗೆ ಹಿಡೀದಿದ್ದರೆ, ತಿರಗ ಇಲ್ಲಿಗೆ ಬಾ, ಜೈಲಿಗೆ ಕಳಿಸೋಣಂತೆ—

ಎಂದು ಹೇಳಿ ಕಳಿಸಿಕೊಟ್ಟೆ.

೩೫

ನನಗೆ ದೇವಸ್ಥಾನಗಳು, ಅದರಲ್ಲೂ ಬಹುಕಾಲದಿಂದ ಜನಗಳ ಪ್ರೀತಿಗೂ ಭಕ್ತಿಗೂ ಎಡೆಯಾದ ದೇವಸ್ಥಾನಗಳು, ಎಂದರೆ ಬಹಳ

ಗೌರವ, ಪ್ರೇಮ. ಅಲ್ಲಿ ನೆರೆಯುವ ಜನ ತಾತ್ಕಾಲಿಕವಾಗಾದರೂ ತಮ್ಮ ಸ್ವಭಾವದ ಉತ್ತಮ ಗುಣಗಳ ವಶರಾಗಿ, ಶುದ್ಧ ಹೃದಯದಿಂದ ಜಗತ್ತಿನ ಪಿತನ ಹತ್ತಿರ ಹಸುಮಕ್ಕಳ ಹಾಗೆ ಬರುತ್ತಾರೆ. ಅವರ ಶಾಶ್ವತ ಪರಿಮಳ, ಪರಿಶುದ್ಧತೆ ಗ್ರಾಮೋಫೋನ್ ಮೇಣದ ಹಲಿಗೆಯ ಮೇಲೆ ಸಂಗೀತದ ಶಾಸನವಿರುವಂತೆ ಆ ಕ್ಷೇತ್ರದ ವಾತಾವರಣದಲ್ಲಿ ನಿತ್ಯವಾಗಿ ಸ್ಥಾಪಿತವಾಗಿರುತ್ತದೆ; ನಾವು ಅಲ್ಲಿ ಸರಿಯಾದ ಮನೋಧರ್ಮದಿಂದ ಹೋದರೆ ಅದರ ಪವಿತ್ರತೆ ನಮ್ಮ ಹೃದಯದಲ್ಲೂ ಹೊಕ್ಕು ವ್ಯಾಪಿಸುತ್ತದೆ—ಎಂದು ನನ್ನ ನಂಬಿಕೆ, ನನ್ನ ಅನುಭವ. ನಾನು ಅಂಥ ಗುಡಿಗಳಿಗೆ ಹೋದರೆ, ನನಗೂ ಎಲ್ಲರ ಹಾಗೆ ಭಯಭರಿತ ಭಕ್ತಿಯೂ, ಹುಡುಗರ ಹಾಗೆ ಒಂದು ತರಹದ ವಿಸ್ಮಯವೂ ಉಂಟಾಗುತ್ತಿತ್ತು. ನಾನು ಸಾಮಾನ್ಯವಾಗಿ ಹತ್ತಿರ ಯಾವದಾದರೂ ದೇವಸ್ಥಾನವಿದ್ದರೆ ಪೂಜೆ ವೇಳೆಗೆ ಹೋಗಿ ನನ್ನ ಭಕ್ತಿಗೆ ಮಾತ್ರ ಕಂಡು ಕಾಣದಹಾಗೆ ಉಪಸ್ಥಿತ ಗೋಚರವಾಗುವ ಸ್ವಾಮಿಗೆ—ಸ್ವಾಮಿ, ನಮ್ಮಪ್ಪ ನನಗೆ, ನಮ್ಮವರಿಗೆ, ನಮ್ಮ ನಾಡಿಗೆ, ಸರ್ವಸೃಷ್ಟಿಗೆ ಸುಖವನ್ನ ಕೊಡು—ಅಂತ ಬೇಡುತ್ತಿದ್ದ. ನಾನು ವೈದಿಕ ಮನೆತನದ ದೇಶಸ್ಥ ಮಾಧ್ವ ಬ್ರಾಹ್ಮಣನೆಂದು ನನ್ನ ಕತೆಯಿಂದ ಗೊತ್ತಾಗಿರಬಹುದು; ಆದರೆ ನನ್ನ ಹುಟ್ಟು ಮತವೇ ನನ್ನ ಪ್ರೀತಿಯದಾಗಿದ್ದರೂ, ವ್ಯವಹಾರದಲ್ಲಿ ನನಗೆ ಯಾವ ವಿಧವಾದ ಪಕ್ಷಪಾತವೂ ಇರಲಿಲ್ಲ. ಇಂಥದ್ದರಲ್ಲಿ ನಾನು ಮಾಧ್ವ ಪಕ್ಷಪಾತಿ ಎಂಬ ಆಪಾದನೆಗೆ ಒಂದು ಸಲ ಒಳಗಾಗಿ, ಬಹಳ ನಿಷ್ಠುರಕ್ಕೂ ಬದಲಾವಣೆಗೂ ಸಿಕ್ಕಬೇಕಾಯಿತು.

ತಿರುಮಕೂಡ್ಲು ನರಸೀಪುರದಲ್ಲಿ ಶ್ರೀ ಗುಂಜಾ ನರಸಿಂಹಸ್ವಾಮಿ ರಥೋತ್ಸವವೇ ದೊಡ್ಡ ಹಬ್ಬ. ಇದು ಊರಹಬ್ಬ ಮಾತ್ರವಲ್ಲ. ದೇವರ ಹೆಸರಿರುವ ತಾಲ್ಲೂಕಿಗೇ ಹಬ್ಬ. ಹಿಂದಿನ ಕಾಲದಲ್ಲಿ ಕೋಮು ಪೃಥಗ್ಭಾವನೆ ಇಲ್ಲದೆ ಎಲ್ಲರೂ ಬರುತ್ತಿದ್ದರೆಂದು ಕಾಣುತ್ತದೆ. ನಾನು ಅಲ್ಲಿ ಅಮಲ್ದಾರನಾಗಿದ್ದಾಗಲೂ ಕೂಡ ಶಿವಾಚಾರದವರ ಕೆಲವು ಭಾಗದ ಹೊರತು ತಾಲ್ಲೂಕಿನ ಮುಕ್ಕಾಲುಪಾಲು ಜನಗಳು ಬರುತ್ತಿದ್ದರು.

ಶ್ರೀ ಗುಂಜಾ ನರಸಿಂಹಸ್ವಾಮಿ ದೇವಸ್ಥಾನ ಸರಕಾರಿ .ಆಡಳಿತಕ್ಕೆ ಒಳ ಪಟ್ಟ ಮುಜರಾಯಿ ಇನ್‌ಸ್ಟಿಟ್ಯೂಷನ್ ಆಗಿದೆ. ಅದಕ್ಕೆ ಜುಜುಬಿ ಸಂಬಳದ ಆದರೆ ಬಹು ತರಳೆ ತಕರಾರಿನ ಅನೇಕ ಬಹು ಸಿಬ್ಬಂದಿ ಇದೆ —ಮುಕ್ಕಾಲು ಮೂರು ವೀಸ ಪಾಲು ಶ್ರೀವೈಷ್ಣವರು, ವಂಶಪಾರಂಪರ್ಯ ಹಕ್ಕುದಾರಿ ನೌಕರರು. ಇವರಲ್ಲಿ ವಡಗಲೆ ತೆಂಗಲೆ ಪಂಗಡಗಳವರು ಸ್ವಲ್ಪ ಹೆಚ್ಚುಕಡಿಮೆ ಸಮಸಂಖ್ಯಾತರು. ಸಾಮಾನ್ಯವಾಗಿ ಸರ್ಕಾರದ ಮುಂದೆ ಬರುವ ವಿಷಯಗಳಲ್ಲಿ ವಡಗಲೆ ಏತಿಗೆ ತೆಂಗಲೆ ಪ್ರೇತಿ ಸಿದ್ಧ ವಾದರೂ, ಉಭಯತ್ರರೂ ದೇವಸ್ಥಾನದ ಕಟ್ಟಲೆಗಳಲ್ಲಿ ಹತ್ತು ವರುಷದ ಪುಟಗೋಸಿ ಬ್ರಹ್ಮಚಾರಿ ದೇಖೀಲು ಶ್ರೀ ವೈಷ್ಣವರಿಗೆಲ್ಲರಿಗೂ ತೀರ್ಥ ಪ್ರಸಾದ ವಿನಿಯೋಗವಾದಮೇಲೆ ಬಾಕಿಯವರ ಮಾತು, ಎಂಬುದರಲ್ಲಿ ಒಮ್ಮತವಾಗಿದ್ದರು. ಅಧ್ಯಯನ ಮಾಡಿದ ವೃದ್ಧ ವೈದಿಕರು ಸಹ ಎರಡನೆ ಪಂಕ್ತಿಗೆ ಕಾಯಬೇಕಾಗುತ್ತಿತ್ತು. ನಾನು ದೇವಸ್ಥಾನಕ್ಕೆ ಹೋದರೆ ಮಾತ್ರ, ರಾಜಗುರುಗಳ ಪ್ರತಿನಿಧಿಯ ಮರ್ಯಾದೆಯಾದಮೇಲೆ ರಾಜರ ಪ್ರತಿನಿಧಿ ಎಂದು ಅಮಲ್ದಾರರಿಗೆ ತೀರ್ಥಪ್ರಸಾದ, ಆಮೇಲೆ ವಯೋವೃದ್ಧರೂ ಅಧ್ಯಾಪಕರೂ ಆದ ನಾಗಾವಧಾನಿಗಳು, ಕೃಷ್ಣ ಶಾಸ್ತ್ರಿಗಳು, ವೆಂಕಟರಾಮಾಶಾಸ್ತ್ರಿಗಳಿಗೆ ತೀರ್ಥಪ್ರಸಾದ, ಈ ಕಟ್ಟಲೆ ಇತ್ತು.

ಸರಿ, ಒಂದುಸಲ ಶ್ರೀ ಗುಂಜಾ ನರಸಿಂಹಸ್ವಾಮಿಯವರ ರಥೋ ತ್ಸವ ಸಂದರ್ಭದಲ್ಲಿ ತಾವು ದೇವರ ದರ್ಶನಕ್ಕೆ ಬರಬೇಕೆಂದು ಇಚ್ಛಿ ಸುತ್ತೇವೆ, ಏನಾದರೂ ಅಭ್ಯಂತರ ಉಂಟೆ? ಎಂದು ಮಾಧ್ವಗುರು ಗಳಾದ ಸೋಸಲೆ ಶ್ರೀ ವ್ಯಾಸರಾಯಮಠದ ಶ್ರೀ ಶ್ರೀಗಳವರು ನನಗೆ ನಿರೂಪ ಕಳುಹಿಸಿದರು: ನಾನು ಅಭ್ಯಂತರವೆಂದರೇನು? ಅವಶ್ಯಕ ವಾಗಿ ದಯಮಾಡಿಸಿ, ತಮ್ಮ ದರ್ಶನ ಆಶೀರ್ವಾದಗಳನ್ನು ರಥೋತ್ಸವ ಕ್ಕಾಗಿ ನೆರೆದಿರುವ ಭಕ್ತಮಂಡಲಿಗೆ ಅನುಗ್ರಹಿಸಬೇಕೆಂದು ಉತ್ತರ ಕೊಟ್ಟೆ. ಇದು ಪ್ರಥಮತಃ ನನ್ನ ಬುದ್ಧಿಗೆ ಹೊಳೆದದ್ದು—ಯಾರನ್ನು ಏನು ಕೇಳುವುದೆಂದು, ಕೂಡಲೆ ಹೀಗೆ ಉತ್ತರ ಕೊಟ್ಟೆ. ದೇವರ ದರ್ಶನಕ್ಕೆ ಯಾರಾದರೂ ಬರಬಹುದಲ್ಲ—ಯತಿಗಳು ಬರುವುದಕ್ಕೆ ಏನು ಹರ

ಕತ್ತು? ಎಂದು ತೋರಿತು. ಆಮೇಲೆ ತೋರಿತ.—ಎಲ್ಲರೂ ಬರುವುದಕ್ಕೂ, ಒಂದು ಪ್ರಮುಖ ಮಠದ ಸ್ವಾಮಿಗಳು ಬರುವುದಕ್ಕೂ, ವ್ಯತ್ಯಾಸವಿದೆ; ಸಾಮಾನ್ಯರು ಪೂಜೆಮಾಡುವುದಕ್ಕೆ ಮಾತ್ರ ಬರುತ್ತಾರೆ, ಸ್ವಾಮಿಗಳು ಪೂಜೆ ಮಾಡಿಸಿಕೊಳ್ಳುವುದಕ್ಕೂ ಬರುತ್ತಾರೆ. ಇವರು ಮುಜರಾಯಿ ದೇವಸ್ಥಾನಕ್ಕೆ ಸರ್ಕಾರದ ಲವಾಜಮೆಯಿಂದ ನಡೆಯುವ ವಿಶೇಷ ಕಟ್ಟಲೆ ಉತ್ಸವಗಳಿಗೆ ಬಂದರೆ, ಮಾಮೂಲು ಮರ್ಯಾದೆ, ಆಚರಣೆ ಹ್ಯಾಗೆ? ರಾಜಗುರುಗಳಿಗೂ ಇವರಿಗೂ ತಾರತಮ್ಯ ಯಾವ ರೀತಿ ತೋರಿಸಬೇಕು? ಈ ಪ್ರಶ್ನೆಗಳು ಏಳುತ್ತವೆ—ಎಂದು. ನಾನು ದೇವಸ್ಥಾನದ ಪಾರಪತ್ತೆಗಾರರನ್ನೂ, ನನ್ನ ಶಿರಸ್ತೆದಾರರನ್ನೂ ಕರೆಸಿ ಇದನ್ನು ಪ್ರಸ್ತಾಪ ಮಾಡಲಾಗಿ ಇವರು (ಇಬ್ಬರೂ ಶ್ರೀವೈಷ್ಣವರು, ಬುದ್ಧಿವಂತರು, ಅನುಭವಸ್ಥರು) ನನಗೆ ನಿಸ್ಸಂದೇಹವಾಗಿ ಹೇಳಿದರು:

ರಾಜಗುರುಗಳಾದ ಪರಕಾಳ ಮಠದ ಸ್ವಾಮಿಗಳೂ ಇತರ ಮಠದ ಸ್ವಾಮಿಗಳೂ ಬಂದರೆ, ಮೊದಲು ಮರ್ಯಾದೆ ಪರಕಾಳ ಮಠದ ಸ್ವಾಮಿಗಳಿಗೆ ಮಾಡ ಬೇಕು; ಪರಕಾಳ ಮಠದ ಗುಮಾಸ್ತರು, ಇತರ ಮಠಗಳ ಗುಮಾಸ್ತರೂ ಬಂದರೆ, ಪರಕಾಳ ಮಠದ ಗುಮಾಸ್ತರಿಗೆ ಮಾಡಬೇಕು; ಪರಕಾಳ ಮಠದ ಗುಮಾಸ್ತರೂ ಇತರ ಮಠದ ಸ್ವಾಮಿಗಳೂ ಬಂದರೆ ಖುದ್ದಾಗಿ ಬಂದಿರುವ ಸ್ವಾಮಿಗಳಿಗೇ ಅಗ್ರಮರ್ಯಾದೆ ಸಲ್ಲತಕ್ಕದ್ದು—ಎಂದು.

ಇದು ನನಗೆ ಯುಕ್ತವಾದ್ದು — ಕಾಮನ್ ಸೆನ್ಸ್‌ಗೆ ಅನುಗುಣವಾದದ್ದು — ಎಂದು ತೋರಿ, ಹಾಗೇ ನಾಳೆ ಸೋಸಿಲೆ ಸ್ವಾಮಿಗಳ ವಿಚಾರದಲ್ಲಿ ಆಚರಿಸಿ, ಎಂದು ಹೇಳಿದೆ. ಆಗ ನಾನು ಮೀನ ಮೇಷ ಮಾಡಿ ವಿಚಾರಣೆಗೆ ಷುರೂ ಮಾಡಿದ್ದರೆ — ಶಂಕೆಗಳು, ಸಿದ್ಧಾಂತಗಳು, ಪ್ರತಿಕಕ್ಷಿಗಳು, ಸಮಾಧಾನಗಳು ಮೇಧಾವಂತ, ವಾಚಾಳವಾದ, ವ್ಯಾಯಾಮಮಲ್ಲರ ಸಂಘದಲ್ಲಿ ಉತ್ಪನ್ನವಾಗಿ, ನಾಳಿನ ರಥೋತ್ಸವ ಹಾಗಿರಲಿ, ಮುಂದಿನ ವರ್ಷದ ರಥೋತ್ಸವಕಾಲಕ್ಕೂ ಸಮಸ್ಯೆಗಳು ವ್ಯವಸ್ಥೆಗೆ ಬರುತ್ತಿರಲಿಲ್ಲ.

ಸಂಪ್ರದಾಯದ ವರದಿಯನ್ನು ಪಾರಪತ್ತೆಗಾರರಿಂದ ಲಿಖಿತಮೂಲಕವಾಗಿ ತೆಗೆದುಕೊಂಡು ನನ್ನ ದಾಖಲೆಗಾಗಿ ಇಟ್ಟುಕೊಂಡೆ.

ಮೂರನೆಯ ದಿನ — ಅಂದರೆ ರಥೋತ್ಸವದ ದಿನ— ಶ್ರೀ ಸ್ವಾಮಿಗಳವರು ಎಂಟು ಎಂಟೂವರೆ ಘಂಟೆಗೆ ಸೋಸಲೆಯಿಂದ ದೋಣಿಯಲ್ಲಿ ತಮ್ಮ ಪರಿವಾರ ಸಮೇತರಾಗಿ ದಯಮಾಡಿದರು. ಇಲ್ಲಿಯಾದರೋ ಶ್ರೀ ನರಸಿಂಹಸ್ವಾಮಿ ದೇವಸ್ಥಾನದ ಮುಂದೆ — ಸುತ್ತಲೂ— ಊರಿನಿಂದ ಹೊಳೆಯ ಕರೆಯವರೆಗೂ, ಸಹಸ್ರಾರು ಜನದ ಸಂದಣಿ ರಥೋತ್ಸವದಲ್ಲಿ ದೇವರ ದರ್ಶನಕ್ಕೆ, ಮತ್ತೆ ತೇರು ಎಳೆವ ಸೇವೆಗಾಗಿ ನೆರೆದಿತ್ತು. ನಾನು ದೇವಸ್ಥಾನದ ನದೀಘಟ್ಟದಲ್ಲಿ ಸ್ವಾಮಿಗಳನ್ನು, ತಾಲ್ಲೂಕು ಮತ್ತು ದೇವಸ್ಥಾನದ ಮರ್ಯಾದೆಗಳೊಡನೆ ಎದುರುಗೊಂಡು ಹಸ್ತಲಾಘವ ಕೊಟ್ಟು, ದೇವಸ್ಥಾನಕ್ಕೆ ಮೂಲ ದೇವರಪೂಜೆಗೂ, ಆಮೇಲೆ (ಸ್ವಲ್ಪ ಹೆಚ್ಚು ಕಡಿಮೆ ಆ ವೃದ್ಧ ಸನ್ಯಾಸಿಗಳ ವಿಶಿಷ್ಟ ಭಾರವನ್ನೂ ವಹಿಸಿ) ರಥದ ಮೇಲೆ ರಥಸ್ಥರಾಗಿದ್ದ ಉತ್ಸವದ ಸನ್ನಿಧಿಗೂ ಕರೆದುಕೊಂಡುಹೋಗಿ, ಉಭಯ ಕಡೆಗಳಲ್ಲೂ ಕ್ರಮವಾಗಿ ಕಾರ್ಯಾಚರಣೆಯಾದಮೇಲೆ ಕಾದಿದ್ದ ದೋಣಿಗೆ ಕರೆದುಕೊಂಡು ಬಂದು ಸೋಸಲೆಗೆ ವಾಪಸು ಕಳುಹಿಸಿಕೊಟ್ಟೆ. ಅಷ್ಟು ಹೊತ್ತಿಗೆ ಸುಮಾರು ಹನ್ನೊಂದು ಘಂಟೆಯಾಗಿತ್ತು. ಈ ಕೆಲಸವೆಲ್ಲ ನಡೆಯುವಾಗ ಯಾರಿಂದಲೂ ಯಾವ ಆಕ್ಷೇಪಣೆಯೂ ಹೊರಬೀಳಲಿಲ್ಲ.

ಇನ್ನೇನು, ತೇರು ಹೊರಡಬೇಕು. ಉತ್ಸಾಹಶಾಲಿಗಳಾದ, ನೇಮದಿಂದ ಸೇವೆಗಾಗಿ ಬಂದಿರುವ, ಸಾವಿರಾರು ಜನ ಕಾದಿದ್ದಾರೆ; ಅವರ ಪೈಕಿ ನೂರಾರು ಜನ ನಾನು ಮುಂದು ತಾನು ಮುಂದೆಂದು ತೇರಿನ ಹಗ್ಗಗಳನ್ನು ಆದರದಿಂದ ಹಿಡಿದು ಎಳೆಯಲು ಕಾದಿದ್ದಾರೆ; ನಾನೂ, ನನ್ನ ಪರಿಚಯಸ್ಥರಾದ ಹಲವರೂ ಹಗ್ಗ ಹಿಡಿಯಲು ಸಿದ್ಧರಾಗಿ, ಸದ್ಯಕ್ಕೆ ಬಿಸಿಲ ವೇಗ ತಡೆಯಲಾರದೆ ಒಂದು ಕುರಚು ಮರದ ಕೆಳಗೆ ನಿಂತಿದ್ದೇವೆ. ಆಗ ಇದ್ದಕ್ಕಿದ್ದ ಹಾಗೆ ತೇರಿನ ಮುಂದೆ ಏನೋ ಗಲಾಟೆ ಎದ್ದು ತೇರು ಹೊರಡುವುದಕ್ಕೆ ಅಟಕಾವಾದಂತೆ ಕಂಡಿತು. ನಾನು ನನ್ನ ಬಳಿ ಇದ್ದ ಜಮಾದಾರ ಶಾಮಣ್ಣನೆಂಬುವರಿಗೆ— ಅದೇನೋ,

ನೋಡಿ, ತೇರನ್ನು ಬೇಗ ಹೊರಡಿಸಿ; ಬಿಸಿಲು ಬಹಳ ಜೋರಾಯಿತು, ಬಹಳ ಜನ—ಹೆಂಗಸರು ಮಕ್ಕಳು ಸಹ—ಕಾದಿದ್ದಾರೆ; ತೇರು ನಿಲುವಿಗೆ ತಲುಪಬೇಕಾದರೆ ಇನ್ನೂ ಎರಡು ತಾಸು ಆಗುತ್ತೆ—ಅಂದೆ. ಜವಾ ದಾರರು ಹೊರಟರು. ಅವರು ಅಲ್ಲಿ ಸೇರಿದ ಮೇಲೆ ಗಲಾಟೆ ತಹ ಬಂದಿಗೆ ಬರುವುದರ ಬದಲು ಇನ್ನೂ ಹೆಚ್ಚಾಗುತ್ತಾ ಬಂತು. ನಾನೇ ಅಲ್ಲಿಗೆ ಹೋದೆ. ತೇರ ಮುಂದೆ ಆ ಊರಿನ, ಮತ್ತು ತಿರುಮಕೂಡ್ಲು, ಗರ್ಗೇಶ್ವರಿ, ಸೋಸಲೆ ಗ್ರಾಮಗಳ ಬ್ರಾಹ್ಮಣರ ಸಭೆ ಕೂಡಿದೆ; ಎಲ್ಲರೂ ಮಾತನಾಡುತ್ತಿದ್ದಾರೆ. ಅವರ ಕೂಟದ ಕೇಂದ್ರ ಮೂರ್ತಿ ಯಾಗಿ ಪರಕಾಳಮಠದ ಗುಮಾಸ್ತೆ—(ಅವರ ಹೆಸರು ನರಸಿಂಹಾಚಾ ರ್‍ರೆಂದು ಜ್ಞಾಪಕ)—ವೀರಾವೇಶದಿಂದ ನಿಂತು ಉಪನ್ಯಾಸ ಮಾಡುತ್ತಿ ದ್ದಾರೆ. ನನ್ನನ್ನು ನೋಡಿದ ಕೂಡಲೆ ಸದ್ದು ಅಡಗಿತು. ಮುತ್ಸದ್ದಿ ಯವರು ನನ್ನನ್ನು ಸಂಬೋಧಿಸಿ,

"ಇವತ್ತು ಯಾರಿಗೆ ಸ್ವಾಮಿ ಅಗ್ರಮರ್‍ಯಾದೆ ಮಾಡಿಸಿದಿರಿ?" ಎಂದರು.

ನಾನು ಪಾರಪತ್ತೇಗಾರ್‍ರಿಗೆ—"ಹೇಳಿ, ಅವರಿಗೆ" ಎಂದೆ. ಅವರು ಹೇಳಿದರು.

ಮುತ್ಸದ್ದಿಯವರು—

"ಹಾಗಾದರೆ ರಾಜಗುರುಗಳಿಗಿಂತಲೂ ಸುಬೇದಾರ್‍ರ ಗುರುಗಳು ಹೆಚ್ಚು!" ಎಂದರು.

ನನಗೆ ಏರುತ್ತಿದ್ದ ಕೋಪವನ್ನು ಹಟಾತ್ತಾಗಿ ತಡೆದು,

"ರಾಜಗುರುಗಳ ಸವಾರಿ ಚಿತ್ತೈಸಿಲ್ಲ ಸೋಸಿಲೆ ಸ್ವಾಮಿಗಳು ಬಂದಿದ್ದರು. ಅವರು ಪೂಜಾರ್ಹರಾದ ಯತಿಗಳಾದರೂ ನನ್ನ ಗುರು ಗಳಲ್ಲ. ನಾನು ಉತ್ತರಾದಿ ಮಠದವನು. ಈ ಗುಮಾಸ್ತೆಗೆ ನಾನೇನೂ ಸಮಾಧಾನ ಹೇಳಬೇಕಾದ್ದಿಲ್ಲ ಆದರೆ ಇಲ್ಲಿ ನೆರೆದಿರತಕ್ಕ ಮಹಾ ಜನಕ್ಕೆ ತಿಳಿಸಬೇಕಾದ ವಿಷಯವಿದು"—

ಎಂದು ನನಗೆ ಪಾರುಪತ್ತೇಗಾರ್‍ರು ಕೊಟ್ಟ ಮಠಗಳಿಗೆ ಮರ್‍ಯಾದೆ ಸಲ್ಲಬೇಕಾಗಿರುವ ವಿಧಾನದ ವರದಿಯನ್ನು ವಿವರಿಸಿದೆ. ಕೆಲವರು

"ನ್ಯಾಯ; ಯತಿಃ ಸರ್ವತ್ರ ಪೂಜ್ಯತೆ" ಎಂದರು. ಇನ್ನು ಕೆಲವರು "ಪ್ರತಿನಿಧಿ ಎಂದರೆ ಅವರ ಯಜಮಾನರಿಗೆ ಸಲ್ಲಬೇಕಾದ ಸಮಸ್ತ ಹಕ್ಕಿಗೂ ಬಾಧ್ಯರೆಂದಲ್ಲವೆ? ಕಂದಾಯ ಸರ್ಕಾರಕ್ಕೆ ಸಲ್ಲಬೇಕಾದ್ದು. ಶ್ಯಾನುಭೋಗನಿಗೆ ಒಂದು ಕಂದಾಯ, ಶೇಕ್ದಾರಿಗೆ ಒಂದು ಕಂದಾಯ, ಅಮಲ್ದಾರ್ರಿಗೆ ಒಂದು ಕಂದಾಯವೆಂದರೆ ಒಪ್ಪುತ್ತೀರಾ? ಎಲ್ಲರೂ ಸರ್ಕಾರದ ಪ್ರತಿನಿಧಿಗಳು; ಸರ್ಕಾರದ ಕಂದಾಯವನ್ನೇ ಪೂರ್ತಾ ಅವರು ಯಾರು ಬಂದರೂ ಕೊಡಬೇಕು" ಎಂದರು.

ನಾನು — "ಪಾರುಪತ್ತೇಗಾರ್ರಿಂದ ಬಂದಿರುವ ವರದಿ ತಪ್ಪೆಂದು ನಿಮ್ಮ ವಾದವಾದರೆ, ಅರ್ಜಿ ಕೊಡಿ; ವಿಚಾರ ಮಾಡೋಣ; ರಿಕಾರ್ಡು ಗಳನ್ನೂ ನೋಡೋಣ, ಧರ್ಮಶಾಸ್ತ್ರದ ಪ್ರಮಾಣಗಳನ್ನೂ ಕೇಳೋಣ. ವಿಚಾರದಿಂದ ತೀರ್ಮಾನಕ್ಕೆ ಬಂದಂತೆ ಮುಂದೆ ಮಾಡೋಣ. ಈಗಿನ ಕೆಲಸ ಅಡ್ಡಿ ಇಲ್ಲದೆ ಜರ್ತು ನಡೆಯಲಿ. ಎಲ್ಲರೂ ದಯವಿಟ್ಟು ತೇರ ಮುಂದಿನಿಂದ ಬಾಜೂ ಸರಿಯಿರಿ" ಎಂದೆ ಮುಕ್ಕಾಲು ಮೂರು ವೀಸೆ ಪಾಲು ಗುಂಪು ನಾನು ಹೇಳಿದ್ದು ಸರಿ ಎಂದು ಬಾಜು ಸರಿದರು. ಗುಮಾಸ್ತರು ಮಾತ್ರ ಇನ್ನೊಂದು ಗೇಣು ಹೆಚ್ಚು ಬೆಳೆದವರಂತೆ ನಿಂತು — ಆಗೋದಿಲ್ಲ ಸ್ವಾಮಿ, ಎಲ್ಲ ಕ್ರಮಬದ್ಧವಾಗಿ ನಡೆದರೆ ರಥೋತ್ಸವ. ಇಲ್ಲವಾದರೆ ಬರೀ ದೊಂಬಿ— ಎಂದರು.

"ಈಗ ಕ್ರಮಬದ್ಧವೆಂದರೆ ಏನಾಗಬೇಕು, ಅದನ್ನಾದರೂ ಹೇಳಿ" ಎಂದೆ

"ರಥದಿಂದ ಉತ್ಸವರನ್ನು ಇಳಿಸಿ, ದೇವಸ್ಥಾನದಲ್ಲಿ ಯಥಾ ಸ್ಥಾನಕ್ಕೆ ತಂದು, ಸಂಪ್ರೋಕ್ಷಣೆ ಮಾಡಿ, ಆಮೇಲೆ ರಾಜಗುರುಗಳ ಪ್ರತಿ ನಿಧಿಗೆ ಅಗ್ರಮರ್ಯಾದೆ ಮಾಡಿ, ಮುಂದಿನ ಕೆಲಸ ಸಾಗಬೇಕು"

ಇದು ನನ್ನ ಸಹನೆಗೆ ಮೀರಿತು.

"ಏನರಯ್ಯ, ನಿಮಗೆ ಬುದ್ಧಿ, ನಾಚಿಕೆ, ಎರಡೂ ಬೇಡವೆ? ಇದು ದೇವರ ಉತ್ಸವವೋ, ಗುಮಾಸ್ತೆಯ ರಥೋತ್ಸವವೋ? ಥೇ, ಹೋಗಿ, ದಾರಿ ಬಿಡಿ ರಥಕ್ಕೆ; ಜಮಾದಾರ್ರೇ, ಅಕ್ರಮವಾಗಿ ಪಬ್ಲಿಕ್ ಉತ್ಸವಕ್ಕೆ ಭಂಗ ಮಾಡುತ್ತಿರುವ ಇವರನ್ನು ಆಚೆಗೆ ಕಳಿಸಿಬಿಡಿ" ಎಂದು ದರ್ಪ

ದಿಂದ ಆಜ್ಞೆಮಾಡಿದೆ. ಗುಮಾಸ್ತೆ ಜಮಾದಾರ್ರ ಹಸ್ತಲಾಘವಕ್ಕೆ ಕಾಯದೆ ಅಲ್ಲಿಂದ ಬಹು ಕೋಪದಿಂದ (walk out) ಸಭಾತ್ಯಾಗ ಮಾಡಿದರು. ಕೆಲವರು—ಬಹು ಸ್ವಲ್ಪ ಜನ ಅವರ ಸಂಗಡ ಹೋದರು. ಬಾಕಿಯುವರು ಇಂಗಿತದಲ್ಲಿ ಹೀಗೂ ಹಾಗೂ ಊಗಲಾಡುತ್ತಿದ್ದವರು — ಬಹುಶಃ ದೇವ ಸ್ಥಾನದ ನೌಕರರು — ನನ್ನ ದೃಷ್ಟಿ ಅವರ ಮೇಲೆ ಬೀಳುತ್ತಲೆ ತಮ್ಮ ಕೆಲಸಗಳಲ್ಲಿ ನಿರತರಾದರು. ಅಂತು ರಥೋತ್ಸವ ಎಂದಿನಂತೆ ವಿಜೃಂ ಭಣೆಯಿಂದ ಜನಗಳ ಉತ್ಸಾಹಕ್ಕೆ ಲೇಶವೂ ಕುಂದಕವಿಲ್ಲದೆ ನಡೆಯಿತು.

ಮನೆಗೆ ಬಂದು ನಿಧಾನವಾಗಿ ಯೋಚನೆ ಮಾಡಲಾಗಿ ನನಗೆ ಬಹಳ ಚಿಂತೆ ಹುಟ್ಟಿತು. ನಾನು ಮಾಡಿದ್ದೇನೋ ಸರಿ. ಆದರೆ ಶ್ರೀ ವ್ಯಾಸರಾಯ ಸ್ವಾಮಿಗಳು ಮಾಧ್ವ ಗುರುಗಳು, ನಾನು ಅವರ ಮಠದವ ನಲ್ಲದಿದ್ದರೂ ಮಾಧ್ವ. ಶ್ರೀ ಪರಕಾಳ ಮಠದ ಸ್ವಾಮಿಗಳು ರಾಜಗುರು ಗಳು. ಅವರಲ್ಲಿ ಶ್ರೀ ಮನ್ಮಹಾರಾಜರವರಿಗೂ, ರಾಜಕುಲದವರಿಗೂ ಸ್ವಾಭಾವಿಕವಾಗಿ ಬಹಳ ಭಕ್ತಿ, ಪ್ರೇಮ. ನಾನು ನನ್ನ ಅಲ್ಪವಾದ ಸ್ಥಳ ಅಧಿಕಾರದಿಂದ ಉನ್ಮತ್ತನಾಗಿ, ನನ್ನನ್ನಾಳುವವರಿಗಿಂತ ನಾನು ದೊಡ್ಡವನೆಂಬ ಅನುಮಾನ ಕೊಡುವಂತೆ ರಾಜಗುರುಗಳಿಗಿಂತ ಉಚ್ಚ ಸ್ಥಾನವನ್ನು ನನ್ನ ಮತದ ಗುರುಗಳಿಗೆ ಕೊಟ್ಟೆನೆಂಬ ಭಾವನೆಯುಂಟಾ ದರೆ, ಅದು ನನಗೆ ಬಹು ಹಾನಿಕರ. ಈ ಭಾವವನ್ನು ಕೊಡುವುದೇ ಆ ಸಂಗಡದವರ ಮುಖ್ಯ ಗುರಿ. ನನಗೆ ತೋರಿತು — ನಾನು ಸತ್ಯವಾಗೂ ಪಕ್ಷಪಾತವಿಲ್ಲದೆ ನನ್ನ ಮುಂದಿದ್ದ ರುಜುವಾತ್ತಿನಿಂದ ನ್ಯಾಯವೆಂದು ತಿಳಿದ ರೀತಿಯಲ್ಲಿ ಮಾಡಿದ್ದೇನೆ. ನಡೆದದ್ದು ನಡದ ಹಾಗೆ, ಯಾವು ದನ್ನೂ ಮರೆಮಾಡದೆ, ನಿಷ್ಪಕ್ಷಪಾತವಾಗಿ ರಿಪೋರ್ಟು ಮಾಡಿಬಿಡೋಣ. ಇದರಮೇಲೆ ಆದದ್ದಾಗಲಿ—ಎಂದು. ಒಂದು ಮಾತ್ರ ಮುಂಜಾಗರೂಕತೆ ಉಪಾಯವನ್ನು ಮಾಡಿದೆ. ನಾನು ನನ್ನ ವರದಿ ಮಾಡುವುದಕ್ಕೆ ಮುಂಚೆ, ಆಕ್ಷೇಪಕರು ತಮ್ಮ ಬಣ್ಣ ಕಟ್ಟಿದ ಕತೆಯನ್ನು ಅಧಿಕಾರಿಗಳಲ್ಲಿ ಹೇಳಿ ಅವರ ಮನಸ್ಸನ್ನು ಹದಗೆಡಿಸಿ, ಮುಂತೀರ್ಪು ದೂಷಿತವಾಗಿ ಮಾಡಲು ಅವಕಾಶ ಕೊಡಬಾರದೆಂದು, ನಾನು ಆ ಸಂಜೆಯೇ ಮೈಸೂರಿಗೆ ಹೊರಟೆ ನಲ್ಲದೆ, ಪರಕಾಳ ಮಠದ ಗುಮಾಸ್ತರು ಹೊರಡಲು ಗಾಡಿ ದೊರಕದಂತೆ

ಬಂದೋಬಸ್ತು ಮಾಡಿದೆ. ಇದು ಸರಿ ಎಂದು ಸಾಧಿಸಲು ನಾನು ಯತ್ನಿಸುವುದಿಲ್ಲ: ಯುದ್ಧದಲ್ಲಿ, ಹಾಗೂ ಪ್ರಣಯದಲ್ಲಿ, ಎಲ್ಲವೂ ಧರ್ಮವೇ ಎಂದು ಗಾದೆ ಇದೆ; ಈ ಉದ್ಯಮದಲ್ಲಿ ಸುಳ್ಳು ಅಪವಾದಕ್ಕೆ ತೋಡು ಮಾಡಬೇಕೆಂಬುದು ಒಂದೇ ನನ್ನ ಉದ್ದೇಶ. ಡೆಪ್ಯೂಟಿ ಕಮಿಷನರನ್ನು ಕಂಡು ನಡೆದ ಸಂಗತಿಯನ್ನೆಲ್ಲ ಚಾಚೂ ಬಿಡದೆ ವರದಿ ಮಾಡಿ, ತಯಾರಿಸಿ ತಂದಿದ್ದ ಲಿಖಿತ ವರದಿಯನ್ನು ಕೊಟ್ಟೆ. ನಾನು ಮಾಡಿದ್ದು ನ್ಯಾಯ, ಅದಕ್ಕೆ ಬಚಾವೇನೂ ಬೇಕಿಲ್ಲ; ಆದರೆ ಅರಮನೆಯಲ್ಲಿ ನನ್ನ ವರ್ತನೆ ಕುರಿತು ಅಪಪ್ರಚಾರವಾದರೆ ನಾನು ಬಹಳ ನೋಯುತ್ತೇನೆ; ರಾಜಕುಲದ ಪ್ರಸನ್ನತೆ ನನ್ನ ದೊಡ್ಡ ಸಂಪತ್ತೆಂದು ತಿಳಿದಿರುವ ನನಗೆ ಅದಕ್ಕೆ ಏನಾದರೂ ಕೊರತೆ ಬಂದರೆ ಅದು ದೊಡ್ಡ ನಷ್ಟ— ಎಂದು ಹೇಳಿದೆ. ಡೆಪ್ಯೂಟಿ ಕಮಿಷನರ್—ಆ ವಿಚಾರದಲ್ಲಿ, ನೀವು ಹೆದರಬೇಡಿ; ಆದರೆ ಶ್ರೀ ಸ್ವಾಮಿಗಳವರ ಮನಸ್ಸು ನೋಯಬಾರದು; ಅವರಿಗೂ ನಡೆದ ಸಂಗತಿ ತಿಳಿಸಬಿಡಿ;—ಎಂದರು. ತಿರುಗ ಸ್ವಲ್ಪ ಯೋಚನೆ ಮಾಡಿ—ಆಪಾದನೆ ಇಲ್ಲದೆ ಬಚಾವಿಗೆ ಉದ್ಯುಕ್ತರಾಗುವವರು ಸ್ವಯಂ ಆಪಾದಿತರು ಎಂಬ ಗಾದೆ ಇದೆಯಲ್ಲವೆ? ನೀವೇನೂ ಹೋಗಿ ಪಂಚಾಯಿತಿ ಹಚ್ಚಬೇಡಿ. ನಾನು ಶ್ರೀಗಳವರಿಗೆ ನಡೆದ ವಿವರ ಹೇಳುತ್ತೇನೆ—ಎಂದರು. ನಾನು ನರಸಿಪುರಕ್ಕೆ ವಾಪಸು ಬಂದೆ.

ಸರಿ, ತಕ್ಕೊಳ್ಳಿ, ಅರ್ಜಿಗಳ ಸುರಿ ಮಳೆ. ಶ್ರೀಮನ್ಮಹಾರಾಜರು, ಶ್ರೀಮತಿ ರಾಜಮಾತೃ ಶ್ರೀಯವರು ಮೊದಲು, ದಿವಾನರು, ಕೌನ್ಸಿಲ್ಲರ್‌ಗಳು, ಡೆಪ್ಯೂಟಿ ಕಮಿಷನರ್‌ರವರು, ಸಬ್ ಡಿವಿಜನ್ ಆಫೀಸರವರಿಗೂ, ಪ್ರತಿಯೊಂದು ಗ್ರಾಮದಿಂದಲೂ, ಮೇಲುಕೋಟೆ, ಕಂಚಿ, ತಿರುಪತಿ, ಶ್ರೀರಂಗ, ಇನ್ನೂ ಇತರ ಸ್ಥಳಗಳಿಂದಲೂ, ಅರ್ಜಿಗಳು ಸುರಿದವು. ನನ್ನ ದುರಹಂಕಾರ ನೋಡಿದರೆ ರಾವಣಾಸುರನೂ ನಾನೂ ಒಂದೇ ಮುಹೂರ್ತದಲ್ಲಿ ಹುಟ್ಟಿದವರು; ಸಜ್ಜನರ ಪೀಡೆಯಲ್ಲಿ ನಾನು ಸ್ವಲ್ಪ ಹಿರಣ್ಯಕಶಿಪುವಿನ ಜೋಲಿಕೆಯವನು. ಪುರಾಣಗಳಲ್ಲಿನ ದುಷ್ಟರೆಲ್ಲರಿಂದಲೂ ಒಂದೊಂದು ಕರೀ ಅಂಶವನ್ನು ತೆಗೆದು ಬ್ರಹ್ಮ ನನ್ನನ್ನು ಸೃಷ್ಟಿಸಿರಬೇಕು. ಸಾಮಾನ್ಯವಾಗಿ ಅರ್ಜಿಗಳ ಒಕ್ಕಣೆಯೆಲ್ಲ ಒಂದೇ

ರೀತಿ, ಒಬ್ಬನೇ ಮಹಾಕವಿಯ ಕೈವಾಡ ವೆಂದು ಸ್ಪಷ್ಟವಾಗಿ ತಿಳಿಯಿತು. ಈ ಅರ್ಜಿಗಳೆಲ್ಲ ಡೆಪ್ಯೂಟಿ ಕಮಿಾಷನರವರಲ್ಲಿ ಕೇಂದ್ರೀಭೂತವಾದವು. ಅವರು ಕೆಲವನ್ನು ನನ್ನ ಆಫೀಸು ರಿಕಾರ್ಡಿಗಾಗಿ ಕಳಿಸಿ, ಬಾಕಿಯವನ್ನು ಅಪೂರ್ವಮಾಣಮಚಲಪ್ರತಿಷ್ಠವಾದ ಡಿಸ್ಟ್ರಿಕ್ಟು ಆಫೀಸು ರಿಕಾರ್ಡು ನಿಧಿಗೆ ಸೇರಿಸಿಬಿಟ್ಟರು. ಈ ಸಂದರ್ಭದಲ್ಲಿನ ಶ್ರೀ ಪರಕಾಳಮಠದ ಶ್ರೀಗಳವರ ದೊಡ್ಡತನ ನನಗೆ ವಿಸ್ಮಯವನ್ನೂ ಅವರಲ್ಲಿ ಅಪಾರ ಭಕ್ತಿಯನ್ನೂ ಉಂಟುಮಾಡಿತು. ನಡೆದ ಸಂಗತಿಯನ್ನು ವಿವರವಾಗಿ ವಿಚಾರಿಸಿ ತಿಳಿದು — ಅಮಲ್ದಾರರು ಪ್ರತ್ಯಕ್ಷವಾಗಿ ಬಂದ ಶ್ರೀ ವ್ಯಾಸರಾಯಮಠದ ಯತಿಗಳಿಗೆ ಅಗ್ರಮರ್ಯಾದೆ ಮಾಡಿದ್ದು ವಿಹಿತ. ಗುಮಾಸ್ತರಿಗೆ ಮೊದಲು ಸಲ್ಲಿಸಿದ್ದರೆ ಅಪಚಾರವಾಗುತ್ತಿತ್ತು — ಎಂದು ನಿರೂಪ ಮಾಡಿದರಂತೆ.

ಈ ಗಲಾಟೆ ಎಲ್ಲ ಶಮನವಾದ ಮೇಲೆ ನಾನು ಗುಮಾಸ್ತೆ ನರಸಿಂಹಾಚಾರರಿಗೆ ಹೇಳಿಕಳುಹಿಸಿದೆ. ತಲೆ ತಪ್ಪಿಸಿಕೊಳ್ಳುವುದಕ್ಕೆ ಬಿಡದೆ, ಹಠಾತ್ತಾಗಿ ಬರಮಾಡಿಕೊಂಡು —

"ಅರ್ಜಿಗಳನ್ನೆಲ್ಲಾ ನೀವೇ ಬರೆದದ್ದು, ಬರೆಸಿದ್ದು. ಅವುಗಳಿಂದ ನನಗೇನೂ ಕೆಡಕಾಗಲಿಲ್ಲ. ನೀವು ಹೇಳಿರುವಷ್ಟು ಕೆಟ್ಟ ಮನುಷ್ಯನಾಗಿದ್ದರೆ, ನಿಮ್ಮನ್ನು ಹಾಳು ಮಾಡುವುದು ನನಗೆ ಕಷ್ಟವಾದ ಕೆಲಸವಾಗಿರಲಿಲ್ಲ. ಆದರೆ ನಾನು ಖಂಗು ಕಟ್ಟುವ ಪ್ರಕೃತಿಯವನಲ್ಲ. ಆದರೂ ನಿಮ್ಮ ನಾತದ ಸ್ವಭಾವ ನೀವು ಬಿಡದಿದ್ದರೆ, ಕೊಚ್ಚೆ ಬಾಚುವ ಝಾಡಮಾಲಿಗಳಿದ್ದಾರೆ. ಹುಷಾರು" ಎಂದು ಹೇಳಿ ತಲಬಾಗಿಲವರೆಗೆ ಅವರನ್ನು ಕರೆದುಕೊಂಡು ಬಂದು—

"ಮರೆಯಬೇಡಿ, ನರಸಿಂಹಾಚಾರ್ರೇ, ಹೋಗಿಬನ್ನಿ" ಎಂದು ಕಳುಹಿಸಿಕೊಟ್ಟೆ. ಆ ಮನುಷ್ಯನಿಂದ ನನಗೆ ತರುಗ ಏನೂ ತಂಟೆಯಾಗಲಿಲ್ಲ.

## ೩೬

ತಿರಮಕೂಡ್ಲು ನರಸಿಪುರದ ನೆನಪುಗಳಲ್ಲಿ ನಾನು ಅಲ್ಲಿದ್ದಾಗ ನಡೆದ ತಲಕಾಡು ಕೇಂದ್ರದ ಪಂಚಲಿಂಗ ದರ್ಶನದ ಮಹಾಮೇಲವೇ ಕಾಲದ ಆವರಣದಿಂದ ಮಸುಕಾಗದೆ ಸ್ಪಷ್ಟವಾಗಿ ಬೆಳಗುತ್ತಿದೆ. ಆ

ಜಾತ್ರೆ ಇಪ್ಪತ್ತು ವರ್ಷಗಳಿಗೆ ಒಮ್ಮೆ ಬರುವುದಾಗಿ ಮೈಸೂರು ಗೆಜಟಿಯರಿನಲ್ಲಿದೆ; ಲೂಯಿಸ್ ರೈಸರು ರಚಿಸಿದ ಸುಂದರವಾದ ಮೂಲ ಗೆಜಟೀಯರಿನಲ್ಲಲ್ಲ; ಅನಂತರದ ಪಂಡಿತರ ವೈದ್ಯಕೆಗೆ ಸಿಕ್ಕು ಶೋಭೆ ಹೊಂದಿ ರೂಪುಗೆಟ್ಟ ಊದು ಪುಸ್ತಕದಲ್ಲಿ ಬರೆದಿದೆ. ಇದು ಖಚಿತವಾದ ಜಾಹಿರಾತಿಯಲ್ಲವೆಂದು ನನಗೆ ಕಾಣುತ್ತದೆ. ಯಾಕೆಂಪರೆ ಒಂದೊಂದು ವೇಳೆ ಇಪ್ಪತ್ತು ಮೂವತ್ತು ವರ್ಷಗಳ ಅಂತರ ಬಿಟ್ಟು ಜಾತ್ರೆ ಬರುತ್ತದೆ. ಒಂದೊಂದು ವೇಳೆ ಎರಡು ಮೂರು ವರ್ಷಗಳಿಗೇ ಬರುತ್ತದೆ. ನನಗೆ ಜ್ಞಾಪಕವಿರುವುದು ಈ ಜಾತ್ರೆ ಬರುವುದು ಕಾರ್ತಿಕಮಾಸದಲ್ಲಿ ನಕ್ಷತ್ರಗಳು ನಿರ್ದಿಷ್ಟ ರಾಶಿಗಳಲ್ಲಿದ್ದಾಗ. ಈ ಸನ್ನಿವೇಶ ಕ್ಲುಪ್ತ ಅಂತರದಲ್ಲಿ ಬರುವುದಿಲ್ಲವಂತೆ. ನಾನು ಹೇಳುವ ಪಂಚಲಿಂಗ ದರ್ಶನ ಜಾತ್ರೆಯು ಹಿಂದಿನ ಜಾತ್ರೆಯಾದ ಮೂವತ್ತು (?) ವರ್ಷಗಳಮೇಲೆ ಬಂದಿತೆಂದು ನನಗೆ ಜ್ಞಾಪಕ. ಆ ಜಾತ್ರೆಗೆ ಇಂಡಿಯದ ಎಲ್ಲ ಕಡೆಗಳಿಂದ, ಮುಖ್ಯವಾಗಿ ದಕ್ಷಿಣ ಪ್ರಾಂತಗಳಿಂದ, ಜನಗಳು ಬರುತ್ತಾರೆಂಬ ನಿರೀಕ್ಷಣೆ. ಎರಡು ಮೂರು ಲಕ್ಷ ಜನಗಳಿಗೆ ಕಡಿಮೆ ಇಲ್ಲದೆ ಜಮಾವಣೆಯಾಗುತ್ತಿತ್ತೆಂದು ಈ ಜಾತ್ರೆಯ ಅನುಭವ, ನೆನಪು, ಉಳ್ಳ ಹಿರಿಯರುಗಳ ಅಂದಾಜು. ಜಾತ್ರೆ ಇನ್ನೂ ಒಂದೆರಡು ತಿಂಗಳುಗಳಿರುವಾಗಲೇ ತಲಕಾಡು, ಮುಡುಕತೊರೆ, ಹೆಮ್ಮಿಗೆ, ಮಾವಿನಹಳ್ಳಿ, ವಡಿಯಾಂಡಹಳ್ಳಿ ಮೊದಲಾದ ೪–೫ ಮೈಲುಗಳ ಫಾಸಿಲೆಯ ಸುತ್ತಮುತ್ತಲ ಗ್ರಾಮಗಳಲ್ಲಿ, ಅಂಗಡಿಗಳ, ಮನೆಗಳ, ವರಾಂಡಗಳ, ಕೊನೆಗೆ ಹೊಲ ತೋಪುಗಳ, ಬಾಡಿಗೆಗೆ ಗಿರಾಕಿಗಳ ಪೈಪೋಟಿ ಪ್ರಾರಂಭವಾಯಿತು. ಈ ಜಾತ್ರೆ ಜನಜೀವನದ ಎಲ್ಲ ಮುಖವನ್ನೂ, ಎಲ್ಲ ಅಂತಸ್ತನ್ನೂ, ತಗಲುವ ಪರಿಣಾಮ ಉಳ್ಳದ್ದೆಂದು ಚೆನ್ನಾಗಿ ಗೊತ್ತಾಯಿತು. ಭಕ್ತರಿಗೆ ಪಾವನಕೆ ಪಾವನ ಮಂಗಳಕೆ ಮಂಗಳವಾದ ದೇವರ ದರ್ಶನ, ವರ್ತಕರಿಗೆ ವ್ಯಾಪಾರ, ಕಳ್ಳರಿಗೆ ಸುಗ್ಗಿ, ಪೋಕರಿಗಳಿಗೆ ಅನಂತ ಅವಕಾಶ, ಅಂಟು ರೋಗಗಳಿಗೆ ಹದವಾದ ಭೂಮಿ, ಸರ್ಕಾರದ ಅಧಿಕಾರಿಗಳಿಗೆ — ಅದರಲ್ಲೂ ತಾಲ್ಲೂಕು ಹುದ್ದೇದಾರರಾದ ಅಮಲ್ದಾರರಿಗೆ — ದುರ್ವಹವಾದ ಜವಾಬ್ದಾರಿಯ ಹೊರೆ. ಕೋಮು ವಿನಾಯಿತಿ

ಇಲ್ಲದೆ ತಾಲ್ಲೂಕಿನ ಎಲ್ಲ ಜನಗಳಿಗೂ ಒಂದು ತರಹದ ಉತ್ಸಾಹದ ಉನ್ಮಾದಹುಟ್ಟಿ ಹಬ್ಬುತ್ತಿರುವ ಹಾಗೆ ಇತ್ತು. ಯಾವ ದೊಡ್ಡ ಗ್ರಾಮ ದಲ್ಲೂ ಜನಗಳು ಒಟ್ಟುಗೂಡಿ ತಮ್ಮ ಊರಿಗೇ ಬಂದು ಬಿಡಾರದ ಜಾಗ ಗೊತ್ತುಮಾಡಿಕೊಡಬೇಕು; ಅಲ್ಲಿನ ಏರ್ಪಾಡೆಲ್ಲ ತಾವೇ ಮಾಡು ತ್ತೇವೆಂದು ಅಮಲ್ದಾರ್ರನ್ನು ಕೇಳುವರು. ನಾನು ಅನೇಕ ದೊಡ್ಡ ಜಾತ್ರೆಗಳನ್ನು ನೋಡಿ ಅವುಗಳ ಉಸ್ತುವಾರಿಯನ್ನು ಮಾಡಿದ್ದರೂ, ನನಗೆ ಇದು ಎಲ್ಲದಕ್ಕಿಂತ ವಿಶೇಷವಾದದ್ದು; ಇದು ನನ್ನ ಶಕ್ತಿಯ ನಿಕಷವಾಗುತ್ತೆ, ಇದರ ಬಂದೋಬಸ್ತನ್ನು ಚೆನ್ನಾಗಿ ಮಾಡುವುದು ಸರ್ವ ರೀತಿಯಲ್ಲೂ ನನ್ನಕರ್ತವ್ಯ, ಇದನ್ನು ನಾನು ಯಶಸ್ವಿಯಾಗಿ ನೆರವೇರಿಸಿದರೆ—ನನ್ನ ಮೇಲಿನ ಹುದ್ದೇದಾರರ ಮೆಚ್ಚುಗೆ ಹಾಗಿರಲಿ—ನನ್ನ ಸ್ವಂತ ಮೆಚ್ಚಿಗೆ, ನನ್ನ ಆತ್ಮವಿಶ್ವಾಸ; ಇವುಗಳು ನನ್ನ ದೊಡ್ಡ ಸಂಪಾದನೆಯಾಗುತ್ತವೆಂದು ಖಾತರಿಯಾಯಿತು

ಪಂಚಲಿಂಗಗಳು ಇವು: ವೈದ್ಯೇಶ್ವರ, ಮರಳೇಶ್ವರ, ಪಾತಾಳೇ ಶ್ವರ, (ಇವು ಮೂರು ದೇವಸ್ಥಾನಗಳು ತಲಕಾಡು ಮರಳುದಿಬ್ಬದ ಪ್ರದೇಶದಲ್ಲಿವೆ); ವಿಜಯೇಶ್ವರ (ವಿಜಯಾಪುರವೆಂಬ ಹೊಳೆ ಸಾಲು ಗ್ರಾಮದಲ್ಲಿದೆ); ಮಲ್ಲಿಕಾರ್ಜುನೇಶ್ವರ (ಇದು ಮುಡುಕತೊರೆ ಬೆಟ್ಟದ ಮೇಲಿನ ದೇವಸ್ಥಾನ). ಯಾತ್ರಿಕರು ತಲಕಾಡು ವೈದ್ಯೇಶ್ವರ ದೇವ ಸ್ಥಾನದ ಮುಂದಿನ ಸರೋವರದಲ್ಲಿ ಮಿಂದು ಅಲ್ಲಿಯ ಮೂರು ದೇವ ಸ್ಥಾನಗಳಲ್ಲಿ ಸ್ವಾಮಿಯ ದರ್ಶನವಾದಮೇಲೆ, ಪುನಃ ಪುಷ್ಕರಿಣಿಯಲ್ಲಿ ಸ್ನಾನ ಮಾಡಿ, ಮೂರು ನಾಲ್ಕು ಮೈಲುಗಳ ದೂರದಲ್ಲಿರುವ ವಿಜಯೇ ಶ್ವರರ ದರ್ಶನ ಮಾಡಿ, ಅಲ್ಲಿಂದ ತಲಕಾಡಿಗೆ ತಿರುಗಿ ಬಂದು ಇನ್ನೊಂದು ಸ್ನಾನ ಮಾಡಿ, ಕೊನೆಗೆ ಮುಡುಕತೊರೆ ಮಲ್ಲಿಕಾರ್ಜುನಸ್ವಾಮಿಯ ದರ್ಶನಮಾಡಿ, ತಲಕಾಡಿಗೆ ತಿರುಗಿ ಬಂದು ಪುಷ್ಕರಿಣಿಯಲ್ಲಿ ವ್ರತಾಂತ ಸ್ನಾನ ಮಾಡುವರು.

ಗ್ರಾಮಸ್ಥರುಗಳಿಂದ ತಮತಮಗೆ ಬೇಕಾಗಿರುವ ಸ್ಥಳ ಮತ್ತು ಇತರ ಅನುಕೂಲತೆಗಳಿಗಾಗಿ ನನಗೆ ಬಂದ ಅರ್ಜಿಗಳನ್ನೆಲ್ಲಾ ಜಮಾಯಿಸಿ, ಸ್ಥಳ ಅಜಮಾಯಿಷಿಗಾಗಿ ಒಂದು ತಾರೀಖು ಗೊತ್ತು ಮಾಡಿ, ಎಲ್ಲ

ಗ್ರಾಮಗಳ ಮುಖಂಡರನ್ನೂ—ಮುಖ್ಯವಾಗಿ ಕೋಮುಗಳ ಯಜಮಾನ ರನ್ನೂ, ಜಂಗಮರುಗಳನ್ನೂ—ತಲಕಾಡಿಗೆ ಬರಮಾಡಿಕೊಂಡು ಒಂದು ದೊಡ್ಡ ಕೂಟವನ್ನು ಸೇರಿಸಿ, ಅವರೆಲ್ಲರ ಸಂಗಡ ಆಲೋಚನ ಚರ್ಚೆ ಯನ್ನು ಆಪ್ತಸ್ನೇಹದ ಅಂತಸ್ತಿನಲ್ಲಿ ನಡೆಸಿದೆ. ಜನಗಳು ನನ್ನನ್ನು ಆಪ್ತಸ್ನೇಹಿತನೆಂದು ಭಾವಿಸಿ ನನ್ನ ಸಂಗಡ ಧಾರಾಳವಾಗಿ ಮುಚ್ಚು ಮರೆ ಇಲ್ಲದೆ ಮಾತನಾಡುತ್ತಿದ್ದದ್ದೇ ನನ್ನ ಚಾಕರಿಯ ಮುಖ್ಯ ಬಹು ಮಾನ ಪತ್ರವೆಂದು ನನ್ನ ಹಿಗ್ಗಿಕೆ. ನಾನು ಅವರಿಗೆ ಹೇಳಿದ್ದು ಇಷ್ಟೆ: ಪ್ರತಿ ಗ್ರಾಮಕ್ಕೂ ಅದರ ಜನಸಂಖ್ಯೆಗೆ ಅನುಗುಣವಾಗಿ ಸ್ಥಳ ವಿಂಗಡಿಸಿ ಕೊಡುತ್ತೇನೆ; ಅದರಲ್ಲಿ ಆ ಗ್ರಾಮದವರು ನಾನು ತೋರಿಸುವ ರೀತಿ ಬಿಡಾರ ಮಾಡಬೇಕು; ಆ ಬಿಡಾರವೇ ತತ್ಕಾಲಕ್ಕೆ ಗ್ರಾಮವೆಂದು ಭಾವಿಸಿ ಗ್ರಾಮಾಧಿಕಾರಿಗಳು ಅಲ್ಲಿನ ಬಂದೋಬಸ್ತಿನ ಜವಾಬ್ದಾರಿ ವಹಿಸಬೇಕು; ಕುಡಿಯುವ ನೀರಿನ ಏರ್ಪಾಡು, ಪಾಕೀಜ, ಇವುಗಳಿಗೆ ನಿಗ ಕೊಡಬೇಕು. ಪ್ರತಿಯೊಂದು ಪಾಳಿಯದಲ್ಲೂ ಝಾಡಮಾಲಿ ಗಳ ಏರ್ಪಾಡು ಸಾಧ್ಯವಾದಷ್ಟೂ ಮಾಡಿ, ಬಹಿರ್ಭೂಮಿಗಳನ್ನು ಪ್ರತ್ಯೇಕವಾಗಿ ನೇಮಕಮಾಡಬೇಕು. ಇದಕ್ಕೆ ಎಲ್ಲರೂ ಒಪ್ಪಿದರು. ಆಮೇಲೆ ಎಲ್ಲರೂ ಒಟ್ಟುಗೂಡಿ ಪಂಚಲಿಂಗದರ್ಶನದ ದೇವಸ್ಥಾನ ಗಳಿಗೆ ಪಂಚಲಿಂಗ ದರ್ಶನ ಕ್ರಮದಲ್ಲಿ ಹೋದೆವು. ಪುಷ್ಕರಣಿಯ ನೀರು ಬಹಳ ಗಲೀಜಾಗಿ ಪಾಚಿ ಕಟ್ಟಿತ್ತು. ವೈದ್ಯೇಶ್ವರ ದೇವಸ್ಥಾನ ಗೋಪುರದವರಿಗೂ ಮರಳಿನಲ್ಲಿ ಹೂತುಹೋಗಿ, ದ್ವಾರದ ಮುಂದೆ ಮಾತ್ರ ಒಬ್ಬ ಮನುಷ್ಯ ನುಸಿದು ಹೋಗುವ ಮಟ್ಟಿಗೆ ಓಣಿ ಬಿಡಿಸಿತ್ತು. ಪಾತಾಳೇಶ್ವರ ಮತ್ತು ಮರಳೇಶ್ವರ ದೇವಸ್ಥಾನಗಳ ಗೋಪುರದ ಕಲಶ ಗಳು ಮಾತ್ರ ಈಚೆಗೆ ಕಾಣುತ್ತಿದ್ದವೇ ಹೊರತು, ದೇವಸ್ಥಾನಗಳ ಬಾಗಿಲುಗಳು ಕೂಡ ಮರಳಿನಿಂದ ಪೂರ್ತ ಮುಚ್ಚಿಹೋಗಿದ್ದವು. ಆ ದೇವಸ್ಥಾನಗಳಲ್ಲಿ ಅಭಿಷೇಕ ಮಂಗಳಾರತಿಗಳಾಗಿ ಎಷ್ಟು ವರ್ಷ ಗಳಾಗಿದ್ದವೋ ದೇವರೇ ಬಲ್ಲ. "ತಲಕಾಡು ಮರಳಾಗಲಿ ಮಾಲಂಗಿ ಮಡುವಾಗಲಿ ಮೈಸೂರು ದೊರೆಗಳಿಗೆ ಮಕ್ಕಳಾಗದೆ ಹೋಗಲಿ" ಎಂಬ ರಾಣಿ ರಂಗಮ್ಮ (ಅಲಮೇಲಮ್ಮ)ನ ಶಾಪ ಮೈಸೂರು ದೊರೆಗಳಿಗೆ

ದೈವ ಕೃಪೆಯಿಂದ ತಗಲದಿದ್ದರೂ, ಈ ದೇವಸ್ಥಾನಗಳನ್ನು ಚನ್ನಾಗಿ ಪೀಡಿಸುತ್ತಿರುವಂತೆ ಕಂಡಿತು. ಈ ಸ್ಥಿತಿಯನ್ನು ನೋಡಿ ನಮಗೆಲ್ಲರಿಗೂ ಸ್ವಾಭಾವಿಕವಾಗಿ ವ್ಯಸನವಾಯಿತು. ಬಹುಶಃ ಆಗ ಎಲ್ಲರ ಮನಸ್ಸಿನಲ್ಲಿದ್ದದ್ದಕ್ಕೇ ನಾನು ರೂಪು ಮತ್ತು ಧ್ವನಿ ಕೊಟ್ಟೆ—

"ಈ ದೇವಸ್ಥಾನಗಳಿಂದ ನಮಗೆ ಪ್ರಸಿದ್ಧಿ ಬಂದಿದೆ ಇವುಗಳಲ್ಲಿನ ಈಶ್ವರನ ಕೃಪೆಯಿಂದ ನಮ್ಮ ಹಿರಿಯರೂ ನಾವೂ ಕ್ಷೇಮವಾಗಿ ಬಾಳಿದೆವು, ಬಾಳುತ್ತಿದ್ದೇವೆ. ಅದೇ ಕೃಪೆಯಿಂದ ನಮ್ಮ ಸಂತಾನವೂ ಉದ್ಧಾರವಾಗಬೇಕು. ಬಹು ಕಾಲದಿಂದ ನಡೆಯದಿದ್ದ ಪಂಚಲಿಂಗ ದರ್ಶನದ ಅವಕಾಶ ಈಗ ಲಭಿಸಿದೆ. ಬಹು ದೂರ ಪ್ರದೇಶಗಳಿಂದ ಲಕ್ಷಾಂತರ ಭಕ್ತರು ಇಲ್ಲಿಗೆ ಬರುತ್ತಾರೆ. ಇವೊತ್ತು ನಮಗಾದ ಹಾಗೇ ಅವರಿಗೂ ದೇವರ ದರ್ಶನವಿಲ್ಲದೆ ಉತ್ಸಾಹಭಂಗವಾಗುವುದು ನಮಗೆ ಮಾನವೇ ? ನಾವುಗಳೆಲ್ಲರೂ ಸೇರಿ ಈ ದೇವಸ್ಥಾನಗಳನ್ನು ಮರಳು ವಪ್ಪದಿಂದ ಬಿಡಿಸಿ ನಮ್ಮ ಜನ್ಮ ಸಾರ್ಥಕ ಮಾಡಿಕೊಳ್ಳೋಣ. ಆಲಮೇಲಮ್ಮನ ಶಾಪವೆಂತೀರೋ ? ದೊರೆಗಳು ತಮ್ಮ ಧರ್ಮದಿಂದ ತಮ್ಮ ಭಾಗದ ಶಾಪದಿಂದ ಖುಲಾಸೆಯಾದರು ಪ್ರಜೆಗಳೂ ಭಕ್ತರೂ ತಮ್ಮ ಸೇವೆಯಿಂದ ತಲಕಾಡಿನ ಭಾಗವನ್ನು ರದ್ದು ಮಾಡಬಾರದೇಕೆ ? ಈಗ ನೋಡಿ, ಸರ್ಕಾರದವರು ತಮ್ಮ ಸಾಹಸದಿಂದ ಪ್ಲಾಂಟೇಷನ್ ಹಾಕಿಸಿ, ಏಳಿಸಿ, ಊರನ್ನು ಶಾಪದಿಂದ ಬಿಡಿಸಿದ್ದಾರೆ. ನಾವು ಈಗ ದೇವಸ್ಥಾನಗಳನ್ನು ಕವಿದಿರುವ ಮರಳು ತೆಗೆದರೆ, ನಮ್ಮ ಕೆಲಸ ನಾಶವಾಗದೆ ಶಾಶ್ವತವಾಗಿ ನಿಲ್ಲುತ್ತೆ, ಏನು ಹೇಳುತ್ತೀರಿ ?" ಎಂದೆ.

ನನ್ನ ಸಲಹೆ—ಆ ಸಂದಣಿಯ ಮನಸ್ಸಿನಲ್ಲಿ ಉಂಟಾಗಿದ್ದ ಭಾವದ ಹೊರ ಉಚ್ಚಾರಣೆ— ಎಲ್ಲರ ಉತ್ಸಾಹಪೂರ್ವಕವಾದ ಒಪ್ಪಿಗೆಯನ್ನು ಪಡೆಯಿತು.

ಪ್ರತಿ ಗ್ರಾಮದಲ್ಲೂ ಕೆಲಸಕ್ಕೆ ಲಾಯಖಾದ ದೇಹದಾರ್ಢ್ಯವುಳ್ಳ ಎಲ್ಲರೂ ಒಂದು ವಾರ ದೇವರ ಸೇವೆಗೆ ತಯಾರಾಗಿ, ತಮ್ಮ ರಾತೀಬನ್ನು ತಾವೇ ತೆಗೆದುಕೊಂಡು ಬರಬೇಕು. ಖುದ್ದು ಕೆಲಸಮಾಡುವ ಅಭ್ಯಾಸವಿಲ್ಲದವರು ಅಷ್ಟೇಕಾಲಕ್ಕೆ ಸಾಕಾಗುವಷ್ಟು ಆಳಿನ ಮಜೂರಿ

ಯಾಗಲಿ, ಮೂರು ಆಳುಗಳ ರಾತೀಬನ್ನಾಗಲಿ ತಮ್ಮ ಸೇವೆಯಾಗಿ ಸಲ್ಲಿಸಬೇಕು, ಪ್ರತಿಯೊಂದು ಗ್ರಾಮದಲ್ಲೂ ಪಟೇಲರ, ಅಥವ ಸರ್ವ ಸಮ್ಮತದಿಂದ ನೇಮಕವಾದ ಇತರ ಮುಖಂಡರ, ಅಧ್ಯಕ್ಷತೆಯಲ್ಲಿ ಕೋಮು ಪ್ರತಿನಿಧಿಗಳನ್ನುಳ್ಳ ಪಂಚಾಯತನ್ನು ರಚಿಸಿಕೊಳ್ಳಬೇಕು. ಮೇಲೆ ಹೇಳಿರುವ ತೀರ್ಮಾನದಂತೆ ಆ ಗ್ರಾಮದಿಂದ ಒದಗಬಹುದಾದ ಜನ ಮತ್ತು ಹಣ ಧಾನ್ಯಗಳ ಪಟ್ಟಿಯನ್ನು ಪಂಚಾಯಿತರು ಖುದ್ದು ತರದೂದಿನಿಂದ ತಯಾರಿಸಿ, ಅಮಾಲ್ದಾರರಲ್ಲಿ ಒಂದು ನಿರ್ದಿಷ್ಟ ತಾರೀಖಿನೊಳಗಾಗಿ ಹಾಜರ್ಮಾಡಬೇಕು ಇಂಥ ಪಟ್ಟಿಗಳೆಲ್ಲ ಬಂದಮೇಲೆ ಅಮಲ್ದಾರರು ಎಲ್ಲರನ್ನೂ ಬರಮಾಡಿಕೊಂಡು, ಮುಂದಿನ ಕೆಲಸದ ಕ್ರಮವನ್ನು—ಯಾವ ಯಾವ ಗ್ರಾಮಗಳವರು ಯಾವ ತಾರೀಖಿನ ವರಿಗೆ ಯಾವ ದೇವಸ್ಥಾನವನ್ನು ಮರಳುಸೆರೆಯಿಂದ ಬಿಡಿಸಲು ಉದ್ಯುಕ್ತರಾಗಬೇಕೆಂಬುದನ್ನು—ನಿರ್ಣಯಿಸಿ, ಆಯಾ ಗುಂಪುಗಳ ಮೇಲ್ತನಿಖೆಗೆ ಜವಾಬ್ದಾರರನ್ನು ನೇಮಿಸಿ, ಬಂದಿರತಕ್ಕ ಹಣ ಮತ್ತು ದವಸವನ್ನು ಗುಂಪುಗಳಿಗೆ ಹಂಚಿ, ಕೆಲಸ ಷುರು ಮಾಡುವುದಕ್ಕೆ ಏರ್ಪಾಡು ಮಾಡಬೇಕೆಂದು ಗೊತ್ತಾಯಿತು. ಎಲ್ಲವೂ ಪ್ಲಾನ್ ಮಾಡಿದ್ದಂತೆಯೇ ಜಾರಿಯಲ್ಲಿ ಬಂದು, ತಾಲ್ಲೂಕು ಒಟ್ಟುಗೂಡಿ ಸುಮಾರು ಎಂಟುಸಾವಿರ ಜನ ಕೆಲಸಗಾರರ ಪಟ್ಟಿ ಬಂತು. ಜನಗಳು ತಾವಾಗೇ—ವಾರವಲ್ಲ, ಹತ್ತು ದಿನಗಳ, ಕೆಲಸಮಾಡುವುದಾಗಿ ಮುಂದು ಬಂದರು. ಇವರುಗಳನ್ನು ಪಂಗಡಗಳನ್ನಾಗಿ ವಿಂಗಡಿಸಿ, ಸರದಿ ಮೇರೆಗೆ ಒಂದೊಂದು ಪಂಗಡ ಹತ್ತು ದಿನಗಳಂತೆ ಕೆಲಸಮಾಡಿ, ಅಂತು ಒಂದು ತಿಂಗಳೊಳಗಾಗಿ ದೇವಸ್ಥಾನಗಳನ್ನು ಸೆರೆಯಿಂದ ಬಿಡಿಸಬೇಕೆಂದು ಟೈಂ ಟೇಬಲ್ ಹಾಕಿದೆ. ನಾನೂ ತಾಲ್ಲೂಕು ಕಸಬಾಕ್ಕೆ ಅವಶ್ಯಕವಾದ ವೇಳೆಗಳಲ್ಲಿ ಮಾತ್ರ ಹೋಗಿ, ಬಾಕಿ ಕಾಲದಲ್ಲೆಲ್ಲಾ ತಲಕಾಡಿನಲ್ಲೇ ಮೊಕ್ಕಾಂ ಮಾಡಿ, ಮರಳು ದಿಬ್ಬದ ಮೇಲಿನ ಒಂದು ಮರದ ನೆರಳಿನಲ್ಲಿ ಕೋರ್ಟು ಕಛೇರಿ ಮಾಡಿದೆ. ಜನಗಳ ಉತ್ಸಾಹ ದಿನೆ ದಿನೆ ಹೆಚ್ಚಾಯಿತು. ನನ್ನ ಪಟ್ಟಿಯಲ್ಲಿಲ್ಲದ ಆಳುಗಳು, ಕೊಳ್ಳೇಗಾಲ ಮಳವಳ್ಳಿ ತಾಲ್ಲೂಕಿನ ಜನಗಳು, ದೇವರ ಸೇವೆಗೆ ಬಂದರು. ಅನೇಕರು ತಮ್ಮ ತಮ್ಮ ಶಕ್ತ್ಯಾನು

ಸಾರ ಧಾನ್ಯವನ್ನು ಒಟ್ಟು ಕಣಜಕ್ಕೆ ತುಂಬಿದರು. ಇನ್ನೂ ಅನೇಕರು ದುಡಿಯುವವರ ಊಟಕ್ಕಾಗಿ ಅಡಿಗೆ ಜೋಪಡಿಗಳನ್ನು ಹಾಕಿ "ಮುದ್ದೆ ಸಮಾರಾಜಣೆ" "ದಾಸೋಗ"ಗಳನ್ನು ಏರ್ಪಡಿಸಿದರು. ಕೆಲಸ ಒಳ್ಳೇ ಭರಾಟೆಯಲ್ಲಿದ್ದಾಗ ನಾನು ನಮ್ಮ ಡೆಪ್ಯುಟಿ ಕಮಿಷನ್ನರ್ ಸರ್ದಾರ ಕಾಂತರಾಜೇ ಅರಸಿನವರನ್ನು ಕರತಂದೆ. ಅವರ ಸಂತೋಷಕ್ಕೆ ಪಾರವೇ ಇಲ್ಲ. ಶ್ರೀಮತ್ ಮಹಾರಾಜರನ್ನೂ, ರಾಜಕುಟುಂಬದವರನ್ನೂ ಪಂಚ ಲಿಂಗ ದರ್ಶನಕ್ಕೆ ಕರೆದುಕೊಂಡು ಬರುವುದಾಗಿ ಹೇಳಿದರು. ಈ ಸಂದರ್ಭದಲ್ಲಿ ಕಾಂತರಾಜೇ ಅರಸಿನವರ ದೊಡ್ಡತನವನ್ನು ತೋರಿ ಸುವ ಒಂದು ಸಣ್ಣ ಸಂಗತಿ ಜ್ಞಾಪಕ ಬರುತ್ತದೆ. ಅವರು ಮೋಟಾರ್ ಕಾರಿನಲ್ಲಿ ದಯಮಾಡಿಸಿದ್ದರು. ಆಗಿನ ಕಾರುಗಳು ಈಗಿನವುಗಳಷ್ಟು ಪ್ರಶಸ್ಥವಾಗಿರಲಿಲ್ಲ. ಆರ್ಭಟ ಜೋರು, ಬಲ ಕಮ್ಮಿ. ಸರಿ, ಸಾಹೇಬರ ಕಾರು ದಾರಿಯಲ್ಲಿ ಸರಿದು ಉರಳಿದ್ದ ಮರಳಿನಲ್ಲಿ ಸಾಗಲಾರದೆ ನಿಂತು ಬಿಟ್ಟಿತು. ಕೆಲಸ ಮಾಡುತ್ತಿದ್ದ ಜನರು—ಇದು ಒಂದೂ ತಮಾಷೆ ಎಂದು—ನಾನು ಮುಂದು ತಾನು ಮುಂದಾಗಿ ಬಂದು ಕಾರನ್ನು ಮುತ್ತಿ, ಜಾಗವಿದ್ದ ಕಡೆಗೆಲ್ಲಾ ಕೈಹಾಕಿ ತಳ್ಳಿದರು. ಕಾರೇನೋ ಮರಳು ಆಟಕಾವಿನಿಂದ ಬಿಡುಗಡೆಯಾಯಿತು; ಆದರೆ, ಅದರ ಮಡ್‌ಗಾರ್ಡ್ (ರಸ್ತೆಯ ದೂಳು, ಗೊರೆ, ಮೇಲೆ ಹಾರದಂತೆ ಚಕ್ರದ ಮೇಲೆ ರಚಿಸಿ ರುವ ತಗಡು) ಪಚ್ಚುಬಿದ್ದು ಆರೂಪಾಯಿತು. ಅರಸಿನವರು ಕೋಪ ಗೊಂಡು — "ಅಯ್ಯೋ ವಡ್ಡಮುಂಡೇ ಮಕ್ಕಳಿರ — ಇದೇನು ಗೊಬ್ಬ ರದ ಬಂಡಿ ಅಂತ ತಿಳಿದಿರ? ಹಾಳು ಮಾಡಿದರಲ್ಲೋ, ಬಡ್ಡೀಮಕ್ಕ ಳಿರಾ!" ಅಂತ ಘರ್ಜಿಸಿದರು. ಗಾಡಿ ತಳ್ಳುತ್ತಿದ್ದವರು ಮೊಖ ಚಿಕ್ಕದು ಮಾಡಿಕೊಂಡೋ, ಘಾಬರಿ ಬಿದ್ದೋ, ಹಿಂದೆ ಸರಿದರು. ಸಾಹೇಬರು ನನ್ನನ್ನೂ ಕಾರಿನಲ್ಲಿ ಕೂಡಿಸಿಕೊಂಡು ಮುಡುಕತೊರೆಗೆ ಬಂದರು. ಬಹಳ ಖಿನ್ನರಾಗಿದ್ದರು. ನಾನು — ಯಾಕೆ ಸ್ವಾಮಿ, ಮೈನಲ್ಲಿ ಸರಿ ಯಾಗಿಲ್ಲವೇ?—ಎಂದು ಕೇಳಿದೆ, ಸ್ವಲ್ಪ ಹೊತ್ತು ಸುಮ್ಮನಿದ್ದು—

"ನೋಡಿ, ರಾಮರಾಯರೆ ನನ್ನ ಅಲ್ಪತನ. ಆ ಜನಗಳು ಪಾಪ ನನಗೆ ಸಹಾಯ ಮಾಡುವುದಕ್ಕೆ ಬಂದರೆ ನನ್ನ ಬಾಯಲ್ಲಿ ಅಂಥ

ಮಾತು ಕಡೀಬಹುದೆ? ನಾನೇ ದೊಡ್ಡ ಮನುಷ್ಯ; ಹುಟ್ಟುತಾಲೆ ಕಾರು ತಂದೆ; ಅವರು ವಡ್ಡರು, ಗೊಬ್ಬರ ಬಾಚೋರು — ಹೀಗಂದು ಬಿಟ್ಟೆ, ನಾನು ದೊಡ್ಡ ಮನುಷ್ಯನೆ? ದೇವರು ಮೆಚ್ಯಾನೆ?" ಅಂದರು.

ನಾನು—"ಅಯ್ಯೋ ಅದೇನು ದೊಡ್ಡ ಮಾತು? ನನಗೆ ರೇಗಿದರೆ ನನ್ನ ವಾಕ್‌ಝುರಿ ತಾವು ಕೇಳಿದರೆ ಏನು ಹೇಳುತ್ತೀರೋ!" ಅಂತ ಮಾತನ್ನು ತಿರುಗಿಸಿ ಅವರನ್ನು ಸಂತೈಸುವುದಕ್ಕೆ ನೋಡಿದೆ. ಆದರೂ ಅವರು ಬಹಳ ಪಶ್ಚಾತ್ತಾಪದಿಂದ ನೊಂದು ಸುಮ್ಮನಿದ್ದರು.

ಇದೆ ಸಂದರ್ಭದಲ್ಲಿನ ಇನ್ನೊಂದು ಕತೆ ಜನಗಳ ಸ್ವಭಾವದ ಭಿನ್ನತೆಯನ್ನು ತೋರಿಸುತ್ತೆ. ಮರಾಮತ್ತು ಇಲಾಖಾ ನವುಕರರಿಗೆ ನಾವು ಮಾಡಿಸುತ್ತಿದ್ದ ಮರುಳು ನಿವಾರಣೆ ಕೆಲಸ ಸರಿಬೀಳಲಿಲ್ಲವೆಂದು ನನಗೆ ಒಂದೆರಡು ಸೂಚನೆಗಳಿಂದ ಸಂದೇಹ ತೋರಿತು. ಸ್ಥಳದಲ್ಲಿದ್ದ ಸಬ್ ಓವರ್‌ಸಿಯರ್ ಜನಗಳು ಕೆಲಸ ಮಾಡುತ್ತಿದ್ದ ಕಡೆಗೆ ಬಂದು ಗೇಲಿ ಮಾಡುವುದು,— ಯಾಕೋ ಬಿಟ್ಟಿ ದುಡಿತಾ ಗೇಯೀರಿ? ನಿಮ್ಮೂರಲ್ಲಿ ನಿಮಗೆ ಕೆಲಸವಿಲ್ಲವೇನ್ರೋ?— ಅನ್ನುವುದು, ಇದನ್ನೆಲ್ಲಾ ಕೇಳಿದ್ದೆ. ಅವರಿಗೆ ಹಾಗೆ ಮಾಡಬೇಡಿರೆಂದು ಎಚ್ಚರಿಸಿಯೂ ಇದ್ದೆ. ಒಂದು ದಿನ ಬೆಳಗ್ಗೆ ಮೂಗೂರು ಹೋಬಳಿಯಿಂದ ಬರಬೇಕಾಗಿದ್ದ ಜನಗಳ ಆಗಮನವನ್ನು ಎದುರು ನೋಡುತ್ತ ಹೊಳೆ ಕರೆಯಲ್ಲಿದ್ದೆ. ಹೊಳೆಯಲ್ಲಿ ಸ್ವಲ್ಪ ಹೆಚ್ಚಾಗಿ ನೀರಿದ್ದದ್ದರಿಂದ ಜನಗಳಿಗಾಗಿ ಹರಿಗೋಲು ಏರ್ಪಡಿಸಿತ್ತು ಆ ಹರಿಗೋಲಿನಲ್ಲಿ 20-25 ಜನ ರೈತರೂ, ಒಬ್ಬಿಬ್ಬರು ಜಂಗಮರೂ, ನಮ್ಮ ಕೆಲಸಕ್ಕಾಗಿ ಬರುತ್ತಿದ್ದವರು ಇದ್ದರು. (ಜಂಗಮರು ದೇವರಗುಡ್ಡರು ತಮ್ಮ ತಮ್ಮ ಗ್ರಾಮಗಳವರ ಪ್ರೋತ್ಸಾಹಕ್ಕಾಗಿ ಅವರ ಸಂಗಡ ಬಂದು ಅವರು ಕೆಲಸಮಾಡುತ್ತಿದ್ದಾಗ ಏಕತಾರನ್ನೋ ಕಿನ್ನರಿಯನ್ನೋ ನುಡಿಸಿಕೊಂಡು ಶಿವಕೀರ್ತನೆ ಶರಣರ ಪದಗಳನ್ನು ಹೇಳುತ್ತಿದ್ದರು.) ಅದೇ ಹರಿಗೋಲಲ್ಲಿ ನಮ್ಮ ಸಬ್ ಓವರಸಿಯರರೂ ಇದ್ದರು. ಹರಿಗೋಲು ತಲಕಾಡಿನ ಕಡೆ ತೀರದಿಂದ ಇಪ್ಪತ್ತು ಮಾರು ದೂರದಲ್ಲಿದ್ದಾಗ ಏನು ಜಗಳವಾಯಿತೋ ಕಾಣೆ, ಸಬ್ ಓವರಸಿಯರು ಒಬ್ಬ ಜಂಗಮನಿಗೆ ಬೀಸಿ ಥಪರಾಕು ಹೊಡೆದರು. ಕೂಡಲೆ ಹರಿಗೋ

ಟಲ್ಲಿ ಎಲ್ಲರೂ ಎದ್ದು ಗಲಬಿಲಿಗೆ ಷುರೂ ಮಾಡಿ, ಹರಿಗೋಲೇ ಮೊಗಚಿ ಕೊಳ್ಳುವಂತೆ ಊಗಲಾಡ ಹತ್ತಿತು. ನಾನು ಕಹಳೆಯವನಿಂದ ಕೊಂಬು ಊದಿಸಿ, ಕೂಗಿನಿಂದಲೂ, ಸನ್ನೆಯಿಂದಲೂ, "ದುಡುಕಬೇಡಿ. ನಾನು ಇದನ್ನು ವ್ಯವಸ್ಥೆ ಮಾಡುತ್ತೇನೆ" ಎಂದು ಹೇಳಿದ ಮೇಲೆ ಗಲಭೆನಿಂತು ಹರಿಗೋಲು ದಡಕ್ಕೆ ಬಂತು. ಜನಗಳು ಬಹಳ ರೇಗಿದ್ದರು. ನಾನಿಲ್ಲದಿದ್ದರೆ ಸಬ್ ಓವರಸಿಯರ ಗತಿ ಗಂಗಮ್ಮನ ಪಾಲಾಗುತ್ತಿತ್ತೋ ಏನೋ ಕಾಣೆ. ನಾನು ಜನಗಳನ್ನು ಹತೋಟಿಗೆ ತಂದು ನಿಲ್ಲಿಸಿ, ಸಬ್ ಓವರಸಿಯರಿಗೆ ಯಾಕೆ ಆ ಜಂಗಮನ ಮೇಲೆ ಕೈಮಾಡಿದಿರಿ ಎಂದು ಕೇಳಿದೆ. ಅವರು—ನೀವ್ಯಾರು ಕೇಳೋಕೆ? ನಾನು ನಿಮ್ಮ ತಾಬೇದಾರನಲ್ಲ—ಎಂದರು. ಅವರಿಗೂ ಬಹಳ ರೇಗಿತ್ತೆಂದು ಕಾಣುತ್ತೆ. ಏನು ನಡೆಯಿತೆಂದು ಇತರರನ್ನು ಕೇಳಲಾಗಿ— ಹರಿಗೋಲು ತೂಗಾಡಲು ಜಂಗಮರು ಓವರಸಿಯರ ಮೇಲೆ ತೂಕತಪ್ಪಿ ಬಿದ್ದರು. ಓವರಸಿಯರು — ಬುದ್ಧಿ ಇಲ್ಲವೇನೋ ಬೋಳಿಮಗನೆ—ಎಂದರು. ಜಂಗಮರು—ನಿಮ್ಮಪ್ಪ ಬೋಳಿಮಗ — ಅಂದರು. ಓವರಸಿಯರು ಜಂಗಮರ ಕೆನ್ನೆಗೆ ಹೊಡೆದು—ಜೋಡಿನಿಂದ ಹೊಡೆಯುತ್ತೇನೆಂದು ಬೈದರು— ಹೀಗೆಂದು ಗೊತ್ತಾಯಿತು. ನಾನು ಸಬ್ ಓವರಸಿಯರಿಗೆ—ಇದು ಉಂಟೆ?— ಎಂದು ಕೇಳಲಾಗಿ, ಅವರು ತಿರುಗ—ನಾನು ನಿಮ್ಮ ತಾಬೇದಾರನಲ್ಲ— ಎಂದು ಹೇಳಿದರು. ನಾನು ನನ್ನ ಆರ್ಡರ್ಲಿಗೆ ಅವರನ್ನು ಬಿಮ್ಮನೆ ಹಿಡಿದುಕೊಳ್ಳುವಂತೆ ಹೇಳಿ, ಜಂಗಮನಿಗೆ ಅವರಿಗೆ ಎರಡು ಥಪರಾಕು ಕೊಡುವಂತೆ ಹೇಳಿದೆ. ಅವನು—ಬೇಡಿ ಶಿವ—ಅಂತ ಹೇಳುತ್ತಲೇ ಷರೀರಂತ ಒಂದು ಕೆನ್ನೆಗೆ ಬಿಗಿದ. ಜನಗಳೆಲ್ಲ ಸಂತುಷ್ಟರಾಗಿ ನಗುತ್ತಾ ಹೊರಟುಹೋದರು. ಸಬ್ ಓವರಸಿಯರು ಮಾತ್ರ—ನಿಮಗೆ ಅಧಿಕಾರ ಕೊಟ್ಟವರಿಗೆ ಬುದ್ಧಿ ಇಲ್ಲ. ಇದೇನು ಜುಲಮಿ? ಹೇಳೋರು ಕೇಳೋರಿಲ್ಲವೆ? ನೀವು ನವಾಬರೂ ಅಂತ ತಿಳಿಕೊಂಡಿದ್ದೀರ? ನಾನು ಎಗ್ಜಿಕ್ಯುಟೀವ್ ಇನ್‌ಜನಿಯರಿಗೆ, ಡೆಪ್ಯುಟಿ ಕಮ್ಮಿಷನ್ನರಿಗೆ ರಿಪೋರ್ಟು ಮಾಡುತ್ತೇನೆ. ನಾನೂ ನಿಮ್ಮ ಹಾಗೇ ಸರ್ಕಾರಿ ಹುದ್ದೇದಾರ, ವಗೈರೆ

ವಗೈರೆ. ಕೂಗಾಡಿದರು. ಆ ಸಂದರ್ಭದಲ್ಲಿ ಅವರ ಕೋಪ ಸಹಜವೇ ಎಂದು ನಾನು ಎದುರು ಕೋಪವಿಲ್ಲದೆ ಹೇಳಿದೆ—

"ನೋಡಿ ಸಬ್ ಓವರಸಿಯರೆ; ನಾನು ಇಲ್ಲದಿದ್ದರೆ ಅವರು ನಿಮ್ಮನ್ನು ಬಹಳ ಹೊಡೆಯುತ್ತಿದ್ದರು ಹೊಳೆಗೇ ಎತ್ತಿ ಹಾಕುತ್ತಿದ್ದರೋ ಏನೋ, ಯಾರು ಬಲ್ಲರು? ಅಥವ ಅವರು ನಿಮ್ಮ ಮೇಲೆ ಕೇಸು ಮಾಡಿದ್ದರೆ, ನಾನೇ ನಿಮಗೆ ದಂಡಿಸಬೇಕಾಗುತ್ತಿತ್ತು. ಇದರಿಂದ ನಿಮ್ಮ ನವುಕರಿಗೇ ಊನ ಬರುತ್ತಿತ್ತೋ ಏನೋ. ಅವರು ಜಂಗಮರನ್ನು ದೇವರೆಂದು ತಿಳಿಯುತ್ತಾರೆ. ನಾನು ನಿಮಗೆ ಉಪಕಾರವನ್ನೇ ಮಾಡಿದ್ದೇನೆ, ನಿಧಾನವಾಗಿ ಯೋಚನೆಮಾಡಿ ನೋಡಿ"

ಅವರು ನಿಧಾನವಾಗಿ ಯೋಚನೆ ಮಾಡಿರಬೇಕೆಂದು ಕಾಣುತ್ತೆ. ಈ ಸಂಗತಿ ಅಲ್ಲಿಗೇ ನಿಂತಿತು.

ದೇವಸ್ಥಾನಗಳನ್ನು ಆವರಿಸಿದ್ದ ಮರಳನ್ನು ಬಹಳಮಟ್ಟಿಗೆ ತೆಗೆದು ಹಾಕಿದ್ದಾಯಿತು. ಮರಳು ಎಷ್ಟು ಮಂದವಾಗಿ ತುಂಬಿತ್ತೆಂದರೆ ಎರಡು ದೇವಸ್ಥಾನಗಳ ರಾವನ್ನು ಗಡಾರಿಯನ್ನು ಮರಳಲ್ಲಿ ಇಳಿಸಿ ತಲಾಷು ಮಾಡಬೇಕಾಯಿತು. ಇವುಗಳ ವಿಚಾರದಲ್ಲಿ ಈಚಿನ ಸ್ಥೂಲ ಗೆಜೆಟೀಯರಿನಲ್ಲಿ

"ಪಾತಾಳೇಶ್ವರ, ಮರಳೇಶ್ವರ—ಹಾಗೂ ಆನಂದೇಶ್ವರ, ಗೌರಿ ಶಂಕರ—ದೇವಸ್ಥಾನಗಳು ಇತ್ತೀಚೆಗೆ ಮರಳನ್ನು ತೋಡಿ ಪ್ರಕಾಶಕ್ಕೆ ತಂದಂತಿದೆ"

ಎಂದು ಬರೆದಿದೆ. ಅದೇ ಗೆಜೆಟೀಯರಿನಲ್ಲಿ

"ಜನಗಳು ದೇವಸ್ಥಾನಗಳು ಮರಳಿನಲ್ಲಿ ಹೂತುಹೋಗಿರುವುದು ಶಾಪದಿಂದ ಎಂದು ತಿಳಿದು ಏನೂಮಾಡದೆ ಇದ್ದಾರೆ. ಅವರು ಸರ್ಕಾರದ ಬಲವಂತವಿಲ್ಲದೆ ಯಾವ ಕೆಲಸವನ್ನೂ ಮಾಡತಕ್ಕವರಲ್ಲ" ಎಂದು ಹೇಳಿದೆ. ಗೆಜೆಟೀಯರನ್ನೇನೋ ಸರ್ಕಾರದ ಅಪ್ಪಣೆಯಿಂದ ಬಹಳ ಹಣ ವೆಚ್ಚಮಾಡಿ ಬರೆದರು. ಈ ದೇವಸ್ಥಾನಗಳು ಸರ್ಕಾರದ ಹುಕ್ಕುಂಗೆ ಹೆದರಿ ಬಗರು ಲಾಗೋಡು ತಾವಾಗೇ ಮರಳಿನಿಂದ ಹೊರ ಮೂಡಿದವೆಂದು ತಿಳಿದಿದ್ದರೋ, ಕಾಣೆ.

ಅಂತು ಪಂಚಲಿಂಗ ದರ್ಶನ ಏರ್ಪಾಡು ಬಹಳ ಚನ್ನಾಗಿ ನಡೆಯಿತೆಂದು ಎಲ್ಲರ ಅಭಿಪ್ರಾಯ. ತಾಲ್ಲೂಕಿನ ಎಲ್ಲ ಗ್ರಾಮಗಳಿಂದ ಮುಕ್ಕಾಲು ಮೂರು ವೀಸೆ ಜನಗಳು ತಲಕಾಡಿಗೆಬಂದು ಅವರಿಗೆ ಕ್ಲುಪ್ತವಾದ ನಿವೇಶನಗಳಲ್ಲಿ ಹಂಗಾಮಿ ಗ್ರಾಮಗಳನ್ನೇ ನಿರ್ಮಾಣ ಮಾಡಿಕೊಂಡಿದ್ದರು. ದಕ್ಷಿಣ ಇಂಡಿಯಾದ ಎಲ್ಲ ಕಡೆಗಳಿಂದಲೂ ಒಟ್ಟು ಬಂದು ಒಂದೂವರೆ ಲಕ್ಷ ಜನಗಳು ಬಂದಿದ್ದರು ಇವರುಗಳ ಅನುಕೂಲಕ್ಕಾಗಿ ಒಂದು ಪಹರಿನ ಮಾದರಿ ಪಾಳೆಯವೇ ರಚಿಸಲಾಗಿತ್ತು. ಅಂಗಡಿ ಸಾಲುಗಳು, ಪೋಲೀಸು ಠಾಣೆಗಳು, ಆಸ್ಪತ್ರೆ, ತಂದೆ ತಾಯಿಗಳ ನಿಗತಪ್ಪಿ ಹಂಗಾಲಾದ ಮಕ್ಕಳ ಉಸ್ತುವಾರಿ, ಮತ್ತು ಅವರು ಹುಡುಕುವರಿಗೆ ದೊರೆಯಬಹುದಾದ ಉಕ್ಕಡಗಳ ನಿರ್ಮಾಣ, ಅಮೃತ ಸರೋವರದಲ್ಲಿ, ಹೊಳೆ ಕಡವು ಸ್ನಾನದ ಘಟ್ಟಗಳಲ್ಲಿ, ಅಕಸ್ಮಾತ್ ನೀರಿಗೆ ಬೀಳಬಹುದಾದವರ ರಕ್ಷಣೆಯ ಬಂದೋಬಸ್ತು, ಈ ಭಾರಿ ಪಾಳೆಯದ ನಿರ್ಮಲೀಕರಣ, ಇವುಗಳಿಗೆಲ್ಲ ನಿಗ ಕೊಡಲಾಗಿತ್ತು. ರಾಜಮನೆತನದವರು ಬರಲಿಲ್ಲ; ಆದರೆ ಕಾಂತರಾಜೆ ಅರಸಿನವರ ಸಂಗಡ ಅವರ ಅತಿಥಿಗಳಾಗಿ ದಳವಾಯಿಯವರೂ, ಅನೇಕ ಅರಸು ಮುಖಂಡರವರೂ, ಮಹಾರಾಜರ ಮಾವಂದಿರಾದ ರಾಣಾಸಾಹೇಬರೂ, ಬಂದಿದ್ದರು. ಕಾಂತರಾಜೇ ಅರಸಿನವರು ಆ ಸನ್ನಿವೇಶದ ಆನಂದವನ್ನು ಅನುಭವಿಸಿ, ಸ್ವಲ್ಪ ದಿನದಲ್ಲಿ ತಮ್ಮ ಅಕ್ಕಂದಿರಾದ ರಾಜಮಾತೃಶ್ರೀಯವರನ್ನು ತಲಕಾಡು ಅಥವ ಮುಡುಕತೊರೆಗೆ ಬಿಜಮಾಡುವಂತೆ ಕೇಳಿಕೊಳ್ಳುತ್ತೇನೆಂದು ಹೇಳಿದರು. ಅವರ ಸವಾರಿಯೂ ದಯಮಾಡಿತು. ಅದರ ಕತೆಯನ್ನು ಮುಂದೆ ಹೇಳುತ್ತೇನೆ.

೩೭

ಅಮಲ್ದಾರನಾದವನ ಒಂದು ದೊಡ್ಡ ಸಮಸ್ಯೆ ವಿರಾಮಕಾಲದ ವಿನಿಯೋಗ. ಅವನ ಸಣ್ಣ ಪ್ರಪಂಚದಲ್ಲಿ ಅವನು ಸ್ವಲ್ಪ ಹೆಚ್ಚು ಕಡಮೆ ಏಕನಾಯಕನಾದ್ದರಿಂದ ಎಲ್ಲರ ಕಣ್ಣೂ ಅವನ ಮೇಲೆ ಇರುತ್ತಿತ್ತು. ಟೆನ್ನಿಸನ್ ಹೇಳುವ "ಚಿತ್ತುಗಳನ್ನೆಲ್ಲ ಕಪ್ಪು ಕರಾಳ

ಮಾಡುವ ತೀಕ್ಷ್ಣ ಝಳ” ಸಿಂಹಾಸನದ ಮೇಲೆ ತಪಿಸುವಂತೆಯೇ ಆಗಿನ ಕಾಲದಲ್ಲಿ ಅಲ್ಪ ಅಮಲ್ದಾರನ ಹಳೆಯ ಕುರ್ಚಿಯ ಮೇಲೂ ಜ್ವಲಿಸುತ್ತಿತ್ತು. ಯಾರಾದರೂ ನಾಲ್ಕು ಜನ ಸೇರಿ ಹರಟುತ್ತಿರುವಾಗ ಹವ, ನ್ಯೂಸುಪೇಪರು ಸುದ್ದಿಗಳ ಸಂಗಡ ಅಮಲ್ದಾರನ ಇತ್ತೀಚಿನ ವರ್ತನೆಯೂ ಮಾತಿನಲ್ಲಿ ಮೂಡುತ್ತಿತ್ತು. ಅಮಾಲ್ದಾರರು ಯಾರ ಸಂಗಡ ಸ್ನೇಹವಾಗಿದ್ದಾರೆ, ಫಲಾನೆಯವನ ಮಾತು ಅಮಲ್ದಾರರಲ್ಲಿ ನಡೆಯುತ್ತಂತೆ, ಹೌದೆ? ಅಮಲ್ದಾರರಿಗೆ ಕೇವಲ ಸಂಗೀತದ ಮೇಲೆ ಪ್ರೇಮವೋ, ಸಂಗೀತಗಾರರ ಮೇಲೂ ಪ್ರೇಮ ಉಂಟೋ? ಮೊನ್ನೆ ಅಮಲ್ದಾರರು ಫಲಾನೆಯವರಿಗೆ ಏನು ಮಾಡಿದರು, ಕೇಳಿದಿರ? ಯಾರಿಂದ ಶಿಫಾರ್ಸು ಹೇಳಿಸಿದರೆ ಅಮಲ್ದಾರರಲ್ಲಿ ನಮ್ಮ ಕೇಸು ಸರಿಹೋಗುತ್ತೆ? ಈಚೆಗೆ ಅಮಲ್ದಾರರು ಫಲಾನೆಯವರ ಸಂಗಡ ಹೆಚ್ಚು ಸಲಿಗೆಯಾಗಿದ್ದಾರಲ್ಲವೆ? ಅಮಲ್ದಾರರು ಕೋಪಿಷ್ಟರಾದರೂ ಒಳ್ಳೆಯವರು. ಅಮಲ್ದಾರರು ದುಡ್ಡು ಕಾಸನ್ನ ಕಸದಹಾಗೆ ಕಂಡರೂ ಅವರು ಸ್ತೋತ್ರಪ್ರಿಯರಾದ್ದರಿಂದ ಗಿಲೀಟುಮಾಡಿ ಅವರಿಂದ ಬೇಕಾದ್ದು ಮಾಡಿಸಬಹುದು. ಪರನಾರಿ ಸಹೋದರರೆ? ಕಾಣನಪ್ಪ! ಅಂತು ಹೊರಗೇನೋ ಹಾಗೇ ಕಾಣಿಸಿಕೊಳ್ಳುತ್ತಾರೆ— ಈ ರೀತಿ ಮಾತುಗಳನ್ನು ಕೇಳಬಹುದು. ಇದು ಸಾಮಾನ್ಯವಾಗಿ ನನ್ನ ಅನುಭವ. ಆ ಇಕ್ಕಟ್ಟು ಸನ್ನಿವೇಶದಲ್ಲಿ ತಾಟಸ್ಥ್ಯವೇ ವಿವೇಕವಾದ ನೀತಿ. ನಿಸ್ಪೃಹ ವ್ಯಕ್ತಿ ಸ್ನೇಹವೆಂಬುದು ಅಧಿಕಾರ ಎಲ್ಲೆಯಲ್ಲಿ ದುರ್ಲಭ. ಇದನ್ನು ಸಂಕೋಚದಿಂದ ಹೇಳುತ್ತೇನೆ—ಯಾರನ್ನಾದರೂ ಹೆಚ್ಚಾಗಿ ಹತ್ತಿರ ಸೇರಿಸಿದರೆ ಅಥವ ಯಾರ ಸಂಗಡಲಾದರೂ ಸಲಿಗೆಯಿಂದ ಮಾತನಾಡಿದರೆ, ಅವರು ಸಾಮಾನ್ಯವಾಗಿ ಅದರ ಬಲದ ಮೇಲೆ ತಮಗೆ ಏನಾದರೂ ವಿಶೇಷ ಪ್ರಯೋಜನವನ್ನು ಹುಡುಕುವರು; ಇಲ್ಲವೆ, ತಮಗೆ ಬೇಕಾದವರಿಗೆ ಶಿಫಾರ್ಸು ಹೇಳಲಿಕ್ಕೆ ಬರುವರು. ಅಥವ ಈ ಸ್ನೇಹದ ನೆವದಮೇಲೆ ತಮ್ಮ ಕಾರ್ಯಸಾಧನೆಗೆ ಯತ್ನಮಾಡುವರು. ಹೀಗೆ ಬಳಕೆಯನ್ನು ದುರುಪಯೋಗಪಡಿಸದವರು ಇರಲಿಲ್ಲವೆಂದಲ್ಲ. ತಾಲಿಂ ಖಾನದವರು ನನ್ನ ಸಂಗಡ ಎಷ್ಟು ಸರಳವಾಗಿ ಸಲಿಗೆಯಾಗಿದ್ದರೂ ಯಾರೊಬ್ಬರು

ನನ್ನಿಂದ ಯಾವ ಪ್ರಯೋಜನವನ್ನೂ ಅಪೇಕ್ಷಿಸಿದ ಜ್ಞಾಪಕವಿಲ್ಲ. ಯಡತೊರೆಯಲ್ಲಿ ರಹಿಮಾನ್‌ಖಾನ್ ಎಂಬ ಒಬ್ಬ ಪಠಾಣ ಮುದುಕ ನಿಂದ ನಾನು ಅವನ ದೇಶದ ತಳವಾರು ವರಸೆ ಕಲಿಯುತ್ತಿದ್ದೆ. ಅವನು ನನ್ನಿಂದ ಒಂದು ಕಾಸಿನ ವೇತನವನ್ನೂ ಒಪ್ಪವಲ್ಲದೆ ಹೋದ; ಅವನ ಮತದವರು ನನ್ನಲ್ಲಿ ನಡೆಯುತ್ತಿದ್ದ ಕೇಸಿನಲ್ಲಿ ಅವನ ದಾಕ್ಷಿಣ್ಯವನ್ನು ಉಪಯೋಗಿಸಬೇಕೆಂದು ಎಷ್ಟು ಪ್ರಯತ್ನಪಟ್ಟರೂ ಅವನ ನಿಸ್ಪೃಹತೆ ಯನ್ನು ಕದಲಿಸಲಿಕ್ಕಾಗಲಿಲ್ಲವೆಂದು ನನಗೆ ಬಹು ದಿನಗಳ ಮೇಲೆ ಇತರರಿಂದ ಗೊತ್ತಾಯಿತು. ನಮ್ಮ ಅಂಬಿಗರೂ ಅಷ್ಟೆ. ಅವರ ನಿರಂತರ ದಾಹದ ಪೀಡೆಯಿಂದ ಯಾವಾಗಲಾದರೂ ಕಾನೂನಿಗೆ ಸಿಕ್ಕುತ್ತಿದ್ದರು; ಒಂದೊಂದುವೇಳೆ ಮಾರಾಮಾರಿ, ಜೂಜುಬಿ ಕಳವು, ಇಂಥ ಸಣ್ಣ ಪುಟ್ಟ ತಕ್ಸೀರುಗಳನ್ನು ಮಾಡಿ ನನ್ನ ಮುಂದೆ ಬರುತ್ತಿದ್ದರು; ಆದರೆ ಹಿಂದಿನ ಬಳಕೆ, ಸೇವೆ, ಇವುಗಳ ಮಾತನ್ನೇ ಎತ್ತುತ್ತಿರಲಿಲ್ಲ. "ಉಂಟು ಬುದ್ದಿ, ಮಣ್ಣು ತಿಂದಿ ಜುಲ್ಮಾನೆ ಆಕಬೇಡಿ ನಿಮ್ಮಪಾದ, ಸಜಾನೇ ಆ ಕಿಬುಡಿ ನಾಗೋರು ಗರೀಬ" ಇಷ್ಟೇ. ಶಿಕ್ಷೆಮಾಡಿದರೆ ಈ ತತ್ವಜ್ಞಾನಿ ಗಳಿಗೆ ಕೋಪವೂ ಇಲ್ಲ. "ನೀವೇನು ಮಾಡೀರಿ ಬುದ್ದಿ. ನಾ ಮಾಡಿದ್ದು ನಾ ಉಣಬೇಕು." ಒಂದು ಸಲ ಒಬ್ಬ ಅಂಬಿಗ ಕೈದಿ ಕಛೇರಿ ಮುಂದಿನ ಸಣ್ಣ ಚಮನ್‌ನಲ್ಲಿ ಬಹಳ ದಕ್ಷತೆಯಿಂದ ಹೂಗಿಡಗಳ ಪಾತಿಕಟ್ಟಿ, ಅವುಗಳಿಗೆ ನೀರೆರೆದು ಕೆಲಸಮಾಡುತ್ತಿದ್ದ. ನಾನು ನಿಂತು ನೋಡಿ—ಭಲೆ, ನೀನು ಅಜ್ಜನ ನಾಯಕನಲ್ಲವೇನೋ ? ಒಳ್ಳೆ ಕೆಲಸ ಗಾರ ಕಣೋ! ಅಂತ ಅಂದೆ. ಕೈದಿಯ ಕಾವಲಿನ ಪೋಲೀಸಿನವನು— ಇವನು ನಾಳೆ ಖುಲಾಸಾಗುತ್ತಾನೆ, ಖಾವಿಂದ್— ಅಂದ. ನಾನು ನಕ್ಕು— ಸರಿ ಕಣೋ, ನಿನ್ನ ಸ್ವಂತ ಕೆಲಸ ಅಷ್ಟು ನಿಯತ್ತಾಗಿ ಮಾಡಿದರೆ ಜೈಲಿಗ್ಯಾಕೆ ಬರಬೇಕು ? ಇನ್ನುಮೇಲಾದರೂ ಬುದ್ಧಿವಂತ ನಾಗಿರು. ಎಂದು ನನ್ನ ಕೆಲಸಕ್ಕೆ ಹೋದೆ. ಒಂದು ವಾರದ ನಂತರ ಇರಬಹುದು, ತಿರುಗ ಅವನನ್ನೇ ಪೋಲೀಸಿನವರು ಒಂದು ಸಣ್ಣ ಕಳುವಿಗಾಗಿನನ್ನ ರೂಬುರೂಬು ತಂದರು. ನಾನು ಕನಿಕರದ ಕೋಪ ದಿಂದ— ಅಯ್ಯೋ ಕತ್ತೆ, ಮೊನ್ನೆ ತಾನೆ ಬಿಡುಗಡೆಯಾದವನು ತಿರುಗಾ

ಬಂದ್ಯಾ ? ನೀನು ದನವೇನೋ ?— ಅಂದೆ. ಅವನು— ಈ ದಪಾಕ್ಕೆ ರೋಜಾಕಡ್ಡಿಗಳಿಗೆಲ್ಲ ಪಾತಿಗಟ್ಟಿ ಚಿಗರು ಕಡಿಸಿ, ಇಡಿದ ಕೆಲಸ ಪೂರೈಸಿ ಓಗಿ ಬಿಡ್ತೀನಿ. ತಿರಗಾಬರೋದಿಲ್ಲೇಳಿ ನಿಮ್ಮಪಾದ — ಎಂದ. ಇದು ಭಂಡತನದ ಮಾತಲ್ಲ, ಪಠಿಂಗತನವಲ್ಲ. ನಿಜವಾಗಿ ಅವನ ಸ್ವಭಾವದಿಂದ ಬಂಡದ್ದೆಂದು ನನಗೆ ತೋರಿ ಬಹಳ ಆಶ್ಚರ್ಯವೂ ವ್ಯಸನವೂ ಆಯಿತು.

ತಾಟಸ್ಥ್ಯವೆಂಬುದು ಸಮಾಜ ಜೀವಿಯಾದ ಮನುಷ್ಯನಿಗೆ — ಅದರಲ್ಲೂ ಸಂಸ್ಕೃತಿಯುಳ್ಳ ಮನುಷ್ಯನಿಗೆ — ಅಷ್ಟು ಸುಲಭವಾದ ಸಾಧನೆಯಲ್ಲ. "ರಮ್ಯಾಣಿ ವೀಕ್ಷ್ಯ ಮಧುರಾಂಶ್ಚ ನಿಶಮ್ಯ ಶಬ್ದಾನ್" ನಮ್ಮ ಆನಂದವನ್ನು ಇತರರಿಗೂ ಹಂಚಬೇಕೆಂಬುದು ಮನುಷ್ಯ ಸ್ವಭಾವ. ಇದು ಸಾಧ್ಯವಲ್ಲದಿದ್ದರೆ ಇತರ ಹವ್ಯಾಸಗಳನ್ನು ಹುಡುಕಬೇಕು ನಾನು ಕುದುರೆ ಸವಾರಿ, ಷಿಕಾರಿ, ಇವುಗಳಲ್ಲಿ ತಾಟಸ್ಥ್ಯದ ಬೇಸರಕ್ಕೆ ಪರಿಹಾರವನ್ನು ಕಾಣುತ್ತಿದ್ದೆ ಎರಡು ಕುದುರೆಗಳನ್ನಿಟ್ಟು ಪ್ರತಿದಿನವೂ ಹದಿನೈದು ಇಪ್ಪತ್ತು ಮೈಲಿಗಳು ಸುತ್ತುತ್ತಿದ್ದೆ. ಈ ಸಂಚಾರದಿಂದ ನನ್ನ ತಾಲ್ಲೂಕಿನ ಪ್ರತಿಯೊಂದು ಗ್ರಾಮದ ಪರಿಚಯವೂ, ಗ್ರಾಮಸ್ಥ ಜೀವನದ ವಾಸ್ತವ್ಯ ಮಾಹಿತಿಯೂ ಉಂಟಾಯಿತು. ಷಿಕಾರಿಗೆ ನರಸಿಪುರದಲ್ಲಿ ಅವಕಾಶವಿಲ್ಲ. ಹಕ್ಕಿ, ಹುಲ್ಲೆ, ಇವುಗಳನ್ನು ಹೊಡೆಯಲು ನನಗೆ ಇಷ್ಟವಿರಲಿಲ್ಲ. ಆ ಜನಪುಂಜವಾದ ತಾಲ್ಲೂಕಿನಲ್ಲಿ ಹುಲಿ ಕಿರುಬಗಳಿರುವ ಕಾಡಿರಲಿ, ಮೆಳೆ ಕೂಡ ಇಲ್ಲ. ಯಾವಾಗಲಾದರೂ ಹೊಳೆಗಳಲ್ಲಿ ಮೊಸಳೆ ಗುಂಡಿಗೆ ಸಿಕ್ಕುತ್ತಿತ್ತು. ಅವುಗಳ ವಧೆ ದನಗಳುಳ್ಳ ರೈತರಿಗೆ ಅನುಕೂಲವೇ ಹೊರತು, ಷಿಕಾರಿ ಮಾಡುವವನಿಗೆ ಅಷ್ಟು ಉತ್ಸಾಹಕಾರಿಯಲ್ಲ.

ನನ್ನನ್ನು ನರಸಿಪುರ ತಾಲ್ಲೂಕಿನಲ್ಲಿ ಬೇಸರದಿಂದ ಕಾಪಾಡಿದ್ದು ಮುಖ್ಯವಾಗಿ ಎರಡು ಉದ್ಯಮ — ಮೊದಲನೆಯದು ನನ್ನ ಪೂಜ್ಯ ಹಿರಿಯ ಮಿತ್ರ ದಿವಂಗತ ಶ್ಯಾಮಣ್ಣನವರಿಂದ ನಾನು ಪಡೆದ ಪಿಟೀಲು ಪಾಠ, ಎರಡನೆಯದು ಫ್ರೆಂಚ್ ಭಾಷೆಯ ಪರಿಚಯವನ್ನು ಮಾಡಿಕೊಳ್ಳಬೇಕೆಂದು ನಾನು ವಹಿಸಿದ ಹಟವತ್ತಾದ ಪ್ರಯಾಸ.

ಶ್ಯಾಮಣ್ಣನವರೇ ನನ್ನ ಮಿತ್ರರು ಮಾಸ್ತಿಯವರ ಸುಬ್ಬಣ್ಣನವರು. ಶ್ಯಾಮಣ್ಣನವರ ಮಿಶ್ರರಸ ಭರಿತವಾದ ಜೀವನದ ಕೆಲವು ಕತೆಗಳನ್ನು ನನ್ನಿಂದ ಕೇಳಿ ಮಾಸ್ತಿಯವರು ತಮ್ಮ ಅದ್ಭುತ ಭಾವನದಿಂದ ಪೃಥಕ್ ತುಕಡಗಳನ್ನು ಜೋಡಿಸಿ ಪೂರ್ತ ಮಾಡಿ, ತಮ್ಮ ಪ್ರತಿಭೆಯ ಸಂಜೀವನ ಮಂತ್ರದಿಂದ ತಮ್ಮ ಕಲ್ಪನಪುರುಷ ವ್ಯಕ್ತಿಗೆ ಜೀವ ತುಂಬಿದ್ದಾರೆ. "ಸುಬ್ಬಣ್ಣ" ಶ್ಯಾಮಣ್ಣನವರ ಅಚೇತನ ತಸ್ವೀರಲ್ಲ; ಆ ಪೂಜ್ಯವ್ಯಕ್ತಿಯ ನೈಸರ್ಗಿಕ ಬಣ್ಣದ, ಚಲನ ಚಿತ್ರ.

ನನಗೆ ಶ್ಯಾಮಣ್ಣನವರ ಪರಿಚಯುವಾದದ್ದು ಹೀಗೆ: ನರಸಿಪುರದಲ್ಲಿ ನಡೆದ ಒಂದು ಶ್ರೀ ರಾಮಭಜನೆ ಸಂದರ್ಭದಲ್ಲಿ ಅಲಗೋಡು ಗ್ರಾಮದ ಶ್ಯಾನುಭೋಗನಾಗಿದ್ದ ವೆಂಕಟಸುಬ್ಬಯ್ಯನೆಂಬ ಯುವಕ ಪಿಟೀಲು ನುಡಿಸಿದ್ದನ್ನು ಕೇಳಿ ನನಗೆ ಬಹಳ ಆಶ್ಚರ್ಯವಾಯಿತು. ಆ ತರಹದ ಮಧುರವಾದನವನ್ನು ನಾನು ಹೆಚ್ಚೆಂದರೆ ಇಬ್ಬರು ಮೂವರಿಂದ ಕೇಳಿರಬಹುದು, ಅಷ್ಟೆ. ವೆಂಕಟಸುಬ್ಬಯ್ಯನಗಿಂತ ಸಂಗೀತ ವಿದ್ಯೆಯಲ್ಲಿ ಮತ್ತು ಸಾಧನೆಯಲ್ಲಿ ಹತ್ತುಪಾಲು ಹೆಚ್ಚಾದವರನ್ನು ಅನೇಕರನ್ನು ಬಲ್ಲೆ; ಖ್ಯಾತಿ ಎಂಬುದನ್ನೋ, ವೆಂಕಟಸುಬ್ಬಯ್ಯ ಬಯಸಲೂ ಇಲ್ಲ, ಅವನ ಪಾಲಿಗೆ ಅದು ಬರಲೂ ಇಲ್ಲ. ಮಿಲ್ಟನ್ ಹೇಳುವ ಸಮುದ್ರ ಗುಹೆಯ ರತ್ನವಿವನು, ನಿರ್ಜನ ಅರಣ್ಯದ ಅನಾಸ್ವಾದಿತ ಪರಿಮಳದ ಕುಸುಮ. ಬಹಳ ವಿರಳವಾದ ಪರಚಿತರ ಸಭೆಯಲ್ಲಿ, ಈತನಿಗೆ ಆವೇಶ ಬಂದಾಗ ಪಿಟೀಲಿನ ತಂತಿಯ ಮೇಲಿಟ್ಟ ಇವನ ಬೆರಳು ಅಮೃತವನ್ನು ಕರೆಯುತ್ತಿತ್ತು. ನೀವು ದ್ವಾರಂ ವೆಂಕಟಸ್ವಾಮಿ ನಾಯುಡುರವರ ವಾದನವನ್ನು ಕೇಳಿದ್ದೀರಷ್ಟೆ? ನಾನು ಅದನ್ನು ಮೊದಲು ಕೇಳಿದಾಗ ನನಗೆ ನಮ್ಮ ಬಡ, ಪ್ರಕಾಶಕ್ಕೆ ಬಾರದ, ವೆಂಕಟಸುಬ್ಬಯ್ಯನ ನೆನಪು ಬಂದಿತು. ವಿದ್ಯೆಯ ಪ್ರಮಾಣ— ಗಾತ್ರದಲ್ಲಿ ನಾಯುಡುಗಾರ್ರು ಸಮುದ್ರ, ನನ್ನ ಬಡಸ್ನೇಹಿತ ಕೊಳ; ಆದರೆ ಅವುಗಳಲ್ಲಿನ ರಸ ಎರಡೂ ಒಂದೆ. ವೆಂಕಟಸುಬ್ಬಯ್ಯ ಬಡವ, ಆ ಅವಸ್ಥೆಗೆ ಸಹಜವಾದ ಸಂಕುಚಿತ ಧೈರ್ಯದವನು; ಸಾಲದ್ದಕ್ಕೆ ಇವನಿಗೆ ಹೊಸಬರು, ಅದರಲ್ಲೂ ದೊಡ್ಡವರು, ಬಂದರೆಂದರೆ ಸಭಾಕಂಪ ಬೇರೆ—

ಆದರೆ ಅವನು ಶ್ರೇಷ್ಠ ದರ್ಜೆಯ ಸಂಗೀತಗಾರ. ನನಗೂ ಸಂಗೀತದ ಮಾಹಿತಿಯುಂಟು; ನಾನೂ ಬಹುಕಾಲ "ಪಿಟೀಲು ಕುಯಿದಿದ್ದೇನೆ"; ನಾನೂ, ವೆಂಕಟಸುಬ್ಬಯ್ಯನ ವಾದನವನ್ನು ಕೇಳಿದ ರಸಿಕರಾದ ಕೆಲವು ಸ್ನೇಹಿತರೂ, ಬಹು ದಿನದಿಂದಲೂ ವಿಮರ್ಶೆಯಿಂದ ಈ ಅಭಿಪ್ರಾಯಕ್ಕೆ ಬಂದಿದ್ದೇವೆ.

ಅವೊತ್ತು ರಾಮಮಂದಿರದಲ್ಲಿನ ಭಜನೆ ಮುಗಿದಮೇಲೆ ನಾನು ವೆಂಕಟಸುಬ್ಬಯ್ಯನನ್ನು ಹೊಸ ಗೌರವದಿಂದ ಕಂಡು — ದಿವ್ಯವಾಗಿತ್ತು ನಿನ್ನ ಸಂಗೀತ! ಎಲ್ಲಿಯಪ್ಪ, ನಿನಗೆ ಪಾಠ? — ಎಂದು ಕೇಳಿದೆ. ಆತ ಅಲ್ಲಿ ಮೂಲೆಯಲ್ಲಿ ಕುಳಿತಿದ್ದ ಒಬ್ಬ ಬಂಡೆ ತಲೆಯ ಸ್ಥೂಲ ಕಾಯದ, ಕಪ್ಪು ಬಣ್ಣದ ಮುದುಕರನ್ನು ತೋರಿಸಿ — ಆ ಮಹಾನು ಭಾವರ ಅನುಗ್ರಹ — ಎಂದ. ಭಜನೆ ನಡೆಯುತ್ತಿದ್ದಾಗ ನಾನು ಒಂದೆರಡು ಸಲ ಅವರಕಡೆ ನೋಡಿದ್ದೆ, ಅವರು ನಿಶ್ಚಲವಾಗಿ, ತಮ್ಮ ಪ್ರಪಂಚದಲ್ಲೇ ತಾವಿದ್ದುಕೊಂಡು ಜನ್ಮಾಂತರಗಳ ಕನಸುಗಳನ್ನು ಕಾಣುತ್ತಿರುವಂತೆ ಕೂತಿದ್ದದ್ದನ್ನು ಕಂಡಿದ್ದೆ. ಮಂಗಳಾರತಿಯಾದ ಕೂಡಲೆ ಅವರು ಕೋಲು ಊರಿಎದ್ದು ಹೊರಟುಹೋದರು.

ಕೆಲವು ದಿನಗಳನಂತರ ನಾನು ವೆಂಕಟಸುಬ್ಬಯ್ಯನನ್ನು—ನಿಮ್ಮ ಗುರುಗಳು ಪಿಟೀಲು ನುಡಿಸಿದ್ದನ್ನು ಕೇಳಬೇಕಲ್ಲ, ಒಂದು ದಿನ ಕರೆದು ಕೊಂಡು ಬರುತ್ತೀಯಾ ?—ಎಂದು ಕೇಳಿದೆ. ಆತ—ಅವರು ಪಿಟೀಲನ್ನು ಮುಟ್ಟಿ ಇಪ್ಪತ್ತು ವರ್ಷವಾಯಿತೋ ಏನೋ, ತಮ್ಮ ಪಿಟೀಲನ್ನು ಒಡೆದು ಹೊಳೆಗೆ ಇಟ್ಟಮೇಲೆ ವಾದ್ಯಸನ್ಯಾಸ ಮಾಡಿದರಂತೆ. ಅವರು ಯಾರ ಮನೆಗೂ ಹೋಗುವುದಿಲ್ಲ. ಅದನ್ನು ತಾವು ಅನ್ಯಥ ತಿಳಿಯ ಬಾರದು—ಎಂದ.

ತಮ್ಮ ಪಿಟೀಲನ್ನು ಯಾಕೆ ಒಡೆದರು? ವಾದಸನ್ಯಾಸದ ಶಪಥ ವೇಕೆ? ಇವರ ಜೀವನದ ರುದ್ರ ಕಥೆ ಏನು? ಈ ವ್ಯಕ್ತಿ ನೈಸರ್ಗಿಕ ವಾಗಿ ಮನುಷ್ಯ ಜಾತಿಯನ್ನೇ ಧಿಕ್ಕರಿಸುವ ಡೈಯೋಜನೀಸೇ, ಅಥವ ತನ್ನ ಪ್ರಿಯರ ಪ್ರೀತಿ ದ್ರೋಹದಿಂದ ಹುಳಿಹಿಡಿದ ಹಾಲಿನಂತೆ ಸ್ವಭಾವ ವೈಪರೀತ್ಯಕ್ಕೆ ಎಳೆಯಲ್ಪಟ್ಟ ಟೈಮನನೇ? ಎಂದು ನನ್ನ ಮನಸ್ಸು ವಿಚಾರ

ಮಾಡಹತ್ತಿತು. ಮನುಷ್ಯ ಜಾತಿಯಮೇಲಿನ ದ್ವೇಷವೂ ಅಲ್ಲ; ಮಿತ್ರರ ಕೃತಘ್ನತೆಯಿಂದ ಬಿಗಡಾಯಿಸಿದ ಹೃದಯವೂ ಅಲ್ಲ; ಬಹಳ ಕ್ಲೇಶದಲ್ಲಿ ಪುಟಕ್ಕೆ ಬಿದ್ದು, ರಾಗ ದ್ವೇಷಗಳಿಂದ ಶುದ್ಧವಾಗಿ, ವಿಷಯವಿತೃಷ್ಣತೆಯನ್ನು ಪಡೆದಿರುವ ಧೀರ ಜೀವವಿದು ಎಂದು ನನಗೆ ಕ್ರಮೇಣ ಮಂದಟ್ಟಾಯಿತು. ಅವರು ಮಕ್ಕಳ ಸಂಗಡ ಮಗುವಿನ ಹಾಗೆ ಆಡಿ ನಗುವುದನ್ನು ನೋಡಿದ್ದೇನೆ. ಅವರು ತಮ್ಮ ನಿತ್ಯಕಟ್ಲೆ ಐದು ಮನೆಗಳ ಭಿಕ್ಷಾಟನೆಯಿಂದ ತಂದ ಅನ್ನವನ್ನ ದುರ್ಬಲರಾದ ಅಥವ ಖಾಯಿಲೆಯಿಂದ ನರಳುತ್ತಿರುವ ನಿರ್ಭಾಗ್ಯರಿಗೆ ನಿಶ್ಶೇಷವಾಗಿ ಕೊಟ್ಟು ತಾವು ಉಪವಾಸ ಮಲಗಿದ್ದನ್ನು ಅನೇಕವೇಳೆ ಕೇಳಿದ್ದೇನೆ.

ಇವರ ಚಿತ್ರವನ್ನು ಮಾಸ್ತಿಯವರ "ಸುಬ್ಬಣ್ಣ"ನೆಂಬ ಉತ್ತಮ ದರ್ಜೆಯದಾದ ಕಾದಂಬರಿಯಲ್ಲಿ ನೋಡಿ, ಇವರ ಪರಿಚಯವನ್ನು ಎಲ್ಲರೂ ಮಾಡಿಕೊಳ್ಳಲಿ ಎಂಬುದೇ ನನ್ನ ಪ್ರಾರ್ಥನೆ. ಮಾಸ್ತಿಯವರು ಹೇಳಿದ್ದನ್ನು ನಾನು ಮತ್ತೆ ಹೇಳುವುದರಲ್ಲಿ ಪ್ರಯೋಜನವಿಲ್ಲ—ಅವರ ಸಂಗಡ ನನ್ನನ್ನು ಹೋಲಿಸುವುದಕ್ಕೆ ಅವಕಾಶ ಕೊಡುವುದೂ ವಿವೇಕವಲ್ಲ. ಆದರೂ ಶ್ಯಾಮಣ್ಣನವರ ಮತ್ತು ನನ್ನ ನಿಕಟ ಸಂಬಂಧ ಹೇಗಾಯಿತೆಂಬುದನ್ನು ಹೇಳಬೇಕಲ್ಲವೆ? ಶ್ಯಾಮಣ್ಣನವರನ್ನು ನಾನು ಸ್ನಾನಘಟ್ಟದಲ್ಲಿ, ದೇವಸ್ಥಾನದಲ್ಲಿ, ಪಾಟು ಕಛೇರಿಗಳಲ್ಲಿ, ಅಕಸ್ಮಾತ್ತಾಗಿ ಬೀದಿಯಲ್ಲಿ, ಆಗಾಗ ನೋಡುತ್ತಿದ್ದೆ. ಮೊದಮೊದಲು ಅವರು ನನ್ನ ಕಡೆ ಕಣ್ಣು ತಿರುಗಿಸದೆ ತಲೆ ಬಗ್ಗಿಸಿಕೊಂಡು ತಮ್ಮ ದಾರಿಹಿಡಿದು ಹೋಗುತ್ತಿದ್ದರು. ಆಮೇಲೆ ನಾನು ಕೈ ಮುಗಿದರೆ, ತಾವೂ ಗಂಭೀರ ಮುದ್ರೆಯಿಂದ ಕೈಮುಗಿಯುತ್ತಿದ್ದರು. ಒಂದೆರಡು ಸಲ ನಮ್ಮ ಮನೆಯಲ್ಲಿ ಸಂಗೀತ ಕಛೇರಿಯಾದಾಗ ಅವರನ್ನು ನಾನೇ ವೆಂಕಟಸುಬ್ಬಯ್ಯನ ಮಾರ್ಫತ್ತು ವಿಶೇಷ ಆಹ್ವಾನದಿಂದ ಕರೆಯಿಸಿಕೊಂಡೆ. ಹೀಗೆ ಅಕಸ್ಮಾತ್ ಭೇಟಿಗಳಿಂದ ಸ್ವಲ್ಪ ಪರಿಚಯವಾದಮೇಲೆ, ಅವರಿಗೆ ಶರೀರದಲ್ಲಿ ಸ್ವಲ್ಪ ಆಲಸ್ಯವಾದ ಸಂದರ್ಭದಲ್ಲಿ ಅವರು ಇರುತ್ತಿದ್ದ ಚಾಪೆ ತೆರೆಕಟ್ಟಿದ್ದ ಜಗುಲಿಗೆ ಹೋಗಿ ಅವರ ಕುಶಲವನ್ನು ವಿಚಾರಿಸಿ, ನನ್ನಿಂದ ಏನಾದರೂ ಸಹಾಯ ಬೇಕೆ—ಎಂದೆ. ಅದಕ್ಕೆ ಅವರು

ನಕ್ಕು—ಸಾಕ್ಷಾತ್ ಪಾರ್ಥಸಾರಥಿಯೇ ನನ್ನ ತೇರನ್ನು ನಡೆಸುತ್ತಿದ್ದಾನೆ, ಸ್ವಾಮಿ ನನಗೆ ಯಾವ ವಿಚಾರದಲ್ಲೂ ಏನೂ ಕಮ್ಮಿ ಇಲ್ಲ—ಅಂದರು. ಆ ಇಕ್ಕಟ್ಟು, ಜಗಲಿ, ಹರಕುಮಂದಲಿಗೆ, ಭಿಕ್ಷದ ಪಾತ್ರೆ, ಮಣ್ಣು ಹಣತಿ, ಬಿದಿರು ಕೋಲು, ಇವುಗಳನ್ನು ನೋಡಿದ ನನಗೆ—ಈ ಮುದುಕ ಪಾರ್ಥನೋ ? ಭೀಷ್ಮನೋ ? ದೇವರು ಇವನಿಗೆ ಎಷ್ಟು ಸ್ಪಷ್ಟವಾದ 'ಪುರುಷ!' ಎಂದುಕೊಂಡೆ.

ನರಸಿಪುರದಲ್ಲಿ ಪ್ಲೇಗು ಪ್ರಾರಂಭವಾಗಿ ಜನಗಳು ಊರಾಚೆಗೆ ಗುಡಿಸಿಲುಗಳನ್ನು ಹಾಕಿ ಕ್ಯಾಂಪು ಮಾಡಿದರು. ಅನೇಕರು ಇತರ ಊರುಗಳಿಗೆ ಹೋದರು. ಶ್ಯಾಮಣ್ಣನವರು ಐವರ ಮನೆಗೆ ಮಾತ್ರ ಭಿಕ್ಷಾಟನೆಗೆ ಹೋಗುತ್ತಿದ್ದರೆಂದು ಹೇಳಿದೆನಲ್ಲ—ಅವರುಗಳು ಚದರಿ ಹೋದರು. ತಾಲ್ಲೂಕೆಲ್ಲ ಪ್ಲೇಗಿನ ಹಾವಳಿಗೆ ಸಿಕ್ಕಿತ್ತಾದ್ದರಿಂದ, ಅದು ನನಗೆ ಬಹಳ ಅಂಡಲೆತ ಮತ್ತು ಕಳವಳದ ಕಾಲ. 'ಟ್ರಾವೆಲರ್ಸ್' ಬಂಗಲೆಯ ಕಾಂಪೌಂಡಿನಲ್ಲಿ ನಾನೂ ಒಂದು ಗುಡಿಸಲನ್ನು ಹಾಕಿ, ನನ್ನ ಸಂಸಾರಕ್ಕೆ ಸೇರಿದವರಿಗೆಲ್ಲ ಇನಾಕ್ಯುಲೇಟು ಮಾಡಿಸಿ, ಆ ಗುಡಸಲಿನಲ್ಲಿ ಕ್ಯಾಂಪು ಮಾಡಲು ಏರ್ಪಾಡುಮಾಡಿ, ಪ್ಲೇಗು ಬಂದೋ, ಬಸ್ತಿನ ಕೆಲಸಗಳಿಗಾಗಿ ಸರಕೀಟು ಹೊರಟವನು, ಏಳೆಂಟು ದಿವಸಗಳ ವರಿಗೂ ಕಸಬಾಕ್ಕೆ ವಾಪಸು ಬರಲಾಗಲಿಲ್ಲ. ಬಂದ ಮೇಲೆ ಅಕಸ್ಮಾತು ವೆಂಕಟಸುಬ್ಬಯ್ಯನನ್ನು ನೋಡಿ, ಶ್ಯಾಮಣ್ಣನವರು ಎಲ್ಲಿ ? ಎಂದು ಕೇಳಿದೆ. ಅವನು ಕಣ್ಣಿನಲ್ಲಿ ನೀರು ಹಾಕಿ—ಏನು ಹೇಳಲಿ ಮಹಾ ಸ್ವಾಮಿ ? ನಾನು ಈ ಗಲಾಟೆ ಮುಗಿಯುವವರಿಗಾದರೂ ನಮ್ಮ ಗುಡಸಲಿ ನಲ್ಲಿ ಬಂದು ಇರಿ, ಎಂದು ಕಾಲಿಗೆ ಬಿದ್ದು ಕೇಳಿದೆ; ವಲ್ಲದೆ ಹೋದರು. ಅವರು ನನಗಿಂತ ಹೆಚ್ಚು ಕಣ್ಣೀರಿಟ್ಟು—ಬೇಡ ಮಗು ; ನನ್ನ ಬಲವಂತ ಪಡಿಸಬೇಡ—ಎಂದರು. ಎರಡು ಮೂರು ದಿನ ಮನೆಯಿಂದ ಅನ್ನ ತೊಗೊಂಡು ಹೋಗಿ ಕೊಟ್ಟೆ. ಆಮೇಲೆ ನನಗೆ ಹೇಳದೆಯೇ ಎಲ್ಲಿಯೋ ಹೊರಟು ಹೋಗಿದ್ದರು. ವಿಚಾರಿಸಲಾಗಿ, ಮಾದಾಪುರದ ಹತ್ತಿರ ಹೊಳೆ ಕರೆಯ ಒಂದು ಮಂಟಪದಲ್ಲಿದ್ದಾರೆಂದು ಗೊತ್ತಾಯಿತು. ಅಲ್ಲಿಗೆ ಹೋದೆ. ಇಲ್ಲಿಯೂ ಬಂದೆಯಾ ನನ್ನ ಕಟ್ಟೆ ಹಾಕೋದಕೆ ? ನೀ ತಿರುಗ

ಬಂದರೆ ಇನ್ನೆಲ್ಲಾದರೂ ಹೊರಟುಹೋಗುತ್ತೇನೆ—ಎಂದರು ಅವರು ಬಹಳ ಹಟವಾದಿಗಳು. ನಾನು ಮಾತ್ರ ಮಾದಾಪುರದ ಪಟೇಲನಿಗೆ ಅವರನ್ನು ನೋಡಿಕೋ ಅಪ್ಪ—ಅಂತ ಹೇಳಿ ಬಂದೆ. ಆ ಊರೋರೆಲ್ಲ ಲಿಂಗಾಯತರು. ಅವರ್ಯಾರೂ ಊಟಕ್ಕೆ ಏನೂ ಕೊಡೋಹಾಗಿಲ್ಲ. ಆದರೆ ಹಾಲೂ ಹಣ್ಣು ಏನಾದರೂ ಕೊಡಬಹುದು. ನಾನೂ ಆ ಪಟೇಲನ ಕೈಲಿ ಸ್ವಲ್ಪ ದುಡ್ಡು ಕೊಟ್ಟು ಬಂದಿದ್ದೇನೆ— ಅಂದ

ಈ ಕಥೆಯನ್ನು ಕೇಳಿದ ನನ್ನ ಹೆಂಡತಿ ಕೂಡಲೆ ಕರಗಿ—ಅಯ್ಯೋ ಪಾಪ, ಆ ಮುದುಕರು ಈ ವಯಸ್ಸಿನಲ್ಲಿ ನೀನೇ ಅಂತ ಕೇಳೋರಿಲ್ಲದೆ ಸಾಯಬೇಕೆ? ಹೋಗಿ ಕರೆದುಕೊಂಡು ಬರಬಾರದೆ? — ಎಂದರು. ನಾನು ನಕ್ಕು— ನಾನು ವೆಂಕಟಸುಬ್ಬಯ್ಯನ ಹಾಗೆ ಅಳಲಿಕ್ಕೂ ಬಾರದವನು. ನಾನು ಕರೆದರೆ ಬಾರದಿದ್ದವರನ್ನು ಹಿಡಿಸಿ ಬಲಾತ್ಕಾರವಾಗಿ ಬರಮಾಡಿಕೊಳ್ಳುವ ದುರಭ್ಯಾಸದವನು. ನೀವೂ ಬರುತ್ತೀರ, ನಿಮ್ಮ ಮಧುರವಾಣಿಯಿಂದಲಾದರೂ ಅವರನ್ನು ಒಪ್ಪಿಸಲಿಕ್ಕೆ?— ಅಂದೆ.

ನನ್ನ ಕುಟುಂಬ ಕೂಡಲೆ ಸಮ್ಮತಿಸಿದ್ದೂ ಅಲ್ಲದೆ, ನಾನು ತಮಾಷೆಗೆ ಹೇಳಿದೆ, ಅಷ್ಟೇ, ನೀವು ಯಾಕೆ ಬರಬೇಕೆಂದು ಎಷ್ಟು ಹೇಳಿದರೂ ಕೇಳದೆ, ಗಾಡಿ ಕಟ್ಟಿಸಿ, ನನ್ನನ್ನೂ ಜತೆಗೆ ಕರೆದುಕೊಂಡು, ಐದಾರು ಮೈಲಿ ದೂರದ ಮಾದಾಪುರದ ಹೊಳೆಕರೆ ಮಂಟಪಕ್ಕೆ ಬಂದರು.

ಅಲ್ಲಿ ಶ್ಯಾಮಣ್ಣನವರು ಒಂದು ಸಣ್ಣ ಗುಡಿ ಮುಂದಿನ ಕೈಸಾಲೆಯಲ್ಲಿ ಕುಳಿತಿದ್ದರು. ನನ್ನನ್ನು ನೋಡಿದ ಕೂಡಲೆ ಎದ್ದು, ಶ್ರೀಮಂತರು ತಮ್ಮ ಮನೆಗೆ ಬಂದ ಪ್ರಿಯಮಿತ್ರರಿಗೆ ಸತ್ಕರಿಸುವ ಡೌಲಿನಿಂದ ತಮ್ಮ ಹರಕು ಮಂದಲಿಗೆಯನ್ನು ಹಾಸಿ— ಕೂತುಕೋಬೇಕು, ದಂಪತಿಗಳು, ಬಹಳ ದೂರ ಬಂದ ಉದ್ದೇಶವೇನು?— ಎಂದರು.

ನನ್ನ ಸಹಧರ್ಮಚಾರಿಣಿ

"ನಡಸಿಕೊಡುತ್ತೇವೆಂದರೆ ಹೇಳುತ್ತೇವೆ" ಎಂದರು.

"ಇದೇನಮ್ಮ ನಿಮಗೆ ಕುಚೇಲನ ಮನೆ ಭಿಕ್ಷ?"

"ನೋಡಿ ಅಜ್ಜ, ನೀವು ಕುಚೇಲರಲ್ಲ ನಾವಂತೂ ಯಾದವ ರಾಜರಲ್ಲ ಎಂಬೋದು ಹೇಳಬೇಕಾದ್ದೇ ಇಲ್ಲ. ನೀವು ಕುಚೇಲರ ಹಾಗೆ ಅನ್ನ ಬಟ್ಟೆ ತಾಪತ್ರಯದ ಗೃಹಸ್ಥರಲ್ಲ: ಕುಚೇಲ ನಿಮ್ಮ ಹಾಗೆ ಸಂಗೀತಗಾರ್ರಲ್ಲ ನಾನು ಕೇಳೋದು ಇಷ್ಟೆ. ನಮ್ಮ ಬ್ರಹ್ಮಾಣಿ, ವೆಂಕು ಇವರಿಗೆ ಸಂಗೀತ ನೀವು ಹೇಳಿಕೊಡಬೇಕು ನನಗೂ ವೀಣೆ ಸ್ವಲ್ಪ ಬರುತ್ತೆ. ಮರೆತುಹೋಗಿರೋದನ್ನು ತಿರುಗ ಘಟ್ಟಿಮಾಡಬೇಕೆಂದು ಮಾಡಿಕೊಂಡಿದ್ದೀನಿ. ಇಕ್ಕೋ ನೋಡಿ, ಆಗೋಲ್ಲಾ ಅನ್ನಬೇಡಿ."

ಶ್ಯಾಮಣ್ಣನವರು ಆಕೆಯ ಕಡೆ ನಿಟ್ಟಿಸಿ ನೋಡಿದರು. ಮೊದಲು ಸ್ವಲ್ಪ ಹುಬ್ಬು ಗಂಟು ಹಾಕಿದರು. ಆ ಅಸಮಾಧಾನದ ಚಿಹ್ನೆ ಹಾದುಹೋಯಿತು. ಆಮೇಲೆ ತುಟಿ ಎರಡುಸಲ ನಗು ತಡೆಯುವ ಯತ್ನದಲ್ಲಿ ಹಿಂದೂ ಮುಂದು ಆಡಿ, ಹಿಗ್ಗಿ ಕಿರಿದಾಗಿ, ಆಮೇಲೆ ಬಾಯಿ ಬಿಟ್ಟು ಘಟ್ಟಿಯಾದ ನಗು ಈಚೆಗೆ ಸ್ಫೋಟವಾಗುವುದಕ್ಕೆ ದಾರಿಬಿಟ್ಟಿತು. ಇದಾದಮೇಲೆ ಸ್ವಲ್ಪ ಒಳನಗು. ಆಮೇಲೆ—

"ಹಾಗಾದರೆ, ತಾಯಿ, ನನ್ನ ಹಿಡಿದುಕೊಂಡು ಹೋಗೋಕೇ ಗಂಡ ಹೆಂಡತಿ ಬಂದಿದ್ದೀರಿ! ನಾನು ಮಾಡಿಕೊಂಡಿದ್ದದ್ದೇ ಒಂದು, ದೈವ ಸಂಕಲ್ಪವೇ ಒಂದು. ಆಗಲಿ, ಅವನ ಚಿತ್ತಕ್ಕೆ ಬಂದ ಹಾಗಾಗಲಿ; ಬರ್ತೇನೆ. ಅಂದರೆ ನನ್ನದೂ ಒಂದು ಷರತ್ತು. ನನ್ನ ಕೈಲಿ ಪಾಠ ಹೇಳಿಸಿಕೊಂಡರೇನೇ ನಾನು ನಿಮ್ಮ ಮನೇಲಿ ಇರುತ್ತೇನೆ. ನಾನು ಪಾಠ, ಊಟದ, ಹೊತ್ತುಗಳ ಸಿವಾಯಿ ನಿಮ್ಮ ಬಂಗಲೆಯಲ್ಲಿ ಇರೋದಿಲ್ಲ. ಹತ್ತಿರದ ಮೂಲಸ್ಥಾನೇಶ್ವರ ಗುಡಿಯಲ್ಲಿರುತ್ತೇನೆ. ನಾನು ಕಾಡು ಮನುಷ್ಯನಮ್ಮ, ಒಬ್ಬರ ಸಂಗಡ ಸೇರತಕ್ಕವನಲ್ಲ. ನೀವು ನನ್ನ ಜಂಗ್ಲೀತನವನ್ನ ಕ್ಷಮಿಸಬೇಕು. ಇನ್ನೊಂದು ಷರತ್ತು—ನನಗೆ ಇಷ್ಟ ಬಂದಾಗ ಕಾರಣವಿಲ್ಲದೆ ಹೊರಟು ಹೋಗತಕ್ಕವನು. ಅದಕ್ಕೆ ನಿರ್ಬಂಧ ಕೂಡದು."

ಈ ಸಮಯಕ್ಕೆ ಒಪ್ಪಿ ಶ್ಯಾಮಣ್ಣನವರನ್ನು ನಮ್ಮ ಗಾಡಿಯಲ್ಲಿ ಕೂಡಿಸಿಕ್ಕೊಂಡು ಬಂದೆವು. ಎರಡು ತಿಂಗಳಕಾಲ ನಮ್ಮ ಸಂಗಡಲೆ

ನನ್ನ ಹೆಂಡತಿ ಮಕ್ಕಳಿಗೆ ಸಂಗೀತ ಹೇಳಿಕೊಡುತ್ತ, ಅವರಿಗೆ ಜೈಮಿನಿ ಭಾರತ ಓದಿ ಅರ್ಥ ಹೇಳುತ್ತಾ, ನಮ್ಮ ಅತಿಥಿಗಳಾಗಿದ್ದರು. ಪ್ಲೇಗು ನಿವಾರಣೆಯಾಗಿ, ತಿರುಗ ಊರು ಮಾಮೂಲು ಸ್ಥಿತಿಗೆ ಬಂದ ಮೇಲೆ, ಶ್ಯಾಮಣ್ಣನವರೂ ಅವರ ಮಾಮೂಲು ಜೀವನಕ್ಕೆ ವಾಪಸು ತಿರುಗಿದರು; ಆದರೆ ಸಂಗೀತದ ಪಾಠಗಳು—ಪಿಟೀಲು ಕೆರೆಯುವ ನಾನೂ ಶಿಷ್ಯವರ್ಗದಲ್ಲಿ ಸೇರಿದೆ—ಮಾತ್ರ ಅವಿಚ್ಛನ್ನವಾಗಿ ಜರುಗಿದವು. ಅವರಿಗೆ ನಮ್ಮಲ್ಲಿ ಪ್ರೀತಿ ಹುಟ್ಟಿ, ನಾವು ಯಾವಾಗ ಭೋಜನಕ್ಕೆ ಕರೆದರೂ ಬರುತ್ತಿದ್ದರು. ನನ್ನ ಎರಡನೆಯ ಮಗಳು ವೆಂಕುಬಾಯಿಯನ್ನು ಕಂಡರೆ ಅವರಿಗೆ ಬಹಳ ಮಮತೆ. ನಾನು ನರಸಿಪುರದಿಂದ ವರ್ಗವಾಗಿ ಪ್ರಯಾಣ ಮಾಡುತ್ತಿರುವಾಗ ಅವರು ವೆಂಕುವನ್ನು ಮತ್ತೊಂದು ಸಲ ನೋಡಬೇಕೆಂದು ಗಾಡಿ ಹಿಂದೆ ಓಡಿಬಂದು ಮಗುವನ್ನು ಎತ್ತಿಕೊಂಡು, ಲಾಲಿಸಿ, ಕಣ್ಣು ಒರಸಿಕೊಳ್ಳುತ್ತಾ ವಾಪಸು ಹೋದ ಕತೆ ಮಾಸ್ತಿಯವರು "ಸುಬ್ಬಣ್ಣ"ನಲ್ಲಿ ಹೇಳಿದ್ದಾರೆ. ನಾನು ಬೆಂಗಳೂರಿಗೆ ಬಂದಮೇಲೆ ಅವರು ಇದ್ದಕಿದ್ದಹಾಗೇ ಒಂದು ದಿನ ನಮ್ಮ ಮನೆಗೆ ಬಂದು ವೆಂಕುಗೆ ತಮಗೆ ತೋರಿದ ಎರಡು ಆಟದ ಸಾಮಾನು ತಂದು ಕೊಟ್ಟು, ತಾವು ಕಲಿಸಿದ್ದ ಕೀರ್ತನೆಗಳನ್ನು ಅವಳಿಂದ ಹಾಡಿಸಿ, ಎರಡು ದಿವಸ ನಮ್ಮಲ್ಲಿದ್ದು ವಾಪಸು ಹೋದರು. ನಾನು ಅವರಿಗೆ ಬಹಳ ಶ್ರಮದಿಂದ ಒಪ್ಪಿಸಿಕೊಟ್ಟ ಘೋತ್ರದ ಜೊತೆಯನ್ನು—ಸರಿ, ಇದು ಇನ್ನು ನನ್ನದು; ನನ್ನ ಅಧಿಕಾರಕ್ಕೆ ಒಳಪಟ್ಟದ್ದು ತಾನೆ—ಎಂದು ತೆಗೆದುಕೊಂಡು, ಹೋಗಿ, ಮಾಲೀಕತೆ ಅಧಿಕಾರವನ್ನು ಚಲಾಯಿಸಿ, ಅವರ ಶಿಷ್ಯ ವೆಂಕಟಸುಬ್ಬಯ್ಯನಿಗೆ ಕೊಟ್ಟುಬಿಟ್ಟರು.

## ೩೮

ಇನ್ನು ನನ್ನ ಫ್ರೆಂಚ್ ಅಭ್ಯಾಸವನ್ನು ಕುರಿತು ಎರಡು ಮಾತು. ನನ್ನ ತಮ್ಮ ಕೃಷ್ಣಸಾಮಿಯವರು ಪುದುಚೆರಿಯಲ್ಲಿ ಮತ್ತು ತಿರುಚಿನಾಪಲ್ಲಿಯಲ್ಲಿ ಕೆಲವು ಕಾಲವಿದ್ದರು. ಅಲ್ಲಿ ಫ್ರೆಂಚ್ ಪಾದ್ರಿಗಳ ಸಹವಾಸದಲ್ಲಿದ್ದು, ಅವರ ಭಾಷೆಯನ್ನು ಸುಮಾರಾಗಿ ಕಲಿತಿದ್ದರು. ಅಲ್ಲಿಂದ ನಾನಿದ್ದ ಕಡೆಗೆ ಬಂದಾಗ ಕೆಲವು ಪುಸ್ತಕಗಳನ್ನೂ, ಆ ಭಾಷೆಯ ಸೌಂದರ್ಯದ ಮೆಚ್ಚುಗೆ

ಯನ್ನೂ, ತಂದರು. ಒಂದೆರಡು ತಿಂಗಳಲ್ಲಿ ಅವರ ಸಹಾಯದಿಂದ ಒಂದೆರಡು ಪುಸ್ತಕಗಳನ್ನು ಓದಿದೆ. ಅವರ ಉತ್ಸಾಹದ ಸೋಂಕು ನನಗೂ ಅಂಟಿತು. ಒಳ್ಳೆಯ ಫ್ರೆಂಚ್ ನಿಘಂಟನ್ನೂ, ಫ್ರೆಂಚ್ ಸಾಹಿತ್ಯದ ಕೆಲವು ಪ್ರಖ್ಯಾತ ಗ್ರಂಥಗಳನ್ನೂ ತರಿಸಿಕೊಂಡು, ದಿನವಹಿ ಎರಡು ಘಂಟೆ ಫ್ರೆಂಚ್ ವ್ಯಾಸಂಗಕ್ಕೆ ಮೀಸಲು ಇಡುತ್ತಾ ಬಂದೆ. ನಾನು ಓದಲು ಪ್ರಾರಂಭಿಸಿದ್ದು ವಿಕ್ಟರ್ ಯೂಗೋನ 'ಲೇ ಮಿಸರೆಬಲ್' ಎಂಬ ಪ್ರಸಿದ್ಧ ಕಾದಂಬರಿ ಯನ್ನು. ಪುಸ್ತಕ ದೊಡ್ಡದು, ಪ್ರೌಢ ಶೈಲಿಯದು. ಪ್ರಾರಂಭಿಸಿದಾಗ ಅದು ಕಬ್ಬಿಣದ ಕಡಲೆ. ಆದರೆ ನನ್ನ ಹಲ್ಲೂ ಗಟ್ಟಿ; ನನ್ನ ಹಟ ಉಕ್ಕಿನದು. ಮೊದಲು ಮೊದಲು ಎರಡು ಘಂಟೆ ಶ್ರಮಪಟ್ಟರೆ ಒಂದು ಪುಟ ಸಾಗುತ್ತಿರಲಿಲ್ಲ. ಕ್ರಮೇಣ ಭಾಷೆ ದಾರಿ ಬಿಟ್ಟಿತು. ಪುಸ್ತಕದ ರಸದ ಸ್ವಾದ ನನ್ನ ಅನುಭವಕ್ಕೆ ಬರಲಾರಂಭಿಸಿತು. ಆಗಾಗ ನಾನು ಶ್ರೀರಂಗ ಪಟ್ಟಣದಲ್ಲಿದ್ದ ಫ್ರೆಂಚ್ ಪಾದ್ರಿ ಫಾದರ್ ಲಾರೆಂಗ್ ಎಂಬುವರಲ್ಲಿ ಹೋಗಿ ನನ್ನ ಯತ್ನಕ್ಕೆ ಬಗ್ಗದ ಭಾಗಗಳ ಭಾಷ್ಯವನ್ನು ಪಡೆಯುತ್ತಿದ್ದೆ. ಈ ಒಂದು ಪುಸ್ತಕದ ಜೊತೆಗೆ ಸುಲಭವಾದ, ಲಲಿತವಾದ, ಕತೆಗಳನ್ನೂ ಕವನಗಳನ್ನೂ ಓದುತ್ತಿದ್ದೆ. ಅಂತೂ ಲೇ ಮಿಸರೆಬಲ್‌ನ್ನು ಮುಗಿಸುವುದಕ್ಕೆ ಆರು ತಿಂಗಳು ಹಿಡಿಯಿತು. ಆ ಕಾಲದಲ್ಲಿ ಗೈ ದಮೊಪಾಸಾಂಗ್, ಬಾಲ್ಜಾಕ್, ವಾಲ್ಟೇರ್, ಮೊದಲಾದವರ ಕೆಲವು ಕಾವ್ಯಗಳನ್ನು ಓದಿದೆ. ವಿಕ್ಟರ್ ಯೂಗೋನ ಗ್ರಂಥ ಪೂರೈಸಿದ ಮೇಲೆ, ಸಾಮಾನ್ಯವಾಗಿ ಯಾವ ಫ್ರೆಂಚ್ ಪುಸ್ತಕವನ್ನು ಓದಿದರೂ ಸುಲಭವಾಗಿ ಅರ್ಥವಾಗುವಷ್ಟು ಭಾಷಾ ಪರಿಚಯ ಉಂಟಾಗಿ, ಸುಸಂಸ್ಕೃತವಾದ ಇನ್ನೊಂದು ಪಾಶ್ಚಾತ್ಯ ಸಾಹಿತ್ಯದ ಬೀಗದ ಕೈ ಸಿಕ್ಕಂತೆ ಆಯಿತು. ಅಂದರೆ ಕೇವಲ ಪುಸ್ತಕದಿಂದ ಕಲಿಯುವ ಭಾಷೆ dead language (ಸತ್ತ ಭಾಷೆ) ಅಲ್ಲದಿದ್ದರೂ, ಸುಪ್ತಭಾಷೆ. ಅದು ಜಾಗ್ರತವಾಗಬೇಕಾದರೆ ಅದನ್ನು ಮನೆಯಲ್ಲಿ ಮಾತನಾಡುವರ ಬಾಯಿಯಿಂದ ಕೆಲವು ಕಾಲ ಕೇಳಲೇಬೇಕು; ಅವರ ಕಿವಿಗೆ ನಮ್ಮ ಮಾತು ಬಿದ್ದರೆ ಅವರಿಗೆ ಅರ್ಥವಾಗುವ ಹಾಗೆ ಸಂಕೋಚಬಿಟ್ಟು ಆಡಿ ಅಭ್ಯಾಸ ಮಾಡಲೇಬೇಕು. ನನಗೆ ಪುಸ್ತಕದ ಫ್ರೆಂಚ್ ಚನ್ನಾಗೇ ಬರುತ್ತೆಂದು ಹೇಳಬಹುದಾದರೂ, ನಾನು ಫ್ರಾನ್ಸಿಗೆ ಹೋದಾಗ ಅದು

ಪ್ರಾರಂಭದಲ್ಲಿ ಏನೂ ಕೆಲಸಕ್ಕೆ ಬರಲಿಲ್ಲ. ನಾನು ಫ್ರೆಂಚಿನಲ್ಲಿ ಮಾತನಾಡಿದರೆ ಆ ದೇಶದವರಿಗೆ ದಿಕ್ಕು ತೋಚದೆ ಪೇಚಾಟವಾಗುತ್ತಿತ್ತು. ಅವರು ಮಾತನಾಡಿದರೆ, ತಮಿಳರು ಸ್ವರ ವ್ಯಂಜನಗಳನ್ನು ಏಕದಂ ಹೊರಡಿಸುವ ಹಾಗೆ ತಾವೂ ದೌಡಾಯಿಸುತ್ತಿದ್ದರು. ವಾಕ್ಯದ ತಲೆ ನೋಡಿ ಚೇತರಿಸಿಕೊಳ್ಳುವಷ್ಟರಲ್ಲೇ ಅದರ ಬಾಲವೂ ಹಾದು ಹೊರಟುಹೋಗಿರುತ್ತಿತ್ತು. ನಾನು ಫ್ರಾನ್ಸಿನಲ್ಲಿ ಕೆಲವು ಕಾಲವಿದ್ದ ಮೇಲೆ—ಭಲೇ, ಪರವಾ ಇಲ್ಲ; ಈ ಜನಕ್ಕೆ ಇವರ ಮಾತೃಭಾಷೆ ಬರುತ್ತೆ—:ಎಂದು ನನಗೆ ದೃಢವಾಯಿತು.

ಅಂತೂ ಪಿಟೀಲು ನುಡಿಸುವುದರಲ್ಲೂ ಫ್ರೆಂಚ್ ಭಾಷೆಯಲ್ಲೂ ನನ್ನ ಪಾಂಡಿತ್ಯ ಸ್ವಲ್ಪ ಹೆಚ್ಚು ಕಡಿಮೆ ಒಂದೇ ಅಲ್ಪ ಮಟ್ಟದ್ದಾದರೂ, ಇವುಗಳ ಅಭ್ಯಾಸದಲ್ಲಿ ನನ್ನ ಬಿಡುವು ಕಾಲವನ್ನು ಬೇಸರವಿಲ್ಲದಂತೆ ಉಪಯೋಗಿಸಿದೆ.

## ೩೯

ಶ್ರೀ ಕಾಂತರಾಜೆ ಅರಸಿನವರು ತಮ್ಮ ಅಕ್ಕಂದಿರಾದ ಶ್ರೀ ವಾಣೀವಿಲಾಸ ಸನ್ನಿಧಾನದವರನ್ನು ಮುಡುಕುತೊರೆ ತಲಕಾಡು ಕ್ಷೇತ್ರಗಳಿಗೆ ದಯಮಾಡಿಸಲು ಯತ್ನ ಮಾಡುವುದಾಗಿ ಹೇಳಿದ್ದರಷ್ಟೆ. ಅವರ ಯತ್ನದ ಫಲವಾಗಿ ಶ್ರೀ ವಾಣೀವಿಲಾಸ ಸನ್ನಿಧಾನದವರು ಪಂಚಲಿಂಗ ದರ್ಶನವಾದ ಸ್ವಲ್ಪ ದಿವಸದಲ್ಲೇ ಮುಡುಕತೊರೆಗೆ ದಯಮಾಡಿ ಪಂಚಲಿಂಗ ದರ್ಶನದ ಕಟ್ಲೆಯನ್ನೇ ಅನುಸರಿಸಿ ದೇವಸ್ಥಾನಗಳಲ್ಲಿ ದೇವರ ಸೇವೆ ಮಾಡಲು ನಿಶ್ಚಯಿಸಿರುವುದಾಗಿ ಜಾಹಿರಾತಿಯೂ, ಇವರ ಯಾತ್ರೆ ಮೊಕ್ಕಾಂಗಳು ಸುಲಲಿತವಾಗಿ ನಡೆಯುವುದಕ್ಕೆ ಅವಶ್ಯಕವಾದ ಎಲ್ಲ ಏರ್ಪಾಡುಗಳನ್ನೂ ಮಾಡಬೇಕೆಂದು ಡೆ|| ಕ||ರಿಂದ ಹುಕ್ಕುಮೂ, ತಲಪಿದವು. ಡೆ|| ಕ||ರು ಒಂದು ಖಾಸಗಿ ಕಾಗದವನ್ನು ಬರೆದರು. ಮಾಜಿ ರೀಜಂಟರವರ ಭಾವಿ ಸವಾರಿ ನನ್ನ ದಕ್ಷತೆಯನ್ನೂ ರಾಜಭಕ್ತಿಯನ್ನೂ ತೋರಿಸಲಿಕ್ಕೆ ದೇವದತ್ತ ಅವಕಾಶವೆಂತಲೂ, ತಾವು ಅನೇಕ ವೇಳೆ ನನ್ನನ್ನು ತಮ್ಮ ಅಕ್ಕಂದಿರ ಹತ್ತಿರ ಹೊಗಳಿರುವುದಾಗಿಯೂ, ತಾಯಿಯವರು ಒಳ್ಳೆಯ ಅಭಿಪ್ರಾಯ ಪಟ್ಟರೆ, ಅದು ದಶಗುಣ ಅಧಿಕವಾಗಿ ಆಳುವ ಸ್ವಾಮಿಯವರಲ್ಲಿ ಪರಿಣಮಿಸುತ್ತೆಂತಲೂ, ನನಗೆ ಪ್ರೋತ್ಸಾಹ ಎಚ್ಚರಿಕೆಗಳನ್ನು ಕೊಟ್ಟರು.

ಒಳ್ಳೆಯ ಅವಕಾಶವೇನೋ ಸರಿ. ಆದರೆ ಕಳವಳದಿಂದ ಕೂಡಿದ್ದು. ನನಗೆ ರಾಜರ, ರಾಜ ಕುಟುಂಬದವರ ಸ್ವಾಗತ, ಅವರ ಮೊಕ್ಕಾಂಗಳ ಏರ್ಪಾಡು, ಅವರ ಉಪಚಾರಗಳು ಇವುಗಳ ಅನುಭವವಿಲ್ಲ. ನಾನು ಪ್ರೊಬೇಷನರ್ ಆಗಿದ್ದಾಗ ಪ್ರಭುಗಳು ತಿರುಮಕೂಡ್ಲು ನರಸೀಪುರಕ್ಕೆ ಬಿಜಮಾಡಿದಾಗ ನಾನು ಮೇಗಳಪುರದಲ್ಲಿ ಕಾಣಿಸಿಕೊಂಡು ಸೇವೆ ಮಾಡಿದ್ದು ಹಿಂದೆ ಹೇಳಿದ್ದೇನೆ. ತಿರುಮಕೂಡ್ಲು ನರಸೀಪುರದ ಅಮುಲ್ದಾರರನ್ನು ಆ ಸಂದರ್ಭದಲ್ಲಿ ಕವಿದಿದ್ದ ಕಾಳಜಿ ನನಗೆ ಚೆನ್ನಾಗಿ ತಿಳಿದಿತ್ತು. ಆ ಸೇವೆ ಕತ್ತಿ ಅಲುಗಿನ ಸಾಧನೆ; ಒಂದು ಅಂದರೆ ಕಮ್ಮಿ, ಎರಡು ಅಂದರೆ ಹೆಚ್ಚು. ಗಂಡಿನ ಕಡೆ ಬೀಗರ ಔತನದ ಹತ್ತರಷ್ಟು ನಾಜೂಕು. ನಾನು ಡೆಪ್ಯೂಟಿ ಕಮಿಷನ್ನರಿಗೆ ನನ್ನ ಅಪಾರ ಆನಂದವನ್ನು ಉಚಿತ ರೀತಿಯಲ್ಲಿ ವರದಿ ಮಾಡಿ, ರಾಜರ ಪ್ರವಾಸ, ಬಿಡಾರಗಳ ಅನುಭವವುಳ್ಳ ಒಬ್ಬಿಬ್ಬರು ಅಮುಲ್ದಾರರುಗಳ ಸಂಗಡ ಈ ವಿಚಾರ ಮಾತನಾಡಿ ಸಲಹೆ ಕೇಳಿದೆ. ಅವರು ಒಮ್ಮತವಾಗಿ ಹೇಳಿದ್ದು— ಕಷ್ಟದ ಜವಾಬ್ದಾರಿ. ಅಲ್ಪ ಬೆಲೆಗೆ ಬಹು ಸಾಮಗ್ರಿ ಸರಬರಾಜು ಮಾಡಬೇಕಾದ್ದರಿಂದ ಸಾವಿರಾರು ರೂಪಾಯಿಗಳನ್ನು ಒದಗಿಸಿಕೊಳ್ಳಬೇಕು. ಯಾವಾಗಲೂ ಹಾಜರುಬಾಷಿಯಲ್ಲಿರಬೇಕು; ಅರಮನೆ ಸಿಬ್ಬಂದಿಯನ್ನು ಖುಷಿಯಲ್ಲಿಟ್ಟಿರಬೇಕು— ಇದರ ಅರ್ಥವನ್ನು ನೀವೇ ಮಾಡಿಕೊಳ್ಳಿ. ಈ ಉತ್ಸವ ಮುಗಿದಮೇಲೆ, ಬೇನಾಮ ಅರ್ಜಿಗಳ ಮಳೆ ನಿಂತಮೇಲೆ, ನಿಮ್ಮನ್ನು ಮಾನವಾಗಿ ಬಚಾಯಿಸಿದ ನಿಮ್ಮ ಹರಕೆಯ ದೇವರ ಹರಕೆ ತೀರಿಸಿಕೊಂಡು, ಒಂದು ವಾರ ಸುಖವಾಗಿ ನಿದ್ರೆ ಮಾಡಿ ಸುಧಾರಿಸಿಕೊಳ್ಳಿ—ಎಂದು ಒಬ್ಬರು ಹೇಳಿದರು. ಇದು thankless task (ನಿಷ್ಠುರ ಫಲದಶ್ರಮ) ಎಂದು, ಮತ್ತೊಬ್ಬರು ಹೇಳಿದರು. ಇದರಲ್ಲಿ ಸಣ್ಣ ಜನಗಳಿಗೆ ಲಾಭ, ಅಮುಲ್ದಾರರಿಗೆ ಅಪವಾದ— ಎಂದು ಮತ್ತೊಬ್ಬರು. ಹ್ಯಾಗೇ ಇರಲಿ, ಇದು ಅನಿವಾರ್ಯ ಕರ್ತವ್ಯ.

ನಾನು ಡೆಪ್ಯೂಟಿ ಕಮಿಷನರನ್ನು ನೋಡಿ, ನಾನು ಮಾಡಬೇಕೆಂದು ಯೋಚಿಸಿದ್ದ ಏರ್ಪಾಡನ್ನೆಲ್ಲಾ ವಿವರಿಸಿ, ಅವರ ಇನ್‌ಸ್ಟ್ರಕ್ಷನ್ ಬೇಡಿದೆ. ಏರ್ಪಾಡುಗಳು ಸಂಕ್ಷೇಪವಾಗಿ ಇವು; ಸವಾರಿ ಬರುವ ರಸ್ತೆಯುದ್ದಕ್ಕೂ ಸಾಲುಮರಗಳಿಗೆ ಸುಣ್ಣ ಕೆಮ್ಮಣ್ಣು ಪಟ್ಟೆ ಹಾಕಿಸುವುದು, ತಾಲ್ಲೂಕು

ಪ್ರವೇಶದ ಗಡಿಯಲ್ಲಿ ಸುಸ್ವಾಗತದ ಲೇಖನದ ಪಟಗಳಿಂದ ಕೂಡಿದ ಸೊಗಸಾದ ಮಂಟಪ ಕಟ್ಟಿಸುವುದು, ದೊಡ್ಡ ದೊಡ್ಡ ಗ್ರಾಮಗಳ ಸರಹದ್ದಿನಲ್ಲಿ ಸಂತೋಷ ರಾಜಭಕ್ತಿ ಸೂಚಕಗಳಾದ ನಿಶಾನೆಗಳನ್ನುಳ್ಳ ಚಪ್ಪರಗಳನ್ನು ರಚಿಸಿ, ಹಣ್ಣು, ಹೂ, ಹಸರುವಾಣಿಯಿಂದ ಅವುಗಳನ್ನು ಅಲಂಕರಿಸಿ, ಅವುಗಳಲ್ಲಿ ಗ್ರಾಮದ ಜನಗಳು ದರ್ಶನಕ್ಕೆ ಕಾದಿದ್ದು ಜಯಘೋಷವನ್ನು ಮಾಡುವಂತೆ ಏರ್ಪಾಡು ಮಾಡುವುದು. ಮುಖ್ಯವಾಗಿ ಮೊಕ್ಕಾಂ ಮಾಡುವ ಪ್ರದೇಶದಲ್ಲಿ ಒಂದು ಹಂಗಾಮಿ ಹೊಸ ಪಟ್ಟಣವನ್ನೇ ನಿರ್ಮಾಣ ಮಾಡುವುದು. ಇದು ಅತಿಶಯೋಕ್ತಿಯಲ್ಲ. ಮುಡುಕತೊರೆ ಒಂದು ಹತ್ತು ಹೆಂಚಿನ ಮನೆಗಳುಳ್ಳ ಕೊಂಪೆ. ತೋಪಿನಲ್ಲಿ ಹಲವು ಲಿಂಗಾಯಿತ ಮಠಗಳಿಗೆ ಸೇರಿದ ಕಲ್ಲು ಮರಗಳು. ಜಾತ್ರೆಗೆ ಬರುವ ಕೋಮುಗಳ ಕೆಲವು ಪ್ರತ್ಯೇಕ ಮಂಟಪಗಳು. ಜಾತ್ರೆ ಕಾಲದಲ್ಲಿ ಸಾವಿರಾರು ಯೋಪಡಿಗಳು, ಚಾವಣಿಗಳು, ಗುಡಾರಗಳು ಎದ್ದು, ಆ ತೋಪು, ಆ ಹೊಳೆ ಬೈಲು, ಸಹ ಒಂದು ಜನಪುಂಜವಾದ ಇಂದ್ರಜಾಲ ನಗರವಾಗುತ್ತದೆ; ಜಾತ್ರೆ ಮುಗಿದ ಒಂದು ರಾತ್ರಿಯಲ್ಲೇ ಈ ನಗರವು ಗಲೀಜು ವಿನ ಯಾವ ಶೇಷವೂ ಇಲ್ಲದೆ ಮಟ್ಟಮಾಯವಾಗಿ ಹೋಗುತ್ತದೆ. ಅಲ್ಲಿ ಒಂದು ಸಣ್ಣ ಸರ್ಕಾರಿ ಇನ್‌ಸ್ಪೆಕ್ಷನ್ ಲಾಡ್ಜ್ (Inspection Lodge) ಮಾತ್ರ ಇದೆ. ಅದು ಹನ್ನೆರಡು ಅಡಿ ಉದ್ದ, ಹತ್ತು ಅಡಿ ಅಗಲದ ಒಂದು ಕೊರಡಿ, ಮುಂದೆ ಆರು ಅಡಿ ಅಗಲದ ವರಾಂಡ ಉಳ್ಳ ಹೆಂಚಿನ ಕಟ್ಟಡವಾಗಿತ್ತೆಂದು ನೆನಪು. ಅಲ್ಲಿ ರಾಜಕುಲದ ಸುಖ ಸಂಪತ್ತುಗಳಲ್ಲಿ ಪುಟ್ಟಿ ಬೆಳೆದವರಿಗೆ ಮೂರು ನಾಲ್ಕು ರಾತ್ರಿಯಾದರೂ ತಂಗುವುದಕ್ಕೆ ಸಾಧ್ಯವಾದ ಸ್ಥಳದ ಅನುಕೂಲ್ಯವನ್ನು ಕಲ್ಪಿಸಬೇಕು ಅದರಲ್ಲೂ ಮಹಾರಾಣಿ ರೀಜೆಂಟರ ಪಾರ್ಟಿಯ ರಾಣೀವಾಸಕ್ಕೆ ತಕ್ಕ ಏರ್ಪಾಡು ಮಾಡಬೇಕು. ಅವರ ಲೆಖ್ಖಕ್ಕೆ ಹನ್ನೆರಡು ಜನ ರಾಜಮನೆತನದವರು, ದರ್ಬಾರು ಬಕ್ಷಿಯವರೇ ಮೊದಲಾದ ಐವತ್ತು ಅರಮನೆ ಸಿಬ್ಬಂದಿ, ಆದರೂ, ನನ್ನ ಲೆಖ್ಖಕ್ಕೆ ನೂರಾರು ಜನ ಅರಮನೆ ತಾಬೇದಾರರುಗಳು, ಅವರ ಬಳಗ, ಇವರುಗಳೆಲ್ಲರೂ ಈ ಯಾತ್ರೆಗೆ ಬರುವರು. ಲೆಖ್ಖಕ್ಕೆ ಸೇರಿದವರ ಭಾಯಾ ಲವಾಜಮೆಗೆ ಮೋತಿಖಾನೆ ದರದಂತೆ ಅರಮನೆಯಿಂದ ಹಣ ಬರುತ್ತದೆ. ಇದು ವಾಸ್ತವ ಖರ್ಚಿನ

ಹೆತ್ತರಲ್ಲಿ ಒಂದು ಪಾಲಾಗುವುದಿಲ್ಲ. ಅರಮನೆ ಗುಂಪಲ್ಲದೆ ಅವರ ಸರಬರಾಯಿ ಮತ್ತು ಸೇವೆಗಾಗಿ ನಾನು ಸ್ಥಳದ ಗುಂಪನ್ನು ಬೇರೆ ಕಟ್ಟಿಕೊಳ್ಳ ಬೇಕಾಗುತ್ತೆ. ಉದಾಹರಣೆಗೆ—ಕ್ಯಾಂಪ್ ಸಪ್ಲೈಗೆ ಹೊತ್ತಿಗೆ ಐವತ್ತು ಸೇರು ಹಾಲು ಬೇಕೆಂದು ನಿರೂಪ ಬಂದರೆ, ನೂರೈವತ್ತು ಹಸುಗಳನ್ನು ಜಮಾಯಿಸಿಕೊಂಡು ಒಂದು ಗೋಕುಲವನ್ನೇ ಕಟ್ಟಿಕೊಳ್ಳಬೇಕು. ಮುಡುಕ ತೊರೆಯಲ್ಲಿ ಒಂದು ಸೇರು ಹಾಲು ಸಿಗುವುದೇ ಕಷ್ಟ. ರೀಜಂಟರ ಸವಾರಿ ಎಂದರೆ ಡೆಪ್ಯೂಟಿ ಕಮಿಷನರ್ ಆದಿಯಾಗಿ ಡಿಸ್ಟ್ರಿಕ್ಟಿನ ಎಲ್ಲ ಇಲಾಖೆಗಳ ಆಫೀಸರುಗಳು, ಅವರ ಆಳವಾರ ದೇವತೆಗಳು ಬರುವರು. ಇವರ ಸ್ವಾಗತದ ಏರ್ಪಾಡು ಬೇರೆ, ಸಾಲದ್ದಕ್ಕೆ. ಮೊದಲು ಆಗಬೇಕಾದ ಕೆಲಸ ಇನ್‌ಸ್ಪೆಕ್ಷನ್ ಲಾಡ್ಜಿನ ಸುತ್ತಲೂ ಒಂದು ಬಿದಿರು ಚಾಪೆಯ ಆವರಣವನ್ನು ಕಟ್ಟಬೇಕು. ಇನ್‌ಸ್ಪೆಕ್ಷನ್ ಲಾಡ್ಜನ್ನು ವಿಸ್ತರಿಸಬೇಕು. ಈ ಎರಡು ಕೆಲಸಗಳನ್ನೂ ಕೂಡಲೆ ಷುರೂ ಮಾಡಿಬಿಡಿ; ಇದರ ಲಾಗೋಡನ್ನು ಸಾವ ಕಾಶವಾಗಿ ಮಂಜೂರ್ಮಾಡುತ್ತೇವೆಂದು ಡೆಪ್ಯೂಟಿ ಕಮಿಷನರು ಹೇಳಿದರು. ಬಾಕಿ ಕೆಲಸಗಳೋ? ನಾನು ಡೆಪ್ಯೂಟಿ ಕಮಿಷನರಿಗೆ ಹೇಳಿದೆ:—"ಮಹಾ ಮಾತೋಶ್ರೀಯವರು ಬರುವುದು ನಮ್ಮ ಭಾಗ್ಯೋದಯವೆಂಬುದಕ್ಕೆ ಸಂದೇಹವಿಲ್ಲ—ಆದರೆ ನಮ್ಮ ಸತ್ವಪರೀಕ್ಷೆಯೂ ಹೌದು. ಬೇಕಾದ ಏರ್ಪಾಡುಗಳನ್ನೆಲ್ಲಾ ಅವರು ಮೆಚ್ಚುವಂತೆ ಮಾಡುತ್ತೇನೆಂಬ ನಂಬಿಕೆಯೇನೋ ನನಗೆ ಇದೆ. ಆದರೆ, ತಮ್ಮ ಭರವಸೆ ಬೆಂಬಲ ಅತ್ಯವಶ್ಯಕ. ಈ ಕೆಲಸ ಯಶಸ್ವಿಯಾಗಿ ಪರಿಣಮಿಸಬೇಕಾಗಿದ್ದರೆ ಬಹಳ ಹಣ ಬೇಕು. ಮಾತು ಮುಚ್ಚಿದರೇನು ಫಲ? ಅರಮನೆಗೆ ನಾವು ಬಿಲ್ಲು ಮಾಡುವ ಇಪ್ಪತ್ತು ಮೂವತ್ತರಷ್ಟು ವೆಚ್ಚವಾಗುತ್ತದೆ. ಆಳುವರ ಕ್ಯಾಂಪಿನ ಅನುಭವವುಳ್ಳವರ ಸಂಗಡ ಚರ್ಚೆ ಮಾಡಿ ಎಲ್ಲ ತಪಸೀಲುಗಳನ್ನೂ ತಿಳಿದುಕೊಂಡಿದ್ದೇನೆ. ಈ ತರಹದ ಉತ್ಸವವು ತಾಲ್ಲೂಕಿನ ಸರ್ವರಿಗೂ ಸಂಬಂಧಪಟ್ಟದ್ದಾದ್ದರಿಂದ ಇದರ ಸಲಕರಣೆ ವ್ಯವಸ್ಥೆಗಳ ಜವಾಬ್ದಾರಿಯಲ್ಲಿ ಖಾಸಗಿ ಜನಗಳ ಸಹಕಾರ ವನ್ನು ಪಡೆಯಬೇಕು. ಇಲ್ಲದಿದ್ದರೆ ಸಾಧ್ಯವಿಲ್ಲ."

ಹೀಗೆಂದು ಮೇಲೆ ವಿವರಿಸಿರುವ ತಪಸೀಲುಗಳನ್ನೆಲ್ಲಾ ವಿಸ್ತಾರವಾಗಿ ಹೇಳಿದೆ.

"ಹಾಗಾದರೆ ಏನು ಮಾಡಬೇಕೆನ್ನುತ್ತೀರಿ ?"

"ಒಂದು Reception Committee (ಸ್ವಾಗತ ಸಮಿತಿ)ಯನ್ನು ಏರ್ಪಡಿಸಿ, ಸ್ವಾಗತದ ಏರ್ಪಾಡು, ಕಾರ್ಯಕ್ರಮ ಆ ಕಮಿಟಿಯಲ್ಲೇ ನಿರ್ಧರಿಸಿ, ಅದಕ್ಕೆ ಅವಶ್ಯಕವಾದ ಹಣವನ್ನು ಆ ಕಮಿಟಿಯೇ ಚಂದ ಎತ್ತಿ ಒದಗಿಸಿಕೊಳ್ಳುವಂತೆ ಮಾಡುತ್ತೇನೆ. ಇದು ಕೇವಲ ತಾಲ್ಲೂಕು ಮುಖಂಡರುಗಳ ಖಾಸಗಿ ಕಮಿಟಿಯಾಗಿರುತ್ತೆ. ಯಾವ ಸರ್ಕಾರಿ ನೌಕರನೂ ಒಂದು ಕಾಸನ್ನೂ ಮುಟ್ಟದಂತೆ ನಿಗ ಇಡುತ್ತೇನೆ. ಸರಿಯಾದ ಲೆಕ್ಕಪತ್ರಗಳನ್ನಿಡಲು ತಾಕೀದು ಮಾಡಿ, ಅವರಿಗೆ ಸಿಬ್ಬಂದಿ ಸಹಾಯವನ್ನೂ ಕೊಡುತ್ತೇನೆ. ಚಪ್ಪರಗಳನ್ನು ಕಟ್ಟುವುದು, ಕರವಟಿಗೆ, ಉಗ್ರಾಣ, ವಗೈರೆ ಏರ್ಪಾಡುಗಳಿಗೆ ತಕ್ಕ ಸಿಬ್ಬಂದಿಯನ್ನೂ ನೇಮಕ ಮಾಡಿ, ಎಲ್ಲದರ ಸಿಸ್ತು ಮತ್ತು ಮೇಲ್ತನಿಖೆಗೆ ಬುದ್ಧಿವಂತರನ್ನು ನಿಲ್ಲಿಸಿ, ನಾನು ಎಲ್ಲದರ ಉಸ್ತುವಾರಿಯನ್ನೂ ನನ್ನ ಖುದ್ದು ಹತೋಟಿಯಲ್ಲಿಟ್ಟುಕೊಳ್ಳುತ್ತೇನೆ. ಕಾಲ ಸ್ವಲ್ಪವೇ ಇದೆ, ಕೆಲಸ ಬಹಳ ಆಗಬೇಕು."

"ಸರಿ, ಶುಭಮಸ್ತು. ನನ್ನಿಂದ ನಿಮಗೆ ಬೇಕಾದ ಸಹಾಯ, ಭರವಸೆ ಏನು ?"

"ನನ್ನ ಶಕ್ತಿಯಲ್ಲಿ, ವಿವೇಕದಲ್ಲಿ, ನಿಸ್ಪೃಹತೆಯಲ್ಲಿ ತಮ್ಮ ನಂಬಿಕೆ — ಇದೇ ಸಹಾಯ ; ಇದೇ ಭರವಸೆ. ಯಾರಾದರೂ ಏನಾದರೂ ಬೇನಾಂ ಅರ್ಜಿ ಬರೆದರೆ ಅದಕ್ಕೆ ಗೌರವ ಕೊಡದೇ ಇರೋದು. ಈ ಕೆಲಸದಲ್ಲಿ ನಮ್ಮ ಒತ್ತಾಸೆಗೆ ಬರುವ ಜನಗಳು ಅಜಾತಶತ್ರುಗಳಲ್ಲ. ಅವರನ್ನು ನಾವು ಕರೆದು ಮುಂದೆ ನಿಲ್ಲಿಸಿದ್ದರಿಂದ ಇತರರಿಗೆ ಹೊಟ್ಟೆಯುರಿ ಆಗಬಹುದು."

"ಗೊತ್ತಾಯಿತು ಸುಬೇದಾರರೇ ! ಧೈರ್ಯವಾಗಿ ಕೆಲಸ ಮಾಡಿ."

"ತಾವು ಆಗಿಂದಾಗ್ಗೆ ಅಲ್ಲಿಗೆ ದಯಮಾಡಿ ಕೆಲಸ ಮಾಡುವವರಿಗೆ ಪ್ರೋತ್ಸಾಹ ಕೊಟ್ಟು, ಕೆಲಸ ಮುಂಜರುಗುತ್ತಿರುವುದನ್ನು ನೋಡಿ, ಮುಂದೆ ಮಾಡಬೇಕಾದ್ದಕ್ಕೆ ತಮ್ಮ ಸಲಹೆ ಕೊಡಬೇಕು."

"ಆಗಲಿ, ರಾಮರಾಯರೆ. ಇದರ ಜವಾಬ್ದಾರಿ ನನಗೂ ಇದೆಯಲ್ಲವೆ ?"

ಸರಿ. ಏರ್ಪಾಡುಗಳ ಜವಾಬ್ದಾರಿಯನ್ನು ಧೈರ್ಯವಾಗಿ ವಹಿಸಿದೆ.

ತಾಲ್ಲೂಕಿನ ಎಲ್ಲ ಭಾಗಗಳ ಎಲ್ಲ ಕೋಮುಗಳ ಎಲ್ಲ ಕಸಬುಗಳ ಪ್ರತಿನಿಧಿಗಳುಳ್ಳ ಒಂದು ಸ್ವಾಗತ ಸಮಿತಿಯನ್ನು ರಚಿಸಿ, ಬನ್ನೂರು, ಸೋಸಲೆ, ತಲಕಾಡು, ಮೂಗೂರು ಈ ದೊಡ್ಡ ಊರುಗಳಲ್ಲಿ ಶಾಖೆಗಳನ್ನು ನೇಮಿಸಿದ್ದಾಯಿತು. ಕೇಂದ್ರ ಕಮಿಟಿಗೆ ತಲಕಾಡು ಕೃಷ್ಣರಾಯರೆಂಬ ಒಬ್ಬ ಮಾತುಬಲ ಗೃಹಸ್ಥರನ್ನು ಅಧ್ಯಕ್ಷರನ್ನಾಗಿ ನೇಮಿಸಿ, ಒಬ್ಬ ಕಾರ್ಯದರ್ಶಿಯನ್ನೂ, ಖಜಾಂಚಿಯನ್ನೂ, ಒಬ್ಬ ನಗದೀ ಗುಮಾಸ್ತೆಯನ್ನೂ, ಏರ್ಪಡಿಸಿ, ಒಂದು ಆಫೀಸನ್ನೇ ನಿರ್ಮಾಣ ಮಾಡಿದ್ದಾಯಿತು. ಲೆಕ್ಕಪತ್ರಗಳ ಕ್ರಮ, ಲೇವಾದೇವಿಗಳ ಉಸ್ತುವಾರಿ ಹತೋಟಿ ಇವುಗಳನ್ನೆಲ್ಲಾ ನಿರಖಿಗೆ ತರಲಾಯಿತು.

ಆಗಿನ ಕಾಲದಲ್ಲಿ ರಾಜರಲ್ಲಿ ಭಕ್ತಿ, ಪ್ರೇಮ ಎಂಬುದು ಬಹಳ ವಾಸ್ತವವಾಗಿತ್ತು. ಗರ್ಗೇಶ್ವರಿ ಲಬ್ಬೆಯವರು, ಬನ್ನೂರು ದಾಯಿರೆಯವರು, ಆದಿಯಾಗಿ ಎಲ್ಲರೂ ದ್ರವ್ಯ ಸಹಾಯ ಮಾಡಲು ಮುಂದೆ ಬಂದರು. ಸಾವಿರಾರು ರೂಪಾಯಿಗಳ ನಿಧಿ ಜಮಾವಣೆ ಆಯಿತು.

ಕ್ಯಾಂಪಿನ ನಿರ್ಮಾಣಕ್ಕೆ, ಅದರ ಅಲಂಕಾರಕ್ಕೆ, ಮೈಸೂರಿನಿಂದ ತಾಬೂತುಗಳ ಕಟ್ಟಡದ ಮತ್ತು ಕುತ್ತಣಿ ಕೆಲಸದ ಮುಸಲ್ಮಾನ್ ನಿಪುಣರನ್ನೂ, ಬಿದಿರು ಕೆಲಸಕ್ಕೆ ನಂಜನಗೂಡು ಮತ್ತು ಮೂಗೂರಿನಿಂದ ಮೇದರನ್ನೂ, ಕರೆತಂದು, ಅವರುಗಳ ಬಿಡಾರಗಳನ್ನು ಸ್ಥಾಪಿಸಿದ್ದಾಯಿತು. ಹಣ್ಣು, ಹೂ, ತರಕಾರಿ, ಇವುಗಳ ಸರಬರಾಜಿಗೆ ಬೆಂಗಳೂರಲ್ಲಿ ಏರ್ಪಾಡು ಮಾಡಿದೆವು. ಮಹಾರಾಣಿಯವರ ಕ್ಯಾಂಪಿನ ವಿನೋದಕ್ಕೆ ಸಂಗೀತಗಾರರ ಏರ್ಪಾಡನ್ನೂ ಮಾಡಿದೆವು. ರುದ್ರಪಟ್ಟಣದ ವೆಂಕಟರಾಮಯ್ಯನವರೆಂಬ ಪ್ರಸಿದ್ಧ ವೈಣಿಕರನ್ನು ಬರಮಾಡಿಕೊಂಡೆವು. ಇವರು ಸಮಕಾಲೀನರಾದ ಅಮರ ವೈಣಿಕರಾದ ಶೇಷಣ್ಣನವರ ಪ್ರತಿಭೆಯಿಂದ ಸ್ವಲ್ಪ ಮುಸಕಾಗದಿದ್ದರೆ, ದಕ್ಷಿಣ ಭಾರತದಲ್ಲಿ ಇನ್ನೂ ಪ್ರಖ್ಯಾತರಾಗುತ್ತಿದ್ದರು. ಇವರ ದಿವಸದಲ್ಲಿ ಇವರ ವಾಜನಕ್ಕೆ ಕಳೆ ಕಟ್ಟಿದಾಗ ಶೇಷಣ್ಣನವರಿಗೆ ಇವರಿಗೆ ಇರಬಹುದಾದ ವ್ಯತ್ಯಾಸ ಬಹು ಅಲ್ಪವೆಂದು ಹೇಳಬಹುದು.

ನಮಗೆ ಎಲ್ಲದರಗಿಂತಲೂ ಹೆಚ್ಚು ತೊಂದರೆ ಕೊಟ್ಟದ್ದು, ಹಾಲಿನ ಏರ್ಪಾಡು. ಸುಮಾರು ನೂರೈವತ್ತು ಹಸುಗಳನ್ನೂ ಎಮ್ಮೆಗಳನ್ನೂ ಗ್ರಾಮಾಂತರದಿಂದ ತರಿಸಿ, ಮುಡುಕತೊರೆ ಹೊಳೆಕರೆಯ ತೋಪಿನಲ್ಲಿ

ಕರವಟ್ಟಿಯನ್ನು ಕಟ್ಟಿದೆವು. ದನಗಳ ಜೊತೆಗೆ ಬಂದ ಜನಗಳಿಗೆ ಜೋಪಡಿಗಳ ಸಾಲು, ದನಗಳಿಗೆ ಹುಲ್ಲು; ದಿನ ಬೆಳಗಾದರೆ ಇವರ ತಾಪತ್ರಯ ತಕರಾರುಗಳು. ಸ್ವಂತ ಊರಲ್ಲಿ ಸೇರು ಕರೆಯುವ ದನ ಪರಸ್ಥಳದಲ್ಲಿ ಪಾವು ಅಚ್ಚೇರು ಕೊಡುವುದೇ ಹೆಚ್ಚು. ಮಹಾರಾಣಿಯವರ ಸವಾರಿ ಬರುತ್ತದೆಂಬುದಕ್ಕೆ ಒಂದು ವಾರಕ್ಕೆ ಮುಂಚೆ ಈ ಏರ್ಪಾಡುಗಳೆಲ್ಲ ಸಿದ್ಧವಾಗಿದ್ದವು. ಡೆಪ್ಯೂಟಿ ಕಮಿಷನರು ಬಂದು ನೋಡಿ—ಭೇಷ್, ಎಷ್ಟು ಚೆನ್ನಾಗಿ ಮಾಡಿದ್ದೀರಿ—ಎಂದರು. ಇನ್ನು ಎರಡು ದಿನವಿದೆ ಎಂಬುವಲ್ಲಿ ಅರಮನೆ ಬಿಡದಿ, ಫ್ಲರಾಷಿ, ಮೊದಲಾದ ಕೆಲಸದ ಅವಸರದ ಸಿಬ್ಬಂದಿ (ಅದಕ್ಕೆ ಅವಸರದ ಸಿಬ್ಬಂದಿ ಎಂದು ಹೆಸರೆಂದು ಜ್ಞಾಪಕ) ಬಂತು. ನಮ್ಮ ಏರ್ಪಾಡುಗಳ ಸತ್ವಪರೀಕ್ಷೆಗೆ ಪ್ರಾರಂಭವಾಯಿತು. ಈ ಯಾತ್ರೆಯ ಮುಂದುಪಡೆಯ ನಾಯಕರಾಗಿ ಮೂರು ನಾಲ್ಕು ಜನ ಉದ್ದ ಅಂಗರೇಕ ಜರೀ ರುಮಾಲಿನ ಗುರಕಾರ್ರುಗಳು ಬಂದರು. ಅವರ ಪೈಕಿ ಇಬ್ಬರು ಬ್ರಾಹ್ಮಣರು. ನಮ್ಮ ತಲಕಾಡು ಕೃಷ್ಣರಾಯರಿಗೆ ತಿಳಿದವರಂತೆ. ನಾನು ಕೃಷ್ಣರಾಯರಿಗೆ ಅವರಲ್ಲಿ ತಮ್ಮ ಪರಿಚಯದ ದಾಕ್ಷಿಣ್ಯವನ್ನು ಉಪಯೋಗಿಸಿ, ಅವರನ್ನು ನರಿಮಾಡಿಕೊಳ್ಳಿ ಎಂದು ಹೇಳಿದೆ. ಅವರು ಯತ್ನ ಮಾಡಿ, ಅದರ ಫಲಿತಾಂಶವನ್ನು—ದಂಡಿನಲ್ಲಿ ಸೋದರಮಾವನೇ ? ಎಂಬ ಗಾದೆ ನಿಜ, ಅವರು ಹಿಂದಿನ ಬಳಕೆಯನ್ನು ಮರೆತು, ಈಗ ತಮ್ಮ ಲೌಕಿಕವನ್ನೇ ಬಯಸುವಂತಿದೆ—ಎಂದು ತಿಳಿಸಿದರು. ಇವರಿಗೆ ಭೋಜನಗಳನ್ನೂ ಸಂಗೀತವನ್ನೂ ಏರ್ಪಾಡು ಮಾಡಿದ್ದು ಪ್ರಯೋಜನವಿಲ್ಲದ ಖರ್ಚಾಯಿತು. ಇವರು ತಾವು ಏರ್ಪಾಡುಗಳನ್ನು ಪಸಂದು ಮಾಡಿ ರಿಪೋರ್ಟು ಮಾಡಿದ ಮೇಲೆ ಸವಾರಿ ಹೊರಡುವುದು, ಎಂದು ನಮ್ಮವರಿಗೆ ಬೆದರಿಸಿ, ಪ್ರತಿ ಬಾಬಿನಲ್ಲೂ ದೋಷಗಳನ್ನೆ ಹುಡುಕಿ ಕಿರುಕಳ ಕೊಡಲು ಷುರೂ ಮಾಡಿದರು. ಒಂದು ಉದಾಹರಣೆ : ಸಪ್ಲೈ ಮಾಡಿದ ಹಾಲು ನೀರು ಬೆರಿಕೆಯಾಗಿದೆ ; ಅದೂ ಅಲ್ಲದೆ ಕಾಯಿಸಲಿಕ್ಕೆ ಇಟ್ಟ ಕೂಡಲೆ ಒಡೆದುಹೋಯಿತೆಂದು ಪುಕಾರು ಮಾಡಿದರು. ನಾನು ಕರವಟ್ಟಿ ಛಾರ್ಜಿನಲ್ಲಿದ್ದ ಮರಹೆ ಮತ್ತು ಇನ್‌ಸ್ಪೆಕ್ಟರನ್ನು ಕರೆದು, ಅವರನ್ನು ಕಟುವಾಗಿ ಬೈದು, ಅವರು ಹಾಲು ಕರೆಯುವುದಕ್ಕೆ, ಕರೆದ ಹಾಲನ್ನು ಶೇಖರಿಸಿ ಇಡುವುದಕ್ಕೆ,

ಮಾಡಿದ್ದ ಏರ್ಪಾಡುಗಳನ್ನೆಲ್ಲಾ ಖುದ್ದಾಗಿ ನೋಡಿ (ಅವುಗಳಲ್ಲಿ ತಪ್ಪೇನೂ ಕಾಣದೆ) ಬೇರೆ ಹಾಲನ್ನು ಸಪ್ಲೈ ಮಾಡಿಸಿದೆ. ಇನ್‌ಸ್ಪೆಕ್ಟರು ಸ್ವಲ್ಪ ಹೊತ್ತು ಬಿಟ್ಟುಕೊಂಡು ಬಂದು, ರಹಸ್ಯವಾಗಿ ಬಿಡದಿಗೆ ಬಂದು ನೋಡಿದರೆ ಹಾಲು ಒಡೆದದ್ದರ ಕಾರಣ ಗೊತ್ತಾಗುತ್ತದೆಂದು ಹೇಳಿದರು. ನನ್ನ ಡೇರ ಬಿಡದಿಯ ಹತ್ತಿರವೇ ಇತ್ತು. ಕೂಡಲೆ ಹೋದೆ. ಅಲ್ಲಿ ಹಾಲನ್ನು ಇಟ್ಟಿದ್ದ ಪಾತ್ರೆಗಳ ಸಾಲಿನ ಬಳಿ ಇದ್ದ ಮನುಷ್ಯನೊಬ್ಬ ತನ್ನ ಕೈಯ್ಯನ್ನು ಹೊಸ ಸಪ್ಲೈ ಹಾಲಿನಲ್ಲಿ ಅದ್ದುತಿದ್ದ. ಇನ್‌ಸ್ಪೆಕ್ಟರು ಅವನ ಕೈಯನ್ನು ಥಟ್ಟನೆ ಹಿಡಿದು ಮೂಸಿ ನೋಡಿ—ನೋಡಿ ಸ್ವಾಮಿ, ಇವನು ಕೈಗೆ ನಿಂಬೆ ರಸ ಹಚ್ಚಿಕೊಂಡಿದ್ದಾನೆ—ಅಂತ ಕೂಗಿದರು. ಅವನ ಕಡೆ ಪರಿಚಾರಕರೂ ಬಂದು ಗಲಾಟೆಗೆ ಷುರೂ ಮಾಡಿದರು. ನಾನು ಅವರಿಗೆ "ನಾನು ಸ್ಥಳ ಅಧಿಕಾರ ಉಳ್ಳ ಮ್ಯಾಜಿಸ್ಟ್ರೇಟು, ಹುಷಾರು"—ಎಂದು ದಬಾಯಿಸಿ, ಬಿಡದಿ ಶಿರಸ್ತೇದಾರರೋ, ಯಾರೋ, ಒಬ್ಬ ಅವರ ಕಡೆ ಅಧಿಕಾರಿಯನ್ನೇ ಕರೆದು, ಇದನ್ನು ಪರೀಕ್ಷೆ ಮಾಡಿ ನೋಡಿ, ಎಂದೆ. ನಿಂಬೆರಸದ ವಾಸನೆ ಮುಚ್ಚುವಂತಿರಲಿಲ್ಲವಾದ್ದರಿಂದ ಅವರೂ ಆಳಿನ ಪುಂಡತನವನ್ನು ಒಪ್ಪಬೇಕಾಯಿತು. ಅವನು ಕಾಲಿಗೆ ಬಿದ್ದು ಇದನ್ನು ಮೇಲಕ್ಕೆ ತಿಳಿಸಬೇಡಿ ಎಂದು ಬೇಡಿಕೊಂಡ ಮೇಲೆ, ಇವರನ್ನು ಎದುರು ಹಾಕಿಕೊಳ್ಳುವುದಕ್ಕಿಂತ ಈ ತಪ್ಪಿತದ ರುಜುವಾತನ್ನು ನನ್ನ ಬತ್ತಳಿಕೆಯಲ್ಲಿ ಅಮಾನತ್ತಿನಲ್ಲಿಟ್ಟು, ಇವರಿಗೆ ಮೆಹರ್ಬಾನಿ ತೋರಿಸುವುದು ಒಳ್ಳೆಯದೆಂದು ಅಲ್ಲಿಗೆ ಬಿಟ್ಟೆ.

ಅಂತೂ ಏರ್ಪಾಡುಗಳೆಲ್ಲ ನನ್ನ ಮನಸ್ಸಿಗೆ ತೃಪ್ತಿಯಾಗುವಂತೆ ಪೂರ್ಣವಾದವು. ನಾನು ಸವಾರಿ ಬರುವ ರಸ್ತೆಯಲ್ಲಿ ಒಂದು ಸಲ ಗಸ್ತು ಮಾಡಿ ರಿಹರ್ಸಲ್ (ಮುನ್ನ ತಾಲೀಮು) ಮಾಡಿದೆ. ಇದಕ್ಕಾಗಿ ನನ್ನ ಎರಡು ಕುದುರೆಗಳು ಸಾಲದೆ ಯಾರ ಯಾರವೋ ಕುದುರೆಗಳನ್ನು ಎರವಲು ತೆಗೆದುಕೊಂಡು ಸುಮಾರು ಅರುವತ್ತೈದು ಮೈಲಿಗಳ ಸವಾರಿ ಮಾಡಿದೆ. ಎಲ್ಲವೂ ಠೀಕಾಗಿತ್ತು. ಕ್ಯಾಂಪಿಗೆ ವಾಪಸು ಬಂದಾಗ ಡೆಪ್ಯೂಟಿ ಕಮಿಷನರ್‌ರವರಿಂದ ಒಂದು ಜರೂರು ಡಿ. ಓ. ಕಾಗದ ಮುದ್ದಾಂ ಬಂದದ್ದು ಕಾದಿತ್ತು. ಅದನ್ನು ಆತುರದಿಂದ ತೆಗೆದು ನೋಡಿದೆ. ಅದರಲ್ಲಿ,

"ಸದ್ಯಕ್ಕೆ ನಿರೀಕ್ಷಿಸದಿದ್ದ ಒಂದು ಶುಭ ಘಟನೆಯಿಂದ ಶ್ರೀ ರಾಜ

ಮಾತೃಶ್ರೀಯವರ ಯಾತ್ರೆ ಅನಿವಾರ್ಯವಾಗಿ ಮುಂದಕ್ಕೆ ಹಾಕಬೇಕಾಗಿದೆ. ಜ್ಯೇಷ್ಠ ರಾಜಪುತ್ರಿಯವರು ಇವತ್ತು ಬೆಳಿಗ್ಗೆ ಒಂದು ಹೆಣ್ಣುಮಗುವನ್ನು ಪ್ರಸವಿಸಿದರು. ಮಹಾರಾಣಿಯವರು ನೀವು ಅವರ ಸತ್ಕಾರಕ್ಕೆ ಮಾಡಿದ ಮೆಹನತ್ತೆಲ್ಲ ನಿರರ್ಥಕವಾದದ್ದಕ್ಕೆ ವ್ಯಸನಪಡುತ್ತಾರೆ. ಅವರಿಗೆ ನೀವು ಮಾಡಿರುವ ಸಾಹಸ ತಪ್ಪೀಲಾಗಿ ವರದಿಯಾಗಿದೆ"

—ಎಂದು ಬರೆದಿತ್ತು. ಜ್ಯೇಷ್ಠ ರಾಜಕುಮಾರಿಯವರು ಡೆಪ್ಯೂಟಿ ಕಮಿಷನರ್ ಕಾಂತರಾಜೇ ಅರಸಿನವರ ಧರ್ಮಪತ್ನಿ.

ನನಗೆ ಆದ ಉತ್ಸಾಹಭಂಗವನ್ನು ವರ್ಣಿಸಲಾರೆ. ಕಣ್ಣು ಕತ್ತಲಿಟ್ಟ ಹಾಗಾಯಿತು. ನನಗೆ ಬಂದ ಹಾಗೇ ಅರಮನೆಯ ನೌಕರರಿಗೂ ಸುದ್ದಿ, ಕೂಡಲೆ ವಾಪಸು ಬರುವಂತೆ ಹುಕ್ಕುಂ ನಿಸಿ, ಬಂದಿತ್ತು. ನಾನು ನನ್ನ ಮನಸ್ಸಿನ ಭಂಗವನ್ನು ನುಂಗಿಕೊಂಡು, ನನ್ನ ಸಹಾಯಕ್ಕಾಗಿ ಮನೆ ಬಾಗಿಲು ಬಿಟ್ಟು ಬಂದು ಉತ್ಸಾಹದಿಂದ ಕೆಲಸ ಮಾಡಿದ ಖಾಸಗಿ ಜನಗಳಿಗೆ ನನ್ನ ಸಂತಾಪವನ್ನೂ ವಂದನೆಗಳನ್ನೂ ಸಮರ್ಪಿಸಿ, ಅವರನ್ನು ಸಂತೈಸಿ, ಕಾಂತರಾಜೇ ಅರಸಿನವರಿಗೆ ಸಂತಾನವಾದದ್ದಕ್ಕೆ ನನ್ನ ಅಭಿನಂದನೆಗಳನ್ನು ಬರೆದು, ಮುದ್ದಾಂ ತಂದಿದ್ದ ಆಳಿನ ಮಾರೀಫತ್ತೇ ಉತ್ತರ ಕಳಿಸಿದೆ. ಅದೇ ಕಾಗದದಲ್ಲಿ "ಮಹಾಮಾತೋಶ್ರೀಯವರಿಗೆ ಈ ನನ್ನ ಭಕ್ತಿಪೂರ್ವಕ ವಿಜ್ಞಾಪನೆಯನ್ನು ತಿಳಿಸಬೇಕು: ಏನೆಂದರೆ ಮುಡುಕತೊರೆ ಯಾತ್ರೆ ಸದ್ಯಕ್ಕೆ ನಿಂತರೂ, ಕೃಪೆಯಿಟ್ಟು ಕ್ಷಿಪ್ರದಲ್ಲೇ ಇನ್ನೊಂದು ಮುಹೂರ್ತವಿಟ್ಟು ಅದನ್ನು ನೆರವೇರಿಸಬೇಕು ಎಂದು" ಹೀಗೆ ಬರೆದೆ.

ಈ ನಡೆಯದೇ ಹೋದ ಸವಾರಿಯ ಕಾರ್ಯಕಲಾಪಗಳನ್ನೂ ಲೆಕ್ಕಾಚಾರಗಳನ್ನೂ ಪೂರೈಸುವುದರೊಳಗಾಗಿ, ಆ ತಾರೀಖಿಗೆ ಹದಿನೈದು ದಿನಗಳ ಅಂತರ ಕೊಟ್ಟು ಮುಂದೆ ಹಾಕಲ್ಪಟ್ಟಿದ್ದ ಯಾತ್ರೆಯ ಪ್ರೋಗ್ರಾಂ ಬಂತು. ಹಿಂದೆ ನಿರರ್ಥಕವಾಗಿ ಮಾಡಿದ ಏರ್ಪಾಡುಗಳನ್ನೆಲ್ಲಾ ತಿರುಗ, ಸೋತು ಮಲಗಿದ ಕುದುರೆಯನ್ನು ಮತ್ತೆ ಗಾಡಿಗೆ ಕಟ್ಟುವ ರೀತಿ, ಮಾಡಬೇಕಾಗಿ ಬಂತು. ನಮ್ಮ ಜನಗಳಿಗೆ ರಾಜರಲ್ಲಿ ಇದ್ದ ಭಕ್ತಿ, ನನ್ನಲ್ಲಿದ್ದ ಪ್ರೀತಿ, ನನಗೆ ಒಳ್ಳೆಯ ಹೆಸರು ತರಬೇಕೆಂಬ ಇಷ್ಟ, ನನಗೆ ಬಹಳ ಆಶ್ಚರ್ಯವನ್ನೂ ಸಂತೋಷವನ್ನೂ ಉಂಟುಮಾಡಿದವು. ಹಿಂದೆ ಮಾಡಿದ್ದನ್ನೆಲ್ಲಾ ಬೇಸರ

ವಿಲ್ಲದೆ ಮತ್ತೆ ಮಾಡಿದರು. ಆದರೆ ಹಣ ಸ್ವಲ್ಪ ಸಾಲದೆ ಬಂದದ್ದಕ್ಕೆ ನಾವು ಗಳು ಕೆಲವರು ಖುದ್ದು ಜವಾಬ್ದಾರಿ ವಹಿಸಬೇಕಾಗಿ ಬಂತು. ಕಾಂತರಾಜೇ ಅರಸಿನವರಿಗೆ ಈ ಸಂಗತಿಗಳೆಲ್ಲ ಮಂದಟ್ಟಾಗಿ ನಮ್ಮಲ್ಲಿ ಬಹಳ ಸಹಾನು ಭೂತಿ ಇತ್ತು. ಅವರು ಪದೇ ಪದೇ ಬಂದು ಕೆಲಸಗಳ ಪ್ರಗತಿಯನ್ನು ನೋಡುತ್ತಿದ್ದರು. ಒಂದು ಸಲ—ಆ ಸಲವನ್ನು ನಾನು ಮರೆಯಲಾರೆ, ಅವರೂ ನಾನೂ ಕೊಳ್ಳೇಗಾಲಿಗೆ ಸವಾರಿ ಮಾಡಿಕೊಂಡು ಹೋದೆವು. ಅವರು ಘಟ್ಟಿ ಸವಾರರು, ಅನೇಕ ಬಹಾದ್ದರೀ ಕುದುರೆಗಳನ್ನು ಇಟ್ಟಿದ್ದರು. Cross country—ಅಂದರೆ ರಸ್ತೆ ಇಲ್ಲದ ಖುಲ್ಲಾ ಭೂಭಾಗದ—ಭರಧಾಂ ಸವಾರಿಯೆಂದರೆ ಅವರಿಗೆ ಬಹಳ ಇಷ್ಟ. ನಾನೂ ಸವಾರಿ ಖಯಾಲಿನ ಮನುಷ್ಯನೆಂದು ನನ್ನನ್ನು ಸಂದರ್ಭಬಿದ್ದಾಗ ಸಂಗಡ ಕರೆದುಕೊಂಡು ಹೋಗುತ್ತಿದ್ದರು. ಸರಿ, ಅವತ್ತು ಹೊರಟೆವು. ಆದರೆ, ಅವರ ಮೆಚ್ಚಿನ ಕುಮರೆಯೆಲ್ಲಿ, ನನ್ನ ಬಡವಾಹನವೆಲ್ಲಿ! ಅಲ್ಲದೆ ನಾನು ಆಗ ಸ್ವಲ್ಪ ವರ್ಜ ದಾರ ಆಳು—175 ಪೌಂಡುಗಳಿದ್ದೆ. ಆದರೂ ನನ್ನ ಕುದುರೆಯನ್ನು ದಬಾಯಿಸಿಕೊಂಡು ಸ್ವಲ್ಪ ಹೆಚ್ಚು ಕಡಿಮೆ ಅವರ ಸಂಗಡಲೇ ಬಂದೆ. ವಾಪಸು ಬರುವಾಗ ನನ್ನ ಸೋತುಹೋಗಿದ್ದ ಕುದುರೆ ಮುಗ್ಗರಿಸಿ ನನ್ನ ಸಹಿತ ಬಿತ್ತು. ನಾನು ಕುದುರೆಯ ತಲೆಮೇಲಾಸಿ ಬಿದ್ದ ಭೂಮಿ ದೈವ ವಶಾತ್ತು ಮೆದುವಾಗಿತ್ತು. ನನಗೇ ಆಗಲಿ ಕುದುರೆಗೇ ಆಗಲಿ ಹೆಚ್ಚು ಪೆಟ್ಟಾಗಲಿಲ್ಲ ಸಾಹೇಬರಿಗೆ ಬಹಳ ಪಶ್ಚಾತ್ತಾಪ. ಎರಡು ಮೂರು ಸಲ —ಏನು ಅಪಾಯ—ಪ್ರಾಣವೇ ಹೋಗಬಹುದಿತ್ತಲ್ಲ—ಎಂದರು. ನಾನು —ನನ್ನದು ಘಟ್ಟಿ ಜೀವ, ಸ್ವಾಮಿ. ಅದೂ ಅಲ್ಲದೆ ಮಹಾರಾಣಿಯವರ ಸೇವೆ ಮಾಡುವ ಯೋಗವೂ ಇದೆ—ಎಂದು ನಗುತ್ತಾ ಹೇಳಿದೆ.

ಅವರು ಮೈಸೂರಿಗೆ ವಾಪಸುಹೋದ ಎರಡು ದಿನಕ್ಕೇ ನನ್ನ ಉಪಯೋಗಕ್ಕೆಂದು ಒಂದು 16 hands (hand- ಮುಷ್ಟಿ ಅಂದರೆ 4 ಅಂಗುಲ)ನ ಎತ್ತರವಾದ ಭಾರಿ ಕುದುರೆಯನ್ನು ಕಳುಹಿಸಿದರು. ಅದರ ಹೆಸರು ಗ್ಯಾಲ್ವೆ (Galway). ನಾನು ಅದು ಮಹಾರಾಣಿಯವರ ಸವಾರಿಯ ಸಂದರ್ಭದ ಕೆಲಸಗಳ ಅನುಕೂಲಕ್ಕಾಗಿ ಕಳಹಿಸಿದ್ದಾರೆಂದು ತಿಳಿದುಕೊಂಡಿದ್ದೆ. ಅಂಥ ಸೊಗಸಾದ ಕುದುರೆಯನ್ನು ನಾನು ಹಿಂದೆ

ಯಾವಾಗಲೂ ಸವಾರಿ ಮಾಡಿರಲಿಲ್ಲ. ಅದು ರಾಜಾರ್ಹವಾಹನವೇ ಹೊರತು ಇತರರಿಗೆ ಸಾಮಾನ್ಯವಾಗಿ ಸಲ್ಲತಕ್ಕದ್ದಲ್ಲ. ನನ್ನ ಅದೃಷ್ಟ—ಅರಸಿನವರ ವಿಶ್ವಾಸದಿಂದ ಅದು ನನ್ನದಾಯಿತು. ಅದು ಹ್ಯಾಗಂದರೆ—ಮಹಾರಾಣಿಯವರ ವಿಸಿಟ್ಟಿನ ಸಂದರ್ಭದಲ್ಲಿ ನಾನು ಆ ಕುದುರೆಯನ್ನೇ ಏರಿ ಅವರ ಯಾತ್ರೆಯ ಉದ್ದಕ್ಕೂ ಅವರನ್ನು ಎಸ್ಕಾರ್ಟು (escort—ಕಾವಲು ಹಾಜರಿ) ಮಾಡಿದೆ. ಅವರ ಸವಾರಿ ವಾಪಸುಹೋದ ಮೇಲೆ, ಅರಸಿನವರು—ಗ್ಯಾಲ್ವೆ ನಿಮದೇ ಆಗಿ ಇರಲಿ. ಅವರ ಸವಾರಿ ಜ್ಞಾಪಕಕ್ಕಾಗಿ ನಿಮಗೇ ಕೊಟ್ಟಿದೆ. ಚನ್ನಾಗಿ ಪೋಷಿಸಿ ಸವಾರಿ ಮಾಡಿ ಸುಖಪಡಿ—ಎಂದು ಹೇಳಿ ಕುದುರೆಯನ್ನು ನನ್ನದು ಮಾಡಿದರು. ನಾನು ತೆಗೆದುಕೊಳ್ಳಬಹುದೇ ಇಲ್ಲವೆ ಎಂದು ಯೋಚನೆ ಮಾಡುತ್ತಿರುವಲ್ಲಿ, ನಾನು ತೆಗೆದುಕೊಳ್ಳಬೇಕೆಂದು ಮಹಾತಾಯಿಯವರ ಇಚ್ಛೆ ಎಂದು ತಿಳಿದು ಒಪ್ಪಿದೆ.

ಮಹಾರಾಣಿಯವರ ಸವಾರಿ ಪ್ರೋಗ್ರಾಂನಂತೆ ದಯಮಾಡಿಸಿತು. ಪ್ರತಿಯೊಂದು ಏರ್ಪಾಡೂ ನಾವು ಉದ್ದೇಶಿಸಿದ್ದಂತೆ ಸೊಗಸಾಗಿಯೆ ನೆರವೇರಿತು. ಮಹಾರಾಣಿಯವರು ಬಹಳ ಪ್ರಸನ್ನ ಹೃದಯರು. ನಮ್ಮ ಭಕ್ತಿ, ಪ್ರೇಮ, ಉದ್ದೇಶ, ಇವುಗಳಿಂದಲೇ ನಮ್ಮ ಸೇವೆಯನ್ನು ತುಲನಮಾಡಿ, ಸಂತೋಷದಿಂದ ಸ್ವೀಕರಿಸಿ, ತುಷ್ಟರಾಗುತ್ತಿದ್ದರು. ನನ್ನ ಮೇಲಂತೂ ಬಹಳ ಕೃಪೆ ತೋರಿಸಿ, ನನ್ನ ಬಿಡಾರದಿಂದ ಆಗಿದ್ದ ಅಡಿಗೆಯನ್ನು ಒಂದು ಸಲ ತರಸಿಕೊಂಡರು. ಬಿಡದಿ ಬಕ್ಷಿಯವರು—ತಮ್ಮ ಸಲಹೆಯಿಂದ ಸನ್ನಿಧಾನ ಈ ರೀತಿ ಮಾಡಿದ್ದು; ಇದು ಬಹಳ ಅನುಗ್ರಹದ ಕುರುಹು; ಎಂದು ನನ್ನ ಧನ್ಯವಾದಕ್ಕೆ ದರಖಾಸ್ತು ಮಾಡಿದರು. ಅವರು ಮಾತನಾಡುತ್ತಿದ್ದ ಹಾಗೇ ಹುಜೂರು ಬಿಡಾರದ ಒಳಗಿನಿಂದ ಒಬ್ಬ ಚಾಕರಳು—ಅಂಥವರಿಗೆ ಅವ್ವೇರೆಂದು ಹೆಸರು—ಬಕ್ಷಿಯವರೆಲ್ಲಿ?—ಎಂದು ಓಡಿಬಂದು—ಬುದ್ದಿ, ತಾಳದದಾಗ ಮಳ್ಳು ಇತ್ತು. ಸರೀಗ ಶುದ್ಧೀ ಮಾಡಿರನಿಲ್ಲ. ಬಕ್ಷೇರಿಗೆ ಬುದ್ದಿ ಇಲ್ಲವ ಕೇಳು; ಅಂತ ಅಪ್ಪಣೆ ಆಯ್ತು"—ಅಂತ ವರದಿ ಮಾಡಿದಳು. ಬಕ್ಷಿಯವರು ಕಕ್ಕಾಬಿಕ್ಕಿಯಾಗಿ ಎದ್ದು—ಅಯ್ಯೋ! ಈ ಬಡ್ಡಿ ಹೆಕ್ಕಳು ಏಟು ಏಳಿದರೂ ಹಿಂಗೇ ಮಾಡ್ತಾರಲ್ಲ! ಇವರಿಂದ ಮಾನಾ ಬರೋಕಿಲ್ಲಲ್ಲ! ನಮ್ಮಪ್ಪ ಸಾಕು—ಎಂದು ಗೋಳಾಡಿ, ನಂತರ ಅವ್ವೆ

ಕಡೆ—ಅವ್ವ, ನಿಮ್ಮ ಧರ್ಮಕ್ಕೆ, ಒಪ್ಪಿಸೋಕೆ ಮುಂಚೆ ಸರೀಗದೋ ಇಲ್ಲೋ ನೀವೇ ವಸಿನೋಡಿ ಬಡಿಸಬಾರದೆ? ಅರಿಕೆ ಮಾಡವ್ವ—ನಾ ಅಡ್ಡಬಿದ್ದೆ ಮಾಪಾದಕ್ಕೆ, ಮುಂದೆ ಸಾಮಾನು ಶುದ್ಧಿಮಾಡೋದ ನಾನೇ ನೋಡ್ತೀನಿ. ಮಾಪ್ ಮಾಡಬೇಕು, ಈ ದಪಾಕ್ಕೆ ಅಂತ" ಎಂದು ಹೇಳಿದರು. ನಾನು ಸನ್ನಿಧಿಯಲ್ಲಿ ಬಕ್ಷಿಯುವರ ತೂಕದ ಮೊತ್ತವನ್ನು ತಿಳಿದು ಅವರ ಬಡಾಯಿಗೆಲ್ಲ ಮುಂದೆ ಅದರಂತೆ ಬೆಲೆ ಕಟ್ಟಿದೆ.

ಅಂತು, ಸನ್ನಿಧಾನದವರಿಗೆ ನನ್ನಲ್ಲಿ ಒಳ್ಳೆಯ ಅಭಿಪ್ರಾಯವಿದೆ ಎಂದು ಊಹಿಸಿಯೋ ಏನೋ, ಅರಮನೆ ನೌಕರರು ಸುದ್ಧ ನನಗೆ ಹೆಚ್ಚು ಕಿರುಕುಳ ಕೊಡಲಿಲ್ಲ.

ಮಹಾರಾಣಿ ವಾಣಿವಿಲಾಸ ಸನ್ನಿಧಾನದವರು ನನ್ನನ್ನೂ ನನ್ನ ಪತ್ನಿಯನ್ನೂ ಬರಮಾಡಿಕೊಂಡು ತಾವು ಒಂದು ತೆರೆಯ ಹಿಂದೆ ನಿಂತು ಬಹು ಅನುಗ್ರಹದಿಂದ ಯೋಗಕ್ಷೇಮವನ್ನು ವಿಚಾರಿಸಿದರು. ಆಮೇಲೆ— ತಾಲ್ಲೂಕಿನ ಕೆಲವು ದೊಡ್ಡ ಮನೆಗಳ ಮುತ್ತೈದೆಯವರನ್ನು ಗೌರಿಪೂಜೆಗೆ ಕರೆದುಕೊಂಡು ಬನ್ನಿ—ಎಂದು ನನ್ನ ಹೆಂಡತಿಗೆ ಹೇಳಿದರು. ಈ ಆಜ್ಞೆಯಂತೆ ತಲಕಾಡು ತಿರುಮಕೂಡ್ಲು, ನರಸಿಪುರ, ಹೆಮ್ಮಿಗೆಯಿಂದ ಹತ್ತು ಹನ್ನೆರಡು ಜನ ಸುಮಂಗಲಿಯರನ್ನು ಕರೆಸಿ, ನನ್ನ ಪತ್ನಿ ಅವರ ಸಂಗಡ ಮಹಾರಾಣಿಯವರ ಬಿಡಾರಕ್ಕೆ ಹೋದರು. ಮಹಾರಾಣಿಯವರ ಪಾರ್ಟಿಯಲ್ಲಿ ಅವರ ಮೊಮ್ಮಕ್ಕಳೂ ಐದಾರು ರಾಜ ಬಳಗದ ಕುಮಾರಿಯರೂ ಬಂದಿದ್ದರು. ಬಿಡಾರದಲ್ಲಿ ಒಂದು ಮಹಿಳೆಯರ ದರ್ಬಾರೇ ಆಯಿತಂತೆ. ಕೆಲವರು ಸಂಗೀತವನ್ನು ಹೇಳಿದರಂತೆ. ಮಹಾತಾಯಿಯವರು ಎಲ್ಲರ ಸಂಗಡಲೂ ಧಾರಾಳವಾಗಿ ಆದರದಿಂದ ಮಾತನಾಡಿದರಂತೆ. ನನ್ನ ಹೆಂಡತಿ ಹೇಳಿದ ಒಂದು ಕತೆ ಮಹಾರಾಣಿಯವರ ದೊಡ್ಡತನವನ್ನೂ ತಾಯಿ ಕರುಳನ್ನೂ ತೋರಿಸುತ್ತದೆ. ಆ ದರಬಾರಿಗೆ ಬಂದಿದ್ದ ಒಬ್ಬ ತಾಯಿ ಸ್ವಲ್ಪ ಕಪ್ಪು, ಸ್ವಲ್ಪ ದಪ್ಪ—ಒಂದು ಕೈಕೂಸನ್ನು ಎತ್ತಿಕೊಂಡು ಬಂದಿದ್ದರು. ಆ ಮಗು ಅಳಲಿಕ್ಕೆ ಹತ್ತಿತು. ತಾಯಿ ಪಹರುವಾಸಿಗಳ ಸಂಕೋಚವಿಲ್ಲದೆ ಸೆರಗು ಓರೆ ಮಾಡಿ ಸ್ತನ್ಯ ನೀಡಿದಳು. ಇದನ್ನು ನೋಡಿ ಮೈಸೂರಿನಿಂದ ಬಂದಿದ್ದ ಬಾಲೆಯರು ಒಬ್ಬರ ಕಡೆ ಒಬ್ಬರು ತಿರುಗಿ ಕಿಲಕಿಲ ನಗಲಿಕ್ಕೆ

ಪ್ರಾರಂಭಮಾಡಿದರು. ಆಗ ತಾಯಿಯವರು ಮಗುವಿನ ಮಾತೆಗೆ—ಏನು ಧನ್ಯರಮ್ಮ ನೀವು, ಚಿನ್ನದಂಥ ಮಗನಿಗೆ ಹಾಲು ಊಡೋಕೆ! ನಿಮ್ಮದೇ ಯಶೋದೆಯ ಭಾಗ್ಯ! ನಮ್ಮ ಹೆಣ್ಣು ಮಕ್ಕಳಿಗೂ ಇದೇ ಸುಖ ಬರಲಿ ಅಂತ ಹರಸಿ—ಎಂದು ಹೇಳಿದರಂತೆ.

ನನಗಂತು ಅವರನ್ನು ಕಂಡರೆ ಟೆನ್ನಿಸನ್ನಿನ ವಿಕ್ಟೋರಿಯಾ ರಾಜ್ಞಿ ವರ್ಣನೆ ಬಂತು:

A thousand claims to reverence closed
In her as mother, wife, and queen

ಆಕೆ ನಿರ್ದೇಶ ತಾಯಿ, ಮಹಾಸತಿ, ಉತ್ಕೃಷ್ಟರಾಣಿ, ಹ್ಯಾಗೆ ಯಾವ ಭಾವ ದಲ್ಲಿ ನೋಡಿದರೂ ಪೂಜಾರ್ಹರು. (ಮೇಲಿನದು ನೇಟಾದ ಹದಿನಾರಾಣೆ ಅನುವಾದವಲ್ಲ. ಆದರೆ ಸಾಕು.)

ಮಹಾರಾಣಿಯವರು ನಾನು ಕರೆಸಿದ್ದ ಸಂಗೀತಗಾರರು ರುದ್ರಪಟ್ಣದ ವೆಂಕಟರಾಮಯ್ಯನವರಿಗೆ ವೀಣಾವಾದನಕ್ಕೆ ಅವಕಾಶ ಕೊಟ್ಟು, ಯುಕ್ತ ವಾದ ಬಹುಮಾನ ಕೊಟ್ಟರು. ಎಲ್ಲ ದೇವಸ್ಥಾನಗಳಿಗೂ ಪಂಚಲಿಂಗ ದರ್ಶನದ ಕಟ್ಟಳೆಯಂತೆ ಯಾತ್ರೆ ನಡೆದು, ದರ್ಶನ ಪಡೆದು, ಪೂಜೆ ಮಾಡಿ, ವ್ರತವನ್ನಾಚರಿಸಿದರು. ನಾನು ಆಜ್ಞಾಧಾರಕನಾಗಿ ಸಂಗಡಲೇ ಇದ್ದೆ. ಅವರ ವಿಹಾರಕ್ಕಾಗಿ ಸ್ಪೆಷಲ್ಲಾಗಿ ಒಂದು ದೊಡ್ಡ ದೋಣಿ ತಯಾರಿಸಿ, ಅದನ್ನು ಮಂಟಪ, ಕನಾತು, ವಗೈರೆಗಳಿಂದ ಅಲಂಕರಿಸಿದ್ದೆ. ಅದನ್ನು ಶ್ರೀ ಮಲ್ಲಿಕಾ ರ್ಜುನ ಸ್ವಾಮಿ ತೆಪ್ಪೋತ್ಸವಕ್ಕೆ ಉಪಯೋಗಿಸಿ, ಆಮೇಲೆ ತಾವೂ ಅದರಲ್ಲಿ ಕುಳಿತು ಬೆಳುದಿಂಗಳ ಹೊಳೆಯಲ್ಲಿ ಸ್ವಲ್ಪ ಕಾಲ ವಿನೋದವಾಗಿದ್ದರು.

ಮಹಾರಾಣಿಯವರ ಸ್ವಭಾವದ ಮಾಧುರ್ಯವನ್ನು ತೋರಿಸುವ ಇನ್ನೊಂದು ವಿಷಯ ಜ್ಞಾಪಕಕ್ಕೆ ಬರುತ್ತದೆ. ಶ್ರೀ ಕೀರ್ತಿನಾರಾಯಣ ಸ್ವಾಮಿ ದೇವಸ್ಥಾನದಲ್ಲೂ, ತಲಕಾಡು ವಿಜಯಾಪುರದಲ್ಲಿನ ಈಶ್ವರ ದೇವ ಸ್ಥಾನಗಳಲ್ಲೂ, ಸನ್ನಿಧಾನದವರು ಪೂಜೆಗೆ ಹೋದಾಗ ಬ್ರಾಹ್ಮಣ ಅರ್ಚಕರು, ಆಗಮಿಕರುಗಳೇ ಅರ್ಚನೆ, ರಾಜಾಶೀರ್ವಾದಗಳನ್ನು ಕ್ರಮವಾಗಿ ಮಾಡಿ ದರು. ಇವರುಗಳಿಗೆ ಒಳ್ಳೆ ಸಂಭಾವನೆ ಉಡುಗೊರೆಗಳು ಸಿಕ್ಕವು. ಮುಡುಕ ತೊರೆ ಶ್ರೀ ಮಲ್ಲಿಕಾರ್ಜುನಸ್ವಾಮಿ ದೇವಸ್ಥಾನದಲ್ಲಿನ ಅರ್ಚನೆ ಸೇವಾದಿ ಗಳು ಅದೇ ಗ್ರಾಮದಲ್ಲಿ ತಲೆತಲಾಂತರದಿಂದ ವಾಸವಾಗಿರುವ ತಮ್ಮಡಿಗಳಿಗೆ

ಸೇರಿದ ಹಕ್ಕು. ಅವರು ನನ್ನಲ್ಲಿ, ಆ ಹಕ್ಕನ್ನು ಈ ಅಪೂರ್ವ ಸಂದರ್ಭ ದಲ್ಲೂ ಕಾಪಾಡಿ ಕೊಡಬೇಕು; ಮಾಮೂಲಿನಂತೆ ಕ್ರಮವಾಗಿ ಸ್ವಾಮಿ ಪೂಜೆಯನ್ನು ತಾವೇ ಮಾಡಿ, ಮಹಾರಾಣಿಯವರಿಗೆ ತಾವೇ ಪ್ರಸಾದವನ್ನು ಒಪ್ಪಿಸುತ್ತೇವೆ, ಎಂದು ಕೇಳಿಕೊಂಡರು. ಈ ಸಂದರ್ಭದಲ್ಲಿ ಅವರಿಗೆ ನೂರಾರು ರೂಪಾಯಿಗಳ ನಗದು ಸಂಭಾವನೆ, ಶಾಲು, ಧೋತ್ರ, ಸೀರೆ ಗಳು ದೊರೆಯುವ ಭರವಸೆಯೂ ಇತ್ತು. ಇವರ ವಾದ ನ್ಯಾಯವೆಂದು ನನಗೆ ತೋರಿ, ನಾನು ಹಾಗೇ ಆಗಲೆಂದು ಒಪ್ಪಿದೆ. ಆದರೆ ರಾಜಾಶೀ ರ್ವಾದ ಉಚ್ಚಾರಣೆ ಬರುತ್ತೆಯೋ? ಎಲ್ಲಿ, ಹೇಳಿ—ಎಂದೆ. ಕೆಲವು ಮಹಾಪ್ರಾಣಗಳ ಕೆಲವು ಸಂಯುಕ್ತ ಅಕ್ಷರಗಳ ಪಲ್ಲಟದ ಹೊರತು ಸರಿ ಯಾಗೇ ಹೇಳಿದರು. ಅವರು ಈ ಸಂದರ್ಭಕ್ಕಾಗಿಯೇ ಇದನ್ನು ಶ್ರಮ ಪಟ್ಟು ಪಾರಮಾಡಿರಬೇಕೆಂದು ತೋರಿತು. ಪಾಪ, ಎಷ್ಟು ತೊಂದರೆ ತೆಗೆದು ಕೊಂಡಿದ್ದಾರೆ, ಇಂಥ ದುರ್ಲಭವಾದ ಅವಕಾಶ ಇವರಿಗೆ ತಪ್ಪಿಸಬಾರದೆಂದು ಇವರ ಕೋರಿಕೆಯಂತೇ ಏರ್ಪಾಟುಮಾಡಿದೆ. ಸರಿ, ಮಹಾರಾಣಿಯವರು ದೇವಸ್ಥಾನಕ್ಕೆ ದಯಮಾಡಿದರು. ಪೂಜೆ ಬಹು ಭಕ್ತಿಯಿಂದ ವೈಭವದಿಂದ ನಡೆಯಿತು. ರಾಜಾಶೀರ್ವಾದ ಹೇಳಬೇಕಾದರೆ ಮುಖ್ಯ ತಮ್ಮಡಿಗೆ ಹೊಸ ಪಾಠದ ದಪ್ಪಸಂಸ್ಕೃತ ಗಂಟಲಲ್ಲಿ ಸಿಕ್ಕಿಕೊಂಡಿತೆಂದು ಕಾಣುತ್ತೆ. ಕಕ್ಕಾ ಬಿಕ್ಕಿಯಾದ. "ಹೂ—ಆಗಲಿ ಹೊತ್ತಾಯಿತು—" ಅಂತ ದರ್ಬಾರು ಬಕ್ಷಿ ಯವರು ಅಸಹಿಷ್ಣು ಧ್ವನಿಯಿಂದ ತ್ವರೆಗೊಳಿಸಿದರು ಬೇರೆ. ನಮ್ಮ ತಮ್ಮಡಿ ಮೂಕನಾಗಿ ಒಂದು ಕ್ಷಣ ನಿಂತು, ಆಮೇಲೆ (ಶಿವನೇ ನೀನೇ ಗತಿ ಎಂದು ಕೊಂಡಿರಬೇಕು) ಎದೆ ಗಟ್ಟಿ ಮಾಡಿ—"ಮಾಂತೋಣಿ ಗಿಣ್ಣಂತು, ತಟಾಸ್ತು"—ಅಂತ ಘಟ್ಟಿಯಾಗಿ ಹೇಳಿದ. ಅಲ್ಲಿದ್ದವರು ಸಿಡಿಲು ಬಡಿದ ಹಾಗೆ ಪೆಚ್ಚುಮೋರೆ ಹಾಕಿ ನಿಂತಿರಲು, ಮಹಾರಾಣಿಯವರು ತುಸು ಮುಗುಳುನಗೆಯಿಂದ—"ಸರಿ. ಕನ್ನಡದಲ್ಲೂ ಹೇಳಿಬಿಡಿ; ದೊಡ್ಡೋರೆಲ್ಲ ಆಶೀರ್ವಾದ ಮಾಡಿ, ಆಳುವ ಮಹಾಸ್ವಾಮಿಗಳಿಗೆ, ಅವರ ರಾಜ್ಯಕ್ಕೆ, ಭ್ರಮರಾಂಬಾ ಸಮೇತರಾದ ಮಲ್ಲಿಕಾರ್ಜುನಸ್ವಾಮಿ ಒಳ್ಳೇದು ಮಾಡಲಿ ಅಂತ" ಎಂದು ಹೇಳಿ, ಅವರುಗಳಿಗೆ ಪೂಜೆ ಚೆನ್ನಾಗಿತ್ತೆಂದು ಪ್ರಶಂಸಿಸಿ, ಎಲ್ಲ ಕಡೆಯಂತೆಯೇ ಉಡುಗೊರೆ ಸಂಭಾವನೆಗಳನ್ನು ದಯಪಾಲಿಸಿದರು.

೪೦

"ಜೈಲು ನಾಟಕ ನೋಡಬೇಕೆಂತ ಹುಜೂರು ಅಪ್ಪಣೆಯಾಗುತ್ತೆ. ಏರ್ಪಾಡು ಮಾಡ್ತೀರ, ಸುಬೇದಾರ್ರೇ?" ಎಂದರು, ದರ್ಬಾರು ಬಕ್ಷಿಯವರು.

ವಿಚಾರಿಸಿ ಸಾಯಂಕಾಲ ಹೇಳುತ್ತೇನೆಂದೆ. ತಲಕಾಡಿನಲ್ಲಿ ಪಟೇಲ ಪುಟ್ಟೇಗೌಡ ಹೆಸರುವಾಸಿ ನಾಟಕಾಚಾರ್ಯ. ಒಂದೆ ಆತ ನನ್ನ ಸ್ವಂತ ಆನಂದಕ್ಕಾಗಿ ಟ್ರಾವೆಲ್ಲರ್ಸ್ ಬಂಗಲೆ ಕಾಂಪೌಂಡಿನಲ್ಲಿ ನಳಚರಿತ್ರೆಯನ್ನು ಆಡಿಸಿದ್ದ. ನಾನು, ಹೆಂಗಸರು ಮಕ್ಕಳನ್ನು ಕರೆದುಕೊಂಡು ಬಂದಿದ್ದೇನೆ, ಹಾಸ್ಯದ ಜನಾತಿಭಾಗಗಳನ್ನು ಸ್ವಲ್ಪ ತೇಲಿಸಿಬಿಡು; ಎಂದು ಹೇಳಿದ್ದೆ. ಅವತ್ತು ನಾಟಕ ನೋಡಲು ಬಂದು ಕಾಂಪೌಂಡು ತುಂಬಿ ತುಳುಕುವಂತೆ ನೆರೆದಿದ್ದ ಜನ—ನಾಟಕವೇನೋ ಚನ್ನಾಗಿತ್ತು, ಆದರೆ ನಕಲೀನ ಸುಬೇದಾರ್ರು ನಪ್ಪೆಮಾಡಿಸಿ ಬಿಟ್ಟರೆಂದರು. ಹಳ್ಳಿಗಳಲ್ಲಿ ಹಾಡುವ ಯಕ್ಷಗಾನ ರೀತಿಯ ಸಂಗೀತವನ್ನು ಚೆನ್ನಾಗಿ ಹಾಡುವರ ಬಾಯಿಂದ ಕೇಳಿದ್ದೀರ? ಬಹಳ ಇಂಪಾಗಿರುತ್ತೆ. ನಮ್ಮ ದೇಶದಲ್ಲಿ ಸಾಮಾನ್ಯವಾಗಿ ಎಲ್ಲರಿಗೂ ಗೊತ್ತಿರುವ ರಾಗಗಳನ್ನು ಅದೇ ಒಂದು ಬೇರೆ ಗತ್ತಿನಿಂದ ಅದರು ತುಂಬಿ, ಉಸಿರಿರುವಷ್ಟು ದೀರ್ಘವಾಗಿ, ಹಾಡುತ್ತಾರೆ; ಸ್ವಲ್ಪ ಆ ತರಹದ ಹಾಡುಗಾರಿಕೆ ಕಿವಿಗೆ ಒಗ್ಗಿದಮೇಲೆ, ಆ ಸಂಗೀತ ನಿಜವಾಗೂ ಬಹಳ ಸೊಗಸಾಗಿರುತ್ತದೆ. ಅದು ಬಹುಶಃ ತಾಳಕ್ಕೆ ಸಿಕ್ಕುವುದಿಲ್ಲವೆನ್ನಬಹುದು, ಹೌದು, ಹಕ್ಕಿಗಳ ಹಾಡುಗಾರಿಕೆ, ತೋಪಿನಲ್ಲಿ ಬೀಸುವ ಮಂದ ಮಾರುತದ ಗಾನ, ಹರಿಯುವ ನೀರಿನ ಮೊರೆ, ಇವು ತಾಳಕ್ಕೆ ಸಿಕ್ಕುತ್ತವೇನು? ನಾನು ನೋಡಿದ ನಾಟಕ ಬಹಳ ಚನ್ನಾಗಿತ್ತು. ಕಾಡಿನಲ್ಲಿ ನಿದ್ರಿಸುವ ದಮಯಂತಿಯ ಸೀರೆಯ ಅರ್ಧಭಾಗವನ್ನು ಅವಳ ನಿರ್ಭಾಗ್ಯ ಗಂಡ ಹರಿದುಕೊಂಡು ಹೋಗುವಾಗಂತು ಸಭೆಯ ಬಹುಭಾಗ ಅತ್ತು ಬಿಟ್ಟಿತು. ಆದರೆ ಹತ್ತಿರದಲ್ಲಿದ್ದ ನಮಗೆ ಆ ದುರ್ದೈವಿ ರಾಜಪುತ್ರಿಗೆ ಉಳಿದ ಅರ್ಧ ಸೀರೆಯ ಮರೆಯಲ್ಲಿ ಒಳ್ಳೇ ಘಟ್ಟಿಯಾದ ಚಡ್ಡಿ ಮಾನಕ್ಕೆ ಕಾವಲು ಇದ್ದದ್ದು ನೋಡಿ ಸ್ವಲ್ಪ ಸಮಾಧಾನವಾಯಿತು.

ಪಟೇಲ ಪುಟ್ಟೇಗೌಡನಿಗೆ ಹೇಳಿದರೆ ಅವನು ನಾಟಕಕ್ಕೆ ಏರ್ಪಾಡು ಮಾಡುತ್ತಾನೆಂಬುದೇನೋ ಖಾತರಿ; ಆದರೆ ನಟನೆಯಲ್ಲಿ ಏನು ಔಚಿತ್ಯ ಭಂಗವಾಗಿ ಜನಾನಾದವರಿಗೆ ಅಭಾಸ ತೋರೀತೋ ಎಂಬ ಭಯ. ಅಂತೂ ಡೆಪ್ಯುಟಿ ಕಮಿಷ್ನರನ್ನ ಒಂದು ಮಾತು ಕೇಳಿಬಿಡೋಣ ವೆಂದು ಅವರಲ್ಲಿ ಹೋದೆ.

"ಇವರು ಆಶೆಪಟ್ಟು ಕೇಳೋದೇ ಉಂಟಂತೆ; ನೀವು ಆವಶ್ಯಕವಾಗಿ ಏರ್ಪಾಡು ಮಾಡಿ. ನಾಗರಿಕ ನಾಟಕಗಳನ್ನು ಅವರು ಎಷ್ಟು ನೋಡಿಲ್ಲ? ಇದು ಅವರಿಗೆ ಅಪರೂಪ" ಅಂದರು.

ನಾನು,

"ಆಗಲಿ ಸ್ವಾಮಿ. ಅಂದರೆ, ಏನಾದರು ಗ್ರಾಮ್ಯ ಧಟಿಕ್ ಅಂತ ಹೊರಬಿದ್ದು, ಈ ಅಮಲ್ದಾರನಿಗೆ ಬುದ್ಧಿಯೇ ಇಲ್ಲವೋ? ಅಥವ ಅವನು ತಿಳಿದೂತಿಳಿದೂ ನಮಗೆ ಅಪಮಾನ ಮಾಡಬೇಕೆಂದು ಈ ರೀತಿ ನಾಟಕವಾಡಿ ಸಿದನೋ? ಎಂದು ಅವರು ನನ್ನ ಮೇಲೆ ಆಗ್ರಹ ಮಾಡುವರೆಂಬ ಶಂಕೆ" ಅಂದೆ.

"ಹೌದು; ನೀವು ಅದನ್ನು ಮೊದಲೇ ಹುಷಾರಾಗಿ ನೋಡಬೇಕು."

ಪುಟ್ಟೇಗೌಡನಿಗೆ ಆತನ ಕಂಪೆನಿಯ ಜನರನ್ನು ಕರೆಸಿಕೊಂಡು ನನ್ನನ್ನು ಬಂದು ನೋಡುವಂತೆ ಹೇಳಿಕಳಿಸಿದೆ. ಅವನು ಬಹಳ ಉತ್ಸಾಹ ದಿಂದ ಹತ್ತು ಹನ್ನೆರಡು ಜನಗಳನ್ನು ಕರೆದುಕೊಂಡು ಬಂದ. ಮಹಾ ತಾಯಿಯವರು ನಿಮ್ಮ ನಾಟಕ ನೋಡಬೇಕೆಂದು ಅಪ್ಪಣೆಕೊಟ್ಟಿದ್ದಾರೆ. ನಿಮಗೆ ಯಾವ ಯಾವದು ಅಭ್ಯಾಸವಿದೆ? ಎಂದು ಕೇಳಿದ್ದಕ್ಕೆ, ಸಾರಂಗ ಧರ, ಸದಾರಮೆ, ನಳಚರಿತ್ರೆ, ದ್ರೌಪದಿ ವಸ್ತ್ರಾಪಹರಣ, ರಾಮಾಯಣ, ಇಷ್ಟು ನಾಟಕಗಳ ಹೆಸರು ಹೇಳಿದ.

"ದ್ರೌಪದಿ ವಸ್ತ್ರಾಪಹರಣವನ್ನ ಮೊನ್ನೆ ಪಂಚಲಿಂಗದರ್ಶನದಲ್ಲಿ ಆಡಿದೆವು. ಅದು ಚೆನ್ನಾಗಿ ಪಾಟಿಐದೆ" ಅಂದ. ನನಗೆ ವೈನಡುಗಿತು. ದುಶ್ಶಾಸನ ವಸ್ತ್ರಗಳನ್ನು ಸೆಳೆಯುವ ಉತ್ಸಾಹದಲ್ಲಿ ಈಸಲ ಮಿತಿ ಮೀರಿದರೆ? ಹಸ್ತಿನಾಪುರದ ದುಶ್ಶಾಸನನೇನೋ ಸೋತ; ತಲಕಾಡು ದುಶ್ಶಾಸನ ಗೆದ್ದುಬಿಟ್ಟರೆ?

"ಅದರ ತಂಟೆ ಬೇಡಪ್ಪ" ಅಂದೆ. ಕೊನೆಗೆ ರಾಮಾಯಣ ಕಥೆಯಲ್ಲಿ ಅಕಸ್ಮಾತ್ ಅನಾವರಣದ ಅಪಾಯವಿಲ್ಲವೆಂದು ನಿಶ್ಚಯಿಸಿ, ಆ ನಾಟಕವನ್ನು ನಾಳೆ ರಾತ್ರಿ ಆಡಬೇಕು, ಅಂತ ನೇಮಿಸಿದೆ. ಅದರಲ್ಲಿ ಮುಖ್ಯ ಪಾತ್ರಗಳ ನಟರನ್ನು ವಿಚಾರಿಸಿದೆ. ಅವರೆಲ್ಲರೂ ಬಂದಿದ್ದರು. ಸೀತಾದೇವಿಯ ಪಾರ್ಟಿನದು ಸ್ವಲ್ಪ ಚರ್ಚೆಗೆ ಬಂತು. ಆ ಪಾರ್ಟನ್ನು ಹಿಂದೆ ಬಹಳ ಯಶಸ್ವಿಯಾಗಿ ಪ್ರಯೋಗಿಸುತ್ತಿದ್ದ ಹುಡುಗ ಈಗ ಕುಡಿಮೀಸೆಯನ್ನು ಬಹು ಅಕ್ಕರೆಯಿಂದ ಬೆಳೆಸುತ್ತಿದ್ದಾನೆ. ಆ ಪಾರ್ಟಿನ ಹಾಡುಗಳನ್ನು ಅವನೇ ಚನ್ನಾಗಿ ಹಾಡುತ್ತಿದ್ದನಾದ್ದರಿಂದ, ಅವನಿಗೇ ಪುಟ್ಟೇಗೌಡ ಉಪಚಾರ ಹೇಳಿದ ಆದರೆ ಅವನಿಗೆ ಆಟದ ಮೇಲೆ ಆಸೆ, ಮೀಸೆಯ ಮೇಲೆ ಪ್ರಾಣ. ಮೀಸೆಯುಳ್ಳ ಸೀತೆ ಎಲ್ಲಿಯಾದರೂ ಉಂಟೆ? ಅವನು ದೊಡ್ಡ ಅಂತರ್ಯುದ್ಧಕ್ಕೆ ಗುರಿಯಾದ. ಅಮಲ್ದಾರರ ಅಪ್ಪಣೆಯನ್ನು ಮನ್ನಿಸಿ, ಈ ಮಹಾಸನ್ನಿಧಾನದಲ್ಲಿ ತನ್ನ ಜಾಣ್ಮೆಯನ್ನು ತೋರಿಸುವುದು ಧರ್ಮ, ದಿನವಹಿ ಕನ್ನಡಿಯಲ್ಲಿ ನೋಡಿ, ಹಿಗ್ಗಿ ಹೆಬ್ಬಿಸುತ್ತಿದ್ದ ಚಿಗುರು ಮೀಸೆಯ ಮೇಲಿನದು ಮೋಹ. ಹೀಗೆ ಧರ್ಮ ಕಾಮಗಳ ಮಧ್ಯದಲ್ಲಿ ತೂಗಾಡುತ್ತಿದ್ದ ಅವನ ಧೀರಮನವು ಕೊನೆಗೆ ಧರ್ಮದಲ್ಲೇ ನಿಂತಿತು. ಬೋಳಿಸಿದ ಮೀಸೆ ತಿರುಗ ಬೆಳೆಯುತ್ತೆ; ಕಳೆದುಹೋದ ಅವಕಾಶ ಹೋಗೇ ಹೋಯಿತು.

ನಮ್ಮ ಬೈಲು ನಾಟಕಗಳಲ್ಲಿ ಒಂದು ಸಮಸ್ಯೆ. ಒಬ್ಬನೇ ಎರಡು ಮೂರು ಪಾತ್ರಗಳಲ್ಲಿ ಬರಬೇಕಾಗುವ ಸಂಭವದಿಂದ, ಅಂಕಕ್ಕೆ ಅಂಕಕ್ಕೆ ಮಧ್ಯದಲ್ಲಿ ಸ್ವಲ್ಪ ವಿಳಂಬ ವಿರಾಮ ಅವಶ್ಯಕ ಬೀಳುತ್ತದೆ. ಗ್ರಾಮಗಳಲ್ಲಿ ಈ ವಿರಾಮದಲ್ಲಿ ನಕಲಿಮಾಡಿ ಪ್ರೇಕ್ಷಕರನ್ನು ನಗಿಸುತ್ತಾರೆ. ನಮ್ಮ ಹಳ್ಳಿ ಜನಗಳು ನವಿರು ನಕಲಿಗೆಲ್ಲ ನಗುವುದಿಲ್ಲ. ಮಾಮೂಲು ನಕಲಿಯನ್ನು ರಾಜಜನಾನಾ ಸಮ್ಮುಖದಲ್ಲಿ ಮಾಡಲಿಕ್ಕಾದೀತೆ? ಕೊನೆಗೆ ಒಂದು ಸಣ್ಣ ಪ್ರಹಸನವನ್ನು ನಾನು ಆಗಬಹುದೆಂದು ಒಪ್ಪಿದೆ. ಅದರ ಸಾರಾಂಶವಿದು: ಕಳ್ಳಕೊರಮ ದಂಪತಿಗಳು, ಪೋಲೀಸಿನವರ ಆತಿಥ್ಯವನ್ನು ನಿರಾಕರಿಸಿ ಹೊಲಗಳಮೇಲೆ ಬಿದ್ದು ಓಡಿ, ಹಗಲೆಲ್ಲಾ ವಬ್ಬೆಗಳಲ್ಲಿ ಬಚ್ಚಿ, ರಾತ್ರಿ ಹಳ್ಳಿಗಳಿಗೆ ನುಗ್ಗಿ, ಸಾಧ್ಯವಾದರೆ ಕಳ್ಳತನದಿಂದ, ಇಲ್ಲವಾದರೆ ತಿರುಪೆಯಿಂದ,

ಕಾಲ ತಳ್ಳುತ್ತಾರೆ. ಈ ಪಲಾಯನದ ಆಯಾಸದಲ್ಲಿ, ಹಸಿವಿನ ಲಂಪಟದಲ್ಲಿ, ಅವರ ತಾಳ್ಮೆಯು ಎಲ್ಲೆ ಮೀರಿ, ನಿಷ್ಠುರವಾಗ್ವಾದಗಳು ಬೆಳೆದು, ಅವಳು ಬೈಯುವುದು, ಅವನು ಹೊಡೆಯುವುದು ಹೀಗೆ ಸಂಸಾರ ಸುಖವನ್ನನುಭವಿಸುತ್ತ, ಕೊನೆಗೆ ಒಂದು ಊರಿಗೆ ಒಬ್ಬ ಒಳ್ಳೆಯ ರೈತನ ಮನೆಗೆ ನಡುರಾತ್ರಿಯಲ್ಲಿ ಬಂದು — ಉಸ್ಸಪ್ಪ — ಅಂತ ಜಗತಿಮೇಲೆ ಕೂಡುತ್ತಾರೆ. ಆ ಮನೆಯಾಕೆ, ನಾಯಿ ಬಗುಳಿದ್ದನ್ನು ಕೇಳಿ ಎದ್ದು, ಈಚೆಗೆ ಬಂದು ಇವರನ್ನು ನೋಡಿ, ಮರುಕದಿಂದ—ಮುದ್ದೆ ಮಿಕ್ಕಿಲ್ಲ, ಪಸಿ ಹಸಿ ಹಿಟ್ಟು ಕೊಟ್ಟೇನು, ಪಸೀ ಮಜ್ಜಿಗೆಯನ್ನೂ ಬಿಟ್ಟೇನು, ಏನಾದರೂ ಮಾಡಿಕೊಳ್ಳಿ —ಎಂದು ಎರಡು ಬಗುನ ಹಿಟ್ಟನ್ನೂ, ಒಂದು ಸಣ್ಣ ಕುಡಿಕೆ ಮಜ್ಜಿಗೆಯನ್ನೂ ಕೊಡುತ್ತಾಳೆ ಕೊರವ ದಂಪತಿಗಳು ಆ ಹಿಟ್ಟನ್ನು ಮಜ್ಜಿಗೆಯಲ್ಲಿ ಕದಡಿ ಇಬ್ಬರೂ ಹಂಚಿಕೊಂಡು ಕುಡಿಯುತ್ತಾರೆ. ಹೊಟ್ಟೆ ತಣ್ಣಗಾಗಲು ಆಯಾಸದ ಕೋಪ, ಸಿಡಕು, ಬೇಸರ, ಇವುಗಳ ಶಮನವಾಗುತ್ತ ಬಂದು, ತರುಣ ಜೀವನದ ಸವಿನೆನಪುಗಳು ಮೂಡಿ, ಜಗಳ, ಜೈ, ಏಟುಗಳಿಗೆ ಪಶ್ಚಾತ್ತಾಪವೂ, ಲೋಕದಲ್ಲಿ ಮತ್ಯಾರೂ ಕೇಳುವರಿಲ್ಲದ ತಮ್ಮಿಬ್ಬರ ಪ್ರಣಯದ ಅವಶ್ಯಕತೆಯೂ, ಅವರನ್ನು ಒಬ್ಬರ ಕಡೆ ಒಬ್ಬರನ್ನು ಸೆಳೆಯುತ್ತೆ. ಸ್ವಲ್ಪ ಸ್ವಲ್ಪವಾಗಿ ಒಬ್ಬರ ಬಳಿಗೆ ಒಬ್ಬರು ಸರಿಯುತ್ತಾರೆ. ಆವಳು ಅವನ ಕಡೆ ತಿರುಗಿ—ನೀನು ಕಿಟ್ಟಸಾಮಿ ಹಂಗೆ ಇದ್ದೀ ನನ್ನ ಕಣ್ಣಿಗೆ—ಅಂತ ದೃಷ್ಟಿಪರಿಹಾರಕ್ಕೆ ನಟಿಗೆ ಮುರಿಯುತ್ತಾಳೆ. ಅವನು—ಎಲೆ, ಜಾಣೆ, ನೀನೋ ಸತ್ಯಭಾಮೆ ಎಲ್ಲಿ ಅನ್ನೋಹಂಗಿಲ್ಲ—ಎಂದು ಅವಳನ್ನು ಕಟ್ಟಿಕೊಳ್ಳುತ್ತಾನೆ. ಈ ಬಡವಾಯಿಗಳು ಜೀವನದ ಸವಿಯನ್ನು ಸೆನೆದು, ಜೀರ್ಣೋದ್ಧಾರ ಮಾಡುವುದರೊಳಗಾಗಿ ಪೋಲೀಸಿನವರು ಇವರನ್ನು ಹಿಡಿದು, ಹೊಡೆದು ಎಳದುಕೊಂಡು ಹೋಗುತ್ತಾರೆ. ಇದೇ ಕಥೆ. ಇದು ಹಳ್ಳಿಯ ಜನರನ್ನು ಬಹಳ ನಗಿಸುತ್ತೆ, ಯಾಕೋ ಕಾಣೆ. ಜೈಲು ನಾಟಕದಲ್ಲಿ ಈ ಕೊರವ ದಂಪತಿಗಳ ಜಗಳ, ಅವರ ಶೃಂಗಾರಚೇಷ್ಟೆಗಳನ್ನು ಸ್ವಲ್ಪ ಅಶ್ಲೀಲವಾಗೇನೋ ತೋರಿಸುತ್ತಾರೆ; ಆದರೆ ಅವು ಅಷ್ಟು ಪ್ರಾಧಾನ್ಯವಲ್ಲ. ನಾನು ಈ interlude (ಉಪನಾಟಕವನ್ನು) ಮೊದಲು ನೋಡಿದಾಗ— ಇದು ಸಂಸಾರದ ನಿಸ್ಸಾರತ್ವ, ಸುಖ ದುಃಖಗಳ ಅನಿತ್ಯತೆ, ಜೀವನದ ಕ್ಷಣ

ಭಂಗುರತ್ವ, ಬಡಪಾಯಿ ಮರ್ತ್ಯರ ವ್ಯಾಮೋಹ ಮತ್ತು ದುರ್ಬಲತೆ, ಇವುಗಳ ಉದಾಹರಣೆಗಾಗಿ ವೇದಾಂತ ಗ್ರಂಥದಲ್ಲಿನ ಉಪಕಥೆಯಾಗಲಿಕ್ಕೆ ಲಾಯಿಖ್ಖಾಗಿದೆ — ಎಂದುಕೊಂಡೆ.

ರಾಮಾಯಣ ನಾಟಕವನ್ನು ಆಡುವಾಗ ದಶರಥ ಮಹಾರಾಜ ಸುಗ್ರೀವನಾಗುವುದಕ್ಕೂ, ಕೌಸಲ್ಯಾದೇವಿ ಶೂರ್ಪನಖಿಯಾಗುವುದಕ್ಕೂ, ಅಯೋಧ್ಯಾನಗರ ಜನಸ್ಥಾನವಾಗುವುದಕ್ಕೂ, ಬೇಕಾಗುವ ಕಾಲದಲ್ಲಿ ಮೇಲೆ ಹೇಳಿದ ಕೊರವ ದಂಪತಿಗಳ ಅಂಕವನ್ನು ಆಡಿ, ಆದರೆ ಕೆಟ್ಟ ಬೈಗಳನ್ನೂ ಅಶ್ಲೀಲ ಲೋಲಾಪ್ತಿಯನ್ನೂ ಬಿಟ್ಟುಬಿಡಿ,' ಎಂದು ಹೇಳಿ, ಯಾವುದನ್ನು ಆಡಬಹುದು, ಯಾವುದನ್ನು ಬಿಡಬೇಕು, ಎಂಬುದನ್ನೂ ಸ್ಪಷ್ಟವಾಗಿ ನಿರೂಪಿಸಿದೆ.

ನಿರ್ದಿಷ್ಟಕಾಲದಲ್ಲಿ ನಾಟಕ ಪ್ರಾರಂಭವಾಯಿತು. ರಾತ್ರಿ ಒಂಬತ್ತು ಘಂಟೆ. ಹತ್ತಾರು ವಾಷಿಂಗ್‌ಟನ್ ಲೈಟುಗಳು ರಂಗಸ್ಥಳವನ್ನು ಜೆಳದಿಂಗಳನ್ನನುಕರಿಸುವ ಬಿಳಿ ಬೆಳಕಿನಿಂದ ತುಂಬಿದ್ದುವು. ರಾಜಬಿಡಾರದಲ್ಲಿ ಡೇರೆಗಳ ತೆರೆಯ ಹಿಂದೆ ನೋಟಕ್ಕೋಸ್ಕರ ಮಾಡಿದ್ದ ಜಾಲರಿ ಗವಾಕ್ಷಿಗಳ ಹಿಂದೆ ಮಹಾರಾಣಿಯವರು, ಅವರ ಮೊಮ್ಮಕ್ಕಳು, ಪರಿವಾರ ಸಮೇತ ಕುಳಿತು ನಾಟಕ ನೋಡಲು ಕುತೂಹಲದಿಂದ ಕಾದಿದ್ದರು. ಜನಾನ ತೆರೆಯ ಮುಂದಣ ಚೌಕದಲ್ಲಿ ಡೆಪ್ಯುಟಿ ಕಮಿಷನರ್, ಅರಮನೇ ಮತ್ತು ಡಿಸ್ಟ್ರಿಕ್ಟ್ ಅಧಿಕಾರಿಗಳೂ, ಇಂಥ ವಿಶೇಷ ಉತ್ಸವಕ್ಕೆ ಆಹ್ವಾನಿಸಲ್ಪಟ್ಟ ಗಣ್ಯ ಮಹಾಶಯರೂ, ಕೆಲವರು ಕುರ್ಚಿಗಳ ಮೇಲೆ, ಕೆಲವರು ಬೆಂಚುಗಳ ಮೇಲೆ ಕುಳಿತಿದ್ದೆವು. ಪುಟ್ಟೇಗೌಡನ ಕಂಪೆನಿಯವರು ಬೈಲು ನಾಟಕ ಪ್ರದರ್ಶಿಸಲು ಭಕ್ತಿ ವಿಶ್ವಾಸಗಳಿಂದ ಮಹಾಸನ್ನಿಧಾನದ ಅಪ್ಪಣೆಯಂತೆ ಸಿದ್ಧರಾಗಿದ್ದಾರೆ, ಆಜ್ಞಾ ಬೇಡುತ್ತಾರೆಂದು ನಾನು ಅವರನ್ನು ತೆರೆಯ ಮುಖನಾಗಿ ನಿಲ್ಲಿಸಿ ಪರಿಚಯಕೊಟ್ಟು, ಆಜ್ಞೆಪಡೆದು ನಾಟಕ ಷುರು ಮಾಡಿಸಿದೆ.

ಮಾಮೂಲಿನಂತೆ ಕತೆಯೆಲ್ಲ ಮುಂದೆ ಜರುಗಿತು, ಸೀತಾ ಕಲ್ಯಾಣ, ಕೈಕೆಯಿಯ ಆಗ್ರಹ, ಶ್ರೀರಾಮರ ವನವಾಸ, ಮೇಳ, ತಾಳ, ಕುಣಿತ, ತಮಟೆ, ಕೊಂಬು, ಇವುಗಳ ನಿನಾದದಿಂದ, ಮುಂದುವರಿದರೂ, ನಾಟಕ ಮೆಚ್ಚುಗೆ, ಅಥವ ಜಿಗುಪ್ಸೆಯ ಸುಳಿವು ಜನಾನ ತೆರೆಯೊಳಗಿನಿಂದ ಯಾವುದೂ

ಹೊರಬೀಳಲಿಲ್ಲ. ಕೋಳಿ ಕೂಗಿದಾಗಿನಿಂದ ಅದುವರೆಗೂ ವಿರಾಮವಿಲ್ಲದೆ ದುಡಿದಿದ್ದ ನನಗೆ, ಸದ್ಯ, ಇದು ಮುಗಿದರೆ ಸಾಕಪ್ಪ; ಇವರು ನೋಡಿ ಬೇಸತ್ತಿದ್ದರೆ ಸಾಕೆಂದು ಹೇಳಬಾರದೆ, ಹೋಗಿ ಮಲಗೋಣ, ಎನ್ನಿಸಿತು ಆಗ ದೃಶ್ಯ ಜನಸ್ಥಾನ, ರಾಮ ಲಕ್ಷ್ಮಣರು ಸೀತೆಯ ಸಂಗಡ ಯಕ್ಷಗಾನದಲ್ಲಿ ಮಾತನಾಡುತ್ತ ಕುಳಿತಿದ್ದಾರೆ. ಆಗ ಧಗ್ಗಂತ ಗುಗ್ಗಳದ ಕೆಂಪು ಬೆಳಕಿನಲ್ಲಿ, ಒಂದೇ ಹುರುಪಿನಲ್ಲಿ ಕಹಳ, ತಮಟೆ, ತಾಳಗಳ ರಗಳೆ ಏಳಲು, ಶೂರ್ಪನಖಿ ಭಂಗ್ ಅಂತ ಹಾರುತ್ತ, ಚೀರುತ್ತ, ಬಂದಳು. ಅವಳ ಭಯಂಕರ ದರ್ಶನದಿಂದ ಸೀತೆಗೆ ಹ್ಯಾಗಾಯಿತೋ ಗೊತ್ತಿಲ್ಲ. ನನ್ನ ಎದೆಯಂತು ಕುಸಿದು ಬಿಟ್ಟಿತು ಆ ಮಹಾರಾಯಗಿತ್ತಿಯ ಅಲಂಕಾರ ಹೀಗೆ—ಕಿವಿಗಳಿಗೆ ಮೊರಗಳು, ಬೆನ್ನಿಗೆ ರೇಷ್ಮೆಹುಳ ಸಾಕುವ ಬಿದಿರು ತಟ್ಟಿ, ಮೂಗಿಗೆ ಬೇವಿನ ಸೊಪ್ಪಿನ ಕಂತೆ, ಅವು ಎಲ್ಲದರಗಿಂತ ಅವಳ ಸ್ತನಗಳು ಆ ಕೆಲಸಕ್ಕಾಗಿ ಹೇಳಿ ಮಾಡಿಸಿದ ಎರಡು ಭಾರಿ ದಿಂಬುಗಳು. ಅವಳು ಪ್ರವೇಶಿಸಿದ ಕೂಡಲೆ ನಾಟಕಾಚಾರ್ಯ — — " ಧೈ - ಧೈ —

ಧಕ್ಕಡ ದಿಂ ತದಗಿನ ತೋಂ " —

ಅಂತ ಘರ್ಜಿಸಿ, ಹೊಡೆದ ನಗಾರಿಮೇಲೆ ಕೈಯ. ಅವಳು ಮೇಲೆ ನೆಗೆದು, ಎಡಕ್ಕೆ ಬಲಕ್ಕೆ ತಿರುಗಿ, ಕುಣಿದು, ಒಂದೊಂದು ನೆಗತಕ್ಕೂ ತನ್ನ ವಿಪುಲ ಸ್ತನಗಳು ಭೂಮ್ಯಂತರಿಕ್ಷಗಳನ್ನೂ, ದಿಕ್ಕುಗಳನ್ನೂ ಮೋಹಗೊಳಿಸುವಂತೆ ತಾಂಡವವಾಡಿಸಿದಳು

ಇದನ್ನು ನಾನು ಕನಸಿನಲ್ಲೂ ನಿರೀಕ್ಷಿಸಿರಲಿಲ್ಲ. ಇದರಿಂದ ರಾಜಾಂತಃಪುರದವರಿಗೆ ಅಸಹ್ಯವೂ ಅಸಮಾಧಾನವೂ ಆಗದೇ ಇರದೆಂದು ತೋರಿತು ನಾನು ಅದುವರಿಗೂ ಅವರಿಗೆ ಸಂತೋಷಪಡಿಸಬೇಕೆಂದು ಪಟ್ಟ ಶ್ರಮವೆಲ್ಲ ಬೂದಿಯಲ್ಲಿ ಮಾಡಿದ ಹೋಮದಂತೆ ಆಯಿತು. ಈ ಒಂದು ಬೇಕೂಫಿಯಿಂದ ನಾನು ಎಲ್ಲರ ಒಳ್ಳೇ ಅಭಿಪ್ರಾಯವನ್ನೂ ನಾಶಪಡಿಸಿಕೊಂಡೆನೆಂದು ತಿಳಿದೆ. ಈ ಆಭಾಸವನ್ನು ಕೂಡಲೆ ನಿಲ್ಲಿಸಿ, ಕ್ಷಮಾಪಣೆಯನ್ನು ಬೇಡೋಣವೆಂದು ಮೇಲಕ್ಕೆ ಎದ್ದೆ. ಡೆಪ್ಯೂಟಿ ಕಮಿಷನರು ನನ್ನ ಹಾಗೇ ಚಿಂತೆಗೆ, ನಾಚಿಕೆಗೆ, ತುತ್ತಾಗಿರಬೇಕು — ಅವರು ನನ್ನ ಕಡೆಗೂ ನೋಡಲೇವಲ್ಲದೆ ಹೋದರು. ಈ ಸಂಕಟದ ಸ್ಥಿತಿಯಿಂದ ಅಕಸ್ಮಾ

ತ್ತಾಗಿ ದೇವರ ಕೃಪೆಯೇ ನಮ್ಮನ್ನು ರಕ್ಷಿಸಿತು. ಜನಾನ ತೆರೆಯೊಳಗಿನಿಂದ ಸಂತೋಷಭರಿತ ನಗುವು ತರಂಗತರಂಗಗಳಾಗಿ ಹೊರಮೂಡಿತು. ದರಬಾರು ಬಕ್ಷಿಯವರು ಒಳಗಿನ ಹಿಷಾರದಂತೆ ಹೋದವರು ಈಚೆಗೆ ಬಂದು "ನರ್ತನ ಇನ್ನೂ ಐದು ನಿಮಿಷ ನಡೆಯಲಿ, ಬಹಳಚನ್ನಾಗಿದೆ" — ಎಂದು ಆಜ್ಞೆ ತಂದರು. ಸರಿ, ನಾಟಕದವರ ಸಂಭ್ರಮ ಇನ್ನು ಕೇಳಬೇಕೆ? ನಡುರಾತ್ರಿಯವರಿಗೂ ಆಟ ಬಹು ವಿಜೃಂಭಣೆಯಿಂದ ಮುಂದುವರೆಯಿತು. ಆಮೇಲೆ ದರಬಾರು ಬಕ್ಷಿಯವರು ಸನ್ನಿಧಾನದಿಂದ ವೀಳಯವನ್ನೂ, ನಗದು ಬಹುಮಾನವನ್ನೂ ಪುಟ್ಟೀಗೌಡನ ಕಂಪೆನಿಯವರಿಗೆ ತಂದುಕೊಟ್ಟರು.

ನಾವು ಬಿಡಾರದಿಂದ ಈಚೆಗೆ ಬರುತ್ತಾ ಡೆಪ್ಯೂಟಿ ಕಮಿಷನರು— ಇದನ್ನು ನೀವು ಬೇಕೂ ಅಂತ ಏರ್ಪಾಡು ಮಾಡಿದಿರೇನರಿ ?— ಎಂದದ್ದಕ್ಕೆ — ಉಂಟೆ ಸ್ವಾಮಿ, ನನಗೂ ಸಿಡಿಲು ಬಡಿದಂತೆ ಆಯಿತು ಆ ಶೂರ್ಪಣಖಿ ದರ್ಶನ—ಎಂದೆ. "ನೀವು ಅದೃಷ್ಟವಂತರು, ಕಾಣಿರಿ" ಅಂದರು.

ಮಹಾರಾಣಿಯವರು ತಲಕಾಡು ಪ್ರದೇಶದ ಕ್ಷೇತ್ರಗಳ ಯಾತ್ರೆ, ದೇವರ ಸೇವೆಗಳನ್ನು ಪೂರೈಸಿಕೊಂಡು ಮೈಸೂರಿಗೆ ವಾಪಸು ಹೊರಡುವ ಮುನ್ನ ನನ್ನನ್ನು ಕರೆಸಿಕೊಂಡು—ನೀವು ಬಹಳ ದಣಿದಿರಬೇಕು, ನಾವು ಸಂತೋಷವಾಗಿರಬೇಕೆಂದು ; ಈ ನಾಲ್ಕು ದಿನ ಆನಂದದಿಂದ ಕಳೆದೆವು. ಈ ಸ್ಥಳವನ್ನು ಬಿಟ್ಟುಹೋಗಬೇಕಲ್ಲ ಅಂತ ಹೊರಡುತ್ತೇವೆ—ಎಂದು ಬಹಳ ಪ್ರಸನ್ನ ಧ್ವನಿಯಿಂದ ಹೇಳಿ, ನನಗೆ ತಾಂಬೂಲ ಕೊಟ್ಟರು. ನಾನು ಏನೋ ಹೇಳೋದಕ್ಕೆ ಯತ್ನಿಸಿದೆ. ಮಾತು ಬರಲಿಲ್ಲ ; ತಲೆಬಾಗಿ ಕೈ ಜೋಡಿಸಿಕೊಂಡು — ತಮ್ಮ ಸಂತೋಷ ನನಗೆ ಮಹಾಪ್ರಸಾದ. ನಾನೇ ಧನ್ಯ. ಸೇವೆಗೆ ಶಕ್ತಿ ಸಾಲದು, ಆದರೆ ಭಕ್ತಿ ಏನೋ ಅಪಾರ — ಎಂದೆ. ಸವಾರಿ ಹೊರಟುಹೋಯಿತು.

ನಮ್ಮ ಡೆಪ್ಯೂಟಿ ಕಮಿಷನರು ನನಗೆ — ಭಲೆ, ಫಸ್ಟ್‌ಕ್ಲಾಸಿನಲ್ಲಿ ಪ್ಯಾಸ್ ಮಾಡಿದಿರಿ—ಎಂದು ಭುಜದಮೇಲೆ ತಟ್ಟಿ ತಮ್ಮ ಕಾರನ್ನು ಹತ್ತಿ ಹೊರಟರು. ಅರಮನೆ ಅಧಿಕಾರಿಗಳೂ ನನಗೆ ಹೇಳಿದ ಅಭಿನಂದನೆಗಳು ಕನಸಿನ ಸಂಗೀತದಂತೆ ಒಂದು ಕಿವಿಯಲ್ಲಿ ತೂರಿ ಇನ್ನೊಂದು ಕಿವಿಯಲ್ಲಿ ಹಾರಿಹೋದುವು. ನಂತರ—ಹುಸ್ಸಪ್ಪ, ಗೆದ್ದೆ—ಅಂದುಕೊಂಡು ನನ್ನ

ಡೇರೆಗೆ ಬಂದು, ಆರಾಮ ಖುರ್ಚಿಮೇಲೆ ಕುಳಿತು ಒಂದು ಸಿಗರೆಟ್ಟನ್ನು ಸೇದಿದೆ.

ಈ ಘಟನೆಯಾದ ಕೆಲ ದಿನಗಳಲ್ಲೇ ನನ್ನನ್ನು ಪಾವಗಡ ತಾಲ್ಲೂಕಿಗೆ ವರ್ಗಮಾಡಿ ಸರಕಾರದಿಂದ ಆರ್ಡರು ಬಂತು. ಪಾವಗಡ ಒಂದು ಮೂಲೆ ತಾಲ್ಲೂಕು. ನಮ್ಮ ಡೆಪ್ಯೂಟಿ ಕಮಿಷನರು ಕೂಡಲೆ ಈ ವರ್ಗವನ್ನು ರದ್ದುಮಾಡಬೇಕು; ಈ ತಾಲ್ಲೂಕಿನಲ್ಲಿ ಈ ಅಮಲ್ದಾರರು ಮಾಡಲು ಉಳಿದಿರುವ, ಅರ್ಧ ಮಾಡಿರುವ, ಕೆಲಸಗಳು ಬಹಳವಿವೆ. ಅಲ್ಲದೆ ಅವರು ಮಹಾರಾಣಿಯವರ ಪ್ರವಾಸ ಸಂಬಂಧದಲ್ಲಿ ಮಾಡಿದ್ದ ಉತ್ಕೃಷ್ಟವಾದ ಏರ್ಪಾಡಿಗೆ ಮಹಾರಾಣಿಯವರು ಸಂತೋಷಪಟ್ಟರು. ಈ ವರ್ಗ ಅದಕ್ಕೆ ಶಿಕ್ಷೆಯೋ?—ಹೀಗೆಂದು ಬಹಳ ಬಲವಾಗಿಬರದರಂತೆ. ಅವರೇ ನನಗೆ ಹೇಳಿದರು. ನರಸಿಪುರದಿಂದ ನನ್ನನ್ನು ಪ್ರೊಮೋಷನ್‌ಮೇಲೆ ವಿನಾ ಕಳಿಸುವುದಿಲ್ಲವೆಂದು ಹೇಳಿದರು. ಪಾವಗಡದ ವರ್ಗ ರದ್ದಾಯಿತು. ಆ ತಾಲ್ಲೂಕಿನಲ್ಲಿ ದುರ್ಭಿಕ್ಷದ ಸಂಭವ ಮತ್ತು ಪುಂಡಾಟದ ಉದ್ಗಮ ಇದ್ದದ್ದರಿಂದ ಶಕ್ತನಾದ ಅಮಲ್ದಾರನೆಂದು ನನ್ನನ್ನು ಅಲ್ಲಿಗೆ ಹಾಕಿದ್ದೇ ಸಿವಾಯಿ, ಅಸಂತುಷ್ಟಿಗಾಗಿ ಅಲ್ಲವೆಂದು ರೆವಿನ್ಯೂ ಕಮಿಷನರು ಡೆಪ್ಯೂಟಿ ಕಮಿಷನರಿಗೆ ಹೇಳಿದರಂತೆ. ನಾನು ತಿಳಿದುಕೊಂಡದ್ದು—ನಾನು ಅರಮನೆಯವರ ಅನುಗ್ರಹ ಸಂಪಾದಿಸಿ ಅವರ ಶಿಫಾರ್ಸು ತರುವ ಯತ್ನದಲ್ಲಿದ್ದೇನೆ; ಆ ಸ್ಥಳ ತಪ್ಪಿಸುವುದೇ ಅದಕ್ಕೆ ತೋಡು, ಎಂದು ನನ್ನಲ್ಲಿ ಅಸಮಾಧಾನವುಳ್ಳ ದೊಡ್ಡವರು ಮಾಡಿದ ಉಪಾಯ—ಎಂದು. ನನ್ನ ಊಹೆ ನ್ಯಾಯವಾದದ್ದೆಂದು ನನಗೆ ಈಗಲೂ ನಂಬಿಕೆ.

ಮೇಲೆ ಹೇಳಿರುವ ಘಟನೆಗಳು ನಡೆದ ಕೆಲವು ತಿಂಗಳುಗಳಲ್ಲೇ ಶ್ರೀ ವಿ. ಪಿ. ಮಾಧವರಾಯರ ದಿವಾನಗಿರಿಯ ಅವಧಿ ತೀರಿ, ಶ್ರೀ ಟಿ. ಆನಂದರಾಯರು ದಿವಾನಗಿರಿಗೆ ಬಂದರು. ಈ ಕೆಲವು ತಿಂಗಳುಗಳಲ್ಲಿ ಬಹು ವರ್ಷಗಳಿಂದ ಬಾಕೀಲಿದ್ದ ಕಾವೇರಿ ಕಪಿಲೇ ತೀರಗಳ ಜಮೀನುಗಳ alluvion (ಗೋಡು ಸೇರಿ ಜಮೀನು ಹೆಚ್ಚಾಗುವುದು) soil erosion (ನೀರಿನ ಹೊಡೆತದಿಂದ ಕೊಚ್ಚಿ ಹೋಗಿ ಜಮೀನು ಕಿರಿದಾಗುವುದು) ಕಾರಣಗಳಿಂದ ಹಿಡುವಳಿಗಳ ಕಮ್ಮಿ ಜಾಸ್ತಿ, ಖೇತವಾರು ತಿದ್ದುಪಡಿ, ಜಮಾಬಂದಿಗೆ

ಏರಿರತಕ್ಕ ಬಾಕಿಯ ರಿವಿಷನ್ (ಲೆಖ್ಖದಿಂದ ವಜಾ ಮಾಡುವುದು), ಬಡ್ತಿಯಾದ ಜಮೀನುಗಳಿಗೆ ಕಂದಾಯ ಠರಾಯಿಸುವುದು, ಈ ಕೆಲಸಗಳನ್ನು, ಬಹಳ ಶ್ರಮಪಟ್ಟು, ನೂರಾರು ಸರ್ವೆ ನಂಬರುಗಳನ್ನು ಖುದ್ದು ಅಳತೆ ಮಾಡಿಸಿ, ನಿರ್ವಿವಾದ ವ್ಯವಸ್ಥೆಗೆ ತಂದೆ. ಈ ಕೆಲಸ ಪೂರೈಸಿತೋ ಇಲ್ಲವೋ, ನನಗೆ ಬೆಂಗಳೂರಿಗೆ ಸೆಕ್ರೆಟೇರಿಯಟ್ ರಿಜಿಸ್ಟ್ರಾರ್ ಹುದ್ದೆಗೆ ಪ್ರೊಮೋಷನ್ ಮೇಲೆ ವರ್ಗವಾಯಿತು. ಅಲ್ಲಿಗೆ ನನ್ನ ಮಾಮಲೇ ಸರ್ವೀಸೂ ಮುಗಿಯಿತು. ಈ ನೆನಪುಗಳೂ ಸದ್ಯಕ್ಕೆ ಮುಗಿಯಲಿ ಇನ್ನು ಕೆಲವು ನನಗೆ ಈ ಹಿನ್ನೋಟದಲ್ಲಿ ತೋರಿಬರುವ ತಾರ್ಕಣೆಗಳನ್ನು ಮಾತ್ರ ಹೇಳುತ್ತೇನೆ

## ೪೧

ಮೈಸೂರಿನವರಾದ ಹುದ್ದೇದಾರರಿಗೆ ಆ ಕಾಲದ ವಾತಾವರಣದಲ್ಲಿ ಒಂದು ದೊಡ್ಡ ಬಾಧೆ ಇತ್ತು. ಶೇಷಾದ್ರಿ ಅಯ್ಯರ್‌ರವರ ದಿವಾನಗಿರಿಯಲ್ಲಿ ಮದರಾಸು ಪ್ರಾಂತ್ಯದ ಎಲ್ಲಾ ಕಡೆಯಿಂದಲೂ ತಮಿಳು ಮಾತನಾಡುವ ಜನಗಳು, ಜಯಿಸಿದ ರಾಜ್ಯಗಳನ್ನು ಪರದಂಡು ನುಗ್ಗುವಂತೆ ಹೊಕ್ಕು, ದೊಡ್ಡವರ ಪೋಷ್ಯವರ್ಗಕ್ಕೆ ದಾಖಲಾಗಿ, ಅವರ ದಯೆಯಿಂದ ನೌಕರಿಯ ಎಲ್ಲಾ ಅಂತಸ್ತುಗಳಲ್ಲೂ ವ್ಯಾಪಿಸಿ ಬೇರೂರಿದರು ಇವರ ಜನ್ಮಭೂಮಿಯಲ್ಲಿ ಪಾಂಡ್ಯಚೋಳ ರಾಜರುಗಳ ನಂತರ ಪರದೇಶೀಯರೇ ಆಳುತ್ತಿದ್ದರಾದ್ದರಿಂದ, ಇವರುಗಳಿಗೆ ವಿದೇಶ ಅಧಿಕಾರಿಗಳು ತಮ್ಮ ಆಡಳಿತಕ್ಕೆ ಸಿಕ್ಕುಬಿದ್ದ ಸ್ಥಳೀಯರನ್ನು ಎಷ್ಟು ಹೀನಾಯವಾಗಿ ಕಾಣುತ್ತಿದ್ದರೆಂಬುದು ಚನ್ನಾಗಿ ಅನುಭವವಿತ್ತು. ಫರಂಗಿ ಕಲೆಕ್ಟರು ತನ್ನ ಎಲ್ಲೆಯಲ್ಲಿ ದೇವರು. ಅವನನ್ನು ಪೂಜೆ ಮಾಡುವ ಬಟ್ಲರು ವಗೈರೆ ಪರಿಜನದಲ್ಲಿ ಅವನು ಪ್ರಸನ್ನ, ಭಕ್ತರ ಅಭೀಷ್ಟವನ್ನು ಕೊಡುವ, ಮಣಿಯದರಿಗೆ ಭಯಂಕರ. ನಮ್ಮ ಮದ್ರಾಸಿನವರಿಗೆ ಮೈಸೂರಿನಲ್ಲಿ ಅಧಿಕಾರ ಸ್ಥಾನಗಳು ಸಿಕ್ಕಿದವೋ ಇಲ್ಲವೋ, ಅವರೂ ಫರಂಗಿ ಕಲೆಕ್ಟರುಗಳಲ್ಲಿ ತಾವು ನೋಡಿದ ದರ್ಪವನ್ನು ವಿಡಂಬಿಸಿ, ಅವರಿಂದ ತಾವು ಅನುಭವಿಸಿದ ತಿರಸ್ಕಾರವನ್ನು ಮೈಸೂರಿನವರಿಗೆ ತೋರಿಸಲು ಯತ್ನ ಮಾಡಿದರು. ಫರಂಗಿಯವರಲ್ಲಿ ಕನಿಷ್ಠನೂ ಕರಿಜನರೆಲ್ಲರಗಿಂತ

ಶ್ರೇಷ್ಠ. ಹಾಗೇ ಮದರಾಸಿನ ಗುಂಪಿನ ಪ್ರತಿಯೊಬ್ಬನೂ ಮೈಸೂರಿನವರಿಗಿಂತಲೂ ಬುದ್ಧಿವಂತ, ಶಕ್ತ; ಫರಂಗಿಯುವರಲ್ಲಿ ಹ್ಯಾಗೆ ಒಗ್ಗಟ್ಟು ಪಕ್ಷಪಾತಗಳಿದ್ದವೋ, ಮೈಸೂರಿನಲ್ಲಿ ನೆಲೆಗೊಂಡ ಮದರಾಸಿನವರಲ್ಲೂ ಹಾಗೇ ಇದ್ದುವು. ಶೇಷಾದ್ರಿ ಅಯ್ಯರ ಕಾಲದಲ್ಲಿ ಈ ತರಹದ ಪೀಡನೆ ಬಹಳವಿತ್ತೆಂದು ನಾನು ಕೇಳಿದ್ದೆ. ಅವರ ಪರಿಚಾರಕರು, ಅಡಿಗೆಯವರು, ಅವರ ಯೋಗ್ಯತೆಗೆ ಮೀರಿದ ಅಧಿಕಾರಗಳಿಗೆ ಏರಿದವರು, ನಾನು ಸರ್ವಿಸ್ಸಿಗೆ ಸೇರಿದಾಗಲೂ ಕೆಲವರಿದ್ದರು ಸರ್ಕಾರದ ಕೆಲಸ ಸಿಕ್ಕಬೇಕಾದರೆ ಮದರಾಸಿನವನಾಗಿರಬೇಕು, ಅಥವಾ ಮದರಾಸಿನವರ ಅನುಗ್ರಹವಿರುವವನಿರಬೇಕು. ನನಗೆ ತಿಳಿದ ಹಾಗೇ, ನಮ್ಮ ಕರ್ಣಾಟಕ ಶ್ರೀಕಂಠರೂ ತಮಿಳು ಶ್ರೀಕಂಠಯ್ಯರಾಗಿ ಕೆಲಸ ಸಂಪಾದಿಸಿದ. ದಿವಾನರು ಸರ್ಕೀಟು ಹೊರಟರೆ ಅವರ ಪರಿವಾರ ದೇವತೆಗಳು ಸ್ಥಳಾಧಿಕಾರಿಗಳನ್ನು ಕಸದಂತೆ ನೋಡುತ್ತಿದ್ದರಂತೆ. ಈ ಹಾವಳಿ ಕೃಷ್ಣಮೂರ್ತಿಯವರು ದಿವಾನಗಿರಿಗೆ ಬಂದ ಮೇಲೆ ಬಹಳ ಮಟ್ಟಿಗೆ ನಿಂತಿದ್ದದ್ದು, ಅವರು ನಿವೃತ್ತರಾಗಿ ವಿ. ಪಿ. ಮಾಧವರಾಯರು ಅವರ ಪದವಿಗೆ ಬಂದ ಮೇಲೆ ಎರಡರಷ್ಟು ಜೋರಾಯಿತು. ಆ ಪ್ರಧಾನಿಗಳು ಅಧಿಕಾರಕ್ಕೆ ಬರುವಾಗಲೇ ಪಲಾನೆಯವರು ಕೃಷ್ಣಮೂರ್ತಿಗಳ ಕಡೆಯ ಮೈಸೂರಿವರು, ಪಲಾನೆಯವರು ನಮ್ಮ ಕಡೆಯವರು, ಅವರು ನನ್ನ ಅಹಿತರು, ಇವರು ನನ್ನ ಹಿತವರು, ಅವರನ್ನು ದಬಾಯಿಸಬೇಕು, ಇವರನ್ನಭಿವೃದ್ಧಿಗೆ ತರಬೇಕು, ಎಂದು ಸಂಕಲ್ಪ ಮಾಡಿಕೊಂಡಿದ್ದರೆಂದು ನನ್ನಭಾವನೆ. ಸೆಕ್ರೆಟೇರಿಯಟ್ ಮುಖ್ಯಸ್ಥಳಗಳಲ್ಲಿ ಮದರಾಸಿನವರೇ ಇದ್ದರು. ಅವರ ಮತ—ಮದರಾಸಿನವನೆಂದರೆ ಜಾಣ, ಮೈಸೂರಿನವನೆಂದರೆ ದಪ್ಪ ಬುದ್ಧಿಯವನು. ನಾನೇ ಕೇಳಿದ್ದೇನೆ, ಒಬ್ಬರು ಅರ್ಧ ಹಾಸ್ಯವಾಗಿ ಹೇಳಿದ್ದನ್ನ—ಮೈಸೂರಿನವರ ಆಹಾರ ಕಳಿಮುದ್ದೆ, ಅವರ ಬ್ರೇನ್ (ಮೇಧಸ್ಸು) ಅದೇ —ಅಂತ. ನಾನು ಅವರಿಗೆ ಹಾಗೇ ಹಾಸ್ಯದಲ್ಲಿ ಹೇಳಿದೆ— ಕಳೀಮುದ್ದೆಯ ಪರಿಣಾಮ ಬ್ರೇನ್‌ನಲ್ಲಿ ನಿಮಗೆ ಸಿಕ್ಕುವುದಿಲ್ಲ. ಪುರೀಷದಲ್ಲಿ ಹುಡುಕಿ —ಅಂತ. ಮಾಧವರಾಯರಿಗೂ ನನಗೂ ನಡೆದ ಸಂವಾದಗಳನ್ನು ಹಿಂದೆಯೇ ವಿವರಿಸಿದ್ದೇನೆ. ಅವರು ದಿವಾನರಾಗಿರುವವರಿಗೂ ನನ್ನ ವಿಚಾರದಲ್ಲಿ ಎಷ್ಟು ಶಿಪಾರ್ಸು ಬಂದರೂ, ಎಷ್ಟು ಒಳ್ಳೇ ವರದಿಗಳು ಬಂದರೂ, ಅವರ ಕಟಾಕ್ಷ

ನನ್ನ ಮೇಲೆ ಬೀಳಲಿಲ್ಲ. ಶ್ರೀಮನ್ ಮಹಾರಾಣಿಯವರು ತಿರುಮಕೂಡ್ಲು ನರಸೀಪುರಕ್ಕೆ ಬಂದು ಮೊಕ್ಕಾಂ ಮಾಡಿದ ಮೇಲೆ ನನ್ನನ್ನು ಪಾವಗಡಕ್ಕೆ ವರ್ಗ ಮಾಡಿದ ಕತೆಯನ್ನು ಆಗಲೇ ಹೇಳಿದ್ದೇನೆ. ನನ್ನ ಡೆಪ್ಯೂಟಿ ಕಮಿಷನ್ನರವರು ನಮ್ಮನ್ನಾಳುತ್ತಿದ್ದ ಮಹಾಸ್ವಾಮಿಗಳ ಮಾವಂದಿರಾಗಿರದಿದ್ದರೆ, ಅವರು ನನ್ನ ಪಕ್ಷ ವಹಿಸದಿದ್ದರೆ, ನನಗೆ ಬಹಳ ತೊಂದರೆಯಾಗುತ್ತಿತ್ತೆಂದು ನನ್ನ ನಂಬಿಕೆ.

ವಿ. ಪಿ. ಮಾಧವರಾಯರ ದಿವಾನಗಿರಿ ಮುಗಿಯಿತು, ಟಿ. ಆನಂದ ರಾಯರು ಬಂದರು. ಸ್ವಲ್ಪ ದಿನದಲ್ಲೇ ನನ್ನನ್ನು ಸೆಕ್ರೆಟೇರಿಯಟ್ಟಿಗೆ ಕರೆಯಿಸಿ ಕೊಂಡು, ನಂತರ ಅಸಿಸ್ಟೆಂಟು ಕಮಿಷನ್ನರಾಗಿ ಶಿವಮೊಗ್ಗಗೆ ಕಳುಹಿಸಿದರು. ನಾನು ಅಮಲ್ದಾರನಾಗಿದ್ದಾಗ ಒಂದೆರಡು ಸಲ ಆನಂದರಾಯರು ನನ್ನ ತಾಲ್ಲೂಕಿಗೆ ದಯಮಾಡಿಸಿ ನನ್ನನ್ನೂ ನನ್ನ ಕೆಲಸವನ್ನೂ ನೋಡಿದ್ದರು. ನಾನು ಶಿವಮೊಗ್ಗದಲ್ಲಿ ಸಬ್ ಡಿವಿಜನ್ ಆಫೀಸರಾಗಿದ್ದಾಗ, ಅವರು ಏನೋ ಮಾತಿನ ಮೇಲೆ, ನಸುನಕ್ಕು (ಅವರು ಮಾತನಾಡುವುದು ಅಪರೂಪ, ನಸು ನಗುವುದು ಇನ್ನೂ ಅಪರೂಪ) ಹೇಳಿದರು — ನೀವು ದಡ್ಡರೆಂದು ಇದು ವರೆಗೆ ಯಾರೂ ಹೇಳಲಿಲ್ಲ, ನಿಮ್ಮ ರಿಪಾರ್ಟೆ (ವಿನಯವಿಲ್ಲದ ಮಾರ್ಸ್ಗಡಿ ?) ನಿಮ್ಮ ಶತ್ರು — ಎಂದರು. ಮದರಾಸಿನವರು ನನಗೆ ಆ ಬಿರುದನ್ನು ದಯ ಪಾಲಿಸಿದ್ದರೆಂದು ನನಗೆ ಗೊತ್ತಿತ್ತು.

ನಾನು ನನ್ನ ಸರ್ವೀಸಿನಲ್ಲಿ ಬಹುಶಃ ಎಲ್ಲ ಮದರಾಸಿ ಆಫೀಸರುಗಳ ಸಂಗಡಲೂ ಕೆಲಸ ಮಾಡಿದ್ದೇನೆ. ವಿ. ಪಿ. ಮಾಧವರಾಯರ ಕಾಲದ ನಂತರ ಮದರಾಸಿನವರಿಗೂ ನಮಗೂ ಇದ್ದ ಸವತ್ನಭಾವ ಬಹಳ ಮಟ್ಟಿಗೆ ಹೋಯಿತು. ಅವರಲ್ಲಿ ಅನೇಕರು ಮೈಸೂರಿನಲ್ಲೇ ಬೇರೂರಿ, ಆಸ್ತಿಪಾಸ್ತಿ ಮಾಡಿಕೊಂಡು ಸ್ಥಳವಂದಿಗರಾಗಿದ್ದರು. ಕೆಲವರು ಈ ಕಳಿಮುದ್ದೆ ಸೀಮೆ ಯಲ್ಲೇ ಹುಟ್ಟಿದವರು ಆಗಿದ್ದರು. ಹಿಂದಿದ್ದ ಮದರಾಸಿ ಆಫೀಸರುಗಳ ಕೈ ಗೆಲಸದ ರಿಕಾರ್ಡುಗಳನ್ನೂ ನಾನು ಸೆಕ್ರೆಟರಿಯಾಗಿದ್ದಾಗ ನೋಡಲು ಅವ ಕಾಶವಾಯಿತು. ಒಟ್ಟಿನಮೇಲೆ ಅವರು ನಮಗಿಂತ ಬುದ್ಧಿವಂತರೇನು ಅಲ್ಲ. ಅವರ ಬೆನ್ನುಮೂಳೆ ನಮ್ಮದರಷ್ಟು ಪೆಡಸಲ್ಲ. ಬೃಹದಾಶ್ರಯ, ಮೇಲ್ಪಟ್ಟವರ ಮರ್ಜಿ ಅನುಸರಿಸುವುದು, ತಾವು ಮಾಡಿದ ಕೆಲಸವನ್ನು

ಸುಂದರವಾಗಿ ಪ್ರದರ್ಶಿಸುವುದು — ಇವುಗಳಲ್ಲಿ ನಮಗಿಂತಲೂ ನಿಪುಣರು. ಅವರಲ್ಲಿ ಐಕಮತ್ಯ ಉಂಟು. ಆ ಗುಂಪಿನಲ್ಲಿ ಶಕ್ತರೆಂದರೆ ಶೇಷಾದ್ರಿ ಅಯ್ಯರವರು, ನಮ್ಮ ಗುಂಪಿನಲ್ಲೂ ಎಂ. ಎರ್. ಕೃಷ್ಣರಾಯರು, ವಿಶ್ವೇಶ್ವರಯ್ಯನವರು, ನಂಜುಂಡಯ್ಯನವರು ಶಕ್ತಿಯಲ್ಲಿ ಏನೂ ಕಮ್ಮಿಯಾದವರಲ್ಲ

ಶೇಷಾದ್ರಿ ಅಯ್ಯರವರಿಗೆ ಇದ್ದ ಅವಕಾಶವಿದ್ದವರು ಮಿರ್ಜಾ ಇಸ್ಮಾಇಲ್ಲರು ಒಬ್ಬರೇ — ಸಾಧಿಸಿದ ಕಾರ್ಯಗಳ ಬಾಹುಳ್ಯದಲ್ಲಿ ಇವರು ಅವರಿಗೇನೂ ಕಡಿಮೆಯಾಗಿರಲಿಲ್ಲ.

ಮೇಲಿನ ಅಧಿಕಾರಿಗಳ ಅನುಗ್ರಹದ ಕೊಬ್ಬಿನ ಜನದ ಫಾಜೀಲತನದ ನೆನಪು ಬರುತ್ತೆ. ನನಗೆ ಅನುಭವಕ್ಕೆ ತಂದವರು ಆರೋಗ್ಯ ಇಲಾಖೆಯಲ್ಲಿ ಕೆಲಸಮಾಡುತ್ತಿದ್ದ ಒಬ್ಬ ಅಯ್ಯರ್ ಹಾಸ್ಪಿಟಲ್ ಅಸಿಸ್ಟೆಂಟರು. ಅವರು ಹಿಂದಿನ ದಿವಾನರೊಬ್ಬರ ಪರಿವಾರದ ಗುಂಪಿನವರು, ಈಗಿನ ದಿವಾನರ ಅಭಿಮಾನಕ್ಕೂ ಪಾತ್ರರೆಂದು ಅವರೇ ಪ್ರತಿಯೊಬ್ಬರಿಗೂ ತನಿತನಿಯಾಗಿ ರಹಸ್ಯವಾಗಿ ಹೇಳುತ್ತಿದ್ದರು. ಅವರು ನರಸಿಪುರಕ್ಕೆ ಬಂದು ಟ್ರಾವೆಲ್ಲರ್ಸ್ ಬಂಗಲೆಯಲ್ಲಿ ಇಳಿದು, "ನಾನು ಈಗ ತಾನೆ ತಲಪಿದ್ದೇನೆ ಇಲ್ಲಿನ ಪ್ರೋಗ್ರಾಂ ನಿರ್ಣಯಿಸಲು ತಮ್ಮ ನಂಗಡ ಮಾತನಾಡಬೇಕು. ಪುರುಸತ್ತು ಮಾಡಿಕೊಂಡು ದಯವಿಟ್ಟು ಬನ್ನಿ" ಎಂದು ಬರೆದು ನನಗೊಂದು ಚೀಟಿಯನ್ನು ಕಳುಹಿದರು ನಾನು — ಸರಿ, ಅವರಿಗೆ ಹೇಳು, ಜರೂರು ಕೆಲಸವಿದ್ದರೆ ಈಗಲೇ ಬರಲಿ, ಹನ್ನೆರಡು ಘಂಟೆಯ ಮೇಲಾದರೆ ಕಛೇರಿಗೆ ಬರಲಿ — ಎಂದು ಚೀಟಿಯನ್ನು ತಂದವನಿಗೆ ಹೇಳಿದೆ. ಸುಮಾರು ಅರ್ಧ ಘಂಟೆಯಾದಮೇಲೆ ಯಾರೋ ಬಾಗಿಲಿನ ಕಾವಲ ಆಳಿನ ಸಂಗಡ ಜೋರಾಗಿ ರೇಗುತ್ತಿದ್ದರು

"ಕೂಗಬೇಡಿ ಬುದ್ದಿ ತಾವು ಯಾರೋ ಹೇಳಿದರೆ ಯಜಮಾನರಿಗೆ ತಿಳಿಸಿ, ಒಳಕ್ಕೆ ಬಿಡ್ತೀನಿ, ಕೆಲಸದಲ್ಲವರೆ" ಎಂದು ದಫೇದಾರ ಯಾರಿಗೋ ಹೇಳುತ್ತಿದ್ದ.

"ನಾನ್ಯಾರು ಗೊತ್ತಿಲ್ಲವೇನೋ? ಜನಗಳ ಯೋಗ್ಯತೆ ನೋಡದ ಬೇಕೂಫ ನೀನು —" ಎಂದು ಗಟ್ಟಿಯಾಗಿ ತಮಿಳು ರಾಗದ ಕನ್ನಡದಲ್ಲಿ

ನಾನು ಒಳಗಿನಿಂದ —

"ಬರಲಿ, ಬಿಡೋ. ಬನ್ನಿ, ಸರ್" ಎಂದೆ. ರೇಗಿದ ಪುಕ್ಕಗಳನ್ನು ಕೆದರಿಕೊಂಡು ಬರುವ ಕೋಳಿಯ ದರ್ಪ ದಿಂದ ಒಂದು ಗಾತ್ರದಲ್ಲಿ ಕಿರಿದಾದ ವ್ಯಕ್ತಿ ಪ್ರವೇಶಿಸಿತು. ಅವರಿಗೆ ಆಸನವನ್ನು ತೋರಿಸಿ—ಕೂಡಿ. ಏನಾಗ ಬೇಕು?—ಎಂದೆ ಅವರು ಫರಂಗಿ ವಿಡಂಬನದ ಇಂಗ್ಲಿಷಿನಲ್ಲಿ—

"ನಿಮ್ಮ T. B. (ಟ್ರಾವಲ್ಲರ್ಸ್ ಬಂಗಲೆ) ಏರ್ಪಾಡು ಸ್ವಲ್ಪವೂ ಚನ್ನಾಗಿಲ್ಲ. ಅದು ನಿಮ್ಮ ತಾಲ್ಲೂಕಿಗೆ ಒಳ್ಳೇ ಹೆಸರು ತರುವಂತಿಲ್ಲ. ನಾನು ಬಂದು ಎರಡು ಘಂಟೆ ಟೈಂ ಆದರೂ ಹೇಳುವರು ಕೇಳುವರಿಲ್ಲ."

"ಹೋಗಲಿ ಬಿಡಿ. ಈಗ ನಿಮಗೆ ಏನಾಗಬೇಕು?"

ತಿರುಗ "ಇದು ನಿಮ್ಮ ತಾಲ್ಲೂಕಿನ ಮರ್ಯಾದೆಗೆ ತಕ್ಕುದಲ್ಲ" ಅಂದರು.

ನಾನು ಸ್ವಲ್ಪ ಕಟುವಾಗಿ

"ನನ್ನ ತಾಲ್ಲೂಕಿನ ಮಾರ್ರ್ಯಾದೆ ಗೋಜು ನಿಮಗ್ಯಾಕೆ? ನಿಮಗೆ ಏನಾಗಬೇಕು, ಹೇಳಿ?" ಎಂದೆ.

"ಮೊದಲು, ಸಪ್ಲೈಸು ಬೇಕು. ಆಮೇಲೆ, ಈ ಸುತ್ತುಮುತ್ತು ಗ್ರಾಮಗಳ ಆರೋಗ್ಯ ಸ್ಥಿತಿಯನ್ನು ನಾನು ಅಜಮಾಯಿಷಿ ಮಾಡಿ ರಿಪೋರ್ಟು ಮಾಡಬೇಕಾಗಿದೆ. ಅದಕ್ಕೆ ಏರ್ಪಾಡುಬೇಕು"

"ಸರಿ. ಯಾರೋ ಅಲ್ಲಿ? ಕಸಬಾ ಶೇಕದಾರರನ್ನು ಕರೆಯೋ! ಸ್ವಲ್ಪ ಕೂಡಿ; ಎಲ್ಲ ಮಾಡಿಕೊಡುತ್ತೇನೆ."

ಶೇಕದಾರ್ರು ಬಂದರು.

"ನೋಡಿ ಶೇಕದಾರ್ರೆ, ನೀವು ಈ ಸಾಹೇಬರಿಗೆ ಅವರು ಕೇಳುವ ಸಾಮಾನನ್ನು ಬಂಗಲೆಗೆ ಸಪ್ಲೈ ಮಾಡಿ—ನಗದಿಗೆ, ಗೊತ್ತೆ? ಆಮೇಲೆ ಅವರು ಎಲ್ಲಿಗೆ ಅಜಮಾಯಿಷಿಗೆ ಹೋಗಬೇಕೆನ್ನುತ್ತಾರೋ, ಅಲ್ಲಿಗೆ ಕರೆದು ಕೊಂಡು ಹೋಗಿ. ಇನ್ನು ದಯಮಾಡಿ, ಶೇಕದಾರರು ನೋಡಿಕೊಳ್ಳು ತ್ತಾರೆ" ಎಂದೆ.

"ತಾವು ನನ್ನ ಸಂಗಡ ಇನ್‌ಸ್ಪೆಕ್ಷನ್‌ಗೆ ಬರೋದಿಲ್ಲವೇ? ದಿವಾನ್ ಸಾಹೇಬರು, ಸೀನಿಯರ್ ಸರ್ಜನ್ ಸಾಹೇಬರು, ಇವರುಗಳಿಗೆ ಈ ಹೆಲ್ತ್ ವಿಚಾರ ದಲ್ಲಿ ಬಹಳ ಇನ್‌ಟರೆಸ್ಟು" ಎಂದರು.

"ನನಗೂ ಇಂಟರೆಸ್ಟೇ. ಆದರೆ ನೀವು ಹೇಳಿದ ದೊಡ್ಡ ಆಫಿಸರುಗಳಿಗಿದ್ದ ಹಾಗೇ ನನಗೂ ಇತರ ಕೆಲಸವಿರುವುದರಿಂದ, ಅವರಂತೆಯೇ ನಾನೂ ನಿಮ್ಮ ರಿಪೋರ್ಟಿನಿಂದಲೇ ತೃಪ್ತನಾಗುತ್ತೇನೆ."

ಹೊರಟು ಹೋದರು. ಆಮೇಲೆ ಶೇಕದಾರ್ರು ಬಂದು —

"ಅವರು ಏನೋ ಪಥ್ಯದ ಮೇಲಿದ್ದಾರಂತೆ. ಸೇಬು, ಕಿತ್ತ್ಲೇಹಣ್ಣು, ಸ್ಲಾರೊಟ್ಟಿ — ಏನೇನೋ ಕೇಳುತ್ತಾರೆ. ಇವು ಈ ಊರಿನಲ್ಲಿ ಎಲ್ಲಿ ಸಿಕ್ಕುತ್ತೆ? ದುಡ್ಡೋ — ಈಚೆಗೆ ತೆಗೆಯೋದಿಲ್ಲ. ದುಡ್ಡಿನ ಮಾತೇ ಇಲ್ಲ. ಜತೆಗೆ ಅಡಿಗೆಯವರೂ ಬಂದಿಲ್ಲ"—ಎಂದು ವರದಿಮಾಡಿದರು.

ನಾನು ಅವರಿಗೆ ಈ ರೀತಿ ಇಂಗ್ಲಿಷಿನಲ್ಲಿ ಆಹ್ವಾನ ಬರೆದು ಬಂಗಲೆಗೆ ಕಳುಹಿಸಿದೆ :

"ತಮ್ಮ ಸಂಗಡ ಭೋಜನದ ಸಂತೋಷವನ್ನು ನನಗೆ ಕೊಡಬೇಕೆಂದು ಕೋರುತ್ತೇನೆ, ಕಾದಿದ್ದೇನೆ. ದಯವಿಟ್ಟು ಜಾಗ್ರತೇಲಿ ಬನ್ನಿ. ಸ್ನಾನಕ್ಕೂ ಇಲ್ಲೇ ಏರ್ಪಾಡು ಇದೆ."

ಬಂದರು, ಮೊದಲಿನ ಜೋರನ್ನು ಬಿಟ್ಟು ಸರಿಯಾಗೇ ಇದ್ದರು. ಅವರ ಬಾಯಿಯಿಂದ ಹೊರಟದ್ದೆಲ್ಲ ದೊಡ್ಡವರ ಮಾತೆ. ಒಂದು ಜ್ಞಾಪಕವಿದೆ — ಯಾವುದೋ ಕ್ಯಾಂಪಿನಲ್ಲಿ ದಿವಾನರಿಗೆ ಹೊಟ್ಟೇ ನೋವು ಬಂತಂತೆ. ಯಾವ ದೊಡ್ಡ ಡಾಕ್ಟರನ್ನೂ ಕರೆಯದೆ, ನಮ್ಮ ಪುಟ್ಟ ಡಾಕ್ಟರನ್ನೇ ಕರೆದರಂತೆ. ಇವರು ಔಷಧಿ ಕೊಟ್ಟಮೇಲೆ ಅಡಚಣೆಗಳೆಲ್ಲ ಸಾಫ್ ನಿವಾರಣೆಯಾಗಿ, ದಿವಾನರು ಪ್ರಕೃತಿಗತರಾದರಂತೆ.

ನಮ್ಮ ಡಾಕ್ಟರು ಎರಡುಮೂರು ದಿನ ನನ್ನ ಅತಿಥಿಗಳಾಗಿದ್ದು, ದಿವಾನ ಸಾಹೇಬರಿಗೆ ಅವರು ಪ್ರಯೋಗಿಸಿದ್ದ ದಿವ್ಯೌಷಧದ ಪ್ರಯೋಜನವನ್ನು ನನಗೂ ದಯಪಾಲಿಸಿದರು.

ಕೆಲವು ವರ್ಷಗಳ ಹಿಂದೆ ಗುಂಡಯ್ಯಂಗಾರ್ರೆಂಬ ಅಮಲ್ದಾರರ ಕಥೆ ಬಹಳ ಪ್ರಖ್ಯಾತವಾಗಿತ್ತು. ಅದನ್ನು ನೀವು ಕೇಳಿಲ್ಲವೋ? ಗುಂಡಯ್ಯಂಗಾರರೆಂಬ ಒಬ್ಬ ಖದೀಂ ಅಮಲ್ದಾರರು. ಅವರ ತಾಲ್ಲೂಕಿಗೂ ನನ್ನ ತಾಲ್ಲೂಕಿಗೆ ಬಂದಂತೆಯೇ ದೊಡ್ಡವರ ಸಾಕುಪ್ರಾಣಿಯಾದ ಒಬ್ಬ ರಾಕಂ ಶೀಕಂ ಚಿಕ್ಕ ಸರ್ದಾರರು ಬಂದು ಟ್ರಾವಲರ್ಸ್ ಬಂಗಲೆಯಿಂದ ಹೇಳಿ

ಕಳುಹಿಸಿದರು. ಅಮಲ್ದಾರರು ಹೋದರು. ಶೇಕದಾರನನ್ನೂ ಕರೆದು ಕೊಂಡು ಹೋದರು. ಆಗಂತುಕ ಸರದಾರರು ಬಹಳ ಠೀವಿಯಿಂದ—

" ಅಮಲ್ದಾರ್ರೋ ? "

" ಹೌದು your ಹಾನರ್ "

" ನಮಗೆ ಸಪ್ಲೈಸು arrange ಮಾಡಿ "

" ಓಹೋ, ಬೇಷಕ್. ಏನು ಬೇಕೋ ಹೇಳಿ. ಬರಕೊಳ್ಳಿ ಶೇಕದಾರ್ರೆ"

ಸರದಾರರು—

ಸಣ್ಣಕ್ಕಿ, ಬೆಣ್ಣೆ, ಬೇಳೆ, ತರಕಾರಿ, ಎಲ್ಲವನ್ನೂ ತಪಸೀಲಾಗಿ ಹೇಳಿದರು ಮೇಜಿನ ಆಚೆ ಪಕ್ಕಕ್ಕೆ ಕುಳಿತಿದ್ದ ಸುಬೇದಾರರು ಪ್ರತಿಯೊಂದು ಪದಾರ್ಥಕ್ಕೂ ಶೇಕದಾರ್ರಿಗೆ—

" ಹೂ, ಬರಕೊಳ್ಳಿ " ಎಂದು ಬಾಯಿಯಲ್ಲಿ ಆಗ್ರಹದಿಂದ ಹೇಳಿ, ಕೈಯಲ್ಲಿ ಶೇಕದಾರರಿಗೆ ಮಾತ್ರ ಕಾಣುವಂತೆ, ಅಪಹಾಸ್ಯವಾಗಿ ನಕಾರ ಮಾಡುವ, ಅಭಿನಯವನ್ನು ತೋರಿಸುತ್ತಿದ್ದರು. ಶೇಕದಾರ್ರು ಪ್ರತಿಯೊಂದು "ಹೂ" ಕಾರಕ್ಕೂ ಮಾಮೂಲು—ಅಷ್ಟೆ—ಉಚ್ಚಾರ ಮಾಡಿದರು.

ಭೇಟಿ ಮುಗಿದು ಗುಂಡಯ್ಯಂಗಾರರು ಎಲ್ಲಿಯೋ ಕೆಲಸದ ಮೇಲೆ ಹೊರಟುಹೋದರು , ಅವರು ತಿರುಗ ಸರದಾರರಿಗೆ ಸಿಕ್ಕಲಿಲ್ಲ. ಸರದಾರರು ಕಾದರು, ಕಾದರು, ಶೇಕದಾರರೂ ಇಲ್ಲ, ಸಪ್ಲೈನೂ ಇಲ್ಲ. ಕೊನೆಗೆ ಹೋಟಲಿದ್ದರೆ ಹಸಿವು ತೀರಿಸಿಕೊಳ್ಳೋಣವೆಂದು ಊರಿನಲ್ಲಿ ತಿರಗಾಡುತ್ತಿರುವಾಗ ಶೇಕದಾರರು ಎದುರಿಗೆ ಬಂದರು. ಸರ್ದಾರರು ರೋಷಾವೇಶದಿಂದ ಮೇಲೆ ಬೀಳುವಂತೆ ಬಂದರೆ — ಈ ಶೇಕದಾರರು ಭಯಭಕ್ತಿಯಿಂದ ನಡುಗದೆ ಫಕ್ಕಂತ ನಗಬೇಕೇ ? ಸರ್ದಾರರು ಆಶ್ಚರ್ಯ ಮತ್ತು ಕೋಪದಿಂದ,

" ನಾನು ಹಾಗಿರಲಿ, ನಿಮ್ಮ ಸುಬೇದಾರ್ರಿಂದರೂ ನಿಮಗೆ ಅಷ್ಟು ಅಲಕ್ಷ್ಯವೇ ? ನಾನು ಅವರಿಗೆ ನಿಮ್ಮ ಅಯೋಗ್ಯತೆ ತಿಳಿಸಿ, ನಿಮಗೆ ತಕ್ಕದ್ದು ಮಾಡಿಸುತ್ತೇನೆ " ಎಂದು ಘರ್ಜಿಸಿದರು.

ಶೇಕದಾರರು—

" ಅಮಲ್ದಾರರ ಹುಕ್ಕುಂ ನನ್ನ ತಲೆಮೇಲೆ. ಅವರು ಬಾಯಿನಲ್ಲಿ ನಿಮಗೆ ಹೇಳಿದರು, ಕೈನಲ್ಲಿ ನನಗೆ ಹುಕ್ಕುಂ ಕೊಟ್ಟರು " ಎಂದರು.

ನಾನು ಸೆಕ್ರೆಟೇರಿಯಟ್ಟಿನಲ್ಲಿದ್ದಾಗ ಯಾರಾದರೂ ಬಾಯಿನಲ್ಲಿ ಉಪಚಾರ, ಕೈನಲ್ಲಿ ಅಪಚಾರ, ತೋರಿಸಿದರೆ ಅವರನ್ನು ಗುಂಡಯ್ಯಂಗಾರ್‍ರು, ಅವರ ನಡತೆಯನ್ನು ಗುಂಡಯ್ಯಂಗಾರ್ ಮಾಡುವುದು, ಎನ್ನುವ ವಾಡಿಕೆ ಇತ್ತು.

ಆಗಿನ ಕಾಲದ ಅಮಲ್ದಾರನಾದ ನಾನು ಜನಗಳಲ್ಲೂ, ಮೇಲ್ಪಟ್ಟ ಅಧಿಕಾರಿಗಳಲ್ಲೂ, ಸರ್ಕಾರದಲ್ಲೂ ಪಡೆದು ಭೋಗಿಸುತ್ತಿದ್ದ ಗೌರವವೂ, ನಿರಾಪೇಕ್ಷನಾಗಿ ಚಲಾಯಿಸುತ್ತಿದ್ದ ಅಧಿಕಾರವೂ, ನನಗಿದ್ದ ದರ್ಪವೂ, ಜನಗಳ ನಿಕಟಸಂಬಂಧವೂ, ನಿರ್ವ್ಯಾಜ ಪ್ರೇಮವೂ ಈಗಿನ,—ಅಮಲ್ದಾರರ ಮಾತು ಹಾಗಿರಲಿ—ಯಾವ ಅಧಿಕಾರಿಗೂ ಇಲ್ಲವೆಂದು ನನಗೆ ಕಾಣುತ್ತದೆ. ಇದಕ್ಕೆ ವೈಯಕ್ತಿಕ ಕಾರಣವಿತ್ತೆಂದು ಹೇಳುವ ಬಿಂಕ ನನಗಿಲ್ಲ. ನಾನು ಹಾಗೆ ನನ್ನ ಬೆನ್ನನ್ನು ನಾನೇ ತಟ್ಟಿಕೊಂಡು ಖುದ್ದು ಶಾಬಾಸುಗಿರಿಯನ್ನು ಕೊಟ್ಟುಕೊಳ್ಳುತ್ತಿಲ್ಲ. ಆ ಕಾಲದಲ್ಲಿ ನನ್ನ ಹಾಗೆ, ಜನಗಳ ಮೆಚ್ಚಿಗೆಯನ್ನೂ ಸರಕಾರದಲ್ಲಿ ಗೌರವವನ್ನೂ ಪಡೆದು, ವಾಸ್ತವವಾದ ಅಧಿಕಾರವನ್ನೂ ಚಲಾಯಿಸುತ್ತಿದ್ದ ಅಮಲ್ದಾರರು ಅನೇಕರಿದ್ದರೆಂದು ನನಗೆ ನಂಬಿಕೆ.

ಆಗಿನ ಈಗಿನ ಗೌರವ ವ್ಯತ್ಯಾಸಕ್ಕೆ ಕಾರಣವೇನೆಂದು ನಾನು ಶೋಧಿಸಿ ವಿಚಾರಮಾಡಿದ್ದೇನೆ. ಆಗಿನ ಕಾಲದಲ್ಲಿ ತಾಲ್ಲೂಕಿಗೆ ಅನ್ವಯಿಸುವ ಆಡಳಿತದ ವಿಶಿಷ್ಟ ಅಧಿಕಾರವೂ ಅಮಲ್ದಾರನಲ್ಲಿ ಕೇಂದ್ರೀಕೃತವಾಗಿತ್ತು. ಈ ಕೇಂದ್ರೀಕರಣ ಹಿಂದಿನ ಅವ್ಯವಸ್ಥೆಯ ಕಾಲದಲ್ಲಿ ಪ್ರಜೆಗಳ ನೆಮ್ಮದಿಗೂ, ಕಂದಾಯದ ವಸೂಲಿಗೂ, ರಾಜಾಜ್ಞೆಗಳ ಅಮಲಿಗೂ, ಅವಶ್ಯಕವಾಗಿತ್ತು. ಮಹಾರಾಷ್ಟ್ರದ ಮಾಮಲೇದಾರ್‍ರುಗಳಿಗೂ ಅವರವರ ಎಲ್ಲೆಗಳಲ್ಲಿ ಇದೇ ರೀತಿ ಸರ್ವಾಧಿಕಾರವಿತ್ತೆಂದು ಪೇಶ್ವಾಯಿಗಳ ಆಡಳಿತ ವ್ಯವಸ್ಥೆಯ ವಿವರಣೆಯಿಂದ ತಿಳಿಯ ಬರುತ್ತೆ. ರಾಜರ ಪ್ರತಿನಿಧಿಯಾದವನಲ್ಲಿ ಸರ್ಕಾರದ ಬಂದೋಬಸ್ತಿನ ಎಲ್ಲ ಜವಾಬ್ದಾರಿ, ಅದನ್ನು ನಿರ್ವಹಿಸುವುದಕ್ಕೆ ಬೇಕಾದಷ್ಟು ಅಧಿಕಾರ, ಇಲ್ಲದಿದ್ದರೆ, ದೂರವಾದ ರಾಜ್ಯದ ಭಾಗಗಳ ವಹಿವಾಟು ಅಸಾಧ್ಯವಾಗಿ, ಅವುಗಳು ಅನಾಯಕವಾಗುತ್ತಿದ್ದವು. ಆಗಿನಕಾಲದಲ್ಲಿ ಜನಗಳ ಮತ್ತು ಸುದ್ದಿಗಳ ಸಂಚಾರ ಸುಗಮವಾಗಿರಲಿಲ್ಲ. ಜನಗಳಿಗೆ ಸರ್ಕಾರವೆಂದರೆ ಅಮಲ್ದಾರರೇ. ಅಮಲ್ದಾರರ ತಾಬೇದಾರಿಯಲ್ಲಿ,

ಪೋಲೀಸು ಸಿಬ್ಬಂದಿಯಲ್ಲದೆ, ಅರಾವಣೆ ಕಂದಾಚಾರವೆಂಬ ಹೆಸರುಳ್ಳ ೩೦ ೪೦ ಆಳುಗಳಿರುತ್ತಿದ್ದರು. ಅಮಲ್ದಾರರೇ ಪೋಲಿಸು ಮುಖ್ಯ ನಾಯಕರು, ಅಮಲ್ದಾರ್ರೇ ತಾಲ್ಲೂಕು ನ್ಯಾಯಾಧಿಪತಿಗಳು. ಅವರಲ್ಲಿ ರಕ್ಷಣೆ, ನ್ಯಾಯ, ಇವು ಊರ ಹೊಳೆಯ ನೀರಿನ ಹಾಗೆ ಕ್ಷಿಪ್ರವಾಗಿ ದೊರೆಯುತ್ತವೆ: ದೂರವಾಗಿ ಬಹಳ ಲಾಗೋಡಿನಲ್ಲಿ ದೊರೆಯಬಹುದಾದ ಪರಿಹಾರ ಪರಸ್ಥಳದ ಆಳವಾದ ಭಾವಿಯಿಂದ ಶ್ರಮಪಟ್ಟು ಸೇದುವ ನೀರಿನ ಹಾಗೆ. ನೀರು ಮೇಲೆ ಬರುವುದರೊಳಗಾಗಿ ಅದನ್ನನ್ನೂ ಕುಡಿಯುವಷ್ಟು ಶ್ರಮದ ದಾಹವೂ ಆಗಿರುತ್ತೆ. ಸ್ಥಳದ ಪ್ರಜೆಗಳಿಗೆ ಅಮಲ್ದಾರರು ಸರಕಾರದ ನಿಜವಾದ ಪ್ರತಿನಿಧಿ. ತಾಲ್ಲೂಕಿನಲ್ಲಿ ಅಮಲ್ದಾರರ ತಾಬೇದಾರ್ರಲ್ಲದವರು-ಡಾಕ್ಟರು, ಸ್ಕೂಲು ಹೆಡ್‌ಮಾಸ್ಟರು, ಸಬ್‌ರಿಜಿಸ್ಟ್ರಾರು, ಪೋಸ್ಟುಮಾಸ್ಟರು. ಪ್ರಜೆಗಳಾಗಿ ಇವರಿಗೂ ಅಮಲ್ದಾರ● ಸಹಾನುಭೂತಿ ಬೇಕು, ಇವರು ಅಮಲ್ದಾರರಿಗೆ ಬೇಕಾದವರಾದರೆ, ಇವರಿಗೂ ಗೌರವ ಹೆಚ್ಚು. ಆದ್ದರಿಂದ ಇವರುಗಳೂ ಅಮಲ್ದಾರರಲ್ಲಿ ದಾಕ್ಷಿಣ್ಯದಿಂದ, ಸ್ನೇಹದಿಂದ, ವರ್ತಿಸುತ್ತಿದ್ದರು, ಅಮಲ್ದಾರರ ಸಲಹೆಯನ್ನು ನಿರಾಕರಿಸುತ್ತಿರಲಿಲ್ಲ. ಒಂದು ಸಲ ದುಡುಕಿ ಎದುರುಬಿದ್ದರೆ ಅದರ ಪರಿಣಾಮದ ಅನುಭವದಿಂದ ತಿರುಗ ಎದುರು ಬೀಳುತ್ತಿರಲಿಲ್ಲ. ಒಂದು ಕತೆ ಕೇಳಿ. ನನಗೆ ಬಂದಿದ್ದ ಒಂದು ರಿಜಿಸ್ಟರ್ಡ್ ಪಾರ್ಸೆಲ್ಲನ್ನು ನನ್ನ ಮನೆಗೆ ಕಳಿಸಿದಾಗ ನಾನು ಎಲ್ಲಿಯೋ ಹೋಗಿದ್ದೆ. ಮನೆಯವರು ಕೇಳಿದರ, ಕೊಡದೆ ವಾಪಸು ಟಪ್ಪಾಲು ಆಫೀಸಿಗೆ ತೆಗದುಕ್ಕೊಂಡು ಹೋದರು. ನಾನು ಬಂದಮೇಲೆ, ನನ್ನ ಆಳನ್ನು ಟಪ್ಪಾಲು ಆಫೀಸಿಗೆ ಪಾರ್ಸೆಲ್ಲಿಗಾಗಿ ಕಳುಹಿಸಿದೆ. ಪೋಸ್ಟುಮಾಸ್ಟರು, ಅಯ್ಯರು, ಹುಡುಗ; "ಕೊಡೋದಿಲ್ಲ ಹೋಗ್, ಎಷ್ಟು ಸಲ ಕಳಿಸಿನೋದು. ಬೇಕಾದರೆ ಅಮಲ್ದಾರರೇ ಬಂದು ತೆಗೆದುಕೊಂಡು ಹೋಗಲಿ" ಎಂದನಂತೆ. ಅಂತೂ, ಅಂದನೆಂದು ಆಳು ಹೇಳಿದ. ನಾನು ನಕ್ಕು "ಆಗಲಿ, ಹೋಗು, ನಾನೇ ಹೋಗೋಣಂತೆ" ಅಂದೆ. ಯಾರೋ ನನ್ನನ್ನು ನೋಡೋದಕ್ಕೆ ಬಂದು, ಒಂದು ನಿಂಬೆಹಣ್ಣನ್ನು ತಂದುಕೊಟ್ಟರು. ನಾನು—ನಾನೂ ಆಗ ಹುಡುಗ—ಒಳ್ಳೇ ಹೊತ್ತಿನಲ್ಲಿ ನಿಂಬೆಹಣ್ಣನ್ನು ತಂದಿರಿ. ನಾನು ನನ್ನ ಮೇಲೆ ರೇಗಿರುವ ಪೋಸ್ಟುಮಾಸ್ಟರನ್ನು ನೋಡೋಕೆ ಹೋಗಬೇಕಾಗಿದೆ. ಅವರಿಗೆ ಈ ಫಲವನ್ನು ಒಪ್ಪಿಸಿ

ಪ್ರಸನ್ನರನ್ನು ಮಾಡಿಕೊಳ್ಳುತ್ತೇನೆ—ಎಂದೆ. ಇದು ಬರೀ ಗೇಲಿ ಮಾತು. ಅವತ್ತು ನಾನು ಕಛೇರಿಗೆ ಹೋದರೆ, ಆ ಪೋಸ್ಟುಮಾಸ್ಟರ ಮೇಲೆ ಯಾವನೋ ಒಬ್ಬ ತನ್ನನ್ನು ಅವರು ಬೈದು ಹೊಡೆದರೆಂದು ಫಿರ್ಯಾದು ಅರ್ಜಿ ದಾಖಲ್ಮಾಡಿದ. ಇದು, ನಾನು ಹುಡುಗುತನದ ತಮಾಷೆಗೆ ಆಡಿದ ಮಾತಿನ ಕಾರ್ಯವೆಂದು ಅನುಮಾನಿಸಿ, ಪೋಲೀಸಿನವರ ಮೂಲಕ ರಹಸ್ಯವಾಗಿ ವಿಚಾರಿಸಲಾಗಿ; ನನ್ನ ಅನುಮಾನ ನಿಜವಾಗಿತ್ತು. ಫಿರ್ಯಾದಿಗೆ ಗದರಿಸಿ, ಫಿರ್ಯಾದನ್ನು ಹರಿದುಹಾಕಿದೆ. ಪೋಸ್ಟುಮಾಸ್ಟರಿಗೂ ಈ ಸಂಗತಿ ತಿಳಿದು, ನನ್ನ ವಿಚಾರದಲ್ಲಿನ ಅವರ ನಡತೆಯುನ್ನು ಬದಲಾಯಿಸಿಕೊಂಡರು.

ಅಮಲ್ದಾರರು ಪ್ರಜೆಗಳಲ್ಲಿ ಸರಕಾರದ ಪ್ರತಿನಿಧಿಯೆಂದು ಹೇಳಿದೆನಷ್ಟೆ? ಅವರು ನಿಜವಾಗೂ ಸರಕಾರದಲ್ಲಿ ಪ್ರಜೆಗಳ ಪ್ರತಿನಿಧಿಯೂ ಹೌದು. ಆಗಿನ ಕಾಲದಲ್ಲಿ, ಸರಕಾರ ಜನಗಳಿಗೆ ಬಹು ದೂರವಾಗಿಯೂ, ಬಹು ಕಷ್ಟದಿಂದ ದರ್ಶನಕ್ಕೆ ಸಿಕ್ಕತಕ್ಕದ್ದಾಗಿಯೂ, ಇತ್ತು. ಅನೇಕರಿಗೆ ದಿವಾನರು, ರೆವಿನ್ಯೂ ಕಮಿಷನರು, ಯಾರೆಂಬುದೇ ಗೊತ್ತಿರಲಿಲ್ಲ ಅನೇಕರು ಡೆಪ್ಯೂಟಿ ಕಮಿಷನರನ್ನು ಸುದ್ದ ನೋಡಿರುತ್ತಿರಲಿಲ್ಲ ಆಗ ಓಟುಗಳ ಕಾಲವಲ್ಲದ್ದರಿಂದ, ಓಟುಗಳನ್ನು ಶೇಖರಿಸಿದ ಮಹಾನುಭಾವರ ದೌಲತ್ತೂ ಇರಲಿಲ್ಲ. ಸಾಧಾರಣ ಸಾಮರ್ಥ್ಯ, ದಕ್ಷತೆಗಳನ್ನುಳ್ಳ ಅಮಲ್ದಾರರು ಒಂದು ವರ್ಷ, ಆರು ತಿಂಗಳೊಳಗಾಗಿ ಎಲ್ಲ ಗ್ರಾಮಗಳ ಸುಖ ದುಃಖಗಳನ್ನೂ ತಿಳಿದುಕೊಳ್ಳುತ್ತಿದ್ದರು. ಅವರು ಒಳ್ಳೆಯವರಾಗಿ, ಭೂತದಯಾಪಶ್ಚಾತ್ತಾಪ ಉಳ್ಳವರಾಗಿದ್ದರೆ, ಅವರು ರಾಜರ ಪ್ರತಿನಿಧಿಗಳಲ್ಲದೆ, ತಾಲ್ಲೂಕಿನ ಜನಗಳ ಯೋಗಕ್ಷೇಮಕ್ಕೆ ಬದ್ಧಕಂಕಣರಾದ ಮಿತ್ರರೂ, ಜನಗಳ ಕುಂದುಕೊರತೆಗಳನ್ನು ಸರಕಾರಕ್ಕೆ ವರದಿಮಾಡಿ ಅವರಿಗಾಗಿ ಸರಕಾರದಲ್ಲಿ ಹೊಡೆದಾಡತಕ್ಕ ಆಪ್ತರೂ, ಆಗಿರುತ್ತಿದ್ದರು. ಇದೇ, ನೋಡಿ, ಆಗಿನ ಅಮಲ್ದಾರರ ಬಲದ ಗುಟ್ಟು. ಈಗಿನ ಸ್ಥಿತಿ ಯಾವ ರೀತಿ ಇದೆ ಎನ್ನುವುದು ನನಗೆ ತಿಳಿದಷ್ಟು ನಿಮಗೂ ತಿಳಿದಿದೆ. ಸರಕಾರದ ರಚನೆಯೇ ಬದಲಾವಣೆಯಾಗುವುದೆಂದರೆ, ಜನಾಂಗದ ಜೀವನ ತಳದಿಂದ ತುದಿಯವರಿಗೂ ಕ್ಷುಭಿತವಾಗದೇ ಇರುವುದಿಲ್ಲ. ಅದು ಪುನಃ ಒಂದು ಸ್ಥಿಮಿತಕ್ಕೆ ಬರಬೇಕಾದರೆ ಕಾಲ ಬೇಕು. ಆಗ ರಾಜಪ್ರತಿನಿಧಿಯಾದ ಅಮಲ್ದಾರನ ಸ್ಥಾನದಲ್ಲಿ, ಪ್ರಜೆಗಳ ಪ್ರತಿನಿಧಿ

ಯಾದ ಸಮಿತಿಯೊಂದು ಏರ್ಪಾಡಾಗುತ್ತದೆಯೋ, ಏನೋ. ಆಗ ಅವು ಲ್ದಾರರು ಆ ಸಮಿತಿಯ ಮುಖ್ಯ ಅಪ್ರಲು (executive) ಅಧಿಕಾರಿಯಾಗಿ ರುತ್ತಾರೋ, ಏನೋ. ಯಾರು ಬಲ್ಲರು? ಮುಖ್ಯವಾಗಿ, ನಮ್ಮ ಜನ ಬಹಳ ಒಳ್ಳೆಯವರು, ಧೀರರು. ಈಗಿನ ಹೊಸ ಹೆಪ್ಪಿನ ಗಲಬಿಲಿ ಶಮನ ವಾದಮೇಲೆ ಎಲ್ಲರ ಕ್ಷೇಮಕ್ಕೂ ಸಾಧನವಾದ ಒಂದು ಶಾಂತವಾದ ರಚನೆ ನಿಲ್ಲುತ್ತೆಂದು ನನ್ನ ಆಶಯ, ನಂಬಿಕೆ.

ದೇವರು ಸರ್ವರಿಗೂ ಸೌಭಾಗ್ಯ ಸನ್ಮಂಗಲವನ್ನು ಕರುಣಿಸಿ, ನಮ್ಮ ಭಾರತಭೂಮಿಗೆ ಭೂಮಂಡಲದಲ್ಲಿ ಕೀರ್ತಿಯನ್ನೂ ಪೂಜ್ಯತೆಯನ್ನೂ ದಯಪಾಲಿಸಲಿ.

**ಸರ್ವೇಜನಾಸ್ಸುಖಿನೋಭವಂತು**

# ಅರ್ಥಕೋಶ

| ಪದ | ಪುಟ | ಅರ್ಥ |
|---|---|---|
| **ಅ** | | |
| ಅಃಖಲ್ವಾನ್ | ೧೬೨ | ಬುದ್ಧಿವಂತ |
| ಅಟ್ವಾವಣೆ | ೨೦೩ | ಹಿಂದಿನಕಾಲದ ಒಂದು ಬಗೆಯ ತಾಲ್ಲೂಕು ಜವಾನ |
| ಅಂತರಾಯ | ೨೪೪ | ಅಡ್ಡ, ತಡೆ |
| ಅಬರೂ | ೧೯೮ | ಮಾನ |
| ಅವಿ | ೨೭೫ | ಅಂಗುಲ |
| ಅಳಿಗೆ | ೨೩೬ | ಗಂಜಿ ಹಾಕುವ ಮರದ ಪಾತ್ರೆ |
| **ಆ** | | |
| ಆಡಿಕೆ | ೧೮೦ | ಅಪವಾದ |
| ಆಮಳೆ | ೨೮೯ | ಒಟ್ಟು ವ್ಯಾಪಿಸಿರುವುದು |
| **ಇ** | | |
| ಇತ್ತಿಲ್ಲೆ | ೨೯೮ | ಅಪ್ಪಣೆಕೇಳಿ ಮಾಡುವ ವರದಿ |
| **ಉ** | | |
| ಉಡಾಯಿಸು | ೧೦೮ | ಹಾರಿಸುವುದು |
| ಉಮೇದುವಾರಿಕೆ | ೨೬೦ | ಪ್ರಯೋಜನಕ್ಕಾಗಿ ಅನುಸರಣೆ |
| **ಊ** | | |
| ಊರಗಸ್ತು | | ಗ್ರಾಮದ ಕಾವಲಿಗಾಗಿ ಬೀದಿ ಬೀದಿ ಸುತ್ತುವುದು |
| ಊರಗಾಯಿ | ೨೯೭ | ಉಪ್ಪಿನಕಾಯಿ |
| **ಎ** | | |
| ಎಡಪ್ರಾಯ | ೨೬೪ | ಇಳಿಪ್ರಾಯ |
| ಎಮ್ಮಕ | ೩೩೧ | ಹೆಣ್ಣು ಮಕ್ಕಳು |
| **ಐ** | | |
| ಐನಾತಿ | ೨೮೫ | ಉತ್ಕೃಷ್ಟ |
| **ಒ** | | |
| ಒತ್ತೀಲಿ | ೩೭೬ | ಹತ್ತಿರದಲ್ಲಿ |
| ಒಬ್ಬೆ | ೧೨೫ | ಬೇಲಿ |

## ಕ

| | | |
|---|---|---|
| ಕಂಗಾಲಾಗು | ೧೫೪ | ಆಯಾಸ ಹಸಿವುಗಳಿಂದ ಬಳಲು |
| ಕಡಕು | ೧೭೯ | ಕನ್ನ, ರಂಧ್ರ |
| ಕಡವು | | ಹೊಳೆಯಲ್ಲಿ ದಾಟುವ ಜಾಗ, ford |
| ಕಣಿಹಾಕಿಕೋ | ೧೫೫ | ಗಾಡಿಗೆ ಕಟ್ಟಿರುವ ಎತ್ತುಗಳು ನೊಗದಿಂದ ಕತ್ತನ್ನು ನುಣುಚುವುದು |
| ಕಮಾಲು | | ಒಳ್ಳೆಯ ಯುಕ್ತಿ |
| ಕಂದಾಚಾರ | ೨೦೩ | ವ್ಯವಸ್ಥೆ |
| ಕಾಮಗಾರಿ | ೧೫೦ | Works |
| ಕಾರಬಾರು | ೩೬೩ | ಕಾರ್ಯಭಾರ |
| ಕಾವಂದರು | ೧೦೦ | ಖಾವಿಂದ |
| ಕಿನಾರೆ | ೧೪೭ | ಹೊಳೆಯ ಕರೆ |
| ಕುಕ್ಕಲು ಓಟ | ೨೬೯ | trot |
| ಕುನ್ನೀರು | ೧೫೦ | ಕುಡಿಯುವ ನೀರು |
| ಕುಮ್ಮಕ್ಕು | ೨೧೩ | ಸಹಾಯ |
| ಕುಂಸಲ್ | ೧೧೪ | ಒಳ ಆಲೋಚನೆ |
| ಕುಂಸಲಿ | ೨೫೫ | ,, |
| ಕುರುಚು | | Scrub jungle |
| ಕುಸುರು | ೩೨೯ | Embellishment ; ಅಲಂಕಾರ |
| ಕೇಪಮಾರಿ | ೩೫೫ | ಮೋಸ |
| ಕೈಫಿಯತ್ತು | ೩೭೧ | ಹೇಳಿಕೆ |

## ಖ

| | | |
|---|---|---|
| ಖದೀಮ | ೧೦೭ | ಹಳಬ, ಅನುಭವಸ್ಥ |
| ಖಿರ್ದಿ | ೧೬೪ | ರೋಜು ಲೆಖ್ಖದ ಬುಕ್ಕು |
| ಖಸರತ್ತು | ೩೪೪ | ವ್ಯಾಯಾಮ, ಸಾಧನೆ |
| ಖಾತರಿಮಾಡು | ೧೦೪ | ಭದ್ರ, ನಿಶ್ಚಯ |
| ಖಾತೆ | ೧೬೪ | Ledger Folio |
| ಖಾತೆದಾರ | ೨೫೪ | ಖಾತೆಯಲ್ಲಿ ಹೆಸರು ಬರೆಯಲ್ಪಟ್ಟ ಕುಳ |
| ಖಾವಿಂದ್ | ೨೧೧ | ಯಜಮಾನ |
| ಖಿದ್ಯಸು | ೨೧೪ | ಚಿಂತೆಗೆ ಗುರಿಮಾಡು |
| ಖುದ್ದು | ೨೧೮ | ಸ್ವತಃ |

| | | |
|---|---|---|
| ಖುಲಾಯಿಸು | ೧೦೦ | ವೃದ್ಧಿಯಾಗು |
| ಖಲಾಸೆ | ೧೨೬ | ಬಿಡುಗಡೆ |

## ಗ

| | | |
|---|---|---|
| ಗತ್ತು | ೧೬೯ | style, ವರಸೆ |
| ಗರೀಬ | ೪೦೯ | ಅತಿ ಬಡವ |
| ಗವುಟು | ೩೩೬ | ಹಳೆ ಎಣ್ಣೆಯ ನಾತ |
| ಗ್ರಾಕತ್ಯ | ೧೧೨ | ಗೃಹಕೃತ್ಯ |
| ಗ್ರಾಮ ಪಾಕೀಜು | ೩೬೩ | Conservance |
| ಗ್ರಾಸ್ತ | ೨೮೪ | ಗೃಹಸ್ಥ |
| ಗುದಸ್ತ | ೧೬೪ | ಹಿಂದಿನ ವರ್ಷ |
| ಗುಣವತಿ | ೨೮೭ | ಸಂಪನ್ನೆ |
| ಗುನ್ನಾಂಪಟ್ಟಿ | ೧೯೮ | ಬಣ್ಣದ ರೇಖು |
| ಗುಬರು | ೧೭೭ | ಮುಸುಕು ಹಾಕಿಕೊ |
| ಗುಮಕಿ | ೩೦೬ | ತಲೆಯಮೇಲೆ ಮುಷ್ಠಿಯಿಂದ ಹೊಡೆಯು |
| ಗುಮಾನೆ | ೨೨೬ | ಅನುಮಾನ |
| ಗುರುಕಾರ | ೨೨೬ | ಮೇಲ್ತರಗತಿಯ ಆಳು |
| ಗೇರಾಯಿಸು | ೩೬೮ | ಸುತ್ತಿಕೊಳ್ಳು |
| ಗೈರು ಮಾಮೂಲು | ೨೦೬ | ಪದ್ಧತಿಯಿಲ್ಲದ್ದು |

## ಚ

| | | |
|---|---|---|
| ಚಮನ್ | ೪೦೯ | ತೋಟ |
| ಚಾಲು | ೧೬೮ | ಸ್ವಭಾವ |
| ಚಾಲ್ತಿ | — | ನಡವಳಿಕೆ |

## ಛ

| | | |
|---|---|---|
| ಛಡ ಸವಾಲು | ೨೫೫ | ಏರಿದ ಬಿಡ್ಡು (Highest Bid) |

## ಜ

| | | |
|---|---|---|
| ಜಕ್ಕ | ೧೪೬ | ಖಚಿತ ಆಕಾರವಿಲ್ಲದ ವಸ್ತು |
| ಜಮಾಬಂದಿ | ೩೪೪ | Settlement |
| ಜಲಪನ | ೩೭೪ | ಹರಟೆ |
| ಜಲಬಾಧೆ | ೨೫೮ | ಜಲಶಂಕೆ |
| ಜಾಹಿರಾತು | — | ಪ್ರಕಟಣೆ |

| | | |
|---|---|---|
| ಜಿರಾಯಿತು | ೩೦೧ | ವ್ಯವಸಾಯ |
| ಜುಜುಬಿ | ೧೪೬ | ಸಣ್ಣದು, ಅಲ್ಪ |
| ಜುಲುಮು | ೩೨೬ | ಬಲಾತ್ಕಾರ |
| ಜೂರತ್ | ೨೦೭ | ತೇಜಸ್ಸು, ಶೂರತ್ವ |
| ಜೋಡಿ ಗ್ರಾಮ | ೨೫೬ | ವರಮಾನದ ಒಂದು ಭಾಗವನ್ನು ಸಲ್ಲಿಸುವ ಒಪ್ಪಂದದ ಮೇಲೆ ಪಡೆದಿರುವ ಗ್ರಾಮ ಜೋಡಿ, ಹಾಗೆ ಸರ್ಕಾರಕ್ಕೆ ಸಲ್ಲಿಕೆ ಆಗುವ ವರಮಾನದ ಭಾಗ. |

## ಝು

| | | |
|---|---|---|
| ಝುಡ್ತಿ | ೧೦೬ | ಹುಡುಕು |

## ತ

| | | |
|---|---|---|
| ತಜವೀಜುದಾರಿ | ೩೧೫ | ಪ್ರಯತ್ನ |
| ತರ್ಫ | ೩೮೫ | ಪರವಾಗಿ |
| ತರದೂದು | ೩೪೨ | ಪ್ರಯತ್ನ – ಮೆಹನತ್ತು |
| ತಲವಾರ್ ಪೆಟ್ಟು | ೨೭೩ | ಕತ್ತಿ ಏಟು |
| ತಲಾಷು | ೩೮೬ | ಹುಡುಕು |
| ತಹಲು | ೧೫೬ | ಸದ್ಯ |
| ತಳದ ತಾಯಿ | ೧೪೧ | ಸ್ಥಳದ ತಾಯಿ |
| ತಾಕೀದು | ೧೧೦ | ಆಜ್ಞೆ |
| ತಾಪಾಳ | ೧೨೦ | ಅಗಣಿ |
| ತಾಫೆ | ೨೦೦ | ಕುಣಿತ, ನೃತ್ಯ |
| ತಾಬೂತ್ | ೧೯೮ | ಅಲಾಬಿ ಹಬ್ಬದಲ್ಲಿ ಕಟ್ಟುವ ಬಾಬಯ್ಯನ ಮಂಟಪ. |
| ತಾಬೆ | ೨೧೭ | Subordination |
| ತಾಬೆದಾರ | ೧೧೫ | Subordinate |
| ತಾರರು | ೧೯೨ | Wandering tribes |
| ತಾರಾತಂಟೆ | ೨೫೭ | ಮೋಸ, chicanery |
| ಕಾವಲು | ೨೩೩ | ದನದ ಮಂದೆ ಮೇಯಿಸಲು ಮೀಸಲು ಬಿಟ್ಟಿರುವ ಭೂಮಿ |
| ತಿಸ್ರ | ೨೪೭ | ತೊಡಕು |

ತೇಟು ೧೩೪ ಸ್ವಚ್ಛ

ತೈನಾತಿ ೧೦೯ ಅಧಿಕಾರಿಯ ಪ್ರತ್ಯಕ್ಷ ಸೇವಕ (attendant)

## ದ

ದಫಾ ೪೧೦ ಸಾರಿ, ಬಾರಿ, ಸರ್ತಿ

ದರಖಾಸ್ತು ೧೮೬ ಬೇಡಿಕೆ

ದರ್ಯಾಪ್ತಿ ೧೦೫ ವಿಚಾರಣೆ

ದಶಿ ೧೨೪ ನೆಲ ತೋಡುವ ಕಬ್ಬಿಣದ ಸಲಾಕಿ

ದಸ್ತಗಿರಿ ೧೦೨ Arrest

ದಾಖಲೆ ೨೦೫ Reference

ದಾಖಲ್ಮಾಡು ೧೬೬ Rigister

ದಾಮಾಷಾ ೨೫೭ ಹಾಳತ

ದಾಯರೆ ೨೦೪ ಮುಸಲ್ಮಾನರ ಒಂದು ಪಂಗಡ (sect)

ದಾಸ್ತಾನು ೨೪೧ Store

ದಿಖಾವು ೧೯೦ ನೋಡಾಣಿಕೆ

ದಿಟ್ಟಂ ೧೫೧ ಕೆಳಗಿನ ಕಚೇರಿ ಮಾಡುವ ಮೊದಲ ಲೆಕ್ಕಾಚಾರ.

ದಿರಸು ೩೨೯ Dress

ದುಗ್ಗಣಿ ೧೦೯ Double

ದುಬಾರಿ ೩೨೪ ಎರಡುಮಡಿ

ದುಷ್ಮಾನ್ ೨೧೦ ದುಷ್ಟ, ಶತ್ರು

ದೇಖೀಲು ೨೫೨ ಅದೂ ಸೇರಿ

ದೊಂಬರ ಗಣೆ ೨೨೧ ದೊಂಬರ ಕೋಲು

ದೋಸ್ತಿ ೧೦೦ ಸ್ನೇಹ

## ಧ

ಧೀಮಾಯಿ ೨೧೬ ಸೋಮಾರಿ

ಧುರ್ಯ ೧೫೫ ಗಾಡಿಗೆ ಕಟ್ಟುವ ದನ

## ನ

ನವತೆ ೨೩೪ ಹೊಸತನ

ನಾ ಗೋರು ೪೦೯ ನಾನು ಗೋರು (ಏನೂ ಗತಿ ಇಲ್ಲದ) ಗರೀಬ

| | | |
|---|---|---|
| ನಿಗಾ | ೩೭೮ | ಗಮನ |
| ನಿಗಾವಣೆ | ೩೭೮ | ,, |
| ನಿಭಾಯಿಸು | ೩೩೭ | ನಿರ್ವಹಿಸು |
| ನಿಯತ್ತು | ೧೦೦ | ಸತ್ಯವಂತಿಕೆ |
| ನಿಶಾನು | ೧೨೪ | ಲಾಂಛನ |
| ನುಕ್ಸಾನು | ೧೨೨ | ನಷ್ಟ |
| **ಪ** | | |
| ಪಟ್ಟಲ | ೧೦೧ | packet, parcel, also ಪಟ್ಟಣ |
| ಪಣಬು | ೨೧೦ | ಸೇತುವೆ |
| ಪರಾಕು | ೨೨೪ | ಎಚ್ಚರ |
| ಪರಾರಿ | ೧೨೬ | ಓಡು |
| ಪರಾಂಬರಿಸು | ೨೬೩ | ದೊಡ್ಡವರು ನೋಡುವುದು |
| ಪಲಕುಪಡಿ | ೩೩೩ | ಹಾಡುವುದರಲ್ಲಿ ಸ್ವರಗಳನ್ನು ಜೋಡಿಸಿ ಧ್ವನಿಯನ್ನು ನಡುಗಿಸುವುದು |
| ಪಲಾನೆ | ೨೫೫ | ಇಂಥ ಇಂಥ |
| ಪಹಣಿ | ೧೫೬ | ಬೆಳೆಯ ಲೆಕ್ಕ |
| ಪಾಕಿ | ೧೯೬ | ಅಡಿಗೆಯುವ |
| ಪಾಟುಕಚೇರಿ | ೩೧೩ | ಹಾಡು ನಡೆಯುವ ಸಭೆ |
| ಪಾರುಪತ್ತೇಗಾರ | ೯೭ | ಮೇಲ್ವಿಚಾರಕ |
| ಪಾಳಿನಲ್ಲಿ | ೧೩೩ | ಮರುಭೂಮಿ |
| ಪಾಳ್ಯ | ೨೦೩ | ಕ್ರಮ ಹೊಂಬಾಳೆ |
| ಪಾಳ್ಯಪಟ್ಟು | ೨೧೦ | ಪಾಳೆಯ ಪಟ್ಟು |
| ಪುಕಾರು | ೩೭೭ | ಹುಯ್ಲು |
| ಪುಟಗೋಸಿ | ೩೯೦ | ಪುಟ್ಟಗೋಸಿ (ಲಂಗೋಟಿ) |
| ಪುಂಡು ಕೊಂಪೆ | ೨೧೦ | ದುಷ್ಟರ ಕ್ಷುದ್ರ ಗ್ರಾಮ |
| ಪುಸಲಾವಣೆ | ೧೧೦ | ಉಪಾಯವಾಗಿ ಒಪ್ಪಿಸೋಣ |
| **ಫ** | | |
| ಫಡಪೋಸಿ | ೧೭೯ | ಅಶ್ರದ್ಧೆ |
| ಫತ್ತರ್‌ಗಚ್ಚು | ೧೫೦ | ಕಲ್ಲು ಗಾರೆ (stone masonry) |
| ಫಾಸಲೆ | ೧೯೩ | ದೂರ |
| ಫೈಸಲಾತಿ | ೨೩೩ | ಮುಕ್ತಾಯ |

## ಬ

| | | |
|---|---|---|
| ಬಗರ್ ಹುಕುಂ | ೧೫೫ | ಅಪ್ಪಣೆ ಇಲ್ಲದೆ |
| ಬಚಾಯಿಸು | ೨೪೩ | ಕಷ್ಟದಿಂದ ಬಿಡಿಸು |
| ಬಚಾವು | ೨೮೫ | ಹೀಗೆ ಬಿಡಿಸುವಿಕೆ |
| ಬಡ್ತಿ | ೨೬೧ | ಸಂಬಳದ ಹೆಚ್ಚಿಗೆ |
| ಬಟಾಯಿ | ೨೫೪ | ಸರ್ಕಾರದ ಪರವಾಗಿ ಮಾಡುವ ವ್ಯವ ಸಾಯ. |
| ಬದ್ನಾಮಿ | ೨೧೨ | ಕೆಟ್ಟ ಹೆಸರು |
| ಬನಾವಟ್ಟು | ೧೧೯ | ಕೆಟ್ಟದ್ದು ; ಮೋಸ |
| ಬನಾವಣೆ | ೩೭೨ | ಕಟ್ಟುವಿಕೆ |
| ಬಂದೋಬಸ್ತು | ೨೧೨ | ವ್ಯವಸ್ಥೆ |
| ಬಯಾನು | ೨೨೨ | ಹೇಳುವಿಕೆ |
| ಬರಾವರ್ದುದಾರ | ೧೬೩ | ರಿಜಿಷ್ಟರಿನಲ್ಲಿ ಹೆಸರಿರುವವನು |
| ಬಹದ್ದುರಿ | ೩೬೪ | ಸಮರ್ಥ, ಶ್ರೇಷ್ಠ |
| ಬಾಬರ್ಚಿಖಾನೆ | ೩೩೯ | ಅಡಿಗೆ ಮನೆ |
| ಬಾಂದು | ೧೫೮ | ನೆಲದ ಅಳತೆಯ ಗುರುತು |
| ಬಿಚಾರಿ | ೩೦೦ | ದೀನ, ಬಡ |
| ಬಿಡತಿ | ೩೩೪ | ಬಿಡುಗಡೆ |
| ಬಿಡ್ಡು | ೨೫೫ | ಹರಾಜಿನಲ್ಲಿ ಮಾಡುವ ಸವಾಲು |
| ಬಿಲ್‌ಖುಲ್ | ೧೧೦ | ತೀರ |
| ಬೀಳು | ೧೦೯ | ಕಡಮೆ |
| ಬಿನ್ ಪುಕಾರು | ೨೯೮ | ಗಲಭೆಯಿಲ್ಲದೆ |
| ಬಿಮ್ಮನಶಿ | ೩೮೭ | ಗರ್ಭಿಣಿ, ಬಸುರಿ |
| ಬಿರುದು ನಿಪಾತ | ೨೦೩ | honorific suffix or particle |
| ಬೇಫಿಕರ್ | ೧೧೨ | ಭಯವಿಲ್ಲದವನು |
| ಬೇಲು | ೧೮೮ | Bail |
| ಬೈಲುಮಾಡು | ೩೧೧ | ಬಹಿರಂಗ ಪಡಿಸು |
| ಬ್ರಹ್ಮಾದಾಯ | ೨೫೮ | ಬ್ರಾಹ್ಮಣರಿಗೆ ಕೊಟ್ಟ ಉಂಬಳಿ |

## ಭ

| | | |
|---|---|---|
| ಭರಾಟ | ೧೯೭ | ಜೋರು, ವೇಗ |

## ಮ

| | | |
|---|---|---|
| ಮಕ್ಕ | ೩೬೫ | ಮಕ್ಕಳು |
| ಮಕ್ಕಾನು | ೬೩೧ | ಮನೆ |
| ಮಜಭೂತು | ೩೩೪ | ಭದ್ರ, ಧೃಢ |
| ಮಟ್ಟ | ೧೫೦ | ಗರಡಿಮನೆ, ಕೆಮ್ಮಣ್ಣು |
| ಮಣೆಗಾರ | — | ಮೇಲ್ವಿಚಾರಣೆಯ ಅಧಿಕಾರಿ |
| ಮನವಾರ್ತೆ | ೨೨೦ | ದೊಡ್ಡ ಮನೆಯ ಗೃಹಕೃತ್ಯ ನೋಡುವವನು |
| ಮನ್ನಮಾಡು | ೨೬೦ | ನಿಲ್ಲಿಸು |
| ಮಸ್ಕರಿ | ೨೧೧ | ತಮಾಷೆ |
| ಮಷಾಲು | ೩೩೧ | ಪಂಜು |
| ಮಹಜರು | ೩೦೩ | ಪಂಚಾಯಿತಿ ಎದುರಲ್ಲಿ ಬರೆಯುವ ವರದಿ. |
| ಮಾಜಿ | ೧೬೬ | ಹಿಂದಿನ |
| ಮಾತುಬರ | ೧೩ | ಪ್ರಭಾವಶಾಲಿ |
| ಮಾಮಲೆ | ೨೭೨ | ತಹಶೀಲು |
| ಮಾರೀಫತ್ತು | ೩೧೯ | ಮೂಲಕ |
| ಮಾಹಿತಿ | ೩೨೭ | ಅನುಭವ |
| ಮುಖಾಡಿ | ೧೭೭ | ಬೋರಲು |
| ಮುಲಾಜು | ೨೧೬ | ದಾಕ್ಷಿಣ್ಯ |
| ಮುಸಲಿ | ೨೧೭ | ಮುದಕ |
| ಮೆಹನತ್ತು | — | ಶ್ರಮ |
| ಮೇಜವಾಣಿ | ೩೨೭ | ಊಟದ ವ್ಯವಸ್ಥೆ |
| ಮೊಕ್ಕಾಂ | ೩೩೩ | ತಂಗುವುದು |
| ಮೊಖಾಬಿಲಿ | — | ಎದುರು |
| ಮೊಗುಂ | ೩೨೪ | ವತಾನ |
| ಮೋಜಣಿ | ೧೫೯ | ನೆಲದ ಅಳತೆ |
| ಮ್ಯಾನಾ | ೨೦೬ | ಪಲ್ಲಕ್ಕಿ |

## ಯ

| | | |
|---|---|---|
| (ಬೀಗದ) ಯಸಳು | ೨೭೪ | ಬೀಗದ ಕೈ |

## ರ

ರಖಾವು ೧೮೩ ಇಟ್ಟುಕೊಳ್ಳೋಣ
ರಾತೀಬು — ದನದವೇವು, ಊಟದ ಸಾಮುಗ್ರಿ (rations)
ರಾಂಗು ೧೧೦ ತಕರಾರು
ರಾಂಗುಕೋರ ೨೧೦ ತಕರಾರುದಾರ
ರುಜುವತ್ತು } ೧೦೭ ಪ್ರಮಾಣ
ರುಜುವಾತು
ರುಷುವತ್ತು ೩೩೯ ಲಂಚ
ರೂಬರೂಬು ೧೯೩ ಎದುರೆದುರು
ರೈಟರು — ಗುಮಾಸ್ತರು

## ಲ

ಲಡತ್ತು ೧೯೦ ಖುಸ್ತಿ
ಲಡಾಯಿ ೨೬೪ ಕದನ, ಯುದ್ಧ
ಲವಾಜಮೆ ೧೫೮ ಅಡಿಗೆಯ ಸಾಮುಗ್ರಿ
ಲಾಗಾಯಿತು ೧೫೩ ಮೊದಲಿಂದ
ಲಾಗೋಡು ೩೮೦ ಸರಿಪಡಿಸುವ ವೆಚ್ಚ
ಲಾಷು ೩೦೩ ಕಳೇಬರ
ಲಿಖಾವಟ್ಟು ೧೬೬ ಬರವಣಿಗೆ

## ವ

ವಕ್ಕರಿಸು ೧೪೭ ಬೇಡದವರ ಆಗಮನ
ವಕ್ಕಲು ೨೦೩ Tenant
ವತ್ತಿನಲ್ಲಿ ೧೧೬ ಬಹಳ ಹತ್ತಿರದಲ್ಲಿ
ವಹಿವಾಟು ೧೪೧ ಪದ್ಧತಿ
ವಮ್ರೇಜು ೧೪೦ ಮುಮ್ರೇಜು-ಮುಳ್ಳು ; spurs
ವಾಗತ್ಯ ೨೩೯ ಅಸಹ್ಯ
ವಿಲೇಬೀಳು ೨೯೫ ಕಚೇರಿ ಕಾಗದ ಮುಕ್ತಾಯಕ್ಕೆ ಬರುವುದು.
ವೈನಾಗು ೩೨೮ ಚೆನ್ನಾಗು, ಹಸನಾಗು
ವೃತ್ತಿ ೨೫೫ ಇನಾಂ ಗ್ರಾಮದ ಒಂದು ಭಾಗ

### ಶ

| | | |
|---|---|---|
| ಶಾಮೀಲು | ೯೯ | ಒಳಪಟ್ಟಿರೋಣ |
| ಶಿಖಸ್ತು | ೧೫೯ | ಸಡಿಲ |
| ಶಿಖಾವಟ್ಟು | ೧೬೫ | ಹೇಳಿಕೊಡುವುದು, tutoring |

### ಷ

| | | |
|---|---|---|
| ಷೋದ | ೨೩೪ | ಅಯೋಗ್ಯ, ಪೋಕರಿ |

### ಸ

| | | |
|---|---|---|
| ಸತಾಯಿಸು | ೧೧೫ | tease ಕಾಡು |
| ಸಾಬೀತಾಗು | ೧೪೮ | ರುಜುವಾತಾಗು |
| ಸಿಗಡು | ೩೭೫ | ಗವುಟು |
| ಸುಧ | ೩೨೩ | ಶುದ್ಧ |
| ಸುಪರ್ದು | ೧೧೦ | ವಶ |
| ಸೌಡಿ | ೧೬೩ | ನೀರು ತಿರುಗಿಸುವವನು |

### ಹ

| | | |
|---|---|---|
| ಹಗೇವು | ೨೩೯ | ಅಗೆ; ರಾಗಿ ಮುಂತಾದ ಧಾನ್ಯವನ್ನು ಶೇಖರಿಸಿಡುವ ನೆಲದೊಳಗಿನ ಗುಂಡಿ |
| ಹರಕತ್ತು | ೩೯೦ | ಅಡ್ಡಿ |
| ಹರ ತರದೂದು | ೧೨೧ | ಅತ್ಯಂತ ಪ್ರಯತ್ನ |
| ಹರಾದ | ೧೨೧ | ಪ್ರಾಯದ |
| ಹರಿಗಲು | ೧೦೦ | ಹರಿಗೋಲು |
| ಹಲಾಲಟೋಪಿ | ೩೭೬ | ಹೊಣೆಯಿಲ್ಲದವನು |
| ಹಲ್ಲ | ೩೨೩ | ಕೋಟೆ ಏರುವುದು. |
| ಹಾಜರುಭಾಷಿ | ೩೪೨ | ಮೂರ್ತವಾಗಿರೋಣ |
| ಹಿಡಮಾಡು | ೩೦೬ | ಬೀಜ ಒಡೆ |
| ಹಿಷಾರೆ | ೨೪೫ | ಸಂಜ್ಞೆ |
| ಹುಜೂರು | ೧೫೬ | ಸಾನ್ನಿಧ್ಯ |
| ಹುದ್ದೇದಾರ | ೨೫೦ | ಅಧಿಕಾರಿ |
| ಹುನ್ನರು | ೧೯೧ | ಉಪಾಯ |
| ಹೈಲಾಟ | ೨೮೪ | ಹುಡುಗಾಟ |
| ಹಂಡಿ | ೨೯೫ | ಕೆಟ್ಟವಾಸನೆ |

---

ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕ. ಸಾ. ಪ. ಬೆಂಗಳೂರು ೨.